# ಜ್ಞಾನಯೋಗ

ಸ್ವಾಮಿ ವಿವೇಕಾನಂದ





ಪ್ರಕಾಶಕರು :
ಶ್ರೀ ರಾಮಕೃಷ್ಣಾಶ್ರಮ
ಮೈಸೂರು.

"ಜ್ಞಾನಯೋಗ" ಸ್ವಾಮಿ ವಿವೇಕಾನಂದರು ಅಮೆರಿಕಾ ದೇಶದಲ್ಲಿ ಮಾಡಿದ ಉಪನ್ಯಾಸಗಳ ಅನುವಾದ. ಹಲವು ವಿಧದಲ್ಲಿ ಜೀವಿಯನ್ನು ಬಂಧಿಸಿರುವ ಮಾಯಾ ಬಂಧನಗಳನ್ನು ವಿಚಾರ ಕೂರಸಿಯಿಂದ ಛೇದಿಸಿ ಜೀವಿಯನ್ನು ಬ್ರಹ್ಮದರ್ಶನಕ್ಕೆ ಯೋಗ್ಯನನ್ನಾಗಿ ಮಾಡುವುದು. ವಿಚಾರ ಮತಿಗಳಿಗೆ ಯುಕ್ತಿಯ ರಸದೂಟವಿದೆ ಇಲ್ಲಿ. ಅಜ್ಞಾನದಲ್ಲಿ ತೊಳಲುತ್ತಿರುವವರಿಗೆ ಜ್ಞಾನಮಿಂಚು ಸುಳಿದಾಡುವುದಿಲ್ಲಿ. ದುರ್ಬಲರಿಗೆ, ತಾನು ಪಾಪಿ ಎಂದು ಗೋಳಿಟ್ಟು ಒರಲುವವರಿಗೆ, ನೆರವಾಗಲು ಸ್ವಾಮಿ ವಿವೇಕಾನಂದರ ಭರವಸೆಯ ಕರಗಳು ಚಾಚುತ್ತಿವೆ ಇಲ್ಲಿ.

# ಜ್ಞಾನಯೋಗ

ಸ್ವಾಮಿ ವಿವೇಕಾನಂದ



ಪ್ರಕಾಶಕರು :

ಶ್ರೀ ರಾಮಕೃಷ್ಣಾಶ್ರಮ

ಮೈಸೂರು.

# ಅನುಕ್ರಮಣಿಕೆ

# ಧರ್ಮದ ಆವಶ್ಯಕತೆ

ಮಾನವ ಜನಾಂಗದ ಭವಿಷ್ಯವನ್ನು ನಿರ್ಧರಿಸಲು ಇದುವರೆಗೆ ತನ್ನ ಪ್ರಭಾವವನ್ನು ಬೀರಿದ ಮತ್ತು ಈಗಲೂ ಬೀರುತ್ತಿರುವ ಶಕ್ತಿಯಲ್ಲಿ ಧರ್ಮದಷ್ಟು ಪ್ರಚಂಡ ಪರಿಣಾಮಕಾರಿಯಾದುದು ಮತ್ತೊಂದು ಇಲ್ಲ. ಎಲ್ಲ ಸಾಮಾಜಿಕಸಂಸ್ಥೆಗಳಿಗೂ ಒಂದಲ್ಲ ಒಂದುಕಡೆ ಈ ವಿಶಿಷ್ಟ ಶಕ್ತಿಯ ಪ್ರಭಾವ ಹಿನ್ನೆಲೆಯಾಗಿದೆ. ವಿಭಿನ್ನ ಮಾನವರನ್ನು ಒಂದುಗೂಡಿಸಿದ ಒಂದು ಮಹಾಪ್ರೇರಣೆ ಧರ್ಮಮೂಲದಿಂದ ಬಂದಿದೆ. ಒಂದು ವಂಶ ವಾತಾವರಣ ಜನಾಂಗದ ಬಾಂಧವ್ಯಕ್ಕಿಂತಲೂ ಅನೇಕವೇಳೆ ಧಾರ್ಮಿಕ ಬಾಂಧವ್ಯ ಪ್ರಬಲ ಎಂಬುದು ನಮಗೆಲ್ಲ ವೇದ್ಯ. ಒಂದೇ ದೇವರನ್ನು ಆರಾಧಿಸುವವರು ಒಂದೇ ಧರ್ಮದ ಅನುಯಾಯಿಗಳು, ಒಡಹುಟ್ಟಿದ ವರಿಗಿಂತ ಒಂದೇ ಕುಲದವರಿಗಿಂತ ಸ್ಥಿರವಾಗಿ ಪ್ರಬಲವಾಗಿ ನೆರವಾಗು ವುದು ಎಲ್ಲರಿಗೂ ತಿಳಿದ ವಿಷಯ. ಧರ್ಮದ ಆದಿಯನ್ನು ಕಂಡು ಹಿಡಿಯಲು ಎಷ್ಟೋ ಪ್ರಯತ್ನಮಾಡಿರುವರು. ಹಿಂದಿನಿಂದ ನಮಗೆ ಬಂದ ಎಲ್ಲಾ ಪುರಾತನ ಧರ್ಮಗಳೂ ತಾವು ಅತೀಂದ್ರಿಯ ಎಂದು ಸಾಧಿಸುವುವು. ಧರ್ಮದಮೂಲ ಮಾನವನ ಯುಕ್ತಿಯಲ್ಲ, ಎಲ್ಲೊ ಇದನ್ನು ಮೀರಿದ ಎಲ್ಲೆಯಲ್ಲಿ ಜನಿಸಿತೆನ್ನುವರು.

ಆಧುನಿಕ ವಿದ್ವಾಂಸರು ಎರಡು ಸಿದ್ಧಾಂತವನ್ನು ಅನುಮೋದಿಸು ವರು. ಒಂದು ಪ್ರೇತ (spirit) ಸಿದ್ಧಾಂತ ಮತ್ತೊಂದು ಅನಂತತೆಯ ಭಾವನೆಯ ವಿಕಾಸ. ಒಬ್ಬರು ಪಿತೃಪೂಜೆಯೇ ಧಾರ್ಮಿಕಭಾವನೆಗೆ ಮೂಲವೆನ್ನುವರು, ಮತ್ತೊಬ್ಬರು ಪ್ರಕೃತಿಶಕ್ತಿಗಳಿಗೆ ಆಕಾರವನ್ನು ಕೊಡುವ ಪ್ರಯತ್ನದಲ್ಲಿ ಅದರ ಮೂಲವಿದೆ ಎನ್ನುವರು. ಮನುಷ್ಯ ತನ್ನ ಸತ್ತ ಬಂಧುಗಳ ಸ್ಮೃತಿಯನ್ನು ಶಾಶ್ವತವಾಗಿ ಇಟ್ಟುಕೊಂಡಿರಲು ಯತ್ನಿಸುವನು. ಅವರ ದೇಹ ನಾಶವಾದರೂ ಅವರು ಬದುಕಿರುವರು ಎಂದು ಭಾವಿಸುವನು. ಅವರಿಗೆ ಆಹಾರ ಕೊಡಲಿಚ್ಛಿಸುವನು. ಅವರನ್ನು ಒಂದು ದೃಷ್ಟಿಯಿಂದ ಪೂಜಿಸಲು ಯತ್ನಿಸುವನು. ಅದರಿಂದ ಧರ್ಮ ಜನಿಸಿತು. ಈಜಿಪ್ಟ್ ಬ್ಯಾಬಿಲೋನಿಯಾ ಚೈನಾ ಅಮೆರಿಕ ಮತ್ತು ಇತರ ದೇಶದ ಹಲವು ಧರ್ಮಗಳನ್ನು ಪರೀಕ್ಷಿಸಿದರೆ ಪಿತೃಪೂಜೆಯೆ ಧರ್ಮದ ಆದಿ ಎನ್ನುವುದಕ್ಕೆ ಸ್ಪಷ್ಟಚಿಹ್ನೆಗಳು ದೊರಕುವುವು. ಪುರಾತನ ಈಜಿಪ್ಟಿನವರು ಮೊದಲು ಜೀವವನ್ನು ಒಂದು ಜೋಡಿ ಎಂದು ಭಾವಿಸಿದ್ದರು. ಪ್ರತಿಯೊಂದು

ಮಾನವ ದೇಹದಲ್ಲಿ ಅದರಂತೆ ಮತ್ತೊಂದು ಇದೆ; ಮನುಷ್ಯ ಸತ್ತರೆ ಜೋಡಿಯಲ್ಲಿ ಎರಡನೆಯದು ದೇಹದಿಂದ ಹೊರಗೆಹೋಗಿ ಜೀವಿಸುತ್ತಿತ್ತು. ಆದರೆ ಎರಡನೆ ಜೀವ ಎಲ್ಲಿಯವರೆಗೆ ದೇಹ ಸುರಕ್ಷಿತವಾಗಿರುತ್ತಿತ್ತೊ ಅಲ್ಲಿಯವರೆಗೆ ಮಾತ್ರ ಇರುತ್ತಿತ್ತು. ಆದಕಾರಣವೇ ದೇಹವನ್ನು ಇಡು ವುದಕ್ಕಾಗಿಯೇ ಆ ಭೀಮಾಕಾರದ ಪಿರಮಿಡ್ಡುಗಳನ್ನು ಕಟ್ಟಿದರು. ಬಾಹ್ಯ ಶರೀರದ ಯಾವುದಾದರು ಭಾಗ ಊನವಾದರೆ, ಅದಕ್ಕೆ ಸಂಬಂಧಪಟ್ಟ ಜೋಡಿಯ ಮತ್ತೊಂದರ ಭಾಗವೂ ಊನವಾಗುತ್ತಿತ್ತು. ಇದು ನಿಸ್ಸಂದೇಹವಾಗಿ ಪಿತೃಪೂಜೆ. ಪುರಾತನ ಬ್ಯಾಬಿಲೋನಿನವರಲ್ಲಿಯೂ ಈ ಜೋಡಿಯ ಭಾವನೆ ಇದೆ. ಆದರೆ ಸ್ವಲ್ಪ ವ್ಯತ್ಯಾಸ ಮಾತ್ರ. ಆ ಜೊತೆಯ ಜೀವಕ್ಕೆ ಪ್ರೀತಿಯೆಲ್ಲಾ ಮಾಯವಾಗಿ ನಂಟರಿಷ್ಟರನ್ನು ತಿನ್ನುವುದಕ್ಕೆ ಕುಡಿಯುವುದಕ್ಕೆ ಕೊಡಿ ಎಂದೂ, ಇನ್ನೂ ಹಲವು ವಿಧದಲ್ಲಿ ತನಗೆ ಸಹಾಯಮಾಡಿ ಎಂದು ಕಾಡಿ ಅಂಜಿಸುತ್ತಿತ್ತು. ತನ್ನ ಸ್ವಂತ ಹೆಂಡತಿ ಮಕ್ಕಳ ಮೇಲಿನ ಮಮತೆಯೂ ಅದಕ್ಕೆ ಇರಲಿಲ್ಲ. ಪುರಾತನ ಹಿಂದೂ ಗಳಲ್ಲಿ ಕೂಡ ಪಿತೃಪೂಜೆಯ ಲಕ್ಷಣಗಳನ್ನು ನೋಡುವೆವು. ಚೈನಾ ದೇಶದ ಧರ್ಮವೇ ಪಿತೃಪೂಜೆಯ ತಳಹದಿಯಮೇಲೆ ನಿಂತಿದೆ ಎನ್ನ ಬಹುದು. ಆ ದೊಡ್ಡ ದೇಶದಲ್ಲೆಲ್ಲಾ ಇದೊಂದೇ ರೂಢಿಯಲ್ಲಿರುವುದು. ಚೈನಾದೇಶದಲ್ಲಿರುವ ಏಕಮಾತ್ರ ಧರ್ಮವೇ ಪಿತೃಪೂಜೆ ಎನ್ನಬಹುದು. ಧರ್ಮದ ಮೂಲ ಪಿತೃಪೂಜೆಯಲ್ಲಿದೆ ಎಂಬ ಸಿದ್ಧಾಂತವನ್ನು ಸಾಧಿಸುವ ವರಿಗೆ ಸಾಕಾದಷ್ಟು ಪ್ರಮಾಣಗಳು ಸಿಕ್ಕಿದಂತೆ ತೋರುವುದು.

ಮತ್ತೊಂದು ಪಂಗಡದ ವಿದ್ವಾಂಸರು ಪುರಾತನ ಆರ್ಯಸಾಹಿತ್ಯದಿಂದ ಧರ್ಮ, ಪ್ರಕೃತಿಪೂಜೆಯಿಂದ ಪ್ರಾರಂಭವಾಯಿತು ಎಂದು ತೋರುವರು. ಭರತಖಂಡದಲ್ಲಿ ಪಿತೃಪೂಜೆಯ ಚಿಹ್ನೆಯನ್ನು ಎಲ್ಲಾ ಕಡೆಯಲ್ಲಿ ನೋಡಿ ದರೂ ಅತಿ ಪುರಾತನ ಗ್ರಂಥದಲ್ಲಿ ಆ ವಿಷಯದ ಪ್ರಸ್ತಾಪವೇ ಇಲ್ಲ. ಆರ್ಯರ ಅತಿ ಪುರಾತನ ಶಾಸ್ತ್ರವಾದ ಋಗ್ವೇದ ಸಂಹಿತೆಯಲ್ಲಿ ಅದರ ಚಿಹ್ನೆಯೇ ಇಲ್ಲ. ಪ್ರಕೃತಿಯ ಆರಾಧನೆ ಅಲ್ಲಿ ಕಾಣುವುದು ಎಂದು ಆಧುನಿಕ ವಿದ್ವಾಂಸರು ಅಭಿಪ್ರಾಯಪಡುವರು. ಬಾಹ್ಯದೃಶ್ಯಗಳ ಹಿಂದೆ ಇರುವುದನ್ನು ತಿಳಿಯಬೇಕೆಂದು ಮಾನವನು ಯತ್ನಿಸುವನು. ಉದಯಾಸ್ತಗಳು, ಚಂಡಮಾರುತ ಮುಂತಾದ ಪ್ರಕೃತಿಯ ಅದ್ಭುತ ಶಕ್ತಿ ಮತ್ತು ಅದರ ಸೌಂದರ್ಯ ಮನುಷ್ಯನನ್ನು ಆಕರ್ಷಿಸಿದೆ. ಅವನ ಯುಕ್ತಿ ಇದನ್ನು ಮೀರಿಹೋಗಿ ಇದನ್ನು ತಿಳಿದುಕೊಳ್ಳಲು ಯತ್ನಿಸುವುದು.

ಈ ಪ್ರಯತ್ನದಲ್ಲಿ ನೈಸರ್ಗಿಕಶಕ್ತಿಗಳಿಗೆ ಒಂದು ಆಕಾರವನ್ನು ಕೊಡುವನು. ಅವಕ್ಕೆ ಜೀವ ಮತ್ತು ದೇಹ ಆರೋಪಿಸುವನು. ಕೆಲವುವೇಳೆ ಮನೋಹರವಾದ ಕೆಲವುವೇಳೆ ಅತಿಸೂಕ್ಷ್ಮ ಅತೀಂದ್ರಿಯಭಾವನೆಗಳನ್ನು ಆರೋಪಿಸುವನು. ಬಾಹ್ಯದೃಶ್ಯ ವ್ಯಕ್ತವಾಗಲೀ ಅವ್ಯಕ್ತವಾಗಲಿ ಕೊನೆಗೆ ಅವರ ಪ್ರಯತ್ನವೆಲ್ಲಾ ಕೇವಲ ಸೂಕ್ಷ್ಮಭಾವದಲ್ಲಿ ಪರ್ಯವಸಾನವಾಗುವುದು. ಪುರಾತನ ಯವನರಲ್ಲಿ ಕೂಡ ನಾವು ಇದನ್ನೇ ನೋಡುವೆವು. ಅವರ ಪುರಾಣವೆಲ್ಲಾ ಭಾವನಾಮಾತ್ರವಾದ ಪ್ರಕೃತಿ ಆರಾಧನೆ. ಪುರಾತನ ಜರ್ಮನಿ ಸ್ಕಾಂಡಿನೇವಿಯಾ ಮತ್ತು ಇತರ ಆರ್ಯಜನಾಂಗಳು ಕೂಡ ಹೀಗೆಯೇ. ನೈಸರ್ಗಿಕ ಶಕ್ತಿಗಳಿಗೆ ಆಕಾರವನ್ನು ಆರೋಪಿಸುವುದರಲ್ಲಿ ಧರ್ಮದ ಮೂಲವಿದೆ ಎಂದು ಸಾಧಿಸುವ ಪಕ್ಷದವರಿಗೂ ಸಾಕಾದಷ್ಟು ಪ್ರಮಾಣ ದೊರೆತಂತೆ ಆಯಿತು.

ಈ ಎರಡು ಸಿದ್ಧಾಂತಗಳೂ ಪರಸ್ಪರ ವಿರೋಧದಂತೆ ಕಂಡರೂ ಇದನ್ನು ಮೂರನೆಯ ಮತ್ತೊಂದು ದೃಷ್ಟಿಯಿಂದ ಬಗೆಹರಿಸಬಹುದು. ಅದೇ ನಿಜವಾದ ಧರ್ಮದ ಮೂಲವೆಂದು ನನಗೆ ತೋರುವುದು. ಅದೇ ಇಂದ್ರಿಯಗಳ ಮೇರೆಯನ್ನು ಮೀರಿಹೋಗುವ ಪ್ರಯತ್ನವೆನ್ನುತ್ತೇನೆ. ತನ್ನ ಪೂರ್ವಿಕರ ಗತಿಸಿದವರ ಆತ್ಮವನ್ನು ಅರಸಲು ಯತ್ನಿಸುವನು; ದೇಹ ನಾಶವಾದಮೇಲೆ ಏನು ಉಳಿಯುವುದೋ ಅದರ ಕ್ಷಣಿಕ ದರ್ಶನವನ್ನು ಪಡೆಯಲು ಯತ್ನಿಸುವನು. ಇಲ್ಲದೆ ನೈಸರ್ಗಿಕ ಮಹಾ ಘಟನೆಗಳ ಹಿಂದೆ ಕೆಲಸಮಾಡುತ್ತಿರುವ ಶಕ್ತಿಯನ್ನು ಗ್ರಹಿಸಲು ಯತ್ನಿಸುವನು. ಇವೆರಡು ದೃಷ್ಟಿಯಲ್ಲಿ ಯಾವುದಾದರೂ ಆಗಲಿ ಅದರಲ್ಲಿ ಒಂದು ಮಾತ್ರ ಸತ್ಯ; ಅದೇ ಇಂದ್ರಿಯದ ಮೇರೆಯನ್ನು ಮೀರಿಹೋಗಲು ಅವನು ಯತ್ನಿಸುವನು. ಇಂದ್ರಿಯ ಸುಖದಲ್ಲೆ ತೃಪ್ತನಾಗಿ ಅವನು ಇರಲಾರ. ಅದನ್ನು ಅತಿಕ್ರಮಿಸಲು ಯತ್ನಿಸುವನು. ವಿವರಣೆ ಅತಿ ಜಟಿಲವಾಗಿ ಇರಬೇಕಾಗಿಲ್ಲ. ಧಾರ್ಮಿಕ ಜಗತ್ತಿನ ಪ್ರಥಮ ಭಾವನೆಗಳು ಸ್ವಪ್ನದ ಮೂಲಕ ಬಂದಿರಬಹುದು. ಇದೊಂದು ಅತಿವಿಚಿತ್ರಸ್ಥಿತಿಯಲ್ಲವೆ? ಮಕ್ಕಳು ಮತ್ತು ಇನ್ನೂ ಯಾರಲ್ಲಿ ಬುದ್ಧಿಪ್ರಚೋದನವಾಗಿಲ್ಲವೋ ಅವರಿಗೆ ಜಾಗ್ರತ್ ಮತ್ತು ಸ್ವಪ್ನಾವಸ್ಥೆಗೆ ಇರುವ ವ್ಯತ್ಯಾಸ ತೋರುವುದೇ ಇಲ್ಲವೆಂಬುದು ನಮಗೆ ಗೊತ್ತಿದೆ. ನಿದ್ರಿಸುತ್ತಿರುವಾಗಲೂ, ದೇಹ ಶವದಂತೆ ಬಿದ್ದಿದ್ದರೂ ಮನಸ್ಸು ತನ್ನ ಕಾರ್ಯವನ್ನೆಲ್ಲಾ ಮಾಡುತ್ತಾ ಹೋಗುವುದು. ಅದು ಯುಕ್ತಿಪೂರಿತವಾಗಿಯೇ ಕಾಣುವುದು. ಯಾವುದು

ಇದಕ್ಕಿಂತ ಹೆಚ್ಚು ಸ್ವಾಭಾವಿಕವಾಗಿ ಕಾಣುವುದು? ದೇಹ ಕೊನೆಗೆ ನಾಶವಾದರೂ ಮನಸ್ಸು ಹಿಂದಿನಂತೆಯೇ ಕೆಲಸಮಾಡುತ್ತಿರುವುದು ಎಂಬ ನಿರ್ಧರಕ್ಕೆ ತಕ್ಷಣ ಬರುವುದರಲ್ಲಿ ಆಶ್ಚರ್ಯವೇನಿದೆ? ಇದು ಅತೀಂದ್ರಿಯ ಘಟನೆಯ ನೈಸರ್ಗಿಕ ವಿವರಣೆಯಂತೆ ನನಗೆ ತೋರುವುದು. ಸ್ವಪ್ನದ ಮೂಲಕ ಮಾನವ ಉತ್ತಮತರ ಭಾವನೆಗೆ ಬರುವನು. ಕಾಲಕ್ರಮೇಣ ಬಹುಪಾಲು ಮಾನವರು, ಸ್ವಪ್ನವನ್ನು ಜಾಗ್ರತಾವಸ್ಥೆಯ ಅನುಭವದಿಂದ ಪ್ರಮಾಣಪಡಿಸಲಾಗುವುದಿಲ್ಲ, ಸ್ವಪ್ನದಲ್ಲಿ ಅವನಿಗೆ ಬೇರೆ ಒಂದು ಸ್ಥಿತಿ ಇರುವುದಿಲ್ಲ, ಕೇವಲ ಜಾಗ್ರತಾವಸ್ಥೆಯ ಅನುಭವವನ್ನು ಸ್ಮರಿಸುವನು ಎಂಬುದನ್ನು ಕಂಡುಹಿಡಿದರು.

ಅನ್ವೇಷಣೆ ಆಗಲೇ ಇಷ್ಟುಹೊತ್ತಿಗೆ ಪ್ರಾರಂಭವಾಗಿತ್ತು. ಅದು ಈಗ ಅಂತರ್ಮುಖವಾಯಿತು. ಮನಸ್ಸಿನ ಹಲವು ಸ್ಥಿತಿಗತಿಗಳನ್ನು ವಿಚಾರಿಸುತ್ತಾ ಕೊನೆಗೆ ಜಾಗ್ರತ್ ಮತ್ತು ಸ್ವಪ್ನಕ್ಕಿಂತ ಮೇಲಿನ ಸ್ಥಿತಿಯನ್ನು ಕಂಡುಹಿಡಿದರು. ಎಲ್ಲಾ ಸುವ್ಯವಸ್ಥಿತ ಧರ್ಮದಲ್ಲಿಯೂ ನಾವು ಈ ಸ್ಥಿತಿಯನ್ನು ನೋಡುತ್ತೇವೆ. ಅದನ್ನು ಆನಂದ ಪರವಶತೆ ಅಥವಾ ಸ್ಫೂರ್ತಿ ಎನ್ನುವರು. ಎಲ್ಲಾ ವ್ಯವಸ್ಥಿತ ಧಾರ್ಮಿಕ ಪಂಗಡದ ಮೂಲ ಪುರುಷರು, ಜಾಗ್ರತ್ ಸ್ವಪ್ನವಲ್ಲದ ಮತ್ತಾವುದೋ ಒಂದು ಸ್ಥಿತಿಗೆ ಹೋಗಿ, ಅಲ್ಲಿ ಆಧ್ಯಾತ್ಮಿಕ ಪ್ರಪಂಚಕ್ಕೆ ಸಂಬಂಧಪಟ್ಟ ಹಲವು ವಿಷಯಗಳನ್ನು ಪ್ರತ್ಯಕ್ಷ ಮನಗಂಡರು ಎಂದು ಹೇಳುವರು. ಜಾಗ್ರತಾವಸ್ಥೆಯಲ್ಲಿ ನಮ್ಮ ಸುತ್ತಲೂ ಇರುವ ವಿಷಯಗಳನ್ನು ನಾವು ಹೇಗೆ ತಿಳಿದುಕೊಳ್ಳುವೆವೊ ಅದಕ್ಕಿಂತ ಹೆಚ್ಚು ಗಾಢವಾಗಿ ಅಲ್ಲಿ ವಿಷಯಗಳನ್ನು ತಿಳಿದುಕೊಂಡರು. ಬ್ರಾಹ್ಮಣರ ಧರ್ಮವನ್ನು ಉದಾಹರಣೆಗೆ ತೆಗೆದುಕೊಳ್ಳಿ. ಋಷಿಗಳು ವೇದವನ್ನು ರಚಿಸಿದರು ಎನ್ನುವರು. ಈ ಋಷಿಗಳು ಕೆಲವು ಅನುಭವವನ್ನು ಸಾಕ್ಷಾತ್ಕಾರಮಾಡಿಕೊಂಡವರು. ಸಂಸ್ಕೃತದಲ್ಲಿ ಋಷಿಗೆ ಮಂತ್ರದ್ರಷ್ಟ, ಎಂದರೆ ವೇದಗಳ ಮಂತ್ರಗಳಲ್ಲಿ ಬರುವ ಭಾವನೆಯನ್ನು ಕಂಡವರು ಎಂದು ಅರ್ಥ. ಈ ಋಷಿಗಳು, ತಾವು ಅದನ್ನು ಸಾಕ್ಷಾತ್ಕಾರಮಾಡಿಕೊಂಡೆವು, ಕೆಲವು ವಿಷಯಗಳನ್ನು ಗ್ರಹಿಸಿದೆವು (ಇದನ್ನು ಅತೀಂದ್ರಿಯ ಅನುಭಕ್ಕೆ ಉಪಯೋಗಿಸಬಹುದಾದರೆ) ಎನ್ನುವರು. ಈ ಅನುಭವವನ್ನು ಅವರು ಬರವಣಿಗೆಯಲ್ಲಿ ವ್ಯಕ್ತಪಡಿಸಿದರು. ಇದೇ ಸತ್ಯವನ್ನು ಯಹೂದ್ಯರು ಮತ್ತು ಕ್ರೈಸ್ತರು ಸಾರುವರು.

ದಾಕ್ಷಿಣಾತ್ಯಬೌದ್ಧರ ವಿಷಯದಲ್ಲಿ ಒಂದು ವಿನಾಯಿತಿ (exception) ತರಬಹುದು. ಬೌದ್ಧರು ದೇವರಲ್ಲಿ ಅಥವಾ ಆತ್ಮನಲ್ಲಿ ನಂಬದೆ ಇದ್ದರೆ ಅವರ ಧರ್ಮ ಹೇಗೆ ಅತೀಂದ್ರಿಯದಮೂಲಕ ಜನಿಸಬಹುದೆಂದು ಪ್ರಶ್ನಿಸಬಹುದು. ಇದಕ್ಕೆ ಉತ್ತರವೇ ಬೌದ್ಧರಲ್ಲಿ ಕೂಡ ಒಂದು ಸನಾತನ ಧರ್ಮನಿಯಮವಿದೆ. ಆ ನಿಯಮ ನಾವು ಬಾಹ್ಯವಸ್ತುವನ್ನು ಗ್ರಹಿಸಿದಂತೆ ಗ್ರಹಿಸಿದುದಲ್ಲ. ಬುದ್ಧ ಅತೀಂದ್ರಿಯ ಅವಸ್ಥೆಯಲ್ಲಿ ಅದನ್ನು ಕಂಡುಹಿಡಿದನು. "ಏಷ್ಯದ ಜ್ಯೋತಿ" ಎಂಬ ಸುಂದರ ಕವನದಲ್ಲಿ ಬರುವ ಬುದ್ಧನ ಸಂಕ್ಷೇಪ ಜೀವನವನ್ನು ಓದಿದವರಿಗೆ, ಬುದ್ಧನಿಗೆ ಆ ಅತೀಂದ್ರಿಯ ಅನುಭವ ದೊರಕುವವರೆಗೆ ಅವನು ಆಲದಮರದ ಕೆಳಗೆ ಕುಳಿತಿದ್ದನು ಎಂಬುದು ಜ್ಞಾಪಕವಿರಬಹುದು. ಅವನ ಬೋಧನೆಯೆಲ್ಲಾ ಈ ಅನುಭವದ ಮೂಲಕ ಬಂದದ್ದು, ಯುಕ್ತಿಶ್ರಮದಿಂದ ಅಲ್ಲ.

ಎಲ್ಲಾ ಧರ್ಮಗಳೂ, ಮನಸ್ಸು ಕೆಲವುವೇಳೆ ಇಂದ್ರಿಯಗಳ ಮೇರೆಯನ್ನು ಮೀರುವುದು ಮಾತ್ರವಲ್ಲ, ಯುಕ್ತಿಯನ್ನೂ ಮೀರಿಹೋಗುವುದು ಎಂದು ಅಸಾಧಾರಣವಾಗಿ ನಿರೂಪಿಸುವುವು. ಆಗ ಮನಸ್ಸು ಸಾಧಾರಣವಾಗಿ ಗ್ರಹಿಸಿದ ಯುಕ್ತಿಯ ಮೂಲಕ ಆಲೋಚಿಸಲು ಅಸಾಧ್ಯವಾದ ಅನುಭವವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದು. ಪ್ರಪಂಚದ ಧರ್ಮಗಳಿಗೆಲ್ಲಾ ಈ ಅನುಭವವೇ ತಳಹದಿ. ಈ ಅನುಭವಗಳನ್ನು ಬೇಕಾದರೆ ನಾವು ಅನುಮಾನಿಸಬಹುದು, ಯುಕ್ತಿಯ ವಿಮರ್ಶೆಗೆ ಒಳಪಡಿಸಬಹುದು. ಆದರೆ ಎಲ್ಲಾ ಧರ್ಮಗಳೂ, ಯುಕ್ತಿ ಮತ್ತು ಇಂದ್ರಿಯಗಳ ಎಲ್ಲೆಯನ್ನು ಮೀರಿಹೋಗಬಲ್ಲ ಒಂದು ವಿಚಿತ್ರಶಕ್ತಿ ಮಾನವನ ಮನಸ್ಸಿಗೆ ಇದೆ, ಇದು ಸತ್ಯ ಎಂದು ಸಾಧಿಸುವುವು.

ಧರ್ಮಗಳು ಸಾಧಿಸುವ ಈ ಹೇಳಿಕೆ ಎಷ್ಟು ಮಟ್ಟಿಗೆ ಸತ್ಯ ಎಂಬ ಪ್ರಶ್ನೆಯನ್ನು ಸದ್ಯಕ್ಕೆ ಗಮನಿಸದಿದ್ದರೂ ಅವುಗಳಲ್ಲೆಲ್ಲಾ ಒಂದು ಸಾಮಾನ್ಯ ನಿಯಮವಿದೆ. ಭೌತಶಾಸ್ತ್ರದ ಸ್ಥೂಲ ಅನಾವರಣದಂತೆ ಅಲ್ಲ ಇವು. ಇದಕ್ಕೆ ವಿರೋಧವಾಗಿ ಸೂಕ್ಷ್ಮಭಾವನಾಮಯವಾದದ್ದು. ಎಲ್ಲಾ ಸುವ್ಯವಸ್ಥಿತ ಧರ್ಮಗಳಲ್ಲಿಯೂ, ಅದು ಪರಿಶುದ್ಧವಾದ ಏಕ ಅಮೂರ್ತ ಭಾವನೆಯಂತೆ ಇದೆ. ಅದು ಸರ್ವವ್ಯಾಪಿಯಾದ ಅಮೂರ್ತ ವ್ಯಕ್ತಿತ್ವವೆಂದಾಗಲಿ, ದೇವರು ಅಥವಾ ನೈತಿಕನಿಯಮವೆನ್ನುವ ನಿರಾಕಾರ ವ್ಯಕ್ತಿತ್ವವೆಂದಾಗಲಿ, ಚರಾಚರವಸ್ತುಗಳ ಅಂತರಾಳದಲ್ಲಿರುವ ಸಾರಭೂತವಾದ ವಸ್ತುವೆಂದಾಗಲಿ ಅದನ್ನು ಕರೆಯುವರು. ಆಧುನಿಕ ಕಾಲದಲ್ಲಿ

ಕೂಡ, ಧರ್ಮವನ್ನು ಅತೀಂದ್ರಿಯ ಅನುಭವದ ಆಧಾರವಿಲ್ಲದೆ ಬೋಧಿಸುವಾಗ ಪೂರ್ವಿಕರ ಅಮೂರ್ತಭಾವನೆಗಳನ್ನೇ ತೆಗೆದುಕೊಂಡು ಅದಕ್ಕೆ "ಧಾರ್ಮಿಕನಿಯಮ" "ಆದರ್ಶಐಕ್ಯತೆ" ಮುಂತಾದ ಬೇರೆ ಬೇರೆ ಹೆಸರನ್ನು ಕೊಡಬೇಕಾಯಿತು. ಅಮೂರ್ತಭಾವನೆ (Abstraction) ಇಂದ್ರಿಯಗಳಿಗೆ ಸಂಬಂಧಪಟ್ಟುದಲ್ಲವೆಂಬುದನ್ನು ಇದರಿಂದ ತೋರುವರು. ನಮ್ಮಲ್ಲಿ ಯಾರೂ ಇದುವರೆಗೆ ಒಬ್ಬ ಆದರ್ಶಮಾನವನನ್ನು ನೋಡಿಲ್ಲ. ಆದರೂ ಅದರಲ್ಲಿ ನಂಬಿ ಎನ್ನುವರು. ನಮ್ಮಲ್ಲಿ ಯಾರೂ ಇದುವರಿಗೆ ಒಬ್ಬ ಆದರ್ಶ ಪರಿಪೂರ್ಣವ್ಯಕ್ತಿಯನ್ನು ಕಂಡಿಲ್ಲ. ಆದರೂ ಅಂತಹ ಆದರ್ಶವಿಲ್ಲದೆ ನಾವು ಮುಂದುವರಿಯಲಾರೆವು. ಎಲ್ಲಾ ಧರ್ಮಗಳಲ್ಲಿಯೂ ಏಕ ಅಮೂರ್ತಭಾವನೆಯ ಆದರ್ಶ ಮುಖ್ಯವಾಗಿ ನಿಲ್ಲುವುದು. ಅದನ್ನು ನಮ್ಮ ಮುಂದೆ ಸಾಕಾರದಂತೆಯೊ, ನಿರಾಕಾರದಂತೆಯೊ, ನಿಯಮದಂತೆಯೊ, ಸರ್ವವ್ಯಾಪಿಯಂತೆಯೊ, ಎಲ್ಲ ವಸ್ತುಗಳ ಸಾರದಂತೆಯೊ ಇಡುವರು. ಈ ಆದರ್ಶದ ಮಟ್ಟಕ್ಕೆ ಏರಲು ನಾವು ಯಾವಾಗಲೂ ಹೋರಾಡುತ್ತಿರುವೆವು. ಮಾನವ ಯಾರಾದರಾಗಲಿ ಎಲ್ಲಿಯಾದರೂ ಇರಲಿ ಅವನಿಗೆ ಅನಂತ ಶಕ್ತಿಯ ಆದರ್ಶವಿದೆ, ಅನಂತ ಆನಂದದ ಆದರ್ಶವಿದೆ. ನಮ್ಮ ಸುತ್ತಲೂ ಸಾಗುತ್ತಿರುವ ಕಾರ್ಯಗಳ ಹಿಂದೆ, ಎಲ್ಲ ಕಡೆಯಲ್ಲಿಯೂ ನಡೆಯುತ್ತಿರುವ ಚಟುವಟಿಕೆಯ ಹಿಂದೆ, ಅನಂತಶಕ್ತಿ ಅಥವಾ ಆನಂದವನ್ನು ಪಡೆಯುವ ಉದ್ಯಮವಿದೆ. ಅನಂತಶಕ್ತಿಗೆ ತಾವು ಪ್ರಯತ್ನಪಡುತ್ತಿದ್ದರೂ ಇಂದ್ರಿಯಗಳಮೂಲಕ ಅದನ್ನು ಪಡೆಯಲಾಗುವುದಿಲ್ಲವೆಂಬುದನ್ನು ಕೆಲವರು ಬೇಗ ಕಂಡುಹಿಡಿಯುವರು. ಇಂದ್ರಿಯಗಳಮೂಲಕ ಅನಂತಾನಂದ ದೊರಕಲಾರದು. ಇಂದ್ರಿಯಕ್ಕೆ ಒಂದು ಮಿತಿ ಇದೆ, ದೇಹಕ್ಕೆ ಒಂದು ಮಿತಿ ಇದೆ, ಅದು ಅನಂತವನ್ನು ವ್ಯಕ್ತಗೊಳಿಸುವುದು ಅಸಾಧ್ಯ. ಬೇಗಲೋ ನಿಧಾನವಾಗಿಯೋ ಸಾಂತದಮೂಲಕ ಅನಂತವನ್ನು ವ್ಯಕ್ತಗೊಳಿಸುವ ಪ್ರಯತ್ನವನ್ನು ಮನುಷ್ಯ ತ್ಯಜಿಸುವನು. ಈ ತ್ಯಾಜ್ಯವೇ—ಪ್ರಯತ್ನದ ತ್ಯಾಗವೇ, ನೀತಿಗೆ ಹಿನ್ನೆಲೆ. ನೀತಿ ನಿಂತಿರುವ ತಳಹದಿಯೇ ಧರ್ಮ. ತ್ಯಾಗದ ಅಡಿಯಿಲ್ಲದ ಯಾವನೀತಿಯನ್ನೂ ಇದುವರೆಗೂ ಬೋಧಿಸಿಲ್ಲ.

ನೀತಿ ಯಾವಾಗಲೂ ನಾನಲ್ಲ ನೀನು ಎನ್ನುವುದು. ಅದರ ಉದ್ದೇಶ ಮಮಕಾರವಲ್ಲ, ನಾನಲ್ಲದೆ ಇರುವುದು. ಇಂದ್ರಿಯದ ಮೂಲಕ ಅನಂತ ಶಕ್ತಿ ಮತ್ತು ಆನಂದವನ್ನು ಪಡೆಯಲು ಯತ್ನಿಸುವಾಗ ಬಾಚಿ ತಬ್ಬಿಕೊಂಡಿರುವ ನಾನೆಂಬುವ ಭ್ರಾಂತಿ ಭಾವನೆಗಳನ್ನು ತ್ಯಜಿಸಬೇಕು

ಎನ್ನುವುದು ನೀತಿನಿಯಮ. ನಿನ್ನನ್ನು ಕೊನೆಗೆ ಪರಿಗಣಿಸಬೇಕು. ಇತರರನ್ನು ನಿನಗಿಂತ ಮುಂಚೆ ನೋಡಬೇಕು. ಇಂದ್ರಿಯಗಳು "ಮೊದಲು ನಾನು" ಎನ್ನುವುದು. ನೀತಿ "ನಾನು" ಕೊನೆಗೆ ಬರಬೇಕು ಎನ್ನುವುದು. ಎಲ್ಲಾ ನೀತಿ ನಿಯಮಾವಳಿ ನಿಂತಿರುವುದು ತ್ಯಾಗದ ಮೇಲೆ. ಭೌತಿಕ ಜಗತ್ತಿನಲ್ಲಿ ಅಹಂಕಾರ ಪೋಷಣೆಯ ಮೇಲೆ ಅಲ್ಲ, ಅದರ ಧ್ವಂಸದ ಮೇಲೆ ನಿಂತಿದೆ. ಆ ಅನಂತ, ಭೌತಿಕ ಪ್ರಪಂಚದ ಮೂಲಕ ಎಂದಿಗೂ ವ್ಯಕ್ತ ವಾಗದು. ಅದು ಸಾಧ್ಯವೂ ಇಲ್ಲ, ಹಾಗೆ ಭಾವಿಸಲೂ ಆರೆವು.

ಮನುಷ್ಯ ಭೌತಿಕ ಜಗತ್ತನ್ನು ಮೀರಿ ಅನಂತದ ಆದರ್ಶವನ್ನು ಅರಿಯಬೇಕಾದರೆ ಬೇರೆ ಕಾರ್ಯಕ್ಷೇತ್ರಕ್ಕೆ ಹೋಗಬೇಕಾಗಿದೆ. ಆಗಲೆ ಹಲವು ನೀತಿ ನಿಯಮಾವಳಿಗಳು ರೂಢಿಗೆ ಬಂದವು. ಅವುಗಳಲ್ಲೆಲ್ಲಾ ಒಂದು ಕೇಂದ್ರ ಭಾವನೆ ಇದೆ- ಅದೇ ಎಂದೆಂದಿಗೂ ನಾನೆಂಬುದರ ನಾಶ. ಪೂರ್ಣ ಸ್ವಾರ್ಥನಾಶವೇ ನೀತಿಯ ಗುರಿ. ಜನರಿಗೆ ತಮ್ಮ ಕ್ಷುದ್ರವ್ಯಕ್ತಿತ್ವವನ್ನು ಲೆಕ್ಕಿಸಬೇಡಿ ಎಂದರೆ ಚಕಿತರಾಗುವರು. ಯಾವು ದನ್ನು ತಮ್ಮ ವ್ಯಕ್ತಿತ್ವ ಎಂದು ಭಾವಿಸಿರುವರೋ ಅದನ್ನು ಕಳೆದುಕೊಳ್ಳು ವುದಕ್ಕೆ ಅವರಿಗೆ ಬಹಳ ಅಂಜಿಕೆ. ಆದರೂ ಏಕಕಾಲದಲ್ಲೇ ಅವರು ನೀತಿಯ ಪರಮಾದರ್ಶಗಳನ್ನು ಸರಿ ಎಂದು ಒಪ್ಪಿಕೊಳ್ಳುವರು. ಎಲ್ಲಾ ನೀತಿಶಾಸ್ತ್ರದ ಗುರಿಯ ಆಶಯವೆ ಅಹಂಕಾರ ನಾಶ ಅದರ ಪೋಷಣೆಯಲ್ಲ ಎಂಬುದನ್ನು ಅವರು ಆಲೋಚಿಸುವುದೇ ಇಲ್ಲ.

ಪ್ರಯೋಜನ ದೃಷ್ಟಿ ಮಾನವರ ನೈತಿಕಸಂಬಂಧವನ್ನು ವಿವರಿಸ ಲಾರದು. ಮೊದಲನೆಯದಾಗಿ ಪ್ರಯೋಜನ ದೃಷ್ಟಿಯಿಂದ ನಮಗೆ ಯಾವ ನೀತಿ ನಿಯಮವೂ ದೊರಕುವುದಿಲ್ಲ. ಅತಿಲೌಕಿಕದ ಅಪ್ಪಣೆ ಇಲ್ಲದೆ, ಅಥವಾ ನಾನು ಹೇಳಲಿಚ್ಛಿಸುವಂತೆ ಅತೀಂದ್ರಿಯದ ಅನುಭವ ವಿಲ್ಲದೆ ನೀತಿಗೆ ನೆಲೆ ಇಲ್ಲ. ಅನಂತತೆಯೆಡೆಗೆ ಹೋರಾಟವಿಲ್ಲದೆ ಇದ್ದರೆ ಯಾವ ಆದರ್ಶವೂ ಇರಲಾರದು. ಮನುಷ್ಯರನ್ನು ಕೇವಲ ತಮ್ಮ ಸಮಾಜಕ್ಕೆ ಮಾತ್ರ ಬಂಧಿಸಲೆತ್ನಿಸುವ ಯಾವ ಸಿದ್ಧಾಂತವೂ ಮಾನವ ಕೋಟಿಯ ನೀತಿಯ ನಿಯಮಾವಳಿಗೆ ವಿವರಣೆಯನ್ನು ಕೊಡಲಾರದು. ಅತೀಂದ್ರಿಯಗ್ರಹಣ ಅನಂತತೆಯೆಡೆಗೆ ಹೋರಾಟ ಇವುಗಳು ಅನುಷ್ಠಾನ ಸಾಧ್ಯವಲ್ಲ, ನಿಷ್ಪ್ರಯೋಜನವೆಂದು ತ್ಯಜಿಸಿ ಎನ್ನುವನು ಪ್ರಯೋಜನ ದೃಷ್ಟಿಯವನು. ಆದರೆ ತಕ್ಷಣವೇ ನೀತಿಯನ್ನು ಅನುಸರಿಸಿ ಸಮಾಜಕ್ಕೆ ಒಳ್ಳೆಯದನ್ನು ಮಾಡಿ ಎನ್ನುವನು. ನಾವೇಕೆ ಒಳ್ಳೆಯ ದನ್ನು ಮಾಡಬೇಕು? ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವುದು

ಗೌಣ. ನಮಗೆ ಒಂದು ಆದರ್ಶವಿರಬೇಕು. ನೀತಿಯೇ ಗುರಿಯಲ್ಲ, ಅದು ಗುರಿಎಡೆಗೆ ಒಂದು ದಾರಿ. ಗುರಿಯೇ ಇಲ್ಲದೆ ಇದ್ದರೆ ನಾವೇಕೆ ನೀತಿವಂತರಾಗಿರಬೇಕು? ಇತರರಿಗೆ ನಾವೇಕೆ ಒಳ್ಳೆಯದನ್ನು ಮಾಡಬೇಕು? ಏತಕ್ಕೆ ಹಿಂಸಿಸಬಾರದು? ಮಾನವನ ಗುರಿ ಸುಖವಾದರೆ ನಾನು ಸುಖವಾಗಿದ್ದು ಮತ್ತೊಬ್ಬರನ್ನು ಅಸುಖಿಯನ್ನಾಗಿ ಏಕೆ ಮಾಡಬಾರದು? ಇದನ್ನು ಯಾವುದು ತಡೆಯುವುದು? ಎರಡನೆಯದಾಗಿ ಪ್ರಯೋಜನ ದೃಷ್ಟಿ ಅಷ್ಟು ವಿಶಾಲವಲ್ಲ. ಈಗ ಜಾರಿಯಲ್ಲಿರುವ ಸಾಮಾಜಿಕ ರೀತಿ ನೀತಿಗಳೆಲ್ಲಾ ಸಮಾಜ ಈಗಿರುವ ಸ್ಥಿತಿಯಿಂದ ಆದುವು. ಸಮಾಜ ಶಾಶ್ವತವಾಗಿರುವುದು ಎಂದು ಊಹಿಸುವುದಕ್ಕೆ ಪ್ರಯೋಜನದೃಷ್ಟಿವಾದಿಗೆ ಯಾವ ಹಕ್ಕಿದೆ? ಸಹಸ್ರಾರು ವರುಷಗಳ ಹಿಂದೆ ಸಮಾಜ ಇರಲಿಲ್ಲ, ಮುಂದೆಯೂ ಸಹಸ್ರಾರು ವರ್ಷಗಳನಂತರ ಸಮಾಜವಿಲ್ಲದೆ ಇರಬಹುದು. ಉತ್ತಮ ವಿಕಾಸದೆಡೆಗೆ ನಾವು ಹೋಗುತ್ತಿರುವಾಗ ಇದೊಂದು ಹಂತವಿರಬಹುದು. ಕೇವಲ ಸಮಾಜದಿಂದ ಮಾತ್ರ ದೊರೆತ ಯಾವ ನಿಯಮವೂ ಶಾಶ್ವತವಾಗಿರಲಾರದು; ಮನುಷ್ಯನ ಸ್ವಭಾವವನ್ನೆಲ್ಲಾ ಅದು ಆವರಿಸುವುದಿಲ್ಲ. ಹೆಚ್ಚು ಎಂದರೆ ಪ್ರಯೋಜನ ದೃಷ್ಟಿಯ ಸಿದ್ಧಾಂತ ಈಗಿನ ಸಮಾಜ ಸ್ಥಿತಿಯಲ್ಲಿ ಮಾತ್ರ ಕಾರ್ಯಕಾರಿ ಆಗಬಹುದು. ಇದರಾಚೆ ಅದಕ್ಕೆ ಬೆಲೆಯೇ ಇಲ್ಲ. ಆದರೆ ಧರ್ಮ, ಆಧ್ಯಾತ್ಮಿಕತೆಯಿಂದ ದೊರೆತ ನೀತಿ ನಿಯಮಾವಳಿ ಮನುಷ್ಯನ ಅನಂತ ಸ್ವಭಾವವನ್ನು ಆವರಿಸುವುದು. ಅದು ವ್ಯಕ್ತಿಗಳನ್ನು ಸ್ವೀಕರಿಸುವುದು. ಆದರೆ ಅದರ ಸಂಬಂಧ ಅನಂತಕ್ಕೆ ಮಾತ್ರ. ಸಮಾಜವನ್ನೂ ಸ್ವೀಕರಿಸುವುದು. ಏಕೆಂದರೆ ಹಲವು ವ್ಯಕ್ತಿಗಳ ಮೊತ್ತವೇ ಸಮಾಜ. ಅದು ಮನುಷ್ಯನ ವ್ಯಕ್ತಿಜೀವನಕ್ಕೆ ಮತ್ತು ಅವನ ಅನಂತ ಜೀವನಕ್ಕೆ ಅನ್ವಯಿಸುವುದರಿಂದ ಸಮಾಜ ಯಾವ ಕಾಲದಲ್ಲಿರಲಿ ಯಾವ ಸ್ಥಿತಿಯಲ್ಲಿ ಬೇಕಾದರೂ ಇರಲಿ ಅದಕ್ಕೂ ಇದು ಅನ್ವಯಿಸಬೇಕು. ಆದಕಾರಣ ಮಾನವನಿಗೆ ಯಾವಾಗಲೂ ಒಂದು ಆಧ್ಯಾತ್ಮಿಕ ಧರ್ಮದ ಆವಶ್ಯಕತೆ ಇದೆ. ಮನುಷ್ಯ ಯಾವಾಗಲೂ ತನಗೆ ಎಷ್ಟೇ ಸಂತೋಷದಾಯಕವಾಗಲಿ ಪ್ರಪಂಚವನ್ನೇ ಕುರಿತು ಚಿಂತಿಸುತ್ತಿರಲಾರ.

ಆಧ್ಯಾತ್ಮಿಕ ವಿಷಯಗಳಿಗೆ ಹೆಚ್ಚು ಗಮನ ಕೊಡುವುದರಿಂದ ಪ್ರಪಂಚದ ನಮ್ಮ ವ್ಯವಹಾರಕ್ಕೆ ತೊಂದರೆಯಾಗುವುದು ಎನ್ನುವರು. ಬಹಳ ಪೂರ್ವದಲ್ಲಿ ಚೈನಾದೇಶದ ಕನ್ಫೂಷಿಯಸ್ ಋಷಿಯ ಕಾಲದಲ್ಲಿಯೂ "ಮೊದಲು ಈ ಪ್ರಪಂಚವನ್ನು ಗಮನಿಸೋಣ. ಈ ಪ್ರಪಂಚದ

ವ್ಯವಹಾರದ ನಂತರ ಪರಲೋಕಚಿಂತನೆ ಮಾಡೋಣ" ಎಂದು ಹೇಳುತ್ತಿದ್ದರು. ಈ ಪ್ರಪಂಚವನ್ನು ನಾವು ಲಕ್ಷ್ಯದಲ್ಲಿಡಬೇಕು ಎನ್ನುವುದೇನೋ ಒಳ್ಳೆಯದೆ. ಆದರೆ ಆಧ್ಯಾತ್ಮಕ್ಕೆ ಹೆಚ್ಚು ಗಮನ ಕೊಡುವುದರಿಂದ ನಮ್ಮ ಇಹಲೋಕದ ವ್ಯವಹಾರಕ್ಕೆ ಸ್ವಲ್ಪ ತೊಂದರೆಯಾದರೆ, ವ್ಯವಹಾರಕ್ಕೇ ಹೆಚ್ಚು ಗಮನಕೊಡುವುದರಿಂದ ನಮ್ಮ ಇಹಪರ ಎರಡಕ್ಕೂ ನಷ್ಟವಾಗುವುದು. ನಮ್ಮನ್ನು ಜಡವಾದಿಗಳನ್ನಾಗಿ ಮಾಡುವುದು. ಮನುಷ್ಯ ಪ್ರಕೃತಿಯನ್ನೇ ತನ್ನ ಗುರಿ ಎಂದು ಭಾವಿಸಬಾರದು. ಅವನ ಗುರಿ ಇದನ್ನು ಮೀರಿದೆ.

ಮಾನವ ಎಲ್ಲಿಯವರೆಗೆ ಪ್ರಕೃತಿಯನ್ನು ಮೀರಿಹೋಗಲು ಹೋರಾಡುತ್ತಿರುವನೋ ಅಲ್ಲಿಯವರೆಗೆ ಅವನು ಮಾನವ. ಈ ಪ್ರಕೃತಿ ಬಾಹ್ಯ ಮತ್ತು ಆಂತರಿಕವಾಗಿದೆ. ನಮ್ಮ ದೇಹದ ಒಳಗೆ ಮತ್ತು ಹೊರಗೆ ಇರುವ ವಸ್ತುವಿಗೆ ಮಾತ್ರ ಈ ನಿಯಮ ಅನ್ವಯಿಸುವುದಿಲ್ಲ. ನಮ್ಮಲ್ಲಿರುವ ಅತಿ ಸೂಕ್ಷ್ಮಸ್ವಭಾವಕ್ಕೂ ಇದು ಅನ್ವಯಿಸುವುದು. ನಿಜವಾಗಿ ಇದೇ ಬಾಹ್ಯ ಜಗತ್ತಿನ ಚಾಲಕ ಶಕ್ತಿ. ಬಾಹ್ಯ ಜಗತ್ತನ್ನು ಗೆಲ್ಲುವುದು ಒಳ್ಳೆಯದು, ಮಹತ್ತರವಾದುದೇನೋ ನಿಜ. ಆದರೆ ಇದಕ್ಕೂ ಮಹತ್ತರವಾದುದು ನಮ್ಮ ಆಂತರಿಕ ಪ್ರಕೃತಿಯನ್ನು ಗೆಲ್ಲುವುದು. ತಾರೆ ಗ್ರಹಾವಳಿಯನ್ನು ಆಳುತ್ತಿರುವ ನಿಯಮವನ್ನು ತಿಳಿಯುವುದು ಒಳ್ಳೆಯದು, ಮಹತ್ತರವಾದುದು. ಆದರೆ ಮಾನವನ ಕಾಮಕ್ರೋಧಾಧಿಗಳು, ಭಾವನೆ ಇಚ್ಛಾಶಕ್ತಿಯನ್ನು ಆಳುವ ನಿಯಮಾವಳಿಯನ್ನು ತಿಳಿದುಕೊಳ್ಳುವುದು ಶ್ರೇಷ್ಠತರವಾದುದು, ಮೇಲಾದುದು. ಆಂತರಿಕ ಮನವನ್ನು ಗೆಲ್ಲುವುದು, ಮಾನವನ ಅಂತರಾಳದಲ್ಲಿ ಕೆಲಸಮಾಡುತ್ತಿರುವ ಸೂಕ್ಷ್ಮ ವಿಷಯಗಳನ್ನು ಅವುಗಳ ಅದ್ಭುತ ರಹಸ್ಯವನ್ನು ತಿಳಿದುಕೊಳ್ಳುವುದು ಧರ್ಮಕ್ಕೆ ಮಾತ್ರ ಮೀಸಲಾಗಿದೆ. ಮಾನವನ ಸ್ವಭಾವ ಅಂದರೆ ಸಾಧಾರಣ ಮಾನವನ ಸ್ವಭಾವ ದೊಡ್ಡದೊಡ್ಡ ಬಾಹ್ಯಘಟನೆಯನ್ನು ನೋಡಲೆತ್ನಿಸುವುದು. ಸೂಕ್ಷ್ಮವಾಗಿರುವ ಯಾವುದನ್ನೂ ಸಾಧಾರಣ ಮನುಷ್ಯ ತಿಳಿದುಕೊಳ್ಳಲಾರ. ರೂಢಿಯಲ್ಲಿರುವಂತೆ ಸಾಧಾರಣ ಜನ ಸಮೂಹ ಸಾವಿರಾರು ಕುರಿಮರಿಗಳನ್ನು ಕೊಲ್ಲುವ ಸಿಂಹವನ್ನು ಮೆಚ್ಚುವುದು. ಸಿಂಹಕ್ಕೆ ತಾತ್ಕಾಲಿಕ ಜಯವಾದರೂ ಕುರಿಮರಿಗಳಿಗೆ ಮೃತ್ಯು ಎಂಬುದನ್ನು ಕ್ಷಣವಾದರೂ ಯೋಚಿಸುವುದಿಲ್ಲ. ಅವರಿಗೆ ಕಾಯಶಕ್ತಿಯ ಆವಿರ್ಭಾವನೆಯಲ್ಲಿಯೇ ಸಂತೋಷ. ಸಾಧಾರಣ ಮನುನುಷ್ಯರೇ ಹೀಗೆ.

ಬಾಹ್ಯದಲ್ಲಿರುವುದನ್ನೆಲ್ಲಾ ಅವರು ತಿಳಿದುಕೊಳ್ಳಬಲ್ಲರು; ಅದನ್ನು ನೋಡಿ ಸಂತೋಷಿಸಬಲ್ಲರು. ಆದರೆ ಪ್ರತಿಯೊಂದು ಸಮಾಜದಲ್ಲಿಯೂ ಒಂದು ಪಂಗಡವಿದೆ. ಅವರ ಸಂತೋಷ ಇಂದ್ರಿಯಗಳಲ್ಲಿ ಇಲ್ಲ. ಅದನ್ನು ಮೀರಿವೆ. ಕೆಲವುವೇಳೆ ಜಡವಸ್ತುವನ್ನು ಮೀರಿದ ಆ ವಸ್ತುವಿನ ಕ್ಷಣಿಕ ದರ್ಶನವನ್ನು ಪಡೆಯುವರು. ಅದನ್ನು ಸೇರಲು ಹೋರಾಡುವರು. ಜನಾಂಗದ ಇತಿಹಾಸದ ಅಂತರಾಳದಲ್ಲಿರುವ ಅರ್ಥವನ್ನು ನಾವು ಗ್ರಹಿಸಿದರೆ, ಒಂದು ದೇಶದಲ್ಲಿ ಅಭ್ಯುದಯ ಇಂತಹ ಅನುಭವವನ್ನು ಪಡೆಯಬಲ್ಲ ವ್ಯಕ್ತಿಬಾಹುಳ್ಯದಮೇಲೆ ಇದೆ ಎಂಬುದು ವ್ಯಕ್ತವಾಗುವುದು. ಪ್ರಯೋಜನ ದೃಷ್ಟಿಯವರು ಅನಂತತೆಯ ಸಾಧನೆಯನ್ನು ವೃಥಾ ವ್ಯರ್ಥವೆಂದರೂ, ಎಂದು ಇದು ನಿಲ್ಲುವುದೋ ಆಗ ಆ ದೇಶದ ಪ್ರಗತಿಯೂ ಕೊನೆಗೊಂಡಂತೆ. ಅಂದರೆ ಪ್ರತಿಯೊಂದು ಜನಾಂಗದ ಮೂಲವೂ ಆಧ್ಯಾತ್ಮದಲ್ಲಿದೆ. ಆಧ್ಯಾತ್ಮ ಇಳಿಮುಖವಾಗಿ ಜಡಭಾವನೆಯೇ ಮೇಲಾದರೆ ಆ ಜನಾಂಗದ ಅವನತಿ ಅಂದಿನಿಂದಲೇ ಸನ್ನಿಹಿತವಾದಂತೆ.

ಧರ್ಮದಿಂದ ನಾವು ತಿಳಿದುಕೊಳ್ಳಬಹುದಾದ ಎಷ್ಟೋ ವಾಸ್ತವಿಕ ಅಂಶಗಳು ಸತ್ಯಗಳು ಇವನ್ನು ಬಿಟ್ಟರೂ, ಅದರಮೂಲಕ ನಮಗೆ ದೊರಕಬಹುದಾದ ಸುಖವನ್ನು ಗಣನೆಗೆ ತಾರದೆ ಹೋದರೂ, ಧರ್ಮ ಕೇವಲ ವ್ಯಾಸಂಗ ದೃಷ್ಟಿಯಿಂದ, ವಿಜ್ಞಾನ ದೃಷ್ಟಿಯಿಂದ, ಮಾನವನ ಮನಸ್ಸಿಗೆ ಅತಿಮುಖ್ಯವಾದ ಆರೋಗ್ಯಕರವಾದ ಒಂದು ಸಾಧನೆ. ಈ ಅನಂತತೆಯನ್ನು ಹಿಂಬಾಲಿಸುವುದು, ಅದನ್ನು ಗ್ರಹಿಸಲು ಯತ್ನಿಸುವುದು, ಇಂದ್ರಿಯದ ಮೇರೆಯನ್ನು ಮೀರಿ ಜಡವಸ್ತುವಿನಿಂದ ಪಾರಾಗಲು ಯತ್ನಿಸಿ ಆಧ್ಯಾತ್ಮಿಕ ಮಾನವನ ವಿಕಾಸಕ್ಕೆ ಯತ್ನಿಸುವುದು, ಈ ಅನಂತವನ್ನು ನಮ್ಮ ಬಾಳ ಉಸಿರನ್ನಾಗಿ ಮಾಡಿಕೊಳ್ಳಲು ಹಗಲು ರಾತ್ರೆ ಶ್ರಮಿಸುವುದೇ ಅತಿ ಅದ್ಭುತವಾದುದು, ಮಹಿಮಾಮಯವಾದುದು. ಕೆಲವರಿಗೆ ತಿನ್ನುವುದರಲ್ಲೇ ಅತ್ಯಾನಂದ. ಹಾಗೆ ಆನಂದಿಸಬೇಡಿ ಎನ್ನುವುದಕ್ಕೆ ನಮಗೆ ಅಧಿಕಾರವಿಲ್ಲ. ಮತ್ತೆ ಕೆಲವರಿಗೆ ಕೆಲವು ವಿಷಯಗಳನ್ನು ಹೊಂದುವುದರಲ್ಲಿ ಪರಮಸಂತೋಷ. ಅದನ್ನು ವಿರೋಧಿಸುವುದಕ್ಕೆ ನಮಗೆ ಅಧಿಕಾರವಿಲ್ಲ. ಅವರಿಗೂ ಕೂಡ ಆಧ್ಯಾತ್ಮಿಕ ಭಾವನೆಯಲ್ಲಿ ಪರಮಸಂತೋಷಪಡುವವರನ್ನು ವಿರೋಧಿಸುವುದಕ್ಕೆ ಅಧಿಕಾರವಿಲ್ಲ. ಜೀವನ ಎಷ್ಟು ಕೆಳಗೆ ಇದ್ದರೆ ಅಷ್ಟು ಹೆಚ್ಚು ಸಂತೋಷ ಇಂದ್ರಿಯಗಳಲ್ಲಿ. ತೋಳ ಅಥವಾ ನಾಯಿಯಂತೆ ಊಟಮಾಡುವ ಮಂದಿ ಬಹಳ ವಿರಳ.

ನಾಯಿ ಅಥವಾ ತೋಳನ ಸುಖವೆಲ್ಲಾ ಇಂದ್ರಿಯದಲ್ಲಿ ಕೇಂದ್ರೀಕೃತವಾ ದಂತೆ ಇದೆ. ಎಲ್ಲಾ ದೇಶದಲ್ಲಿಯೂ ಕೆಳಮಟ್ಟದ ಮಾನವರಿಗೆ ಇಂದ್ರಿಯ ಗಳಲ್ಲೆ ಸಂತೋಷ. ಸುಸಂಸ್ಕೃತರು ವಿದ್ಯಾವಂತರು ಮಾತ್ರ ತತ್ತ್ವ ಕಲೆ ವಿಜ್ಞಾನದಲ್ಲಿ ಸಂತೋಷವನ್ನು ಪಡೆಯುವರು. ಆಧ್ಯಾತ್ಮ ಇದಕ್ಕೂ ಮೇಲಿನ ಮಟ್ಟದಲ್ಲಿದೆ. ವಸ್ತು ಅನಂತವಾಗಿರುವುದರಿಂದ ಅದು ಶ್ರೇಷ್ಠತಮ ಭೂಮಿಕೆಯಲ್ಲಿದೆ. ಅದನ್ನು ಯಾರು ಗ್ರಹಿಸಬಲ್ಲರೊ ಅವರಿಗೆ ಇದು ಅತಿ ಶ್ರೇಷ್ಠ ಆನಂದ. ಪ್ರಯೋಜನದೃಷ್ಟಿಯಿಂದ ಕೂಡ ಸುಖವನ್ನು ಅರಸುವವನು ಧಾರ್ಮಿಕಭಾವನೆಯನ್ನು ರೂಢಿಸಬೇಕು. ಇದೇ ಅತಿ ಶ್ರೇಷ್ಠ ಆನಂದ. ಧರ್ಮ ಅಧ್ಯಯನ ದೃಷ್ಟಿಯಿಂದಲಾದರೂ ಅತ್ಯಾವಶ್ಯಕ ಎಂದು ನನಗೆ ತೋರುವುದು. ಪರಿಣಾಮದಲ್ಲಿ ನಾವು ಅದನ್ನು ನೋಡಬಹುದು. ಮಾನವನನ್ನು ಪ್ರಚೋದಿಸುವ ಅತಿ ಶ್ರೇಷ್ಠ ಚಾಲಕಶಕ್ತಿ, ಆಧ್ಯಾತ್ಮಿಕ ಆದರ್ಶದಷ್ಟು ಮತ್ತಾವುದೂ ನಮಗೆ ಅಷ್ಟೊಂದು ಶಕ್ತಿಯನ್ನು ಧಾರೆಯೆರೆಯಲಾರದು. ಚಾರಿತ್ರಕದೃಷ್ಟಿಯಿಂದ ಇದು ನಮಗೆ ವೇದ್ಯವಾದ ವಿಷಯ. ಆಶಕ್ತಿ ನಾಶವಾಗಿಲ್ಲ. ಮಾನವ ಕೇವಲ ಪ್ರಯೋಜನದೃಷ್ಟಿಯ ಆಧಾರದಮೇಲೆ ನೀತಿವಂತನಾಗಿರಬಹುದು, ಒಳ್ಳೆಯವನಾಗಿರಬಹುದು ಎಂಬುದನ್ನು ನಾನು ಅಲ್ಲಗಳೆಯುವುದಿಲ್ಲ. ಕೇವಲ ಪ್ರಯೋಜನದೃಷ್ಟಿಯ ಆಸರೆಯಮೇಲೆ ನಿಂತ ಎಷ್ಟೋ ಪ್ರಖ್ಯಾತ ವ್ಯಕ್ತಿಗಳು ಸಭ್ಯರಾಗಿ ನೀತಿವಂತರಾಗಿ ಒಳ್ಳೆಯರಾಗಿರುವರು. ಆದರೆ ವಿಶ್ವಚಾಲಕರು, ಜನರನ್ನು ಆಕರ್ಷಿಸುವ ಮಹಾಶಕ್ತಿ ಪ್ರವಾಹವನ್ನು ಪ್ರಪಂಚಕ್ಕೆ ತರುವವರು, ನೂರಾರು ಸಹಸ್ರಾರು ಮಂದಿಯಮೂಲಕ ಕೆಲಸಮಾಡಬಲ್ಲವರು, ಇತರರ ಆಧ್ಯಾತ್ಮಜ್ಞಾನಜ್ಯೋತಿಯನ್ನು ಹತ್ತಿಸ ಬಲ್ಲವರಿಗೆ ಯಾವಾಗಲೂ ಆಧ್ಯಾತ್ಮಹಿನ್ನೆಲೆಯಾಗಿರುವುದನ್ನು ನಾವು ನೋಡುವೆವು. ಧರ್ಮದಿಂದ ಅವರಿಗೆ ಚಾಲಕಶಕ್ತಿ ದೊರಕಿತು. ಪ್ರತಿ ಯೊಬ್ಬ ಮನುಷ್ಯನ ಸ್ವಭಾವ ಮತ್ತು ಆಜನ್ಮಸಿದ್ಧ ಹಕ್ಕಾದ ಆ ಅನಂತ ಶಕ್ತಿಯನ್ನು ಪಡೆಯುವುದಕ್ಕೆ ಧರ್ಮ ಮಹಾಕ್ರಿಯೋತ್ತೇಜಕಶಕ್ತಿ. ಶೀಲ ರೂಢಿಸುವುದಕ್ಕೆ, ಒಳ್ಳೆಯದು ಭವ್ಯವಾಗಿರುವುದು ಎಲ್ಲವನ್ನು ಪಡೆಯು ವುದಕ್ಕೆ, ಇತರರಿಗೆ ಶಾಂತಿನೀಡುವುದಕ್ಕೆ, ತಾನು ಶಾಂತಿ ಪಡೆಯು ವುದಕ್ಕೆ ಧರ್ಮವೇ ಶ್ರೇಷ್ಠಕ್ರಿಯೋತ್ತೇಜಕಶಕ್ತಿ. ಧರ್ಮವನ್ನು ಆ ದೃಷ್ಟಿ ಯಿಂದ ಅಧ್ಯಯನ ಮಾಡಬೇಕು. ಹಿಂದಿಗಿಂತ ವಿಶಾಲದೃಷ್ಟಿಯಲ್ಲಿ ಧರ್ಮವನ್ನು ವ್ಯಾಸಂಗಮಾಡಬೇಕು. ಎಲ್ಲ ವಿಧದ ಅಲ್ಪ ಕ್ಷುದ್ರ ಮನ

ಸ್ವಾಪಕಾರಕಭಾವನೆಯೂ ತೊಲಗಬೇಕು. ಧರ್ಮವನ್ನು ಕೋಮು ಪಂಗಡ ದೇಶದ ದೃಷ್ಟಿಯಿಂದ ನೋಡುವುದನ್ನು ತ್ಯಜಿಸಬೇಕು. ಪ್ರತಿಯೊಂದು ಪಂಗಡ ಮತ್ತು ದೇಶಕ್ಕೆ ಒನ್ನೊಂದು ದೇವರು ಇರುವುದು, ಉಳಿದವೆಲ್ಲ ತಪ್ಪು ಎಂದು ಭಾವಿಸುವುದು, ಹಿಂದಿನ ಕಾಲಕ್ಕೆ ಸೇರಿದ ಮೂಢನಂಬಿಕೆ ಆಗಬೇಕು. ಇಂತಹ ಭಾವನೆಗಳನ್ನೆಲ್ಲಾ ತ್ಯಜಿಸಬೇಕು.

ಮಾನವನ ಮನಸ್ಸು ವಿಶಾಲವಾದಂತೆ ಅವನ ಆಧ್ಯಾತ್ಮಿಕ ಸೋಪಾನವೂ ವಿಶಾಲವಾಗುವುದು. ಮನುಷ್ಯನ ಭಾವನೆ ಜಗತ್ತಿನ ಮೂಲೆಮೂಲೆಗೆ ಮುಟ್ಟದೆ ಅದನ್ನು ಸಂಗ್ರಹಿಸಿ ಇಡಲಾರದ ಸಮಯ ಇಂದು ಬಂದಿದೆ. ಕೇವಲ ಭೌತಿಕಸಹಾಯಕದ ಮೂಲಕ ಇಡೀ ಪ್ರಪಂಚದ ಸಂಬಂಧವನ್ನು ಬೆಳೆಸಿರುವೆವು. ಪ್ರಪಂಚದ ಭವಿಷ್ಯ ಧರ್ಮ ವಿಶ್ವವ್ಯಾಪಿಯಾಗಬೇಕು ವಿಶಾಲವಾಗಬೇಕು.

ಭವಿಷ್ಯ ಧರ್ಮದ ಆದರ್ಶ ಪ್ರಪಂಚದಲ್ಲಿರುವ ಒಳ್ಳೆಯ ಶುಭ ವಾದುದನ್ನೆಲ್ಲಾ ಅಳವಡಿಸಿಕೊಂಡು, ಮುಂದೆ ಇನ್ನೂ ವಿಕಾಸವಾಗು ವುದಕ್ಕೆ ಅನಂತ ಅವಕಾಶವಿರಬೇಕು. ಹಿಂದೆ ಇದ್ದ ಒಳ್ಳೆಯದನ್ನೆಲ್ಲಾ ಸಂರಕ್ಷಿಸಬೇಕು. ಆಗಲೆ ಇರುವ ನಿಧಿಯನ್ನು ಮುಂದೆ ಹೆಚ್ಚುಮಾಡಲು ಅವಕಾಶ ಯಾವಾಗಲೂ ಇರಬೇಕು. ಧರ್ಮ ಸ್ವೀಕರಿಸಲೂ ಬೇಕು. ಇತರರನ್ನು ಅವರ ದೇವರು ತಮಗಿಂತ ಬೇರೆ ಎಂದು ನಿಕೃಷ್ಟದೃಷ್ಟಿಯಿಂದ ನೋಡಕೂಡದು. ನನ್ನ ಜೀವನದಲ್ಲಿ ನಾನು ದೇವರಲ್ಲಿ ನಂಬದ ಎಷ್ಟೋ ಆಧ್ಯಾತ್ಮಿಕ ಜೀವಿಗಳನ್ನು ನೋಡಿರುವೆನು, ಎಷ್ಟೋ ಮೃದುಹೃದಯದ ವರನ್ನು ನೋಡಿರುವೆನು. ಅಂದರೆ ಅವರು ನಮ್ಮ ದೃಷ್ಟಿಯಿಂದ ನಂಬದೆ ಇರಬಹುದು. ನಾವು ತಿಳಿದುಕೊಂಡಿರುವುದಕ್ಕಿಂತ ಹೆಚ್ಚಾಗಿ ಬಹುಶಃ ಅವರು ದೇವರನ್ನು ತಿಳಿದುಕೊಂಡಿರಬಹುದು. ಸಾಕಾರ, ನಿರಾಕಾರ, ನೀತಿನಿಯಮ, ಅಥವಾ ಆದರ್ಶ ಮನುಷ್ಯ, ಇವೆಲ್ಲ ಧರ್ಮ ವಿವರಣೆಯಲ್ಲಿ ಬರುವುವು. ಧರ್ಮ ಹೀಗೆ ವಿಶಾಲವಾದರೆ ಮಾನವನ ಕಲ್ಯಾಣಕ್ಕೆ ಅದರ ಶಕ್ತಿ ನೂರುಮಡಿ ಹೆಚ್ಚಿದಂತಾಗುವುದು. ಅದ್ಭುತಶಕ್ತಿಯುಳ್ಳ ಧರ್ಮಗಳು ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುವುದಕ್ಕಿಂತ ಕೆಟ್ಟುದನ್ನು ಮಾಡಿವೆ. ಇದಕ್ಕೆ ಕಾರಣ ಆ ಮತಗಳ ಸಂಕುಚಿತಭಾವನೆ.

ಈಗಲೂ ಕೂಡ ಹಲವು ಸಮಾಜ ಸಂಗಡಗಳಿಗೆ ಒಂದೇ ಆದರ್ಶ ವಿದ್ದರೂ ತಮ್ಮೊಳಗೆ ಕಾದಾಡುತ್ತಿವೆ. ಇದಕ್ಕೆ ಕಾರಣ ಒಬ್ಬನು ಮತ್ತೊಬ್ಬನಂತೆ ಅದನ್ನು ವ್ಯಕ್ತಪಡಿಸುವುದಕ್ಕೆ ಇಚ್ಛೆ ಇಲ್ಲದೆ_ಇರುವುದು.

ಆದಕಾರಣ ಧರ್ಮ ವಿಶಾಲವಾಗಬೇಕು, ಅನಂತವಾಗಬೇಕು. ಆಗ ಮಾತ್ರ ಧರ್ಮದ ಪೂರ್ಣಪ್ರಭಾವವನ್ನು ನೋಡುವೆವು. ಧಾರ್ಮಿಕಶಕ್ತಿ ಈಗತಾನೇ ವ್ಯಕ್ತವಾಗಲು ಉಪಕ್ರಮಿಸಿದೆ. ಕೆಲವುವೇಳೆ, ಧರ್ಮ ಪ್ರಪಂಚದಲ್ಲಿ ಅಳಿಯುತ್ತಿದೆ ಆಧ್ಯಾತ್ಮಿಕಭಾವನೆ ಅಳಿಯುತ್ತಿದೆ ಎನ್ನುವರು. ಈಗತಾನೇ ಧರ್ಮದ ಅಂಕುರಾರ್ಪಣವಾಗಿದೆ ಎಂದು ನಾನು ಭಾವಿಸುತ್ತೇನೆ. ವಿಶಾಲವಾಗಿ ಪರಿಶುದ್ಧವಾದ ಧಾರ್ಮಿಕಶಕ್ತಿ ಮಾನವ ಜೀವನದಲ್ಲಿ ಹಾಸಹೊಕ್ಕಾಗಿ ಹರಿಯುವುದು. ಎಲ್ಲಿಯವರಿಗೆ ಧರ್ಮ ಎಲ್ಲೋ ಕೆಲವು ಆರಿಸಿದ ವ್ಯಕ್ತಿಗಳ ಕೈಯಲ್ಲಿ, ಅಥವಾ ಕೆಲವು ಪುರೋಹಿತರ ಕೈಯಲ್ಲಿ ಇದ್ದಿತೋ ಆಗ ಧರ್ಮ, ದೇವಸ್ಥಾನ ಚರ್ಚು ಶಾಸ್ತ್ರ ಮೂಢನಂಬಿಕೆ ಆಚಾರ ವ್ಯವಹಾರದಲ್ಲಿತ್ತು. ಆದರೆ ನಾವು ಎಂದು ನಿಜವಾದ ಆಧ್ಯಾತ್ಮಿಕ ಸರ್ವವ್ಯಾಪಿಯ ಭಾವನೆಗೆ ಬರುವುವೊ ಆಗಮಾತ್ರ ಧರ್ಮ ಸತ್ಯವಾಗುವುದು ಬದುಕಿರುವುದು. ಅದು ನಮ್ಮ ಸ್ವಭಾವದಲ್ಲಿ ವ್ಯಕ್ತವಾಗುವುದು, ನಮ್ಮ ಪ್ರತಿಯೊಂದು ಕಾರ್ಯಕಲಾಪಗಳಲ್ಲಿಯೂ ಇರುವುದು, ನಮ್ಮ ಸಮಾಜದ ಅಂಗಾಂಗಗಳನ್ನು ಪ್ರವೇಶಿಸುವುದು, ಎಂದಿಗಿಂತ ಮಹಾಕಲ್ಯಾಣಪ್ರದಶಕ್ತಿಯಾಗುವುದು.

ನಮಗೆ ಇಂದು ಬೇಕಾಗಿರುವುದು ಹಲವು ಧರ್ಮಗಳಲ್ಲಿ ಒಂದು ಸೌಹಾರ್ದಭಾವನೆ. ಎಲ್ಲ ಧರ್ಮಗಳೂ ಒಟ್ಟಿಗೆ ಉಳಿಯುವುವು, ಇಲ್ಲವೆ ಅಳಿಯುವುವು. ಅನ್ಯೋನ್ಯ ಗೌರವದಿಂದ ಜನಿತ ಸೌಹಾರ್ದಭಾವನೆ ನಮಗಿಂದು ಬೇಕು. ಹಲವರಲ್ಲಿ ಇಂದು ದುರದೃಷ್ಟವಶಾತ್ ರೂಢಿಯಲ್ಲಿರುವ ಏನೊ ಬದುಕಲಿ ಎನ್ನುವ ಕ್ಷುದ್ರ ಅಹಂಕಾರ ಜನಿತ ತೋರಿಕೆಯ ಪ್ರೋತ್ಸಾಹವಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಎರಡು ಬಗೆಯ ಧಾರ್ಮಿಕ ಭಾವನೆ ನಮಗೆ ಇಂದು ಬೇಕಾಗಿದೆ. ಒಂದು ಮಾನಸಿಕ ಸಂಶೋಧನೆಯಿಂದ ಬಂದುದು. ಈಗಲೂ ಅದು ಧರ್ಮಕ್ಕೆ ಮೀಸಲು ಆಕಾರ್ಯಕ್ಷೇತ್ರ ಎಂಬ ಭಾವನೆ ದುರದಷ್ಟವಶಾತ್ ಬಂದು ಹೋಗಿರುವುದು. ಮತ್ತೊಂದರ ಪಾದ ನೆಲದಮೇಲೆ ಇದ್ದರೂ ಶಿರ ಸ್ವರ್ಗರಹಸ್ಯಗಳನ್ನು ಭೇದಿಸುತ್ತಿರುವುದು. ಅವೇ ಭೌತವಿಜ್ಞಾನಶಾಸ್ತ್ರಗಳು.

ಇವರಲ್ಲಿ ಸೌಹಾರ್ದವನ್ನು ತರಬೇಕಾದರೆ ಇಬ್ಬರೂ ತ್ಯಾಗಮಾಡಬೇಕು. ಕೆಲವುವೇಳೆ ಹೆಚ್ಚು ತ್ಯಜಿಸಬೇಕು. ಕೆಲವುವೇಳೆ ಅದು ಯಾತನಾಮಯವಾಗಿರುವುದು. ಇಬ್ಬರೂ ತ್ಯಾಗದಿಂದ ಉತ್ತಮರಾಗುವರು, ಹೆಚ್ಚು ಸತ್ಯವನ್ನು ಅರಿಯುವರು ಎಂಬುದು ನಂತರ ಗೊತ್ತಾಗು

ವುದು. ಕೊನೆಗೆ ಕಾಲದೇಶದಲ್ಲಿ ಬಂದಿಯಾದ ಜ್ಞಾನ ಕಾಲದೇಶಾತೀತ ವಾದದ ಜ್ಞಾನವನ್ನು ಸಂದರ್ಶಿಸಿ ಅದರಲ್ಲಿ ಐಕ್ಯವಾಗುವುದು. ಅಲ್ಲಿಗೆ ಮನಸ್ಸು ಇಂದ್ರಿಯ ಮುಟ್ಟಲಾರದು. ಅದೇ ಪರಬ್ರಹ್ಮ ಅನಂತ ಏಕಮೇವ ಅದ್ವಿತೀಯ.



# ಮಾನವನ ನೈಜಸ್ವರೂಪ

ಮನುಷ್ಯ ಬಿಗಿದ ಮುಷ್ಟಿಯಿಂದ ಇಂದ್ರಿಯಗಳನ್ನು ಅಪ್ಪಿಕೊಂಡಿರುವನು. ತಾನು ಬದುಕಿ ಬಾಳುವ ಬಾಹ್ಯಜಗತ್ತು ಎಷ್ಟೇ ಸತ್ಯವೆಂದು ಭಾವಿಸಿದರೂ, ವ್ಯಕ್ತಿಯ ಜೀವನದಲ್ಲಿ ಮತ್ತು ಜನಾಂಗದ ಜೀವನದಲ್ಲಿ ಒಂದು ಸಮಯ ಬರುವುದು. ಆಗ ಅನೈಚ್ಛಿಕವಾಗಿ ಇದು ನಿಜವೇ ಎಂಬ ಪ್ರಶ್ನೆ ಹಾಕುವರು. ತನ್ನ ಇಂದ್ರಿಯಗಳು ಸತ್ಯವೇ ಎಂದು ಪ್ರಶ್ನಿಸುವುದಕ್ಕೆ ಒಂದು ಕ್ಷಣವೂ ದೊರಕದೆ ಅನವರತ ಇಂದ್ರಿಯಭೋಗದಲ್ಲಿ ನಿರತನಾಗಿರುವವನಿಗೂ ಮೃತ್ಯು ಸನ್ನಿಹಿತವಾಗುವುದು. “ಇದು ನಿಜವೆ?” ಎಂದು ಆಗ ಅವನು ಪ್ರಶ್ನಿಸಲೇಬೇಕಾಗುವುದು. ಧರ್ಮ ಈ ಪ್ರಶ್ನೆಯಲ್ಲಿ ಪ್ರಾರಂಭವಾಗಿ ಇದರ ಉತ್ತರದಲ್ಲಿ ಪರ್ಯವಸಾನವಾಗುವುದು. ಲಿಖಿತ ಚರಿತ್ರೆಯ ಕಾಲಗಣತಿಗೆ ನಿಲುಕದ ಅತಿಪ್ರಾಚೀನ ಕಾಲದಲ್ಲಿ ಪೌರಾಣಿಕಯುಗದ ಮೊಬ್ಬೆಳಕಿನಲ್ಲಿ, ನಾಗರಿಕತೆಯ ಅಸ್ಪಷ್ಟ ಮುಂಬೆಳಕಿನಲ್ಲಿಯೂ “ಇದೇನಾಗುವುದು? ಸತ್ಯವೇನು?” ಎಂದು ಪ್ರಶ್ನಿಸುವುದನ್ನೇ ನಾವು ನೋಡುವೆವು.

ಉಪನಿಷತ್ತುಗಳಲ್ಲಿ ಸುಕಾವ್ಯಲಕ್ಷಣಗಳುಳ್ಳ ಕಠೋಪನಿಷತ್ತು ಈ ಪ್ರಶ್ನೆಯಿಂದ ಪ್ರಾರಂಭವಾಗುವುದು: “ಮನುಷ್ಯ ಕಾಲವಾದರೆ ಈ ಸಂದೇಹವಿದೆ. ಒಬ್ಬರು ಅವನು ಎಂದೆಂದಿಗೂ ಮಾಯವಾದನು ಎನ್ನುವರು. ಮತ್ತೊಬ್ಬರು ಅವನು ಇರುವನು ಎನ್ನುವರು. ಇದರಲ್ಲಿ ಯಾವುದು ಸತ್ಯ?” ಎಷ್ಟೋ ಉತ್ತರಗಳನ್ನು ಕೊಟ್ಟಿರುವರು. ಆಧ್ಯಾತ್ಮಜ್ಞಾನ ತತ್ತ್ವ ಮತ್ತು ಧರ್ಮಶಾಸ್ತ್ರಗಳೆಲ್ಲಾ ಇದಕ್ಕೆ ಕೊಡುವ ಹಲವು ಬಗೆಯ ಉತ್ತರದಿಂದ ತುಂಬಿಹೋಗಿದೆ. ಜೊತೆಗೆ “ಅನಂತರ ಏನಿದೆ? ಯಾವುದು ಸತ್ಯ?” ಎಂದು ಪ್ರಶ್ನಿಸುವ ಮನೋಚಂಚಲತೆಯನ್ನು ಅಡಗಿಸುವುದಕ್ಕೂ ಹಲವು ಪ್ರಯತ್ನ ಮಾಡಿರುವರು. ಆದರೆ ಎಲ್ಲಿಯವರೆಗೆ ಮೃತ್ಯು ಇರುವುದೋ ಅಲ್ಲಿಯವರೆಗೆ ಅಡಗಿಸುವ ಪ್ರಯತ್ನವೆಲ್ಲಾ ನಿರರ್ಥಕವಾಗುವುದು. ನಮಗೆ ಅನಂತರ ಏನೂ ಕಾಣುವುದಿಲ್ಲವೆಂದು ನಮ್ಮ ಆಶೆ ಆಕಾಂಕ್ಷೆಗಳನ್ನೆಲ್ಲ ತಾತ್ಕಾಲಿಕ ತೃಪ್ತಿಯಿಂದ ಹೊಂದಿಸಿಕೊಂಡು, ಇಂದ್ರಿಯಗಳನ್ನು ಮೀರಿದ ಯಾವ ವಸ್ತುವನ್ನೂ ಕುರಿತು ಆಲೋಚಿಸದೆ ಇರುವಂತೆ ಪ್ರಯತ್ನಿಸಬಹುದು. ಬಹುಶಃ ಬಾಹ್ಯ ಜಗತ್ತೂ ಕೂಡ ಈ ಅಲ್ಪಕ್ಷೇತ್ರದಲ್ಲೆ ಇರುವಂತೆ ನಮಗೆ ಸಹಾಯಮಾಡ

ಬಹುದು. ಈಗಿರುವ ಸ್ಥಿತಿಗಿಂತ ವಿಶಾಲವಾಗದಂತೆ ತಡೆಗಟ್ಟುವುದಕ್ಕೆ ಇಡೀ ಪ್ರಪಂಚ ಒಟ್ಟುಗೂಡಬಹುದು. ಆದರೂ ಎಲ್ಲಿಯವರೆಗೆ ಮೃತ್ಯು ಇರುವುದೊ ಅಲ್ಲಿಯವರೆಗೆ ಈ ಪ್ರಶ್ನೆ ಪುನಃ ಪುನಃ ಬರಲೇಬೇಕು. ಸತ್ಯಸ್ಯಸತ್ಯದಂತೆ ಇರುವ ವಸ್ತುಗಳೆಲ್ಲ ಸಾರವಸ್ತುವೆಂದು ಬಾಚಿ ಅಪ್ಪಿ ಕೊಂಡಿರುವ ವ್ಯಕ್ತಿ ಮರಣದಲ್ಲಿ ಕೊನೆಗಾಣುವುದೆ? ಒಂದು ಕ್ಷಣದಲ್ಲಿ ಪ್ರಪಂಚ ಮಾಯವಾಗುವುದು. ಮಹಾಪ್ರಪಾತದ ತುತ್ತತುದಿಯಲ್ಲಿ ನಿಂತು ಮುಂದಿರುವ ತೆರೆದ ವದನದ ಅಸೀಮಶೂನ್ಯತೆಯನ್ನು ಈಕ್ಷಿಸಿ ದಾಗ ಎಷ್ಟೇ ವಜ್ರಮನಸ್ಸಾದರೂ ಅಂಜಿ "ಇದು ಸತ್ಯವೆ?" ಎಂದು ಹಿಂತಿರುಗುವುದು. ಒಂದು ಮಹಾವ್ಯಕ್ತಿ ತನ್ನ ಶಕ್ತಿಯನ್ನೆಲ್ಲಾ ವ್ಯಯ ಮಾಡಿ ಸ್ವಲ್ಪಸ್ವಲ್ಪವಾಗಿ ಕೂಡಿಟ್ಟ ಇಡೀ ಬಾಳಿನ ಭರವಸೆಯೆಲ್ಲಾ ಕ್ಷಣ ದಲ್ಲಿ ಮಾಯವಾಗುವುದು. ಇದು ನಿಜವೆ? ಈ ಪ್ರಶ್ನೆಗೆ ಉತ್ತರ ಕೊಡಲೇ ಬೇಕು. ಕಾಲವೆಂದಿಗೂ ಅದರ ಶಕ್ತಿಯನ್ನು ಕುಗ್ಗಿಸುವುದಿಲ್ಲ. ಅದರ ಬದಲು ಶಕ್ತಿಯನ್ನು ಮತ್ತೂ ಹೆಚ್ಚಿಸುವುದು. ನಂತರ ಸುಖವಾಗಿರ ಬೇಕೆಂಬ ಆಸೆ ಬೇರೆ ಇದೆ. ಅದಕ್ಕಾಗಿ ಪ್ರತಿಯೊಂದು ವಸ್ತುವಿನ ಹಿಂದೆಯೂ ಓಡುವೆವು. ಇಂದ್ರಿಯಗಳ ಬಾಹ್ಯಪ್ರಪಂಚದಲ್ಲಿ ಭ್ರಾಂತ ರಾಗಿ ಸ್ವೇಚ್ಛಾವಿಹಾರಿಗಳಾಗುವೆವು. ಜೀವನ ಜಯಪ್ರದವಾಗಿರುವ ಯುವಕನನ್ನು ಕೇಳಿದರೆ ಅದು ಸತ್ಯ ಎನ್ನುವನು. ಅವನು ನಿಜವಾಗಿ ಹಾಗೆಯೇ ಭಾವಿಸುವನು. ಬಹುಶಃ ಅದೇ ಮನುಷ್ಯ ವೃದ್ಧನಾಗಿ ಭಾಗ್ಯ ಅವನಿಗೆ ಪ್ರಾಪ್ತವಾಗದೆ ಇರುವಾಗ ವಿಧಿ ಎನ್ನುವನು. ತನ್ನ ಬಯಕೆ ಪೂರ್ಣವಾಗುವಂತೆ ಇಲ್ಲ ಎಂದು ನಂತರ ತಿಳಿದುಕೊಳ್ಳುವನು. ಎಲ್ಲಿಗೆ ಹೋದರೂ ಒಂದು ಅಭೇದ್ಯ ಗೋಡೆ ಇದೆ. ಇದನ್ನೂ ಮೀರಿ ಅವನು ಹೋಗಲಾರ. ಪ್ರತಿಯೊಂದು ಇಂದ್ರಿಯಕ್ರಿಯೆಯೂ ಪ್ರತಿಕ್ರಿಯೆ ಯಲ್ಲಿ ಪರ್ಯವಸಾನವಾಗುವುದು. ಎಲ್ಲಾ ಕ್ಷಣಿಕ. ಭೋಗ ದುಃಖ ಸುಖ ಐಶ್ವರ್ಯ ಅಧಿಕಾರ ದಾರಿದ್ರ್ಯ ನಮ್ಮ ಬಾಳೂ ಕೂಡ ಕ್ಷಣಿಕ.

ಮಾನವನಿಗೆ ಎರಡು ದೃಷ್ಟಿ ಉಳಿದಿವೆ. ಶೂನ್ಯವಾದಿಯೊಂದಿಗೆ ಎಲ್ಲಾ ಶೂನ್ಯ, ನಮಗೇನೂ ಗೊತ್ತಿಲ್ಲ, ಭೂತ ಭವಿಷ್ಯತ್ ವರ್ತಮಾನ ದಲ್ಲಿ ಕೂಡ ನಾವು ಏನನ್ನೂ ತಿಳಿಯಲಾರೆವು ಎಂದು ಒಪ್ಪಿಕೊಳ್ಳುವುದು. ಭೂತ ಭವಿಷ್ಯತ್‌ಗಳನ್ನು ಒಪ್ಪಿಕೊಳ್ಳದೆ ಕೇವಲ ವರ್ತಮಾನವನ್ನು ಮಾತ್ರ ನಂಬುವನು ಕೇವಲ ಹುಚ್ಚ ಎಂಬುದನ್ನು ನಾವು ಜ್ಞಾಪಕದಲ್ಲಿಡ ಬೇಕು. ಒಬ್ಬ, ತಾಯಿತಂದೆಗಳನ್ನು ಒಪ್ಪಿಕೊಳ್ಳದೆ ಮಗುವನ್ನು ಒಪ್ಪಿ

ಕೊಂಡಂತೆ ಇದು ಕೂಡ ಅಷ್ಟೇ ತಾರ್ಕಿಕವಾಗಿರುವುದು. ಭೂತ ಭವಿಷ್ಯತ್‌ನ್ನು ಒಪ್ಪಿಕೊಳ್ಳದೆ ಇದ್ದರೆ ವರ್ತಮಾನವನ್ನು ಕೂಡ ಒಪ್ಪಿ ಕೊಳ್ಳಕೂಡದು. ಶೂನ್ಯವಾದಿಗಳ ದೃಷ್ಟಿ ಇದು. ಒಂದು ಕ್ಷಣವೂ ನಿಜವಾಗಿ ಶೂನ್ಯವಾದಿಯಾಗಬಲ್ಲವನನ್ನು ನಾನೆಂದೂ ನೋಡಿಲ್ಲ. ಹಾಗೆ ಮಾತನಾಡುವುದು ಬಹಳ ಸುಲಭ.

ಇನ್ನೊಂದು ದೃಷ್ಟಿ ಇದೆ. ಅದೇ ವಿವರಣೆ ಹುಡುಕುವುದು, ಸತ್ಯವನ್ನು ಅರಸುವುದು. ನಿರಂತರ ಬದಲಾಯಿಸುತ್ತಿರುವ ಕ್ಷಣಿಕ ಜಗತ್ತಿನಲ್ಲಿ ಸತ್ಯವಾಗಿರುವುದನ್ನು ಕಂಡುಹಿಡಿಯುವುದು. ವಸ್ತುಗಳ ಕಣ ಸಂಯೋಗದಿಂದ ಆಗಿರುವ ದೇಹದಲ್ಲಿ ಸತ್ಯವಾಗಿರುವುದು ಯಾವುದಾದರೂ ಇದೆಯೆ? ಮಾನವ ಇತಿಹಾಸದಲ್ಲೆಲ್ಲ ಇದನ್ನೇ ಅರಸುತ್ತಿರುವರು. ಅತಿಪುರಾತನ ಕಾಲದಲ್ಲಿ ಮಾನವನಿಗೆ ಜ್ಞಾನದ ಕ್ಷಣಿಕ ದರ್ಶನವಾಗುತ್ತಿದ್ದುದು ನಮಗೆ ತೋರಿಬರುವುದು. ಆಗಲೂ ಕೂಡ ಮನುಷ್ಯ ಈ ದೇಹದಿಂದ ಒಂದು ಹೆಜ್ಜೆ ಮುಂದೆ ಹೋಗಿ ಬಾಹ್ಯದೇಹವನ್ನು ಬಹುಪಾಲು ಹೋಲಿದರೂ ಇದಲ್ಲದೆ, ಬಾಹ್ಯದೇಹಕ್ಕಿಂತ ಬೇರೆಯಾಗಿ ದೇಹ ನಾಶವಾದರೂ ಅದು ನಾಶವಾಗದೆ ಇರುವುದನ್ನು ಕಂಡುಹಿಡಿದರು. ಋಗ್ವೇದದ ಮಂತ್ರಗಳಲ್ಲಿ ಶವವನ್ನು ದಹಿಸುತ್ತಿರುವ ಅಗ್ನಿಯನ್ನು ಕುರಿತು, "ಅಗ್ನಿ! ಮೃದುವಾಗಿ ನಿನ್ನ ಕೈಗಳಲ್ಲಿ ಇವನನ್ನು ಒಯ್ಯಿ. ಪರಿಶುದ್ಧವಾದ ಪ್ರಕಾಶಮಾನವಾದ ದೇಹವನ್ನು ಕೊಡು. ಪಿತೃಗಳಿರುವೆಡೆ ಮೃತ್ಯುಶೋಕಗಳಿಲ್ಲದಕಡೆ ಇವನನ್ನು ಒಯ್ಯಿ" ಎಂದು ಹೇಳುತ್ತಿದ್ದರು. ಇದೇ ಭಾವನೆ ಪ್ರತಿಯೊಂದು ಧರ್ಮದಲ್ಲಿಯೂ ನಿಮಗೆ ತೋರುವುದು. ಇದರೊಂದಿಗೆ ಮತ್ತೊಂದು ಭಾವನೆ ಬರುವುದು. ಅದೇ ವಿನಾಯಿತಿ ಇಲ್ಲದೆ ಎಲ್ಲಾ ಧರ್ಮಗಳೂ ಈಗಿನ ಮನುಷ್ಯ ತನ್ನ ಹಿಂದಿನ ಸ್ಥಿತಿಯ ಪತಿತಾವಸ್ಥೆ ಎಂಬುದು ಮುಖ್ಯವಾದ ಅಂಶ. ಈ ಭಾವನೆಯನ್ನು ಅವರು ಪೌರಾಣಿಕಭಾಷೆಯಲ್ಲಿಡಬಹುದು, ಸ್ಪಷ್ಟತಾತ್ತ್ವಿಕಭಾಷೆಯಲ್ಲಿಡಬಹುದು ಅಥವಾ ಅತಿಸುಂದರ ಕವಿತಾವಾಣಿಯಲ್ಲಿಡಬಹುದು. ಈಗಿರುವ ಮನುಷ್ಯ ತನ್ನ ಹಿಂದಿನ ಶ್ರೇಷ್ಠಸ್ಥಿತಿಯಿಂದ ಪತಿತನಾಗಿರುವಸ್ಥಿತಿ ಎಂಬೊಂದು ಭಾವನೆ ಎಲ್ಲಾ ಶಾಸ್ತ್ರಪುರಾಣದಿಂದಲೂ ನಮಗೆ ದೊರಕುವುದು. ಯಹೂದ್ಯರ ಶಾಸ್ತ್ರದಲ್ಲಿ ಆಡಮ್ ಅವನತಿಯ ಕಥೆಯಲ್ಲಿರುವ ಸತ್ಯಸಾರವೆ ಇದು. ಹಿಂದೂ ಶಾಸ್ತ್ರದಲ್ಲಿ ಪುನಃ ಪುನಃ ಇದನ್ನು ಒತ್ತಿ ಹೇಳುವರು. ಸತ್ಯಯುಗದ ಒಂದು ಕನಸೇ, ಅಲ್ಲಿಯ ಜನರೆಲ್ಲಾ

ಇಚ್ಛಾಮರಣಿಗಳು. ಎಷ್ಟು ವರುಷಗಳು ಬೇಕಾದರೆ ದೇಹವನ್ನು ಇಟ್ಟು ಕೊಂಡಿರಬಹುದಾಗಿತ್ತು. ಮನಸ್ಸು ಪರಿಶುದ್ಧವಾಗಿ ದೃಢವಾಗಿತ್ತು. ಯಾವ ಪಾಪವೂ ಇರಲಿಲ್ಲ, ದುಃಖವೂ ಇರಲಿಲ್ಲ. ಅಂದಿನ ಪರಿಪೂರ್ಣ ಸ್ಥಿತಿಯ ಹೀನಾವಸ್ಥೆ ಇಂದಿನದು. ಇದರೊಂದಿಗೆ ಪ್ರಳಯದ ಕಥೆಯನ್ನು ಎಲ್ಲಾ ಕಡೆಯಲ್ಲಿಯೂ ನೋಡುವೆವು. ಎಲ್ಲಾ ಧರ್ಮಗಳೂ ಇದು ಹಿಂದಿನ ಅಭ್ಯುದಯದ ಹೀನಸ್ಥಿತಿ ಒಂದು ಒಪ್ಪಿಕೊಳ್ಳುವುದಕ್ಕೆ ಈ ಕಥೆಯೇ ಪ್ರಮಾಣವಾಗಿದೆ. ಹೆಚ್ಚು ಹೆಚ್ಚು ಕಲುಷಿತವಾಗುತ್ತ ಬಂದು ಕೊನೆಗೆ ಪ್ರಳಯ ಬಹುಪಾಲು ಮಾನವರನ್ನು ನಾಶಮಾಡಿತು. ಪುನಃ ಅಭ್ಯುದಯದಕಾಲ ಪ್ರಾರಂಭವಾಗುವುದು. ಆದಿಯ ಪರಿಶುದ್ಧ ಸ್ಥಿತಿ ಯನ್ನು ಹೊಂದಲು ಅದು ಪುನಃ ನಿಧಾನವಾಗಿ ಮೇಲೇಳುತ್ತಿದೆ. ಹಳೆಯ ಟೆಸ್ಟ್‌ಮೆಂಟ್‌ನಲ್ಲಿ ಬರುವ ಕಥೆ ನಿಮಗೆಲ್ಲಾ ಗೊತ್ತಿರಬಹುದು. ಇದೇ ಕಥೆ ಪುರಾತನ ಬ್ಯಾಬಿಲೋನಿಯಾ, ಈಜಿಪ್ಟ್, ಚೈನಾ, ಹಿಂದೂ ಗಳಲ್ಲಿಯೂ ಜಾರಿಯಲ್ಲಿತ್ತು. ಮನುವೆಂಬ ಪುರಾತನ ಮಹರ್ಷಿ ಗಂಗಾ ನದಿಯ ತೀರದಲ್ಲಿ ಪ್ರಾರ್ಥಿಸುತ್ತಿದ್ದ. ಸಣ್ಣ ಮೀನೊಂದು ರಕ್ಷಣೆ ಬೇಡುತ್ತಾ ಅವನ ಹತ್ತಿರ ಬಂದಿತು. ತನ್ನ ಹತ್ತಿರ ಇರುವ ನೀರಿನ ಪಾತ್ರೆಯಲ್ಲಿ ಅದನ್ನು ಇಟ್ಟನು. “ ಏನು ಬೇಕು ? ” ಎಂದು ಅದನ್ನು ಕೇಳಿದನು. ಆ ಕಿರಿಯ ಮೀನು “ ತನ್ನನ್ನು ಒಂದು ದೊಡ್ಡ ಮೀನು ಅಟ್ಟಿಸಿಕೊಂಡು ಬರುತ್ತಿದೆ, ಅದರಿಂದ ರಕ್ಷಣೆಬೇಕು ” ಎಂದಿತು. ಮನು ಅದನ್ನು ಮನೆಗೆ ತೆಗೆದುಕೊಂಡುಹೋದನು. ಬೆಳಿಗ್ಗೆ ಅದು ಆ ಪಾತ್ರೆ ಯಷ್ಟು ದೊಡ್ಡದಾಗಿತ್ತು. ನಾನು ಇನ್ನು ಈ ಪಾತ್ರೆಯಲ್ಲಿ ಇರಲಾರೆ ಎಂದಿತು. ಅದನ್ನು ಒಂದು ಕೆರೆಗೆ ಬಿಟ್ಟನು. ಅದು ಮಾರನೆದಿನ ಆ ಕೆರೆಯಷ್ಟು ದೊಡ್ಡದಾಯಿತು. ನಾನಿನ್ನು ಈ ಕೆರೆಯಲ್ಲಿ ಇರಲಾರೆ ಎಂದಿತು. ಅದನ್ನು ಒಂದು ನದಿಗೆ ಹಾಕಿದನು. ಅದು ಮಾರನೆದಿನ ನದಿಯಷ್ಟು ದೊಡ್ಡದಾಯಿತು. ಅದನ್ನು ಒಂದು ಸಾಗರಕ್ಕೆ ಹಾಕಿದನು. ಅದು ಮನುಗೆ “ ನಾನು ಸೃಷ್ಟಿಕರ್ತ. ಈ ಪ್ರಪಂಚಕ್ಕೆ ಪ್ರಳಯ ತರುತ್ತೇನೆ ಎಂದು ನಿನಗೆ ಎಚ್ಚರಿಕೆಕೊಡಲು ಈ ಆಕಾರದಿಂದ ಬಂದೆ. ನೀನು ಒಂದು ದೋಣಿಯನ್ನು ಕಟ್ಟ ಅದರಲ್ಲಿ ಪ್ರಪಂಚದಲ್ಲಿರುವ ಪ್ರಾಣಿಯ ಒನ್ನೊಂದು ಜೊತೆಯನ್ನು ಇಟ್ಟು ನಿನ್ನ ಮನೆಯವರು ಅದನ್ನು ಪ್ರವೇಶಿಸಲಿ. ನೀರಿನಿಂದ ನನ್ನ ಕೊಂಬು ಮೇಲೇಳುವುದು. ದೋಣಿಯನ್ನು ಅದಕ್ಕೆ ಕಟ್ಟು. ಪ್ರಳಯಾನಂತರ ಭೂಮಿಗೆ ಬಂದು

ಸಂತತಿಯನ್ನು ಹರಡು" ಎಂದಿತು. ಪ್ರಳಯವಾಯಿತು. ಮನು ತನ್ನ ಸಂಸಾರ, ಪ್ರತಿಯೊಂದು ಪ್ರಾಣಿಯ ಒಂದೊಂದು ಜೊತೆ, ಸಸ್ಯದ ಎರಡೆರಡು ಬೀಜವನ್ನು ಇಟ್ಟು ದೋಣಿಯನ್ನು ರಕ್ಷಿಸಿದನು. ಪ್ರಳಯಾನಂತರ ಹೊರಗೆ ಬಂದು ಪ್ರಪಂಚದಲ್ಲಿ ಸಂತತಿಯನ್ನು ಹಬ್ಬಿದನು. ನಾವೆಲ್ಲಾ ಮನುಸಂತತಿಯವರಾದುದರಿಂದ ಮನುಷ್ಯರಾದೆವು.

ಆಂತರ್ಯದಲ್ಲಿರುವ ಸತ್ಯವನ್ನು ವ್ಯಕ್ತಪಡಿಸುವುದೇ ಮಾನವ ಭಾಷೆಯ ಪ್ರಯತ್ನ. ಅಸ್ಪಷ್ಟವಾಗಿ ಮಾತನಾಡುವ ಮಗು ಕೂಡ ಅತ್ಯುದಾತ್ತತತ್ತ್ವವನ್ನು ವ್ಯಕ್ತಪಡಿಸಲು ಪ್ರಯತ್ನಿಸುತ್ತಿದೆ. ಮಗುವಿಗೆ ಅದನ್ನು ಸರಿಯಾಗಿ ವ್ಯಕ್ತಪಡಿಸಲು ಅಂಗಸೌಲಭ್ಯವಿಲ್ಲ ಅಥವಾ ಸರಿಯಾದ ಮಾರ್ಗವಿಲ್ಲ ಎಂದು ನಾನು ಪೂರ್ಣನಂಬುತ್ತೇನೆ. ಮಹಾತತ್ತ್ವಜ್ಞಾನಿಗಳ ಭಾಷೆಗೂ ಬಾಲಭಾಷೆಗೂ ವ್ಯತ್ಯಾಸ ಪ್ರಮಾಣದಲ್ಲಿಮಾತ್ರ, ವರ್ಗಪ್ರಭೇದದಲ್ಲಿ ಇಲ್ಲ. ಈಗಿನ ಸರಿಯಾದ ಕ್ರಮಬದ್ಧ ಖಚಿತಭಾಷೆಗೂ, ಹಿಂದಿನ ಅಸ್ಪಷ್ಟ ಪೌರಾಣಿಕಭಾಷೆಗೂ ವ್ಯತ್ಯಾಸ ಸ್ಪಷ್ಟತೆಯ ತರತಮದಲ್ಲಿ ಮಾತ್ರ. ಎಲ್ಲರಲ್ಲಿಯೂ ಘನ ಆದರ್ಶವಿದೆ. ವ್ಯಕ್ತವಾಗುವುದಕ್ಕೆ ಅದು ಪ್ರಯತ್ನಿಸುತ್ತಿದೆ. ಅನೇಕವೇಳೆ ಪುರಾತನ ಪುರಾಣಗಳಲ್ಲಿ ಶ್ರೇಷ್ಠಸತ್ಯ ರತ್ನಗಳಿವೆ. ಆದರೆ ಅತಿಸುಂದರವಾದ ಸ್ವಚ್ಛವಾದ ಆಧುನಿಕ ಭಾಷೆಯಲ್ಲಿ ಕೆಲಸಕ್ಕೆ ಬಾರದ ವಸ್ತುಗಳಿವೆ ಎಂದು ಹೇಳಲು ವ್ಯಥೆಯಾಗುವುದು. ಪುರಾಣದ ಭಾಷೆಯಲ್ಲಿ ಅದು ಇದೆ ಎಂದಾಗಲಿ, ಇಂತಹ ಶ್ರೀಮಾನ್ ಅಥವಾ ಶ್ರೀಮತಿಯವರ ಅಭಿಪ್ರಾಯಕ್ಕೆ ಅದು ಸರಿಹೊಂದುವುದಿಲ್ಲವೆಂದಾಗಲೀ ಅದನ್ನು ತ್ಯಜಿಸಬೇಕಾಗಿಲ್ಲ. ಮುಕ್ಕಾಲುಪಾಲು ಧರ್ಮ ಇಂತಹ ದೇವದೂತಸಾರಿದ ಕಟ್ಟುಕಥೆಯಲ್ಲಿ ನಂಬಬೇಕು ಎಂದು ಸಾರಿದುದರಿಂದ ಅದನ್ನು ನೋಡಿ ನಕ್ಕರೆ, ಆಧುನಿಕರನ್ನು ನೋಡಿ ಮತ್ತೂ ಹೆಚ್ಚು ನಗಬೇಕು. ಆಧುನಿಕ ಕಾಲದಲ್ಲಿ ಒಬ್ಬ ಮೋಸಸ್ ಕ್ರೈಸ್ತ ಬುದ್ಧನನ್ನು ಉದಹರಿಸಿದರೆ ನಗುವರು. ಆದರೆ ಹಕ್ಸ್ಲೆ, ಟಿಂಡಲ್, ಡಾರ್ವಿನ್ ಹೆಸರನ್ನು ಹೇಳಿದರೆ ವಿಮರ್ಶಿಸದೆ ಸ್ವೀಕರಿಸುವರು. ಹಕ್ಸ್ಲೆ ಹೀಗೆ ಹೇಳಿರುವನು. ಅನೇಕರಿಗೆ ಇದೇ ಸಾಕಾಗಿದೆ. ನಾವೆಲ್ಲಾ ಮೂಢನಂಬಿಕೆಯಿಂದ ಪಾರಾಗಿರುವೆವು! ಅದು ಧಾರ್ಮಿಕ ಮೂಢನಂಬಿಕೆ ಇದು ವೈಜ್ಞಾನಿಕ ಮೂಢನಂಬಿಕೆ. ಹಿಂದಿನಕಾಲದ ಮೂಢನಂಬಿಕೆಯಿಂದ ಜೀವದಾನಮಾಡುವ ಮಹಾ ಆಧ್ಯಾತ್ಮಿಕ ಭಾವನೆಗಳು ಉದಿಸಿದುವು. ಆಧುನಿಕ ಮೂಢನಂಬಿಕೆ ಮೂಲಕ ಕಾಮಲೋಭಗಳು

ಜನಿಸುತ್ತಿವೆ. ಆ ಮೂಢನಂಬಿಕೆ ಭಗವದಾರಾಧನೆ. ಈ ಮೂಢನಂಬಿಕೆ ಅನ್ಯಾಯವಾದ ಐಶ್ವರ್ಯ, ಕೀರ್ತಿ, ಅಧಿಕಾರದ ಆರಾಧನೆ. ಇದೇ ವ್ಯತ್ಯಾಸ.

ಪುರಾಣವನ್ನು ತೆಗೆದುಕೊಳ್ಳೋಣ. ಈ ಕಥೆಗಳಲ್ಲೆಲ್ಲಾ ಒಂದು ಭಾವನೆ ಮುಖ್ಯವಾಗಿ ನಿಲ್ಲುವುದು. ಅದೇ ಮಾನವ ತನ್ನ ಹಿಂದಿನ ಉಚ್ಚಾಶ್ರಯಸ್ಥಿತಿಯಿಂದ ಈಗ ಭ್ರಷ್ಟನಾಗಿರುವನು ಎಂಬುದು. ಆಧುನಿಕ ಅನ್ವೇಷಣೆಕಾರರು ಇದನ್ನು ಸ್ವಲ್ಪವೂ ಒಪ್ಪುವುದಿಲ್ಲ. ವಿಕಾಸವಾದಿಗಳು ಇದನ್ನು ಸಂಪೂರ್ಣ ವಿರೋಧಿಸುವಂತೆ ತೋರುವುದು. ಅವರ ದೃಷ್ಟಿಯಲ್ಲಿ ಮಾನವ ಒಂದು ಬಸವನ ಹುಳುವಿನಿಂದ ವಿಕಾಸವಾಗಿರುವನು; ಪುರಾಣ ಹೇಳುವುದು ಸರಿಯಲ್ಲ. ಇಂಡಿಯಾ ದೇಶದಲ್ಲಿ ಈ ಎರಡು ದೃಷ್ಟಿಗಳನ್ನೂ ಸರಿಹೊಂದಿಸುವ ಮತ್ತೊಂದು ಪುರಾಣವಿದೆ. ಹಿಂದೂ ಪುರಾಣದಲ್ಲಿ ವೃತ್ತಸಿದ್ಧಾಂತವಿದೆ. ಎಲ್ಲಾ ಪ್ರಗತಿಯೂ ಒಂದು ಅಲೆಯಂತೆ ಇದೆ. ಪ್ರತಿಯೊಂದು ಅಲೆಯ ಹಿಂದೆಯೂ ಒಂದು ಬೀಳು ಇದೆ. ಒಂದು ಕ್ಷಣ ಏಳುವುದು ಮತ್ತೊಂದು ಕ್ಷಣ ಬೀಳುವುದು. ಗತಿ ಯಾವಾಗಲೂ ಒಂದು ವೃತ್ತದಲ್ಲಿದೆ. ಆಧುನಿಕ ಸಂಶೋಧನೆಯ ದೃಷ್ಟಿಯಿಂದಲೂ ಮಾನವ ಕೇವಲ ಒಂದು ಬಸವನಹುಳುವಿನ ವಿಕಾಸವಲ್ಲ ಎಂಬುದು ನಿಜವಾಗಿಯೂ ಸತ್ಯ. ಪ್ರತಿಯೊಂದು ವಿಕಾಸವೂ ಒಂದು ಆಪೂರಣವನ್ನು ಮೊದಲೇ ಊಹಿಸಬೇಕಾಗಿದೆ. ಆಧುನಿಕ ವಿಜ್ಞಾನಿ, ನೀವು ಒಂದು ಯಂತ್ರಕ್ಕೆ ಎಷ್ಟು ಶಕ್ತಿಯನ್ನು ಹಾಕಿರುವಿರೋ ಅಷ್ಟೇ ನಿಮಗೆ ಸಿಕ್ಕುವುದು ಎನ್ನುವನು. ಶೂನ್ಯದಿಂದ ಯಾವುದಾದರೊಂದನ್ನು ನಾವು ಹೊಂದಲಾರೆವು. ಮಾನವ ಬಸವನಹುಳುವಿನ ವಿಕಾಸವಾದರೆ ಕ್ರೈಸ್ತ ಬುದ್ಧರಂತಹ ಸಿದ್ಧಪುರುಷರು ಆಗಲೇ ಆ ಬಸವನಹುಳುವಿನಲ್ಲಿ ಹುದುಗಿದ್ದರು. ಇಲ್ಲದೆ ಇದ್ದರೆ ಇಂತಹ ಅದ್ಭುತವ್ಯಕ್ತಿಗಳು ಹೇಗೆ ಬರುತ್ತಿದ್ದರು? ಶೂನ್ಯದಿಂದ ಏನೂ ಬರಲಾರದು. ನಾವು ಶಾಸ್ತ್ರವನ್ನು ಆಧುನಿಕಭಾವನೆಯೊಂದಿಗೆ ಈಗ ಸರಿಹೊಂದಿಸುವ ಸ್ಥಿತಿಯಲ್ಲಿರುವೆವು. ಹಲವು ಹಂತಗಳಲ್ಲಿ ವ್ಯಕ್ತವಾಗಿ ಕೊನೆಗೆ ಪೂರ್ಣ ಮಾನವನಂತೆ ಬರುವ ಆ ಶಕ್ತಿ ಶೂನ್ಯದಿಂದ ಬರಲಾರದು. ಅದು ಮತ್ತೆಲ್ಲೋ ಇರಬೇಕು. ಬಸವನಹುಳ ಅಥವಾ ಜೀವದ್ರವ್ಯವೇ (protoplasm) ನೀವು ತೋರುವ ಆದಿ ಆದರೆ ಆ ಜೀವದ್ರವ್ಯದಲ್ಲಿ ಹೇಗೂ ಈ ಶಕ್ತಿಯೆಲ್ಲ ಸುಪ್ತವಾಗಿಯೇ ಇರಬೇಕಾಗಿತ್ತು. ದೇಹವೆಂಬ ವಸ್ತು ಕಣಗಳ ಸಂಯೋಗವೆ ಜೀವ ಮತ್ತು

ಆಲೋಚನೆಯಂತೆ ಕಾಣುತ್ತಿರುವುದಕ್ಕೆ ಕಾರಣವೆ? ಅಥವಾ ಆಲೋಚನೆಯೆ ಈ ದೇಹದಂತೆ ವ್ಯಕ್ತವಾಗುವುದಕ್ಕೆ ಕಾರಣ ಎಂಬ ವಿವಾದ ನಡೆಯುತ್ತಿದೆ. ಪ್ರಪಂಚದ ಧರ್ಮಗಳೇನೊ ಭಾವನೆ ಎಂಬ ಶಕ್ತಿ ದೇಹಕ್ಕೆ ಕಾರಣ, ದೇಹ ಆಲೋಚನೆಗೆ ಕಾರಣವಲ್ಲ ಎಂದು ಹೇಳುವುವು. ಆಧುನಿಕರಲ್ಲಿ ಮತ್ತೊಂದು ಪಕ್ಷದವರು ಇರುವರು. ಅವರು ನಾವು ಯಾವುದನ್ನು ಭಾವನೆ ಎನ್ನುವೆವೊ ಅದು ದೇಹವೆಂಬ ಯಂತ್ರದ ಭಾಗಗಳು ಒಟ್ಟು ಕಲೆತಾಗ ಆಗುವ ಒಂದು ಪರಿಣಾಮ ಎನ್ನುವರು. ಎರಡನೆ ಪಕ್ಷವನ್ನು ತೆಗೆದುಕೊಂಡರೆ, ಜೀವ ಆಲೋಚನೆಯ ಮೊತ್ತ ಅಥವಾ ಅದನ್ನು ಯಾವ ಹೆಸರಿಂದಲಾದರೂ ಕರೆಯಿರಿ ಅದು ಈ ಯಂತ್ರದ ಪರಿಣಾಮ; ಅದು ದೇಹ ಮತ್ತು ಮೆದುಳಿನಲ್ಲಿರುವ ರಸಾಯನದ್ರವ್ಯಗಳ ಸಂಮ್ಮಿಶ್ರಣದಿಂದ ಆದುದು ಎಂದರೆ ಪ್ರಶ್ನೆಗೆ ಉತ್ತರವೇ ಸಿಕ್ಕುವುದಿಲ್ಲ. ದೇಹವನ್ನು ಯಾವುದು ಮಾಡುವುದು? ಯಾವ ಶಕ್ತಿ ಅಣುಗಳನ್ನು ದೇಹದ ರೂಪಕ್ಕೆ ಜೋಡಿಸುವುದು? ಹೊರಗಿರುವ ವಸ್ತುವಿನಿಂದ ಸಾರವನ್ನು ಸ್ವೀಕರಿಸಿ ನನ್ನ ದೇಹವನ್ನು ಒಂದುರೀತಿ, ಮತ್ತೊಂದು ದೇಹವನ್ನು ಇನ್ನೊಂದು ರೀತಿ ರಚಿಸುವಂತಹ ಶಕ್ತಿ ಯಾವುದು? ಅನಂತ ವೈವಿಧ್ಯತೆಗೆ ಕಾರಣ ಯಾವುದು? ಜೀವವೆಂಬ ಶಕ್ತಿ ದೇಹಕಣಗಳ ಸಂಯೋಗದ ಪರಿಣಾಮವೆನ್ನುವುದು ಕ್ರಮವಿಪರ್ಯಯಮಾಡಿದಂತೆ. ಈ ಸಂಯೋಗ ಹೇಗೆ ಆಯಿತು? ಇದಕ್ಕೆ ಶಕ್ತಿ ಎಲ್ಲಿತ್ತು? ಮತ್ತಾವುದೋ ಒಂದು ಶಕ್ತಿ ಈ ಸಂಯೋಗಕ್ಕೆ ಕಾರಣ ಎನ್ನುವುದು, ಜೀವ ಅಂತಹ ಸಂಯೋಗದಿಂದ ಜನಿಸಿತೆನ್ನುವುದು ಮತ್ತು ಕೆಲವು ವಸ್ತುಕಣಗಳನ್ನು ಕೂಡಿಸಿದ ಜೀವವೇ ಮತ್ತೊಂದು ವಸ್ತುವಿನ ಮಿಶ್ರಣವೆನ್ನುವುದು ಸಾಧುವಾದ ಉತ್ತರವಲ್ಲ. ಯಾವ ಸಿದ್ಧಾಂತ ಎಲ್ಲಾ ಅಥವಾ ಮುಕ್ಕಾಲುಪಾಲು ವಸ್ತುಗಳನ್ನು ವಿವರಿಸಬಲ್ಲದೋ, ಮತ್ತು ಜಾರಿಯಲ್ಲಿರುವ ಇತರ ಸಿದ್ಧಾಂತಗಳನ್ನು ವಿರೋಧಿಸುವುದಿಲ್ಲವೋ ಅಂತಹುದನ್ನು ಸ್ವೀಕರಿಸಬೇಕು. ಯಾವ ಶಕ್ತಿ ದ್ರವ್ಯವನ್ನು ತೆಗೆದುಕೊಂಡು ದೇಹವನ್ನು ರಚಿಸುವುದೊ, ಅದೇ ಆ ದೇಹದ ಮೂಲಕ ವ್ಯಕ್ತವಾಗುವುದು ಎನ್ನುವುದು ತರ್ಕನಿಯಮ ಬದ್ಧವಾಗಿದೆ. ದೇಹದಿಂದ ವ್ಯಕ್ತವಾದ ಆಲೋಚನಾಶಕ್ತಿ, ವಸ್ತುಗಳ ಸಂಯೋಗ ಪರಿಣಾಮ, ಅದೇ ಬೇರೆ ಇರಲಾರದು ಎನ್ನುವುದಕ್ಕೆ ಅರ್ಥವಿಲ್ಲ. ಶಕ್ತಿ ವಸ್ತುವಿನಿಂದಲೂ ಜನಿಸುವುದಿಲ್ಲ. ನಾವು ಯಾವುದನ್ನು ದ್ರವ್ಯ (matter) ಎನ್ನುವೆವೊ ಅದು ಇಲ್ಲವೇ ಇಲ್ಲ ಎಂದು ತೋರುವುದು

ಸುಲಭ. ಇದು ಶಕ್ತಿಯ ಒಂದು ಅವಸ್ಥೆ. ವಸ್ತುವಿನ, ಘನ ದೃಢ ಮುಂತಾದ ಗುಣಗಳು ಇವೆಲ್ಲಾ ಚಲನೆಯ ಪ್ರತಿಫಲವೆಂಬುದನ್ನು ತೋರ ಬಹುದು. ಸುತ್ತುತ್ತಿರುವ ದ್ರವಕ್ಕೆ ವೇಗ ಹೆಚ್ಚಿದರೆ ಅದು ಘನ ವಸ್ತುವಿನ ಶಕ್ತಿಯನ್ನು ಪಡೆಯುವುದು. ಸುತ್ತುತ್ತಿರುವ ಗಾಳಿ ಘನದಂತೆ ಆಗಿ ಘಟ್ಟಿ ಯಾದ ಪದಾರ್ಥವನ್ನು ಭೇದಿಸಿಕೊಂಡು ಹೋಗುವುದು, ಇಲ್ಲವೆ ಸೀಳು ವುದು. ಜೇಡರ ತಂತುವನ್ನು ಅನಂತವೇಗದಿಂದ ಚಲಿಸಲು ಸಾಧ್ಯವಾದರೆ ಅದು ಕಬ್ಬಿಣದ ಸರಪಳಿಯಂತೆ ಬಲವಾಗಬಲ್ಲುದು. ಅದು ಓಕ್‌ಮರವನ್ನು ಬೇಕಾದರೂ ಕತ್ತರಿಸಬಹುದು. ಈ ದೃಷ್ಟಿಯಿಂದ ನೋಡಿದರೆ ನಾವು ಯಾವುದನ್ನು ವಸ್ತುವೆನ್ನುವೆವೊ ಅದು ಇಲ್ಲವೆಂದು ಸಾಧಿಸುವುದು ಸುಲಭ. ಆದರೆ ಶಕ್ತಿಯೇ ಇಲ್ಲವೆಂದು ತೋರಲಾಗುವುದಿಲ್ಲ.

ದೇಹದ ಮೂಲಕ ವ್ಯಕ್ತವಾಗುತ್ತಿರುವ ಶಕ್ತಿ ಯಾವುದು? ಆ ಶಕ್ತಿ ಏನಾದರೂ ಆಗಲಿ. ಅದು ವಸ್ತುವನ್ನು ತೆಗೆದುಕೊಂಡು ಮಾನವ ದೇಹ ವೆಂಬ ಆಕಾರವನ್ನು ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ನಿಮ್ಮ ನಮ್ಮ ದೇಹ ಸೃಷ್ಟಿಗೆ ಹೊರಗಿನಿಂದ ಯಾರೂ ಬರು ವುದಿಲ್ಲ. ಯಾರೂ ನನಗಾಗಿ ಊಟಮಾಡಿದುದನ್ನು ನಾನು ಇದುವರೆಗೆ ಕಂಡಿಲ್ಲ. ನಾನೇ ಆಹಾರವನ್ನು ಜೀರ್ಣಿಸಿಕೊಂಡು ಅದರಿಂದ ರಕ್ತ ಮೂಳೆ ಮುಂತಾದುವನ್ನು ತಯಾರುಮಾಡಬೇಕಾಗಿದೆ. ಈ ವಿಚಿತ್ರ ಶಕ್ತಿ ಯಾವುದು? ಭವಿಷ್ಯತ್ ಮತ್ತು ಭೂತಕಾಲದ ಭಾವನೆ ಅನೇಕರನ್ನು ಅಂಜಿಸುವುದು. ಅನೇಕರಿಗೆ ಇದು ಊಹೆಯಂತೆ ತೋರುವುದು. ಸಧ್ಯದ ವಿಷಯವನ್ನು ಈಗ ಗಮನಿಸುವ. ನಮ್ಮ ಮೂಲಕ ಕೆಲಸಮಾಡುತ್ತಿರುವ ಶಕ್ತಿ ಯಾವುದು? ಹಿಂದಿನ ಕಾಲದಲ್ಲಿ ಎಲ್ಲಾ ಪುರಾತನ ಶಾಸ್ತ್ರ ಗಳಲ್ಲಿಯೂ ಈ ಶಕ್ತಿ ಆವಿರ್ಭಾವನೆಯನ್ನು, ಈ ದೇಹವನ್ನು ಹೋಲುವ ಶೋಭಾಯಮಾನವಾದ ವಸ್ತುವೆಂದು, ಈ ಶರೀರ ಹೋದರೂ ಅದು ಇರುವುದೆಂಬ ಭಾವನೆ ಇದೆ. ಕಾಲಾನಂತರ ಇದಕ್ಕಿಂತ ಉತ್ತಮ ಭಾವನೆ ಬರುವುದು—ಅದೇ ಈ ಕಾಂತಿಶರೀರ ಶಕ್ತಿಯಲ್ಲವೆನ್ನುವುದು. ಆಕಾರವಿರುವ ವಸ್ತುಗಳೆಲ್ಲ ಕಣಗಳ ಸಂಯೋಗದಿಂದ ಆಗಬೇಕು. ಅದು ಚಲಿಸಬೇಕಾದರೆ ಮತ್ತೊಂದು ಶಕ್ತಿಬೇಕು. ಈ ದೇಹ ಚಲನೆಗೆ ದೇಹ ವಲ್ಲದ ಮತ್ತೊಂದು ಶಕ್ತಿಬೇಕಾದರೆ, ಇದೇ ನಿಯಮಾನುಸಾರ ಆ ಕಾಂತಿಯ ಶರೀರಕ್ಕೂ ಚಲನೆಗೆ ಅದಲ್ಲದೆ ಮತ್ತೊಂದು ಬೇಕು. ಅದನ್ನೇ ಜೀವಾತ್ಮ ಎಂದು ಸಂಸ್ಕೃತದಲ್ಲಿ ಕರೆದರು. ಆತ್ಮ ಸೂಕ್ಷ್ಮದೇಹದ

ಮೂಲಕ ಸ್ಥೂಲದೇಹದಲ್ಲಿ ಕೆಲಸಮಾಡುವುದು. ಈ ಸೂಕ್ಷ್ಮಶರೀರದಲ್ಲೆ ಮನಸ್ಸು ಇರುವುದೆಂದು ಭಾವಿಸಿದ್ದರು. ಆತ್ಮ ಇದನ್ನು ಮೀರಿದೆ. ಅದು ಮನಸ್ಸೂ ಅಲ್ಲ, ಮನಸ್ಸಿನ ಕ್ರಿಯೆಗೆ ಕಾರಣ. ಮನಸ್ಸಿನಮೂಲಕ ದೇಹದಲ್ಲಿ ಕೆಲಸಮಾಡುವುದು. ನಿಮಗೊಂದು ಆತ್ಮವಿದೆ, ನನಗೊಂದು ಆತ್ಮವಿದೆ. ಪ್ರತಿಯೊಬ್ಬರಿಗೂ ಬೇರೆ ಬೇರೆ ಆತ್ಮ ಮತ್ತು ಸೂಕ್ಷ್ಮ ದೇಹಗಳಿವೆ. ಅದರ ಮೂಲಕ ಸ್ಥೂಲ ಬಾಹ್ಯದೇಹದಲ್ಲಿ ಕೆಲಸಮಾಡು ತ್ತೇವೆ. ಆತ್ಮ ಮತ್ತು ಅದರ ಸ್ವಭಾವದ ವಿಷಯವಾಗಿ ನಂತರ ಪ್ರಶ್ನೆ ಹಾಕಿದರು. ದೇಹ ಮನಸ್ಸು ಅಲ್ಲದ ಆತ್ಮವೆಂದರೇನು, ಮನಸ್ಸು ಎಂದರೇನು? ಮಹಾಚರ್ಚೆಗಳು ಪ್ರಾರಂಭವಾದವು. ಹಲವು ಊಹೆ ಗಳು ಜನಿಸಿದವು. ಹಲವು ಬಗೆಯ ತಾತ್ತ್ವಿಕಭಾವನೆಗಳು ಪ್ರಚಾರಕ್ಕೆ ಬಂದವು. ಆತ್ಮದ ವಿಷಯವಾಗಿ ನಿರ್ಧಾರಕ್ಕೆ ಬಂದ ಕೆಲವು ಭಾವನೆ ಗಳನ್ನು ನಿಮ್ಮ ಮುಂದಿಡುವೆನು. ಆತ್ಮ ಏನಾದರೂ ಆಗಲಿ ಅದಕ್ಕೆ ಆಕಾರವಿಲ್ಲ, ಆಕಾರವಿಲ್ಲದುದು ಸರ್ವವ್ಯಾಪಿಯಾಗಿರಬೇಕು ಎಂಬ ಭಾವನೆ ಯನ್ನು ಹಲವು ಬಗೆಯ ತಾತ್ತ್ವಿಕರೆಲ್ಲ ಒಪ್ಪುವರು. ಕಾಲ ಮನಸ್ಸಿನಿಂದ ಪ್ರಾರಂಭವಾಗುವುದು, ದೇಶವೂ ಮನಸ್ಸಿನಲ್ಲೆ ಇರುವುದು. ಕಾಲವಿಲ್ಲದೆ ಕಾರಣ ನಿಲ್ಲಲಾರದು. ಅನುಕ್ರಮ ಭಾವನೆ ಇಲ್ಲದೆ ಕಾರಣ ಭಾವನೆ ಇಲ್ಲ. ಕಾಲ ದೇಶ ಕಾರಣಗಳು ಮನಸ್ಸಿನಲ್ಲಿವೆ. ಆತ್ಮ ಮನಸ್ಸಿನ ಆಚೆ ಇದೆ. ನಿರಾಕಾರವಾದುದು. ಅದು ಕಾಲ ದೇಶ ಕಾರ್ಯಕಾರಣಗಳ ಆಚೆ ಇರಬೇಕಾ ಯಿತು. ಕಾಲ ದೇಶ ಕಾರ್ಯಕಾರಣದ ಆಚೆ ಅದು ಇದ್ದರೆ, ಅದು ಅನಂತ ವಾಗಬೇಕು. ಅನಂತರವೇ ನಮ್ಮ ದರ್ಶನದಲ್ಲಿ ಮಹೋತ್ತುಂಗ ಊಹೆ ಬರುವುದು. ಅನಂತ ಎರಡು ಇರಲಾರದು. ಆತ್ಮ ಅನಂತವಾದರೆ ಅದು ಒಂದೇ ಇರಬೇಕು. ನನಗೊಂದು ಆತ್ಮ ನಿಮಗೊಂದು ಆತ್ಮ ಎಂಬ ಹಲವು ಆತ್ಮದ ಭಾವನೆ ಸತ್ಯವಲ್ಲ. ನಿಜವಾದ ಮನುಷ್ಯ, ಏಕವಾಗಿ ಅನಂತವಾಗಿ ಸರ್ವವ್ಯಾಪಿಯಾದ ಆತ್ಮನಾಗಿರಬೇಕು. ಈಗ ಕಾಣುತ್ತಿರುವ ಮನುಷ್ಯ ನಿಜವಾದ ಮನುಷ್ಯನ ಪರಿಮಿತಿಯ ಸ್ವರೂಪ. ಈ ದೃಷ್ಟಿಯಲ್ಲಿ ಪುರಾಣ ಗಳು ಸತ್ಯ. ಈಗ ತೋರುತ್ತಿರುವ ಮನುಷ್ಯ ಎಷ್ಟೇ ಮಹಿಮಾವಂತ ನಾದರೂ ಅವ್ಯಕ್ತನಾದ ನಿಜವಾದ ಆತ್ಮನ ಅಸ್ಪಷ್ಟ ಪ್ರತಿಬಿಂಬ ಮಾತ್ರ. ಆತ್ಮಸ್ವರೂಪನಾದ ನಿಜವಾದ ಮನುಷ್ಯ ಕಾರ್ಯಕಾರಣಗಳಾಚೆ ಇರುವುದ ರಿಂದ, ಕಾಲದೇಶಗಳಿಂದ ಬಾಧಿತನಾಗದೆ ಇರುವುದರಿಂದ, ಅವನು ಮುಕ್ತ ನಾಗಿರಬೇಕು. ಅವನೆಂದೂ ಬದ್ಧನಾಗಿರಲಿಲ್ಲ, ಅವನು ಬದ್ಧನಾಗಲಾರ.

ಈ ತೋರಿಕೆಯ ಮನುಷ್ಯಪ್ರತಿಬಿಂಬ ಕಾಲ ದೇಶ ಕಾರಣಗಳಿಂದ ಪರಿಮಿತನಾಗಿರುವುದರಿಂದ ಬದ್ಧನಾಗಿರುವನು. ಅಥವಾ ನಮ್ಮ ಕೆಲವು ದಾರ್ಶನಿಕರ ಭಾಷೆಯಲ್ಲಿ ಅವನು ಬದ್ಧನಾದಂತೆ ತೋರುತ್ತಿರುವನು, ನಿಜವಾಗಿ ಬದ್ಧನಾಗಿಲ್ಲ. ನಮ್ಮ ಆತ್ಮದ ನೈಜಸ್ಥಿತಿಯೇ ಇದು. ಅನಂತವಾದುದು ಆಧ್ಯಾತ್ಮಸ್ವಭಾವವುಳ್ಳದ್ದು. ಪ್ರತಿಯೊಂದು ಜೀವವೂ ಅನಂತ; ಆದಕಾರಣ ಜನನಮರಣಗಳ ಪ್ರಸಂಗವೇ ಬರುವುದಿಲ್ಲ. ಕೆಲವು ವಿದ್ಯಾರ್ಥಿಗಳನ್ನು ಶಾಲೆಯಲ್ಲಿ ಪರೀಕ್ಷಿಸುತ್ತಿದ್ದರು. ಪರೀಕ್ಷಕನು ಕೆಲವು ಕಷ್ಟವಾದ ಪ್ರಶ್ನೆಗಳನ್ನು ಹಾಕಿದನು. ಆ ಪ್ರಶ್ನೆಗಳಲ್ಲಿ ಇದೊಂದು: "ಭೂಮಿ ಏತಕ್ಕೆ ಬೀಳುವುದಿಲ್ಲ?" ಆಕರ್ಷಣವಾದದ ಉತ್ತರವನ್ನು ಅವರಿಂದ ಹೇಳಿಸಬೇಕೆಂದು ಇದ್ದನು. ಹಲವು ವಿದ್ಯಾರ್ಥಿಗಳು ಇದಕ್ಕೆ ಉತ್ತರ ಕೊಡಲಾಗಲಿಲ್ಲ. ಕೆಲವರು ಆಕರ್ಷಣವೊ ಏನೊ ಎಂದು ಉತ್ತರಕೊಟ್ಟರು. ಒಬ್ಬ ಬುದ್ಧಿವಂತಳಾದ ಸಣ್ಣ ಹುಡುಗಿ ಆ ಪ್ರಶ್ನೆಗೆ ಉತ್ತರವಾಗಿ ಮತ್ತೊಂದು ಪ್ರಶ್ನೆಯನ್ನು ಕೇಳಿದಳು: "ಅದು ಎಲ್ಲಿ ಬೀಳಬೇಕು?". ಪ್ರಶ್ನೆಗೆ ಅರ್ಥವಿಲ್ಲ. ಭೂಮಿ ಎಲ್ಲಿ ಬೀಳಬೇಕು? ಭೂಮಿಗೆ ಏಳುಬೀಳುಗಳಿಲ್ಲ. ಅನಂತ ಆಕಾಶದಲ್ಲಿ ಏರು ದಿಣ್ಣೆಗಳಿಲ್ಲ. ಅದು ಕೇವಲ ಸಾಂಬಂಧಿಕ ಜಗತ್ತಿನಲ್ಲಿ ಮಾತ್ರ ಸಾಧ್ಯ. ಅನಂತ ಹೋಗುವುದೆಲ್ಲಿಗೆ ಬರುವುದೆಲ್ಲಿಗೆ? ಅದು ಎಲ್ಲಿಂದ ಬರಬೇಕು ಎಲ್ಲಿಗೆ ಹೋಗಬೇಕು? ಜನರು ಭೂತಭವಿಷ್ಯತ್ತುಗಳನ್ನು ಆಲೋಚಿಸದೆ, ದೇಹ ಬಂದು ಹೋಗುವುದರಿಂದ ಪರಿಮಿತಿಯಲ್ಲಿರುವುದರಿಂದ ದೇಹದ ಭಾವನೆಯನ್ನು ತೊರೆದರೆ, ಆಗ ಅವರು ಮೇಲಿನ ಆದರ್ಶಕ್ಕೆ ಏರಿರುವರು. ದೇಹ ನಿಜವಾದ ಮನುಷ್ಯನಲ್ಲ. ಮನಸ್ಸೂ ಮನುಷ್ಯನಲ್ಲ. ಏಕೆಂದರೆ ಮನಸ್ಸಿಗೆ ಏರಿಳಿತಗಳಿವೆ. ಅದು ಅತೀತವಾದ ಆತ್ಮ. ಅದು ಮಾತ್ರ ಎಂದೆಂದಿಗೂ ಇರಬಲ್ಲುದು. ದೇಹ ಮನಸ್ಸು ಅನವರತವೂ ಬದಲಾಯಿಸುತ್ತಿರುವುದು. ಕೆಲವು ಬದಲಾಯಿಸುತ್ತಿರುವ ಘಟನಾವಳಿಯ ಪರಂಪರೆಗೆ ನಿಜವಾಗಿ ದೇಹ ಮನಸ್ಸು ಎಂದು ಹೆಸರು. ನೀರು ಯಾವಾಗಲೂ ಹರಿಯುತ್ತಿದ್ದರೂ ಅಖಂಡವಾದ ನದಿಯಂತೆ ತೋರುತ್ತಿರುವುದು. ದೇಹದಲ್ಲಿರುವ ಪ್ರತಿಯೊಂದು ಕಣವೂ ಯಾವಾಗಲೂ ಬದಲಾಯಿಸುತ್ತಿರುವುದು. ಯಾರಿಗೂ ಕೆಲವು ನಿಮಿಷಗಳೂ ಒಂದೇ ದೇಹವಿರುವುದಿಲ್ಲ. ಆದರೂ ಅದೇ ದೇಹವೆಂದು ನಾವು ಭಾವಿಸುವೆವು. ಅದರಂತೆಯೇ ಮನಸ್ಸುಕೂಡ ಈಗ ಸುಖದಲ್ಲಿದೆ ಇನ್ನೊಂದುಕ್ಷಣ ದುಃಖದಲ್ಲಿದೆ, ಒಂದುಕ್ಷಣ ಬಲವಾಗಿದೆ,

ಮತ್ತೊಂದುಕ್ಷಣ ದುರ್ಬಲವಾಗಿದೆ. ಯಾವಾಗಲೂ ಬದಲಾಯಿಸುತ್ತಿರುವ ಸುಳಿಯಂತೆ. ಇದು ಅನಂತಾತ್ಮವಾಗಲಾರದು. ಬದಲಾವಣೆ ಮಿತಿಯಲ್ಲಿ ಮಾತ್ರ ಸಾಧ್ಯ. ಹೇಗಾದರೂ ಅನಂತ ಬದಲಾಯಿಸುವುದು ಎನ್ನುವುದು ಅಸಂಬದ್ಧಪ್ರಲಾಪ. ಇದು ಸಾಧ್ಯವಿಲ್ಲ. ನೀವು ನಾವು ಪರಿಮಿತಿಯ ದೇಹದಂತೆ ಸಂಚರಿಸಬಹುದು. ಪ್ರಪಂಚದಲ್ಲಿರುವ ಪ್ರತಿಯೊಂದು ಕಣವೂ ನಿರಂತರ ಬದಲಾಯಿಸುತ್ತಿರುವುದು. ನಾವು ವಿಶ್ವವನ್ನೆಲ್ಲಾ ಏಕದಂತೆ ಒಟ್ಟನಲ್ಲಿ ತೆಗೆದುಕೊಂಡರೆ ಅದು ಚಲಿಸಲಾರದು, ಬದಲಾಯಿಸಲಾರದು. ಚಲನೆ ಸಾಂಬಂಧಿಕ ಪದ. ನಾನು ಮತ್ತೊಂದರ ಸಂಬಂಧದೃಷ್ಟಿಯಿಂದ ಸಂಚರಿಸುವೆನು. ಈ ಪ್ರಪಂಚದಲ್ಲಿರುವ ಪ್ರತಿಯೊಂದು ಕಣವೂ ಮತ್ತೊಂದು ಕಣದ ದೃಷ್ಟಿಯಿಂದ ಸಂಚರಿಸುವುದು. ವಿಶ್ವವನ್ನೆಲ್ಲ ನಾವು ಏಕವೆಂದು ಭಾವಿಸಿದರೆ, ಯಾವುದರ ಸಂಬಂಧದಿಂದ ಇದು ಬದಲಾಯಿಸಬಲ್ಲದು? ಇದಲ್ಲದೆ ಬೇರೊಂದು ವಸ್ತುವಿಲ್ಲ. ಈ ಏಕ, ಅನಂತ ಅಚಲ, ಕೂಟಸ್ಥ, ನಿರಪೇಕ್ಷವಾದುದು. ಇದೇ ನಿಜವಾದ ಮನುಷ್ಯ. ನಮ್ಮ ಸತ್ಯ ಸಾರ್ವತ್ರಿಕತೆಯಲ್ಲದೆ, ಪರಿಮಿತಿಯಲ್ಲಿ ಇಲ್ಲ. ನಾವು ಸದಾ ಬದಲಾಯಿಸುತ್ತಿರುವ ಸಣ್ಣವ್ಯಕ್ತಿಗಳೆಂದು ಭಾವಿಸುವುದು ಎಷ್ಟೇ ಹಿತಕರವಾದರೂ ಹಳೆಯ ಭ್ರಾಂತಿ. ಸರ್ವವ್ಯಾಪಿಯಾಗಿರುವ ವಿಶ್ವಾತ್ಮ ನೀನು ಎಂದು ಹೇಳಿದಾಗ ಜನರಿಗೆ ಅಂಜಿಕೆಯಾಗುವುದು. ಎಲ್ಲರಮೂಲಕ ನೀನು ಕೆಲಸಮಾಡುವೆ, ಎಲ್ಲ ಕಾಲುಗಳಮೂಲಕ ನೀನು ಚಲಿಸುವೆ, ಎಲ್ಲ ವದನಗಳಮೂಲಕ ನೀನು ಮಾತನಾಡುವೆ, ಪ್ರತಿಯೊಂದು ಹೃದಯದಮೂಲಕ ನೀನು ಅನುಭವಿಸುವೆ.

ಇದನ್ನು ಜನರಿಗೆ ಹೇಳಿದರೆ ಅಂಜುವರು. ವ್ಯಕ್ತಿತ್ವವನ್ನು ಇಟ್ಟುಕೊಂಡಿರುವುದಕ್ಕೆ ಸಾಧ್ಯವಿಲ್ಲವೆ ಎಂದು ಪದೇ ಪದೇ ಕೇಳುವರು. ವ್ಯಕ್ತಿತ್ವ ಎಂದರೇನು? ನಾನದನ್ನು ನೋಡಲಿಚ್ಛಿಸುವೆನು. ಮಗುವಿಗೆ ಮೀಸೆಯಿಲ್ಲ. ಅದು ದೊಡ್ಡದಾದರೆ ಅದಕ್ಕೆ ಗಡ್ಡ ಮೀಸೆ ಬರಬಹುದು. ಅದರ ವ್ಯಕ್ತಿಲಕ್ಷಣ ದೇಹದಲ್ಲಿದ್ದರೆ ಅದು ನಾಶವಾಗುವುದು. ಕುಡುಕ ಕುಡಿಯುವುದನ್ನು ಬಿಡಬಾರದು. ಏಕೆಂದರೆ ತನ್ನ ವ್ಯಕ್ತಿಲಕ್ಷಣವನ್ನು ಕಳೆದುಕೊಳ್ಳುವನು. ಕಳ್ಳ ಉತ್ತಮನಾಗಕೂಡದು. ಉತ್ತಮನಾದರೆ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವನು. ಇದಕ್ಕೆ ಅಂಜಿ ಯಾರೂ ತಮ್ಮ ಸ್ವಭಾವವನ್ನೇ ಬದಲಾಯಿಸಕೂಡದು. ಅನಂತತೆಯಲ್ಲಿ ಅಲ್ಲದೆ ಬೇರೆ ವ್ಯಕ್ತಿತ್ವವಿಲ್ಲ. ಅದೊಂದೆ ಸ್ಥಿತಿ ಬದಲಾಯಿಸದೆ ಇರುವುದು.

ಪ್ರತಿಯೊಂದೂ ಅನವರತ ಚಲಿಸುತ್ತಿದೆ. ವ್ಯಕ್ತಿತ್ವ ಜ್ಞಾಪಕಶಕ್ತಿಯಲ್ಲಿಯೂ ಇಲ್ಲ. ತಲೆಗೆ ಒಂದು ಪೆಟ್ಟು ಬಿದ್ದು ನಾನು ಜ್ಞಾಪಕಶಕ್ತಿಯನ್ನೆಲ್ಲಾ ಕಳೆದುಕೊಂಡರೆ ಆಗ ನನ್ನ ವ್ಯಕ್ತಿತ್ವಹೋಯಿತು. ನನಗೆ ಸರ್ವನಾಶವಾಯಿತು. ನನ್ನ ಬಾಲ್ಯದ ಎರಡನೆ ಅಥವಾ ಮೂರನೆ ವರುಷ ನನಗೆ ನೆನಪಿಲ್ಲ. ನೆನಪು ಮತ್ತು ಇರುವಿಕೆ ಒಂದೇ ಆದರೆ ನಾನು ಮರೆತುದೆಲ್ಲಾ ಹೋಯಿತು. ಹಾಗಾದರೆ ನನ್ನ ಜೀವನದ ಯಾವ ಭಾಗ ನೆನಪಿಲ್ಲವೋ ಅದನ್ನು ನಾನು ಬಾಳಲೆ ಇಲ್ಲ. ಇದು ವ್ಯಕ್ತಿತ್ವದ ಬಹಳ ಸಂಕುಚಿತ ಭಾವನೆ. ನಾವಿನ್ನೂ ವ್ಯಕ್ತಿಗಳಾಗಿಲ್ಲ. ನಾವು ವ್ಯಕ್ತಿತ್ವಕ್ಕಾಗಿ ಪ್ರಯತ್ನಿಸುತ್ತಿರುವೆವು. ಅದೇ ಅನಂತತೆ. ಅದೇ ಮಾನವನ ಸ್ವಸ್ವರೂಪ. ಯಾರ ಜೀವನ ಇಡೀ ವಿಶ್ವದಲ್ಲಿ ಇದೆಯೋ ಅವನೇ ಜೀವಿಸುತ್ತಿರುವನು. ನಾವು ಹೆಚ್ಚು ಅಲ್ಪ ವಸ್ತುಗಳನ್ನು ಚಿಂತಿಸಿದಷ್ಟೂ ಭರದಿಂದ ಮೃತ್ಯುವಿನ ಕಡೆಗೆ ಧಾವಿಸುವೆವು. ಎಂದು ವಿಶ್ವದಲ್ಲಿ ನಮ್ಮ ಬಾಳು ವಿಹರಿಸುವುದೊ ಆಗ ಮಾತ್ರ ನಾವು ಬಾಳುತ್ತಿರುವೆವು. ಈ ಸಂಕುಚಿತ ಜೀವನದಲ್ಲಿರುವುದೇ ಮರಣ, ಮೃತ್ಯುಸ್ವರೂಪ. ಆದಕಾರಣವೇ ಮರಣಭಯ ನಮಗೆ ಬರುವುದು. ಎಲ್ಲಿಯವರೆಗೆ ಈ ಪ್ರಪಂಚದಲ್ಲಿ ಒಬ್ಬನಾದರೂ ಬಾಳುತ್ತಿರುವನೋ ಅಲ್ಲಿಯವರೆಗೂ ತಾನು ಜೀವಿಸುವನು ಎಂಬುದನ್ನು ಅರಿತಾಗ ಮೃತ್ಯುಭಯದಿಂದ ಪಾರಾಗಬಹುದು. "ನಾನು ಎಲ್ಲದರಲ್ಲಿಯೂ ಇರುವೆನು, ಎಲ್ಲರಲ್ಲಿಯೂ ಇರುವೆನು, ಎಲ್ಲ ಜೀವನದಲ್ಲಿ ಇರುವೆನು. ನಾನೆ ಬ್ರಹ್ಮಾಂಡ" ಎಂದು ಮಾನವ ಹೇಳಲು ಸಾಧ್ಯವಾದಾಗಮಾತ್ರ ನಿರ್ಭಯತೆ ಬರುವುದು. ಪ್ರತಿಕ್ಷಣವೂ ಬದಲಾಯಿಸುತ್ತಿರುವ ವಸ್ತುವಿನ ವಿಷಯದಲ್ಲಿ ಅಮೃತತ್ವವನ್ನು ಹೇಳುವುದು ಅಸಂಬದ್ಧ. ಪುರಾತನ ದಾರ್ಶನಿಕನೊಬ್ಬ ಹೀಗೆ ಹೇಳುವನು: "ಆತ್ಮ ಒಂದೇ ವ್ಯಕ್ತಿಸ್ವರೂಪ ಉಳ್ಳದ್ದು. ಏಕೆಂದರೆ ಅದು ಅನಂತವಾಗಿರುವುದು. ಯಾವ ಅನಂತವನ್ನು ವಿಭಾಗಿಸಲಾರೆವೊ ಅದು ಎಂದೆಂಗೂ ಅಖಂಡವಾಗಿರುವುದು, ಇದೇ ಮಾನವನ ವ್ಯಕ್ತಿತ್ವ, ಸ್ವಸ್ವರೂಪ." ಈಗಿರುವ ತೋರಿಕೆಯು ಮಾನವ ಅತೀತವಾಗಿರುವ ವ್ಯಕ್ತಿತ್ವವನ್ನು ವ್ಯಕ್ತಗೊಳಿಸಲು ಪ್ರಯತ್ನಿಸುತ್ತಿರುವನು ಅಷ್ಟೆ. ವಿಕಾಸ ಆತ್ಮಕ್ಕೆ ಸೇರಿಲ್ಲ. ದುಷ್ಟ ಸಜ್ಜನನಾಗುವುದು, ಪ್ರಾಣಿ ಮನುಷ್ಯನಾಗುವುದು, ನೀವು ಇದನ್ನು ಯಾವ ದೃಷ್ಟಿಯಿಂದಲಾದರೂ ನೋಡಿ, ಇಂತಹ ಬದಲಾವಣೆಗಳು ಆತ್ಮನಿಗೆ ಇಲ್ಲ. ಇದೆಲ್ಲ ಪ್ರಕೃತಿ ವಿಕಾಸ, ಆತ್ಮ ವ್ಯಕ್ತವಾಗುತ್ತಿದೆ. ನಿನ್ನನ್ನು ನನ್ನಿಂದ ಮರೆ

ಮಾಡಿದ ಒಂದು ತೆರೆಯಿದೆ ಎಂದು ಭಾವಿಸೋಣ. ಅದರಲ್ಲಿ ಒಂದು ಸಣ್ಣ ರಂಧ್ರವಿದೆ. ಅದರ ಮೂಲಕ ನಾನು ಎಲ್ಲೋ ಕೆಲವರ ಮುಖವನ್ನು ನೋಡಬಹುದು. ಆ ರಂಧ್ರ ದೊಡ್ಡದಾಗುತ್ತ ಬಂದರೆ ಹೆಚ್ಚು ದೃಶ್ಯ ನನಗೆ ಕಾಣುವುದು. ಕೊನೆಗೆ ತೆರೆಯೆಲ್ಲ ಮಾಯವಾದರೆ ನಾನು ನಿಮ್ಮೆದುರಿಗೆ ಪ್ರತ್ಯಕ್ಷ ನಿಲ್ಲುತ್ತೇನೆ. ಈ ಸಮಯದಲ್ಲಿ ನೀವು ಬದಲಾಯಿಸಲೇ ಇಲ್ಲ. ರಂಧ್ರಮಾತ್ರ ವಿಕಾಸವಾಗುತ್ತ ಬಂದುದು. ನೀವು ಕ್ರಮೇಣ ವ್ಯಕ್ತವಾಗುತ್ತಾ ಬಂದಿರಿ. ಇದರಂತೆಯೇ ಆತ್ಮನೂ ಕೂಡ. ಯಾವ ಪೂರ್ಣತೆಯನ್ನೂ ನಾವು ಪಡೆಯುವುದಿಲ್ಲ. ನೀನಾಗಲೆ ಸ್ವತಂತ್ರನಾಗಿದ್ದೆ, ಪೂರ್ಣನಾಗಿದ್ದೆ. ದೇವರು ಧರ್ಮ ಮರಣಾತೀತ ಶೋಧನೆ ಇವೆಲ್ಲಾ ಏನು? ಮಾನವ ದೇವರಿಗಾಗಿ ಏತಕ್ಕೆ ಹುಡುಕುವುದು? ಪ್ರತಿಯೊಂದು ದೇಶದಲ್ಲೂ ಸಮಾಜದಲ್ಲೂ ಮನುಷ್ಯನಲ್ಲೂ ದೇವರಲ್ಲೂ ಅಥವಾ ಇನ್ನೆಲ್ಲೋ ಒಂದು ಆದರ್ಶಕ್ಕಾಗಿ ಮಾನವರು ಏತಕ್ಕೆ ಹುಡುಕುತ್ತಿರುವರು. ಏಕೆಂದರೆ ಆ ಭಾವನೆ ಆಗಲೆ ನಿನ್ನಲ್ಲಿದೆ. ಅದು ಕೇವಲ ನಿಮ್ಮ ಹೃದಯದ ಸ್ಪಂದನ. ಅದು ನಿಮಗೆ ಗೊತ್ತಾಗಲಿಲ್ಲ, ಅದೇನೋ ಹೊರಗಿನದು ಎಂದು ಭಾವಿಸಿದಿರಿ. ನಿಮ್ಮ ಅಂತರಾತ್ಮನಲ್ಲಿರುವ ದೇವರೆ ಅವನನ್ನು ಸಾಕ್ಷಾತ್ಕಾರಮಾಡಿಕೊಳ್ಳುವಂತೆ ನಿಮ್ಮನ್ನು ಪ್ರಚೋದಿಸುತ್ತಿರುವುದು. ಇಲ್ಲಿ ಅಲ್ಲಿ ಬಹಳ ಹುಡುಕಾಡಿದಮೇಲೆ, ದೇವಸ್ಥಾನ ಚರ್ಚು ಭೂಮಿ ಸ್ವರ್ಗ ಎಲ್ಲಾ ಹುಡುಕಿದಮೇಲೆ ವೃತ್ತವನ್ನು ಪೂರ್ಣ ಮಾಡಿ ಕೊನೆಗೆ ಹೊರಟ ಸ್ಥಳಕ್ಕೇ ಪುನಃ ಬರುವಿರಿ. ಕೊನೆಗೆ ನೀವು ಪ್ರಪಂಚವನ್ನೆಲ್ಲಾ ಯಾರಿಗಾಗಿ ಹುಡುಕುತ್ತಿದ್ದಿರೊ, ಯಾರಿಗಾಗಿ ನೀವು ಚರ್ಚು ದೇವಸ್ಥಾನಗಳಲ್ಲಿ ಅಳುತ್ತಿದ್ದಿರೊ, ಯಾರನ್ನು ಮುಗಿಲಿನಿಂದ ಆವೃತನಾದ ರಹಸ್ಯತಮವಸ್ತುವೆಂದು ಭಾವಿಸಿದ್ದಿರೋ, ಅದು ಅತ್ಯಂತ ಹತ್ತಿರದಲ್ಲಿದೆ, ಅದೇ ನಿನ್ನಾತ್ಮ, ಅದೇ ನಿನ್ನ ಬಾಳು, ದೇಹ ಜೀವದ ಸತ್ಯ; ಅದೇ ನಿನ್ನ ಸ್ವಸ್ವರೂಪ. ಅದನ್ನು ಸಾಧಿಸಿ ವ್ಯಕ್ತಗೊಳಿಸಿ. ನೀನು ಪರಿಶುದ್ಧನಾಗುವುದಲ್ಲ, ನೀನು ಆಗಲೆ ಪರಿಶುದ್ಧ. ಪ್ರಕೃತಿ ಅತ್ತಕಡೆ ಇರುವ ಮುಚ್ಚಿದ ತೆರೆಯಂತೆ. ನೀನು ಯೋಚಿಸುವ ಪ್ರತಿಯೊಂದು ಒಳ್ಳೆಯ ಆಲೋಚನೆಯೂ, ಮಾಡುವ ಪ್ರತಿಯೊಂದು ಒಳ್ಳೆಯ ಕೆಲಸವೂ, ಆ ತೆರೆಯನ್ನು ಹರಿದುಹಾಕಿದಂತೆ. ಹಿಂದೆ ಇರುವ ಪವಿತ್ರತೆ ಅನಂತತೆ ದೇವರು ಹೆಚ್ಚು ಹೆಚ್ಚು ವ್ಯಕ್ತನಾಗುತ್ತಾ ಬರುವನು. ಇದೇ ಮಾನವನ ಪೂರ್ಣ ಇತಿಹಾಸ. ತೆರೆ ತೆಳ್ಳಗಾಗುತ್ತಾ ಬರುವುದು. ಹಿಂದೆ ಇರುವ

ಜ್ಯೋತಿ ಹೆಚ್ಚು ಹೆಚ್ಚು ವ್ಯಕ್ತವಾಗುವುದು. ಪ್ರಕಾಶಿಸುವುದೇ ಅದರ ಸ್ವಭಾವ. ನಾವು ಅದನ್ನು ತಿಳಿಯಲಾರೆವು. ಅದನ್ನು ತಿಳಿಯಲೆತ್ನಿಸುವುದು ವ್ಯರ್ಥ. ಅದನ್ನು ನೋಡುವುದಕ್ಕೆ ಸಾಧ್ಯವಾದರೆ ಅದು ಹೀಗೆ ಇರುತ್ತಿರಲಿಲ್ಲ. ಆದು ನಿತ್ಯ ಸಾಕ್ಷಿ. ಜ್ಞಾನಕ್ಕೆ ಒಂದು ಪರಿಮಿತಿ ಇದೆ. ಜ್ಞಾನವಿಷಯೀಕರಿಸುವುದು (objectifying). ಅವನೇ ಸಕಲ ವಸ್ತುಗಳ ನಿತ್ಯಜ್ಞಾತೃ, ನಿತ್ಯಸಾಕ್ಷಿ, ನಿನ್ನ ಆತ್ಮವೇ ಅದು. ಜ್ಞಾನ ಅದಕ್ಕಿಂತ ಒಂದು ಮೆಟ್ಟಲು ಕೆಳಗೆ, ಅವನತಿ. ನಾವಾಗಲೇ ನಿತ್ಯಜ್ಞಾತೃವಾಗಿರುವೆವು. ನಾವು ಅದನ್ನು ತಿಳಿಯುವುದು ಹೇಗೆ? ಪ್ರತಿಯೊಬ್ಬ ಮಾನವನ ನೈಜ ಸ್ವಭಾವವೇ ಅವನು. ಅವನು ಅದನ್ನು ಹಲವು ಬಗೆಯಲ್ಲಿ ವ್ಯಕ್ತಗೊಳಿಸಲು ಯತ್ನಿಸುತ್ತಿರುವನು. ಇಲ್ಲದೆ ಇದ್ದರೆ ಇಷ್ಟೊಂದು ನೀತಿನಿಯಮಗಳು ಏತಕ್ಕೆ ಇರುತ್ತಿದ್ದವು. ಸರ್ವನೀತಿಯ ವಿವರಣೆ ಎಲ್ಲಿರುವುದು? ಎಲ್ಲ ನೀತಿಶಾಸ್ತ್ರದ ಕೇಂದ್ರದಂತೆ ಒಂದು ಭಾವನೆ ಬಹಳ ಮುಖ್ಯವಾಗಿ ನಿಲ್ಲುವುದು. ಇತರರಿಗೆ ಒಳ್ಳೆಯದು ಮಾಡುವುದು ಮುಂತಾದ ಹಲವು ಭಾವನೆಯಲ್ಲಿ ಅದನ್ನು ವ್ಯಕ್ತಪಡಿಸುವರು. ಮಾನವನಿಗೆ ದಯೆತೋರುವುದು, ಎಲ್ಲಾ ಪ್ರಾಣಿಗಳಿಗೂ ದಯೆತೋರುವುದೇ ಮಾನವಕೋಟಿಯ ಮಾರ್ಗದರ್ಶಕತತ್ತ್ವ. "ನಾನೇ ವಿಶ್ವ, ಇದು ಅಖಂಡ" ಎಂಬ ಸನಾತನತತ್ತ್ವವನ್ನು ವ್ಯಕ್ತಪಡಿಸುವ ಭಾವನೆ. ಇಲ್ಲದೆ ಇದ್ದರೆ ಕಾರಣವೆಲ್ಲಿದೆ? ನಾನು ನನ್ನ ಸಹೋದ್ಯೋಗಿಗಳಿಗೆ ಏತಕ್ಕೆ ಸಹಾಯಮಾಡಬೇಕು? ನಾನು ಇತರರಿಗೆ ಏತಕ್ಕೆ ಸಹಾಯಮಾಡಬೇಕು? ಯಾವುದು ನನ್ನನ್ನು ನಿರ್ಬಂಧಿಸುವುದು? ಅನುಕಂಪ, ನನ್ನಂತೆಯೇ ಅವರು ಎನ್ನುವ ಭಾವನೆ. ಅತಿನಿರ್ದಯರು ಕೂಡ ಕೆಲವುವೇಳೆ ಇತರರಿಗೆ ವ್ಯಥೆಪಡುವರು. ಈ ತೋರಿಕೆಯ ವ್ಯಕ್ತಿತ್ವ ಒಂದು ಭ್ರಾಂತಿ. ಈ ಭ್ರಾಂತಿ ವ್ಯಕ್ತಿತ್ವವನ್ನು ನೆಚ್ಚಿರುವುದು ಅತಿಹೇಯವಾದುದು ಎಂಬುದನ್ನು ಕೇಳಿದಾಗ ಅಂಜುವ ಮನುಷ್ಯ ಕೂಡ ಪೂರ್ಣ ಆತ್ಮಾಭಿಮಾನ ನಿರಾಕರಣೆಯೆ ಎಲ್ಲ ಬಗೆಯ ನೀತಿಕೇಂದ್ರ ಎನ್ನುವನು. ಆತ್ಮಾಭಿಮಾನ ನಿರಾಕರಣೆಯ ಆದರ್ಶ ಎಂಥಹುದು? ಅಂದರೆ ಈ ತೋರಿಕೆಯ ಅಹಂಕಾರತ್ಯಾಗ, ಎಲ್ಲಾ ಬಗೆಯ ಸ್ವಾರ್ಥತ್ಯಾಗ. ಈಗಿನ ಅಹಂಕಾರ ಮಮಕಾರ ಹಿಂದಿನ ಮೂಢನಂಬಿಕೆಯ ಪರಿಣಾಮ. ಎಷ್ಟು ಈ ತೋರಿಕೆಯ ವ್ಯಕ್ತಿತ್ವ ತೊಲಗುವುದೊ ಅಷ್ಟು ನಿಜವಾದ ಆತ್ಮ ವ್ಯಕ್ತವಾಗುವುದು. ಇದೇ ನಿಜವಾದ ಆತ್ಮಾಭಿಮಾನ ನಿರಾಕರಣೆ. ಎಲ್ಲಾ ನೀತಿಬೋಧನೆಯ ಮೂಲ

ಕೇಂದ್ರ, ಸಾರ. ಮನುಷ್ಯನಿಗೆ ಇದು ಗೊತ್ತಿರಲಿ ಗೊತ್ತಿಲ್ಲದೆ ಇರಲಿ, ಇಡೀ ಪ್ರಪಂಚ ಸಾಧ್ಯವಾದಷ್ಟು ಅನುಷ್ಠಾನಮಾಡುತ್ತಾ ಆ ಆದರ್ಶ ದೆಡೆಗೆ ಸಾಗುತ್ತಿದೆ. ಮಾನವಕೋಟಿಯ ಬಹುಪಾಲು ಜನರು ಅದನ್ನು ತಿಳಿಯದೆ ಮಾಡುತ್ತಿರುವರು ಅಷ್ಟೆ. ಇದನ್ನು ತಿಳಿದು ಮಾಡಲಿ. ನಾನು ನನ್ನದೆಂಬುದು ನಿಜವಾದ ಆತ್ಮವಲ್ಲ, ಇದೊಂದು ಸಂಕುಚಿತ ಆವಿರ್ಭಾವನೆ ಎಂದು ತ್ಯಾಗಮಾಡಲಿ. ಹಿಂದಿರುವ ಅನಂತ ಸತ್ಯದ ಕ್ಷಣಿಕನೋಟ ವೊಂದು, ಸರ್ವವಾಗಿರುವ ಅನಂತಜ್ಯೋತಿಯ ಕಿಡಿಯೊಂದು ಈಗ ಇರುವ ಮಾನವ. ಅನಂತವೇ ಅವನ ನೈಜಸ್ವಭಾವ.

ಈ ಜ್ಞಾನದಿಂದ ಪ್ರಯೋಜನವೇನು? ಇದರ ಪರಿಣಾಮವೇನು, ಪ್ರತಿಫಲವೇನು? ಈಗಿನ ಕಾಲದಲ್ಲಿ ಪ್ರತಿಯೊಂದನ್ನೂ ಪ್ರಯೋಜನದ ದೃಷ್ಟಿಯಿಂದ ರೂ.ಆ.ಪೈ ದೃಷ್ಟಿಯಿಂದ ಅಳೆಯಬೇಕಾಗಿದೆ. ಪ್ರಯೋಜನ ಅಥವಾ ದ್ರವ್ಯದ ದೃಷ್ಟಿಯಿಂದ ಸತ್ಯವನ್ನು ಪರೀಕ್ಷಿಸಬೇಕು ಎನ್ನುವುದಕ್ಕೆ ಅವನಿಗೆ ಏನು ಅಧಿಕಾರವಿರುವುದು? ಪ್ರಯೋಜನ ಒಂದುವೇಳೆ ಇಲ್ಲದೆ ಇದ್ದರೆ ಅದು ಕಡಿಮೆ ಸತ್ಯವಾಗುವುದೆ? ಪ್ರಯೋಜನವಲ್ಲ ಸತ್ಯಕ್ಕೆ ಪರೀಕ್ಷೆ. ಆದರೂ ಇದರಲ್ಲಿ ಅತಿಶ್ರೇಷ್ಠ ಪ್ರಯೋಜನವಿದೆ. ಪ್ರತಿ ಯೊಬ್ಬರೂ ಸುಖವನ್ನು ಅರಸುತ್ತಿರುವುದು ಕಾಣುವುದು. ಆದರೆ ಬಹು ಮಂದಿ ಅದನ್ನು ಅಸತ್ಯದಲ್ಲಿ, ಕ್ಷಣಿಕವಸ್ತುವಿನಲ್ಲಿ ಅರಸುವರು. ಎಂದಿಗೂ ಇಂದ್ರಿಯದಲ್ಲಿ ಸುಖಸಿಕ್ಕಿಲ್ಲ. ಇಂದ್ರಿಯದಲ್ಲಿ ಸುಖವನ್ನು ಕಂಡ ಅಥವಾ ಇಂದ್ರಿಯವನ್ನು ಭೋಗಿಸಿದವನೊಬ್ಬನೂ ಇಲ್ಲ. ಆತ್ಮನಲ್ಲಿ ಮಾತ್ರ ಆನಂದದೊರಕುವುದು. ಮಾನವಕೋಟಿಗೆ ಅತಿಶ್ರೇಷ್ಠಪ್ರಯೋಜನಕಾರಿ ಯಾದುದೇ ಸುಖವನ್ನು ಆತ್ಮನಲ್ಲಿ ಪಡೆಯುವುದು. ಮತ್ತೊಂದು ಭಾವನೆಯೇ ಅಜ್ಞಾನವೇ ಎಲ್ಲಾ ದುಃಖಕ್ಕೂ ಮೂಲ ಎಂಬುದು. ಪ್ರಧಾನ ಅಜ್ಞಾನವೇ, ಅನಂತ, ಅಳುವುದು ದುಃಖಿಸುವುದು ಶಾಂತ ವಾಗಿರುವುದು ಎಂದು ಭಾವಿಸುವುದು. ಇದೇ ಎಲ್ಲಾ ಅಜ್ಞಾನದ ಮೂಲ. ಅಮೃತಾತ್ಮರು, ನಿತ್ಯಶುದ್ಧರು, ಪರಿಪೂರ್ಣರೂ ಆದ ನಾವು ಅಲ್ಪಮನಸ್ಸು, ಕ್ಷುದ್ರದೇಹ ಎಂದು ಭಾವಿಸುವೆವು. ಇದೇ ಎಲ್ಲಾ ಸ್ವಾರ್ಥತೆಯ ತೌರೂರು. ನಾನೊಂದು ಸಣ್ಣದೇಹವೆಂದು ಭಾವಿಸಿದೊಡನೆ ನಾನು ಅದನ್ನು ಇಟ್ಟಿರಬೇಕು, ರಕ್ಷಿಸಬೇಕು, ಸುಂದರವಾಗಿಡಬೇಕು, ಇದನ್ನು ಇತರ ದೇಹಗಳಿಗೆ ತೊಂದರೆ ಕೊಟ್ಟಾದರೂ ಮಾಡಬೇಕು. ಆಗ ನಾನು ನೀವು ಬೇರೆ ಆಗುವೆವು. ಈ ಪ್ರತ್ಯೇಕ ಭಾವನೆ ಬಂದೊಡನೆಯೇ

ಎಲ್ಲಾ ತೊಂದರೆ ದುಃಖಕ್ಕೆ ಹೇತುವಾಗುವುದು. ಇದೇ ಪ್ರಯೋಜನ. ಮಾನವಕೋಟಿಯಲ್ಲಿ ಅತ್ಯಲ್ಪಮಂದಿಯಾದರೂ ತಮ್ಮ ಸ್ವಾರ್ಥತೆ, ಸಂಕುಚಿತಭಾವನೆ, ಅಲ್ಪಭಾವನೆ ತ್ಯಜಿಸಲು ಸಿದ್ಧರಾದರೆ ಈ ಭೂಮಿ ನಾಳೆಯೇ ಸ್ವರ್ಗವಾಗುವುದು. ಯಂತ್ರ ಮತ್ತು ಭೌತಜ್ಞಾನಾಭಿವೃದ್ಧಿ ಯಿಂದ ಇದು ಸಾಧ್ಯವಿಲ್ಲ. ಇವು ಕೇವಲ ನಮ್ಮ ದುಃಖವನ್ನು ಹೆಚ್ಚಿ ಸುತ್ತವೆ. ಬೆಂಕಿಗೆ ಎಣ್ಣೆ ಹಾಕಿದಂತೆ ಸ್ವಾರ್ಥಮನುಷ್ಯ ತನ್ನ ಸ್ವಾರ್ಥತೆ ನೀಗದೆ, ಮತ್ತೊಬ್ಬನಿಗೆ ಸೇರಿದ ಆಸ್ತಿಯನ್ನು ಅಪಹರಿಸುವುದಕ್ಕೆ, ಮತ್ತೊಬ್ಬರ ರಕ್ತವನ್ನು ಹೀರುವುದಕ್ಕೆ ಒಂದು ಹೊಸ ಆಯುಧವನ್ನು ಪಡೆದಂತೆ ಆಗುವುದು.

ಇದು ಸಾಧ್ಯವೇ ಎಂಬುದು ಮತ್ತೊಂದು ಪ್ರಶ್ನೆ. ಆಧುನಿಕ ಸಮಾಜದಲ್ಲಿ ಇದನ್ನು ಅನುಷ್ಠಾನಕ್ಕೆ ತರಬಹುದೇ? ಸತ್ಯ ಯಾವ ಸಮಾಜಕ್ಕೂ ಅದು ಪುರಾತನವಾಗಲಿ ಆಧುನಿಕವಾಗಲಿ ಗೌರವ ಸಲ್ಲಿಸು ವುದಿಲ್ಲ. ಸಮಾಜ ಸತ್ಯಕ್ಕೆ ಮನ್ನಣೆ ತೋರಬೇಕು ಇಲ್ಲವೆ ಅಳಿಯಬೇಕು. ಸಮಾಜ ಸತ್ಯಕ್ಕೆ ಹೊಂದಿಕೊಳ್ಳಬೇಕು, ಸತ್ಯ ಸಮಾಜಕ್ಕೆ ಹೊಂದಿ ಕೊಳ್ಳುವುದಿಲ್ಲ. ನಿಸ್ವಾರ್ಥತೆಯಂತಹ ಉದಾತ್ತಧ್ಯೇಯವನ್ನು ಸಮಾಜ ದಲ್ಲಿ ಆಚರಿಸಲು ಸಾಧ್ಯವಿಲ್ಲದೇ ಇದ್ದರೆ, ಸಮಾಜವನ್ನು ತ್ಯಜಿಸಿ ಕಾಡಿಗೆ ಹೋಗುವುದು ಮೇಲು. ಅವನೇ ಧೀರ. ಎರಡುಬಗೆಯ ಧೈರ್ಯವಿದೆ. ಇಂಡಿಯಾದೇಶವನ್ನು ದಂಡೆತ್ತಿದ ಒಬ್ಬ ಚಕ್ರವರ್ತಿಗೆ ಅವನ ಗುರು ಆತನಿಗೆ ಕೆಲವು ಮಹಾತ್ಮರನ್ನು ಸಂದರ್ಶಿಸು ಎಂದು ಹೇಳಿದ್ದನು. ಬಹಳ ಹುಡುಕಾಡಿದಮೇಲೆ ಒಂದು ಬಂಡೆಯಮೇಲೆ ವೃದ್ಧನೊಬ್ಬ ಕುಳಿತಿರು ವುದನ್ನು ಕಂಡನು. ಚಕ್ರವರ್ತಿ ಅವನೊಂದಿಗೆ ಸ್ವಲ್ಪಹೊತ್ತು ಮಾತನಾಡಿ ಅವನ ಜ್ಞಾನವನ್ನು ಬಹಳ ಮೆಚ್ಚಿದನು. ಜೊತೆಗೆ ತನ್ನ ದೇಶಕ್ಕೆ ಬರುವಂತೆ ಋಷಿಯನ್ನು ಕೇಳಿಕೊಂಡನು. "ಇಲ್ಲ. ಈ ಕಾಡಿನಲ್ಲಿ ನಾನು ತೃಪ್ತನಾಗಿರುವೆ" ಎಂದನು. ಚಕ್ರವರ್ತಿ, "ನಾನು ನಿನಗೆ ದ್ರವ್ಯ ಐಶ್ವರ್ಯ, ಅಧಿಕಾರಕೊಡುವೆ. ನಾನು ಪ್ರಪಂಚದ ಚಕ್ರವರ್ತಿ" ಎಂದನು. ಋಷಿ, "ಇಲ್ಲ. ಇದಾವುದೂ ನನಗೆ ಬೇಕಿಲ್ಲ" ಎಂದನು. ಚಕ್ರವರ್ತಿ "ನೀನು ಬರದಿದ್ದರೆ ಕೊಲ್ಲುವೆನು" ಎಂದನು. ಋಷಿ ಶಾಂತಮನಸ್ಕನಾಗಿ ಮಂದಹಾಸದಿಂದ, "ಚಕ್ರವರ್ತಿ ನೀನು ಇಂತಹ ಅವಿವೇಕವನ್ನು ಎಂದೂ ಆಡಿಲ್ಲ. ನೀನು ನನ್ನನ್ನು ಕೊಲ್ಲಲಾರೆ. ನನ್ನನ್ನು ಬಿಸಿಲು ಒಣಗಿಸದು, ಬೆಂಕಿದಹಿಸದು, ಕತ್ತಿ ಛೇದಿಸದು. ನಾನು

ಜನನಮರಣಾತೀತ, ನಿತ್ಯವಾದ ಸರ್ವವ್ಯಾಪಿ ಸರ್ವಶಕ್ತಿ ಆತ್ಮನೇ ನಾನು" ಎಂದನು. ಇದು ಆಧ್ಯಾತ್ಮಿಕ ಧೈರ್ಯ. ಮೊದಲನೆಯದು ಸಿಂಹ ಅಥವಾ ವ್ಯಾಘ್ರದ ಧೈರ್ಯ. ಕ್ರಿ. ಶ. ೧೮೫೭ ನೇ ಸಿಪಾಯಿದಂಗೆಯಲ್ಲಿ ಒಬ್ಬ ಸ್ವಾಮಿಗಳಿದ್ದರು. ಅವರೊಬ್ಬ ಮಹಾಪುರುಷರು. ಅವರನ್ನು ಒಬ್ಬ ಮಹಮ್ಮದೀಯ ದಂಗೆಕಾರ ಕ್ರೂರವಾಗಿ ತಿವಿದನು. ಹಿಂದೂ ದಂಗೆಕಾರರು ಅವನನ್ನು ಹಿಡಿದು ಸ್ವಾಮಿಗಳ ಬಳಿಗೆ ಕರೆತಂದರು. ಸ್ವಾಮಿಗಳು ಪ್ರಶಾಂತಚಿತ್ತದಿಂದ, "ಸಹೋದರನೆ ನೀನೆ ಅವನು" ಎಂದು ಕಾಲವಾದರು. ಸತ್ಯ ಸಮಾಜಕ್ಕೆ ಹೊಂದಿಕೊಳ್ಳದೇ ಇದ್ದರೆ, ಪರಮಸತ್ಯವನ್ನು ಅಳವಡಿಸಿಕೊಳ್ಳುವಂತಹ ಸಮಾಜವನ್ನು ನೀವು ನಿರ್ಮಿಸದೇ ಇದ್ದರೆ, ನಿಮ್ಮ ದೇಹಶಕ್ತಿ ಪಾಶ್ಚಾತ್ಯ ಸಂಸ್ಥೆಯ ಹಿರಿಮೆಯನ್ನು ಹೊಗಳಿ ಪ್ರಯೋಜನವೇನು? "ಈ ಧೈರ್ಯ ಸಾಧ್ಯವಿಲ್ಲ" ಎಂದರೆ ನಿಮ ಮಹಿಮೆ ಮತ್ತು ಪೌರುಷವನ್ನು ಕೊಚ್ಚಿಕೊಂಡು ಪ್ರಯೋಜನವೇನು? ರೂಪಾಯಿ, ಆಣೆ, ಪೈ ಅಲ್ಲದೆ ಮತ್ತ್ಯಾವುದೂ ಸಾಧ್ಯವಿಲ್ಲವೇ? ಯಾವ ಸಮಾಜದಲ್ಲಿ ಶ್ರೇಷ್ಠಸತ್ಯಗಳು ಅನುಷ್ಠಾನಸಾಧ್ಯವಾಗಬಲ್ಲುದೋ ಅದೇ ಶ್ರೇಷ್ಠಸಮಾಜ. ಇದು ನನ್ನ ಅಭಿಪ್ರಾಯ. ಸಮಾಜ ಶ್ರೇಷ್ಠಸತ್ಯಕ್ಕೆ ಇನ್ನೂ ಯೋಗ್ಯವಲ್ಲದೇ ಇದ್ದರೆ ಅದನ್ನು ಯೋಗ್ಯವಾಗುವಂತೆಮಾಡಿ. ಎಷ್ಟು ಬೇಗಮಾಡಿದರೆ ಅಷ್ಟು ಒಳ್ಳೆಯದು. ಸ್ತ್ರೀಪುರುಷರೆ ಈ ಆತ್ಮನಲ್ಲಿ ಶ್ರದ್ಧೆ ಇಡಿ. ಧೈರ್ಯವಾಗಿ ಸತ್ಯವನ್ನು ನಂಬಿ, ಧೈರ್ಯವಾಗಿ ಅದನ್ನು ಅನುಷ್ಠಾನಕ್ಕೆ ತನ್ನಿ. ಪ್ರಪಂಚಕ್ಕೆ ಇಂತಹ ಧೈರ್ಯವಂತ ಸ್ತ್ರೀಪುರುಷರು ನೂರಾರು ಬೇಕಾಗಿವೆ. ಸತ್ಯವನ್ನು ತಿಳಿಯಬಲ್ಲ ಸಾಹಸ, ಅದನ್ನು ಜೀವನದಲ್ಲಿ ತೋರಬಲ್ಲ ಸಾಹಸ, ಮರಣಕ್ಕೆ ಅಂಜದ, ಇಲ್ಲ ಅದನ್ನು ಸ್ವಾಗತಿಸುವ, ಮನುಷ್ಯನಿಗೆ ಆತ್ಮದ ಅರಿವನ್ನುಂಟುಮಾಡುವ, ಪ್ರಪಂಚದಲ್ಲಿ ಯಾವುದೂ ಅವನನ್ನು ನಾಶಮಾಡಲಾರದು ಎಂಬ ಧೈರ್ಯವನ್ನು ಅನುಷ್ಠಾನಮಾಡಿ. ಆಗ ನೀವು ಸ್ವತಂತ್ರರಾಗುವಿರಿ. ಆಗ ನೀವು ನಿಮ್ಮ ಸ್ವಸ್ವರೂಪವನ್ನು ತಿಳಿಯುವಿರಿ! ಮೊದಲು ಈ ಆತ್ಮನ ವಿಷಯವನ್ನು ಕೇಳಬೇಕು. ಅನಂತರ ಮನನಮಾಡಬೇಕು, ಅನಂತರ ಧ್ಯಾನಮಾಡಬೇಕು.

ಆಧುನಿಕ ಕಾಲದಲ್ಲಿ ಕೇವಲ ಕರ್ಮವನ್ನೇ ಹೆಚ್ಚು ಪ್ರತಿಪಾದಿಸಿ ಭಾವನೆಯನ್ನು ಅಲ್ಲಗಳೆಯುವ ಚಾಳಿ ಬಂದುಹೋಗಿದೆ. ಕೆಲಸಮಾಡುವುದೇನೊ ಒಳ್ಳೆಯದು. ಆದರೆ ಅದು ಆಲೋಚನೆಯಿಂದ ಜನಿಸುವುದು.

ದೇಹದಮೂಲಕ ಅಲ್ಪವಾಗಿ ವ್ಯಕ್ತವಾಗುವ ಶಕ್ತಿಯನ್ನೇ ಕರ್ಮವೆನ್ನುವುದು. ಆದರೆ ಭಾವನೆ ಎಲ್ಲಿ ಇಲ್ಲವೊ ಅಲ್ಲಿ ಕೆಲಸವೇ ಇಲ್ಲ. ಮನಸ್ಸನ್ನು ಉದಾತ್ತಭಾವನೆ ಮತ್ತು ಧ್ಯೇಯಗಳಿಂದ ತುಂಬಿ. ಅದನ್ನೇ ಹಗಲು ರಾತ್ರೆ ನಿಮ್ಮ ಮನಸ್ಸಿನಲ್ಲಿಡಿ. ಅವುಗಳಿಂದ ಪ್ರಚಂಡಕರ್ಮ ವ್ಯಕ್ತ ವಾಗುವುದು. ಅಶುದ್ಧವನ್ನು ಕುರಿತು ಮಾತನಾಡಬೇಡಿ. ನಾವು ಪರಿಶುದ್ಧ ರೆಂದು ಹೇಳಿ. ನಾವು ಅಲ್ಪರು ಹುಟ್ಟಿರುವೆವು ಸಾಯುವೆವು ಎಂದು ಪ್ರತಿಕ್ಷಣವೂ ಅಂಜುವ ಸ್ಥಿತಿಗೆ ನಾವೇ ಬರುವಂತೆ ಮಾಡಿಕೊಂಡಿರುವೆವು.

ಒಂದು ಗರ್ಭಿಣಿ ಸಿಂಹ ಆಹಾರವನ್ನು ಅರಸಿ ಹೊರಟ ಕಥೆ ಯೊಂದಿದೆ. ಒಂದು ಕುರಿಮಂದೆಯನ್ನು ನೋಡಿ ಅದರಮೇಲೆ ನೆಗೆಯಿತು. ಅದು ಆ ಪ್ರಯತ್ನದಲ್ಲಿ ಸತ್ತಿತು. ಅದಕ್ಕೊಂದು ತಬ್ಬಲಿಮರಿ ಆ ಸಮಯ ದಲ್ಲಿ ಜನಿಸಿತು. ಕುರಿಗಳೇ ಅದನ್ನು ನೋಡಿಕೊಳ್ಳುತ್ತಿದ್ದವು. ಸಿಂಹದ ಮರಿ ಅವುಗಳೊಂದಿಗೆ ಬೆಳೆಯುತ್ತಾ ಹುಲ್ಲುತಿಂದು ಕುರಿಗಳಂತೆ ಅರಚು ತ್ತಿತ್ತು. ಕಾಲಕ್ರಮೇಣ ಅದೊಂದು ದೊಡ್ಡ ಸಿಂಹವಾಗಿ ಬೆಳೆದರೂ ತಾನೊಂದು ಕುರಿ ಎಂದೇ ಭಾವಿಸಿತು. ಒಂದುದಿನ ಮತ್ತೊಂದು ಸಿಂಹ ಆಹಾರವನ್ನು ಹುಡುಕಿಕೊಂಡು ಬಂದಿತು. ಆಗ ಕುರಿಮಂದೆಯಲ್ಲಿ ಒಂದು ಸಿಂಹ ಇದ್ದುದನ್ನು ನೋಡಿ ಅದಕ್ಕೆ ಆಶ್ಚರ್ಯವಾಯಿತು. ಅಪಾಯ ಸನ್ನಿಹಿತವಾದಾಗ ಕುರಿಗಳು ಓಡುವಾಗ ಸಿಂಹವೂ ಅವುಗಳ ಜೊತೆಯಲ್ಲಿ ಓಡಿಹೋಯಿತು. ಆ ಸಿಂಹದ ಹತ್ತಿರ ಹೋಗಿ ನೀನು ಕುರಿಯಲ್ಲ ಸಿಂಹ ಎಂದು ಹೇಳುವುದಕ್ಕೆ ಪ್ರಯತ್ನಿಸಿತು. ಆದರೆ ಪಾಪ ಕುರಿಮರಿ ಸಿಂಹ ನಿಜವಾದ ಸಿಂಹ ಹತ್ತಿರ ಬಂದೊಡನೆಯೆ ಪರಾರಿ ಯಾಯಿತು. ಸಿಂಹ ಅದನ್ನು ಹಿಡಿಯುವುದಕ್ಕೆ ಒಂದು ಸಮಯವನ್ನು ಕಾಯುತ್ತಿತ್ತು. ಒಂದು ದಿನ ಕುರಿಮರಿ ಸಿಂಹ ಮಲಗಿದ್ದಾಗ ಅದರ ಹತ್ತಿರ ಹೋಗಿ "ನೀನು ಸಿಂಹ" ಎಂದಿತು. "ಇಲ್ಲ ನಾನು ಕುರಿ" ಎಂದು ಹೇಳಿ ಅದು ಒಪ್ಪಲೇ ಇಲ್ಲ. ಕುರಿಯಂತೆ ಅರಚಿತು. ಸಿಂಹ ಅದನ್ನು ಒಂದು ಸರೋವರದ ಬಳಿಗೆ ಎಳೆದುಕೊಂಡು ಹೋಗಿ "ನೋಡು ನಿನ್ನ ಮತ್ತು ನನ್ನ ನೆರಳನ್ನು" ಎಂದಿತು. ಆಗ ಹೋಲಿಸಿ ನೋಡಿತು. ಅದು ಸಿಂಹವನ್ನು ನೋಡಿತು. ತನ್ನ ನೆರಳನ್ನು ನೀರಿನಲ್ಲಿ ನೋಡಿ ಕೊಂಡಿತು. ತಕ್ಷಣವೇ ತಾನು ಸಿಂಹ ಎಂದು ಅದಕ್ಕೆ ಗೊತ್ತಾಯಿತು. ಸಿಂಹದಂತೆ ಘರ್ಜಿಸಿತು. ಕುರಿಯಂತೆ ಅರಚುವುದು ಮಾಯವಾಯಿತು. ನೀವೆಲ್ಲಾ ಸಿಂಹಗಳು. ಆತ್ಮರು ಪರಿಶುದ್ಧರು ಅನಂತರು ಪರಿ

ಪೂರ್ಣರು. ವಿಶ್ವಶಕ್ತಿ ನಿಮ್ಮಲ್ಲಿದೆ. "ಸಖನೆ ಏಕಳುವೆ? ನಿನಗೆ ಜನನಮರಣಗಳಿಲ್ಲ, ಏಕಳುವೆ, ನಿನಗೆ ರೋಗಶೋಕಗಳಿಲ್ಲ. ನೀನು ಅನಂತಾಕಾಶದಂತೆ. ಹಲವು ಬಣ್ಣದ ಮುಗಿಲುಗಳು ಅಲ್ಲಿ ಬಂದು ಕೆಲವು ಕಾಲವಾಡಿ ಮಾಯವಾಗುವುವು. ಆದರೆ ಆಕಾಶ ಎಂದಿನಂತೆ ಅನಂತ ನಭವಾಗಿದೆ." ನಾವು ಕೆಟ್ಟದ್ದನ್ನು ಏತಕ್ಕೆ ಹೊರಗೆ ನೋಡುವೆವು? ಒಂದು ಮೋಟುಮರದ ತುಂಡು ಇತ್ತು. ರಾತ್ರಿವೇಳೆ ಒಬ್ಬ ಕಳ್ಳ ಅಲ್ಲಿಗೆ ಬಂದಾಗ ಅದನ್ನು ಒಬ್ಬ ಪೋಲೀಸಿನವನು ಎಂದನು. ತನ್ನ ಪ್ರಿಯತಮ ಳನ್ನು ಕಾಯುತ್ತಿದ್ದ ಯುಪಕನೊಬ್ಬ ಅದನ್ನು ತನ್ನ ಪ್ರಿಯತಮಳೆಂದು ಭಾವಿಸಿದನು. ದೆವ್ವದ ಕಥೆ ಕೇಳಿದ್ದ ಮಗು ಅದನ್ನು ದೆವ್ವವೆಂದು ಭಾವಿಸಿ ಕಿರಿಚಿಕೊಂಡಿತು. ಆದರೆ ಸದಾ ಅದೊಂದು ಮರದ ತುಂಡೇ ಆಗಿತ್ತು. ನಮ್ಮಂತೆ ನಾವು ಪ್ರಪಂಚವನ್ನು ಭಾವಿಸುವೆವು. ಕೋಣೆಯಲ್ಲಿ ಒಂದು ಮಗುವಿದೆ ಎಂದು ಭಾವಿಸೋಣ. ಹತ್ತಿರ ಮೇಜಿನಮೇಲೆ ಚೀಲದ ತುಂಬ ಚಿನ್ನವಿದೆ. ಕಳ್ಳನೊಬ್ಬ ಅದನ್ನು ಕದಿಯುವನು. ಮಗುವಿಗೆ ಇದು ಕಳುವಾಗಿದೆ ಎಂದು ಗೊತ್ತಾಗುವುದೆ? ನಮ್ಮ ಒಳಗೆ ಏನು ಇದೆಯೋ ಅದನ್ನೇ ನಾವು ಹೊರಗೆ ನೋಡುತ್ತೇವೆ. ಮಗುವಿಗೆ ಕಳ್ಳ ಒಳಗೆ ಇಲ್ಲ. ಅದಕ್ಕೇ ಹೊರಗೆ ಕಳ್ಳ ಕಾಣುವುದಿಲ್ಲ. ಇದರಂತೆಯೇ ಎಲ್ಲಾ ಜ್ಞಾನ ಕೂಡ. ಪ್ರಪಂಚದಲ್ಲಿರುವ ದೌರ್ಜನ್ಯ ಮತ್ತು ಪಾಪ ವನ್ನು ಕುರಿತು ಮಾತನಾಡಬೇಡಿ. ನಾವಿನ್ನೂ ದೌರ್ಜನ್ಯವನ್ನು ನೋಡ ಬೇಕಾಗಿದೆಯಲ್ಲಾ ಎಂದು ವ್ಯಥೆಪಡಿ. ಎಲ್ಲೆಲ್ಲಿಯೂ ಪಾಪವನ್ನೇ ನೋಡಬೇಕಾಗಿದೆಯಲ್ಲ ಎಂದು ವ್ಯಥೆಪಡಿ. ಪ್ರಪಂಚಕ್ಕೆ ನೀವು ಸಹಾಯ ಮಾಡಬೇಕಾದರೆ ಅದನ್ನು ದೂರಬೇಡಿ. ಅದನ್ನು ಮತ್ತೂ ದುರ್ಬಲ ಮಾಡಬೇಡಿ. ಪಾಪ ದುಃಖ ಮುಂತಾದುವೆಲ್ಲ ನಮ್ಮ ದೌರ್ಬಲ್ಯವಲ್ಲದೆ ಮತ್ತೇನು? ಪ್ರಪಂಚ ಇಂಥಾ ಬೋಧನೆಯಿಂದ ಬರಬರುತ್ತಾ ದುರ್ಬಲ ವಾಗುವುದು. ಜನರು ಮಕ್ಕಳಾರಭ್ಯ ತಾವು ದುರ್ಬಲರು ಪಾಪಿಗಳು ಎಂಬುದನ್ನು ಕಲಿತುಕೊಳ್ಳುವರು. ಅವರೆಲ್ಲ ತೇಜಸ್ವಿ ಅಮೃತಪುತ್ರರೆಂದು ಸಾರಿ. ಅದನ್ನು ವ್ಯಕ್ತಗೊಳಿಸಲು ಅತಿದುರ್ಬಲರಾಗಿರುವವರುಕೂಡ ಅಮೃತಪುತ್ರರೆನ್ನಿ. ಸ್ಪಷ್ಟವಾದ ಬಲಯುತವಾದ ಪ್ರಯೋಜನಕಾರಿ ಯಾದ ಭಾವನೆ ಬಾಲ್ಯಾರಭ್ಯ ಅವರ ಮನಸ್ಸನ್ನು ಪ್ರವೇಶಿಸಲಿ. ನೀವು ಕೂಡ ಇಂತಹ ಭಾವನೆ ಪ್ರಭಾವಕ್ಕೆ ಒಳಗಾಗಿ. ದುರ್ಬಲಕಾರಿಯಾದ ಅಂಜಿಸುವ ಭಾವನೆಯ ಬಲೆಗೆ ಬೀಳಬೇಡಿ. ಮನಸ್ಸಿಗೆ, "ನಾನೆ ಅವನು

ನಾನೆ ಅವನು" ಎಂದು ಸಾರಿ. ಮನಸ್ಸಿನಲ್ಲಿ ಇದು ದಿವಾರಾತ್ರಿ ಒಂದು ಪಲ್ಲವಿಯಂತೆ ಘೋಷಿಸುತ್ತಿರಲಿ. ಮೃತ್ಯುಸಮ್ಮುಖದಲ್ಲಿಯೂ, "ನಾನೆ ಅವನು" ಎಂದು ಸಾರಿ. ಅದೇ ಸತ್ಯ. ವಿಶ್ವದ ಅಪಾರಶಕ್ತಿ ನಿಮ್ಮದು. ನಿಮ್ಮ ಮನಸ್ಸನ್ನು ಆವರಿಸಿದ ಮೂಢನಂಬಿಕೆಯನ್ನು ಕಳೆಯಿರಿ. ಧೀರರಾಗೋಣ. ಸತ್ಯವನ್ನು ತಿಳಿಯಿರಿ, ಅದನ್ನು ಅನುಷ್ಠಾನಕ್ಕೆ ತನ್ನಿ. ಗುರಿ ಬಹುದೂರವಿರಬಹುದು. ಆದರೆ ಜಾಗ್ರತರಾಗಿ, ಎದ್ದು ನಿಲ್ಲಿ, ಗುರಿ ಸೇರುವವರೆಗೂ ನಿಲ್ಲಬೇಡಿ.

——

# ಮಾಯೆ ಮತ್ತು ಭ್ರಮೆ

ನಿಮ್ಮಲ್ಲಿ ಬಹುಪಾಲು ಜನ ಮಾಯೆ ಎಂಬ ಶಬ್ದವನ್ನು ಕೇಳಿರಬಹುದು. ಸಾಧಾರಣವಾಗಿ ಮೋಹ ಭ್ರಾಂತಿ ಎಂಬ ತಪ್ಪು ಅರ್ಥದಲ್ಲಿ ಅದನ್ನು ಉಪಯೋಗಿಸಿರುವರು. ಆದರೆ ವೇದಾಂತತತ್ತ್ವಕ್ಕೆ ಆಧಾರಭೂತವಾದ ಸ್ತಂಬವೇ ಮಾಯಾಸಿದ್ಧಾಂತ. ಆದುದರಿಂದ ನಾವು ಇದನ್ನು ಸರಿಯಾಗಿ ತಿಳಿದುಕೊಳ್ಳುವುದು ಆವಶ್ಯಕವಾಗಿದೆ. ಮೊದಲು ನಿಮ್ಮಲ್ಲಿ ಸ್ವಲ್ಪ ತಾಳ್ಮೆ ಇರಲಿ ಎಂದು ಕೇಳಿಕೊಳ್ಳುತ್ತೇನೆ. ಏಕೆಂದರೆ ಅದನ್ನು ತಪ್ಪು ತಿಳಿದುಕೊಳ್ಳುವ ಮಹಾ ಅಪಾಯವಿದೆ. ವೇದಸಾಹಿತ್ಯದಲ್ಲಿ ನಮಗೆ ದೊರಕುವ ಬಹಳ ಪುರಾತನ ಭಾವನೆ ಭ್ರಾಂತಿ ಎಂಬ ಅರ್ಥದಲ್ಲಿದೆ. ಆದರೆ ಆಗ ನಿಜವಾದ ಸಿದ್ಧಾಂತ ಇನ್ನೂ ಸ್ಥಾಪಿತವಾಗಿರಲಿಲ್ಲ. "ಇಂದ್ರ ಮಾಯೆಯ ಮೂಲಕ ಹಲವು ಆಕಾರಗಳನ್ನು ಧರಿಸಿದನು" ಎಂಬ ಎಷ್ಟೋ ವಾಕ್ಯಗಳು ಬರುತ್ತವೆ. ಇಲ್ಲಿ ಮಾಯೆ ಎಂದರೆ ಗಾರುಡಿ ವಿದ್ಯಕ್ಕೆ ಸಂಬಂಧಿಸಿದ ಅರ್ಥವೆಂಬುದೇನೋ ನಿಜ. ಇದೇ ಅರ್ಥ ಕೊಡುವ ಇನ್ನೂ ಹಲವು ವಾಕ್ಯಗಳು ಅಲ್ಲಿ ನಮಗೆ ದೊರಕುತ್ತವೆ. ಅನಂತರ ಮಾಯೆ ಎಂಬ ಪದದ ಸುಳಿವೇ ಇಲ್ಲ. ಆದರೆ ಅದೇ ಕಾಲದಲ್ಲಿ ಭಾವನೆ ಬೆಳೆಯುತ್ತಿತ್ತು. ಅನಂತರ, "ಪ್ರಪಂಚದ ರಹಸ್ಯವನ್ನು ನಾವೇಕೆ ಗ್ರಹಿಸಲಾರೆವು?" ಎಂಬ ಪ್ರಶ್ನೆ ಎದ್ದಿತು. ಇದಕ್ಕೆ ಕೊಟ್ಟ ಉತ್ತರ ಬಹಳ ಮುಖ್ಯವಾಗಿತ್ತು. "ನಾವು ಕೆಲಸಕ್ಕೆ ಬಾರದ ಮಾತಿನಲ್ಲಿ ಕಾಲಹರಣ ಮಾಡುವೆವು. ಕೇವಲ ಇಂದ್ರಿಯಕ್ಕೆ ಸಂಬಂಧಪಟ್ಟ ವಿಷಯದಲ್ಲೆ ನಮಗೆ ತೃಪ್ತಿ. ಆಸೆಗಳನ್ನೇ ನಾವು ಯಾವಾಗಲೂ ಹಿಂಬಾಲಿಸುತ್ತಿರುವೆವು. ಆದಕಾರಣವೆ ನಾವು ಸತ್ಯವನ್ನು ಮಿಥ್ಯಾಮಂಜಿನಿಂದ ಮುಚ್ಚುವೆವು." ಇಲ್ಲಿ ಮಾಯೆ ಎಂಬ ಪದವನ್ನೇ ಉಪಯೋಗಿಸುವುದಿಲ್ಲ. ಆದರೆ ನಮ್ಮ ಅಜ್ಞಾನಕ್ಕೆ ಕಾರಣ ನಮಗೂ ಸತ್ಯಕ್ಕೂ ಮಧ್ಯೆ ಇರುವ ಒಂದು ಬಗೆಯ ಮಂಜು ಎಂಬ ಭಾವನೆ ಬರುವುದು. ಬಹಳಕಾಲವಾದಮೇಲೆ ಅತಿ ಈಚಿನ ಒಂದು ಉಪನಿಷತ್ತಿನಲ್ಲಿ ಮಾಯೆ ಪುನಃ ಗೋಚರಿಸುವುದು. ಆದರೆ ಇಷ್ಟುಹೊತ್ತಿಗೆ ಅದರಲ್ಲಿ ಒಂದು ಬದಲಾವಣೆ ಆಗಿತ್ತು. ಹೊಸ ಅರ್ಥ ಸಂಬಂಧ ಆಗಲೇ ಅದಕ್ಕೆ ಬಂದಿರುವುದು. ಹಲವು ಸಿದ್ಧಾಂತಗಳನ್ನು ಸೂಚಿಸಿರುವರು. ಅವನ್ನು ಪುನಃ ಪುನಃ ಒತ್ತಿಹೇಳಿರುವರು. ಹೊಸ ಸಿಂದ್ಧಾಂತಗಳನ್ನು ಅನುಸರಿಸಿರುವರು. ಕೊನೆಗೆ ಮಾಯೆಯ ಅರ್ಥ ನಿರ್ದಿಷ್ಟ

ವಾಯಿತು. ಶ್ವೇತಾಶ್ವತರ ಉಪನಿಷತ್ತಿನಲ್ಲಿ "ಪ್ರಕೃತಿಯೆ ಮಾಯೆ ಅದನ್ನು ಆಳುವವನೆ ಈಶ್ವರ ಎಂದು ತಿಳಿ" ಎಂದಿದೆ. ನಮ್ಮ ದಾರ್ಶನಿಕ ರಲ್ಲಿ ಪ್ರಖ್ಯಾತ ಶಂಕರಾಚಾರ್ಯರು ಬರುವವರೆಗೆ ಅದಕ್ಕೆ ಹಲವು ಬಗೆಯ ಅರ್ಥವನ್ನು ಕೊಟ್ಟಿರುವರು. ಬೌದ್ಧರೂ ಕೂಡ ಮಾಯೆಗೆ ಅರ್ಥ ಕಲ್ಪಿಸಲು ಪ್ರಯತ್ನ ಪಟ್ಟರು. ಆದರೆ ಬೌದ್ಧರ ಅರ್ಥ ಬಹುಮಟ್ಟಿಗೆ ಭಾವನಾವಾದಿಗಳ ಅರ್ಥದಂತೆ ಆಯಿತು. ಮಾಯೆಗೆ ಈಗ ಸಾಧಾರಣವಾಗಿ ಕೊಡುವ ಅರ್ಥವೇ ಇದು. ಪ್ರಪಂಚ ಮಾಯೆ ಎಂದು ಹಿಂದೂ ಹೇಳಿದರೆ, ತಕ್ಷಣವೇ ಜನರಿಗೆ ಇದೊಂದು ಭ್ರಾಂತಿ ಎಂಬ ಅರ್ಥ ಬರುವುದು. ಬೌದ್ಧ ತಾತ್ತ್ವಿಕ ರಿಂದ ಬಂದುದರಿಂದ ಆ ಅರ್ಥಕ್ಕೆ ಕೊಂಚ ಆಧಾರವಿದೆ. ಅವರಲ್ಲಿ ಒಂದು ವರ್ಗದವರು ಬಾಹ್ಯಪ್ರಪಂಚದಲ್ಲಿ ನಂಬುತ್ತಿರಲಿಲ್ಲ. ಆದರೆ ವೇದಾಂತದ ಮಾಯೆ ಎಂಬ ಪದಕ್ಕೆ ಸ್ಪಷ್ಟವಾಗಿ ನಿಂತ ಕೊನೆಯ ಅಭಿಪ್ರಾಯದಲ್ಲಿ ಅದು ಭಾವನಾವಾದವೂ ಅಲ್ಲ (Idealism) ಭಾವಸತ್ತಾವಾದವು ಅಲ್ಲ (Realism). ಅದೊಂದು ಸಿದ್ಧಾಂತವೂ ಅಲ್ಲ. ಅದು ಸುಮ್ಮನೆ ಕಂಡ ದ್ದನ್ನು ಕಂಡಂತೆ ಹೇಳುವುದು. ನಾವು ಏನಾಗಿರುವೆವು ಸುತ್ತಲೂ ಏನು ನೋಡುತ್ತೇವೆ ಹಾಗೆಯೆ ಹೇಳುವುದು. ವೇದ ಯಾರ ಮೂಲಕ ಬಂದಿತೋ ಆ ಋಷಿಗಳು ನಿಯಮಗಳನ್ನು ಕಂಡು ಹಿಡಿಯುವುದರಲ್ಲಿ, ಅದನ್ನು ಅನು ಸರಿಸುವುದರಲ್ಲಿ ನಿರತರಾಗಿದ್ದರು. ಅವರಿಗೆ ಸಣ್ಣ ಭಾಗಗಳನ್ನೆತ್ತಿಕೊಂಡು ವಿಚಾರಮಾಡುವುದಕ್ಕಾಲಿ, ಅವುಗಳಿಗಾಗಿ ಕಾಯುವುದಕ್ಕಾಗಲಿ ಅವರಿಗೆ ಸಮಯವಿರಲಿಲ್ಲ. ವಿಷಯಗಳ ಅಂತರಾಳಕ್ಕೆ ಹೋಗಲು ಅವರು ಕಾತರ ರಾಗಿದ್ದರು. ಯಾವುದೋ ಅತೀತವಾಣಿಯೊಂದು ಅವರನ್ನು ಕರೆಯುವಂತೆ ಇತ್ತು. ಅವರಿಗೆ ತಡಮಾಡಲು ಸಮಯವಿರಲಿಲ್ಲ. ನಾವು ಯಾವುದನ್ನು ಆಧುನಿಕ ವಿಜ್ಞಾನವೆನ್ನುವೆವೊ ಅತಂಹ ಭಾವನೆಗಳು ಉಪನಿಷತ್ತಿನಲ್ಲೆಲ್ಲ ಹಲವುಕಡೆ ಇವೆ. ಅವುಗಳ ವಿವರಣೆಗಳು ತಪ್ಪಾಗಿದ್ದರೂ ನಿಯಮ ಸತ್ಯ. ಆಧುನಿಕ ವಿಜ್ಞಾನದ ಅತಿ ನೂತನ ಆಕಾಶ ಸಿದ್ಧಾಂತದ ಭಾವನೆ, ನಮ್ಮ ಶಾಸ್ತ್ರದಲ್ಲಿ ಇತ್ತೀಚಿನ ಆಕಾಶ ಸಿದ್ಧಾಂತಕ್ಕಿಂತ (Theory of Ether) ಹೆಚ್ಚು ಸ್ಪಷ್ಟವಾಗಿದೆ. ಅದು ಕೇವಲ ಮೂಲತತ್ತ್ವಸ್ಥಿತಿಯಲ್ಲಿತ್ತು. ಆ ಸಿದ್ಧಾಂತದ ಆವಿರ್ಭಾವನೆಯನ್ನು ವ್ಯಕ್ತಗೊಳಿಸುವಾಗ ಅವರು ಹಲವು ತಪ್ಪುಮಾಡಿದರು. ಸರ್ವವ್ಯಾಪಿಯಾದ ಪ್ರಾಣಸಿದ್ಧಾಂತ, ಪ್ರಪಂಚ ದಲ್ಲಿರುವ ವಿಭಿನ್ನ ಜೀವಿಗಳು ಒಂದೇ ವಸ್ತುವಿನ ಹೆಚ್ಚು ಕಡಿಮೆ ಆವಿರ್ಭಾ ವನೆ ಎಂಬುದನ್ನು ವೇದಕಾಲದಲ್ಲಿ ತಿಳಿದುಕೊಂಡಿದ್ದರು. ಇದು

ಬ್ರಾಹ್ಮಣಗಳಲ್ಲಿ ಕೂಡ ದೊರಕುವುದು. ಸಂಹಿತೆಯಲ್ಲಿ ಪ್ರಾಣವನ್ನು ಸ್ತೋತ್ರಮಾಡುವ ದೊಡ್ಡದೊಂದು ಮಂತ್ರವಿದೆ. ಅದರಲ್ಲಿ ಈ ಜೀವನ ವೆಲ್ಲಾ ಪ್ರಾಣದ ಆವಿರ್ಭಾವನೆ ಎನ್ನುವರು. ಇನ್ನೊಂದು ವಿಷಯ; ಪ್ರಪಂಚದಲ್ಲಿ ಜೀವನದ ಆದಿಯನ್ನು ಕುರಿತ ಕೆಲವು ಸಿದ್ಧಾಂತಗಳು ವೈದಿಕ ದರ್ಶನಗಳಲ್ಲಿ ಬರುವುವು. ನಿಮ್ಮಲ್ಲಿ ಕೆಲವರಿಗೆ ಅದರಲ್ಲಿ ಆಸಕ್ತಿ ಇರ ಬಹುದು. ಆ ಸಿದ್ಧಾಂತಗಳು ಆಧುನಿಕ ಐರೋಪ್ಯರು ಸಾಧಿಸುವ ಕೆಲವು ಸಿದ್ಧಾಂತದಂತೆ ಇವೆ. ಬೇರೆ ಗ್ರಹದಿಂದ ಜೀವ ಇಲ್ಲಿಗೆ ಬಂತೆಂಬ ಒಂದು ಸಿದ್ಧಾಂತವಿದೆ. ನಿಮಗೆಲ್ಲಾ ಅದು ಗೊತ್ತಿರಬಹುದು. ಕೆಲವು ದಾರ್ಶನಿಕ ರಲ್ಲಿ ಜೀವನ ಈರೀತಿ ಭೂಮಿಗೆ ಚಂದ್ರನಿಂದ ಬರುವುದೆಂಬುದು ನಿರ್ವಿವಾದ ಸಿದ್ಧಾಂತವಾಗಿದೆ.

ಸಿದ್ಧಾಂತಗಳಿಗೆ ಬಂದರೆ, ವೇದಕಾಲದ ದಾರ್ಶನಿಕರು, ಸರ್ವ ವ್ಯಾಪಿಯಾದ ಪ್ರಮೇಯ ಸಿದ್ಧಾಂತಗಳನ್ನು (Generalised Principles) ಸಾಧಿಸುವುದರಲ್ಲಿ ಅತಿ ಸಾಮರ್ಥ್ಯರು, ಅದ್ಭುತ ಸಾಹಸಿಗಳೆಂಬು ದನ್ನು ನೋಡುತ್ತೇವೆ. ಬಾಹ್ಯವಿಶ್ವದೃಷ್ಟಿಯಿಂದ ಜಗತ್ತಿನ ರಹಸ್ಯಕ್ಕೆ ಅವರಿತ್ತ ಉತ್ತರ ಸಾಧ್ಯವಾದಷ್ಟು ತೃಪ್ತಿಕರವಾಗಿತ್ತು. ಆಧುನಿಕ ವಿಜ್ಞಾನದ ಕೂಲಂಕಶ ಪ್ರಯತ್ನಗಳು ಸಮಸ್ಯೆಯ ಪರಿಹಾರಕ್ಕೆ ಹತ್ತಿರ ವಾಗಿಲ್ಲ. ಏಕೆಂದರೆ ಅವರ ಮೂಲತತ್ತ್ವಗಳೇ ಸರಿಯಾಗಿಲ್ಲ. ಹಿಂದಿನ ಕಾಲದ ಆಕಾಶತತ್ತ್ವ ವಿಶ್ವರಹಸ್ಯ ಪರಿಹಾರಕ್ಕೆ ಸಮರ್ಪಕ ಉತ್ತರವನ್ನು ಕೊಡಲು ಅಸಾಧ್ಯವಾದರೆ, ಅದೇ ಸಿದ್ಧಾಂತವನ್ನೇ ಆಧುನಿಕ ಕಾಲದಲ್ಲಿ ಮತ್ತೂ ಕೂಲಂಕಶವಾಗಿ ಪರ್ಯಾಲೋಚಿಸಿದರೆ ಸತ್ಯವನ್ನು ಸಮೀಪಿಸ ಲಾರೆವು. ಸರ್ವವ್ಯಾಪಿಯಾದ ಪ್ರಾಣತತ್ತ್ವ ಈ ಪ್ರಪಂಚದ ಸಿದ್ಧಾಂತಕ್ಕೆ ಸಹಕಾರಿಯಾಗದೆ ಹೋದರೆ, ಅದೇ ಪ್ರಾಣತತ್ತ್ವವನ್ನು ವಿವರವಾಗಿ ಕುರಿತು ಪರ್ಯಾಲೋಚಿಸಿದರೆ ಇದೇನೂ ಹಿಂದಿನದಕ್ಕಿಂಲೂ ಮೇಲಲ್ಲ. ವಿವರಗಳು ವಿಶ್ವದ ಮೂಲತತ್ತ್ವವನ್ನು ಬದಲಾಯಿಸಲಾರವು. ನಾನು ಹೇಳುವುದೇನೆಂದರೆ ಹಿಂದೂ ದಾರ್ಶನಿಕರು ಮೂಲತತ್ತ್ವಾನ್ವೇಷಣೆಯಲ್ಲಿ ಆಧುನಿಕರಷ್ಟೇ ಧೈರ್ಯಶಾಲಿಗಳಾಗಿದ್ದರು. ಕೆಲವುವೇಳೆ ಅವರಿಗಿಂತಲೂ ಹೆಚ್ಚು ಸಾಹಸಿಗಳಾಗಿದ್ದರು. ಇದುವರೆಗೆ ನಮಗೆ ಇನ್ನೂ ದೊರಕದ ಉದಾತ್ತಪ್ರಮೇಯಗಳನ್ನು ಅವರು ಕಂಡುಹಿಡಿದರು. ಅವಲ್ಲಿ ಕೆಲವು ಇನ್ನೂ ಊಹೆಯ ಸ್ಥಿತಿಯಲ್ಲೇ ಇವೆ. ಆಧುನಿಕ ವಿಜ್ಞಾನಕ್ಕೆ ಈ ಊಹೆ ಕೂಡ ಇನ್ನೂ ದೊರೆಕಿಲ್ಲ. ಆಕಾಶಸಿದ್ಧಾಂತವನ್ನು ಮುಟ್ಟಿದುದು

ಮಾತ್ರವಲ್ಲ, ಅದನ್ನೂ ಮೀರಿಹೋಗಿ ಮನಸ್ಸನ್ನು ಕೂಡ ಸೂಕ್ಷ್ಮ ಆಕಾಶ ವೆಂದು ವರ್ಗೀಕರಿಸಿದರು. ಇದರಾಚೆಯೂ ಕೂಡ ಸೂಕ್ಷ್ಮತರ ಆಕಾಶ ತತ್ತ್ವಕ್ಕೆ ಹೋದರು. ಇದರಿಂದ ಪರಿಹಾರ ದೊರಕಲಿಲ್ಲ. ಇದು ಸಮಸ್ಯೆ ಯನ್ನು ಬಗೆಹರಿಸಲಿಲ್ಲ. ಬಾಹ್ಯಜಗತ್ತಿನ ಜ್ಞಾನಭಂಡಾರ ಎಷ್ಟಾದರೂ ಪ್ರಶ್ನೆಯನ್ನು ಬಗೆಹರಿಸದು. ವಿಜ್ಞಾನಿ ಹೀಗೆನ್ನುವನು : "ಈಗತಾನೆ ಸ್ವಲ್ಪ ಗೊತ್ತಾಗುತ್ತಿದೆ. ಕೆಲವು ಸಾವಿರ ವರುಷ ತಾಳಿ. ಉತ್ತರ ದೊರಕು ವುದು." ವೇದಾಂತಿ ಸಾಧ್ಯವಿಲ್ಲ ಎನ್ನುವನು. ಮನಸ್ಸಿಗೆ ಒಂದು ಪರಿಮಿತಿ ಇದೆ. ಕೆಲವು ಪರಿಮಿತಿಯನ್ನು ಮೀರಿ ಇದು ಹೋಗಲಾರದು. ಕಾಲ ದೇಶ ಕಾರ್ಯಕಾರಣಗಳನ್ನು ಇದು ಅತಿಕ್ರಮಿಸಲಾರದು ಎಂಬುದನ್ನು ನಿಸ್ಸಂದೇಹವಾಗಿ ತೋರಿರುವನು. ಯಾರು ತಮ್ಮ ದೇಹವನ್ನು ಮೀರಿ ನೆಗೆದು ಹೋಗಲಾರರೊ ಹಾಗೆಯೆ ಕಾಲದೇಶಗಳು ಯಾವ ನಿಯಮ ವನ್ನು ಇವನಿಗೆ ಕಲ್ಪಿಸಿವೆಯೋ ಅದನ್ನು ಮೀರಿ ಹೋಗಲಾರ. ಕಾಲ ದೇಶ ಕಾರ್ಯಕಾರಣಗಳ ನಿಯಮವನ್ನು ಬಗೆಹರಿಸುವ ಪ್ರತಿಯೊಂದು ಪ್ರಯತ್ನವೂ ನಿಷ್ಫಲವಾಗುವುದು. ಏಕೆಂದರೆ ಈ ಪ್ರಯತ್ನಮಾಡ ಬೇಕಾದರೇ ಈ ಮೂರನ್ನೂ ಒಪ್ಪಿಕೊಳ್ಳಬೇಕಾಗುವುದು. ಹಾಗಾದರೆ ಪ್ರಪಂಚವಿದೆ ಎಂದರೆ ಅರ್ಥವೇನು? ಪ್ರಪಂಚ ಇಲ್ಲ ಎಂದರೆ ಅರ್ಥ ವೇನು? ಎಂದರೆ ಇದು ನಿರಪೇಕ್ಷವಾಗಿ ಇಲ್ಲ ಎಂದು ಅರ್ಥ. ನನ್ನ ನಿನ್ನ ಮತ್ತು ಪ್ರತಿಯೊಬ್ಬರ ಮನಸ್ಸಿನ ದೃಷ್ಟಿಯಿಂದ ಪ್ರಪಂಚವಿದೆ. ನಾವು ಪಂಚೇಂದ್ರಿಯಗಳಮೂಲಕ ಪ್ರಪಂಚವನ್ನು ನೋಡುತ್ತಿರುವೆವು. ನಮಗೆ ಇನ್ನೊಂದು ಇಂದ್ರಿಯವಿದ್ದರೆ ಪ್ರಪಂಚದಲ್ಲಿ ನಾವು ಇನ್ನೂ ಹೆಚ್ಚು ನೋಡ ಬಹುದು. ನಮಗೆ ಮತ್ತೊಂದು ಇಂದ್ರಿಯವಿದ್ದರೆ ಪ್ರಪಂಚ ಮತ್ತೂ ಬೇರೆಯಾಗಿ ಕಾಣುವುದು. ಆದಕಾರಣ ಅದಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. ಪ್ರಪಂಚ ಅವಿಕಾರಿಯಲ್ಲ ಅಚಲವಲ್ಲ ಅನಂತವಲ್ಲ. ಇದನ್ನು ಇಲ್ಲ ವೆಂತಲೂ ಹೇಳಲಾಗುವುದಿಲ್ಲ. ಅದು ಇದೆ; ಅದರ ಮೂಲಕ ನಾವು ಕೆಲಸಮಾಡಬೇಕಾಗಿದೆ. ಅದು ಅಸ್ತಿನಾಸ್ತಿಗಳ ಒಂದು ಮಿಶ್ರ.

ಪಾರಮಾರ್ಥಿಕ ದೃಷ್ಟಿಯಿಂದ ವ್ಯಾವಹಾರಿಕಕ್ಕೆ, ನಮ್ಮ ಜೀವನದ ನಿತ್ಯಕಾರ್ಯಕ್ರಮಕ್ಕೆ ಬಂದರೆ, ನಮ್ಮ ಇಡೀ ಬಾಳು ಅಸ್ತಿ ಅದಕ್ಕೆ ವಿರೋಧ ವಾದ ನಾಸ್ತಿಗಳ ಮಿಶ್ರದಂತೆ ತೋರುವುದು. ನಮ್ಮ ಜ್ಞಾನದಲ್ಲಿ ಈ ವಿರೋಧವಿದೆ. ಇಚ್ಛೆಪಟ್ಟರೆ ಮನುಷ್ಯ ಎಲ್ಲವನ್ನೂ ಗ್ರಹಿಸಬಹುದು ಎಂದು ತೋರುವುದು. ಆದರೆ ಸ್ವಲ್ಪ ದೂರ ಹೋಗುವುದರೊಳಗೆ ತಾನು ಭೇದಿಸಿ ಹೋಗಲಾರದ ವಜ್ರಕೋಟೆ ಕಾಣುವುದು. ಅವನ ಕೆಲಸವೆಲ್ಲಾ

ಒಂದು ವೃತ್ತದೊಳಗೆ. ಅದನ್ನು ಅತಿಕ್ರಮಿಸಿ ಹೋಗಲಾರ. ತನ್ನ ಹೃದಯಕ್ಕೆ ಅತಿಹತ್ತಿರದಲ್ಲಿರುವ ಅತಿಪ್ರಿಯವಾದ ಸಮಸ್ಯೆಗಳು ಪರಿಹಾರಕ್ಕಾಗಿ ಹಗಲೂ ರಾತ್ರೆ ಅವನನ್ನು ಕರೆಯುತ್ತಿವೆ, ಬಲಾತ್ಕರಿಸುತ್ತಿವೆ. ಆದರೆ ಇದನ್ನು ಪರಿಹರಿಸಲಾರ. ಅವನು ಯುಕ್ತಿಯನ್ನು ಅತಿಕ್ರಮಿಸಿ ಹೋಗಲಾರ. ಅದೇ ಕಾರಣ. ಆದರೂ ಆಸೆ ಅವನ ಹೃದಯದಲ್ಲಿ ಬಲವಾಗಿ ಬೇರೂರಿದೆ. ಆಸೆಯನ್ನು ನಿಗ್ರಹಿಸಿ ನಮ್ಮ ಸ್ವಾಧೀನಕ್ಕೆ ತರುವುದರಿಂದ ಮಾತ್ರ ನಮಗೆ ಶ್ರೇಯಸ್ಕರವೆಂಬುದು ಗೊತ್ತಿದೆ. ಪ್ರತಿಕ್ಷಣದಲ್ಲಿಯೂ, ನಮ್ಮ ಹೃದಯದ ಪ್ರತಿಯೊಂದು ಭಾವನೆಯೂ ನಮ್ಮನ್ನು ಸ್ವಾರ್ಥಿಯಾಗು ಎನ್ನುವುದು. ಏಕಕಾಲದಲ್ಲೆ ನಮಗೆ ಅತೀತವಾದ ಮತ್ತೊಂದು ಶಕ್ತಿ ನಿಸ್ವಾರ್ಥತೆಯೊಂದೇ ಕಲ್ಯಾಣಕಾರಿ ಎನ್ನುವುದು. ಪ್ರತಿಯೊಂದು ಮಗುವೂ ಹುಟ್ಟು ಆಶಾವಾದಿ. ಸ್ವರ್ಣಕನಸುಗಳನ್ನು ಕಟ್ಟುವನು. ಯೌವನದಲ್ಲಿ ಮತ್ತೂ ಹೆಚ್ಚು ಆಶಾವಾದಿಯಾಗುವನು. ಯುವಕ ಮೃತ್ಯು ಎಂಬುದೊಂದಿದೆ, ಸೋಲು ಅವನತಿ ಇದೆ ಎಂದು ನಂಬಲಾರ. ವೃದ್ಧಾಪ್ಯ ಬರುವುದು. ಜೀವನ ಒಂದು ನಾಶದರಾಶಿಯಂತೆ ತೋರುವುದು. ಕನಸುಗಳು ಮಾಯವಾಗಿ ಮನುಷ್ಯ ನಿರಾಶಾವಾದಿಯಾಗುವನು. ಪ್ರಕೃತಿಯಿಂದ ತಾಡಿತರಾಗಿ ನಾವು ಎಲ್ಲಿ ಹೋಗುತ್ತಿರುವೆವು ಎಂದರಿಯದೆ ಒಂದು ಅತಿರೇಕದಿಂದ ಮತ್ತೊಂದು ಅತಿರೇಕಕ್ಕೆ ಹೋಗುವೆವು. ಲಲಿತವಿಸ್ತಾರವೆಂಬ ಬುದ್ಧನ ಜೀವನದಲ್ಲಿ ಬರುವ ಒಂದು ಹಾಡು ಜ್ಞಾಪಕಕ್ಕೆ ಬರುವುದು. ಗ್ರಂಥ ಮಾನವನ ಉದ್ಧಾರಕ್ಕೆ ಬುದ್ಧ ಜನ್ಮವೆತ್ತಿದನು ಎಂದು ಹೇಳಿದೆ. ಆದರೆ ಬುದ್ಧ ಅರಮನೆಯ ಸುಖಸಂಪತ್ತಿನಲ್ಲಿ ತನ್ಮಯನಾಗುವನು. ಕೆಲವು ದೇವದೂತರು ಅವನನ್ನು ಎಚ್ಚರಿಸುವುದಕ್ಕೆ ಒಂದು ಹಾಡನ್ನು ಹೇಳುವರು. ಆ ಹಾಡಿನ ಅರ್ಥವೇ, "ನಿಲ್ಲದೆ ವಿಶ್ರಮಿಸದೆ ಪ್ರತಿಕ್ಷಣವೂ ಬದಲಾಯಿಸುತ್ತಾ ಹರಿಯುತ್ತಿರುವ ಜೀವನದಿಯಮೇಲೆ ನಾವು ತೇಲಿ ಹೋಗುತ್ತಿರುವೆವು. ನಮ್ಮ ಜೀವನವೂ ಹೀಗೆ ಮುಂದೆ ಮುಂದೆ ಸಾಗುತ್ತಿದೆ. ವಿರಾಮವೆನ್ನುವುದೇ ಇಲ್ಲ." ನಾವೇನು ಮಾಡಬೇಕು? ತಿಂದು ಕುಡಿಯಲು ಬೇಕಾದಷ್ಟು ಇರುವವನು ಆಶಾವಾದಿ. ದುಃಖದ ಪ್ರಸಂಗದಿಂದ ದೂರವಾಗಿರಲು ಯತ್ನಿಸುವನು. ಅವನಿಗೆ ಅದನ್ನು ಕೇಳುವುದಕ್ಕೂ ಅಂಜಿಕೆ. ಪ್ರಪಂಚದ ಕಷ್ಟನಷ್ಟಗಳನ್ನು ಅವನಿಗೆ ಹೇಳಬೇಡಿ. ಎಲ್ಲಾ ಸರಿಯಾಗಿದೆ ಎಂದು ಹೇಳಿ. ಅತ, "ಹೌದು ನಾನು ಸುರಕ್ಷಿತವಾಗಿರುವೆನು. ನನ್ನನ್ನು ನೋಡಿ! ಇರಲು ಚೆನ್ನಾಗಿರುವ ಮನೆ ಇದೆ. ಉಪವಾಸ

ಚಳಿಗೆ ನಾನು ಅಂಜಬೇಕಾಗಿಲ್ಲ. ಹೃದಯ ವಿದ್ರಾವಕ ಚಿತ್ರ ನನ್ನ ಮುಂದೆ ತರಬೇಡಿ " ಎನ್ನುವನು. ಆದರೆ ಪ್ರಪಂಚದಲ್ಲಿ ಚಳಿ ಹಸಿವಿನಿಂದ ಸಾಯುತ್ತಿರುವವರು ಬೇಕಾದಷ್ಟು ಮಂದಿ ಇರುವರು. ಇದೆಲ್ಲ ಚೆನ್ನಾಗಿದೆ ಎಂದು ಅವರಿಗೆ ಹೇಳಿದರೆ ಅವರು ಕೇಳುವುದಿಲ್ಲ. ತಾವು ದುಃಖದಲ್ಲಿ ನರಳುವಾಗ ಇತರರು ಸುಖವಾಗಿರಲಿ ಎಂದು ಅವರು ಹೇಗೆ ಆಶಿಸಬಲ್ಲರು? ನಾವು ಆಶೆ ನಿರಾಶೆಗಳ ಮಧ್ಯದಲ್ಲಿ ತೂಗಾಡುತ್ತಿರುವೆವು.

ಮರಣವೆಂಬ ಭೀಕರಘಟನೆಯೊಂದು ಬೇರೆ ಇದೆ. ಪ್ರಪಂಚವೆಲ್ಲ ಮೃತ್ಯು ಸಮ್ಮುಖವಾಗಿ ಸಾಗುತ್ತಿದೆ. ಪ್ರಪಂಚದಲ್ಲಿ ಎಲ್ಲಾ ನಶಿಸುವುದು. ನಮ್ಮ ಅಭಿವೃದ್ಧಿ ಪ್ರತಿಷ್ಠೆ ನಮ್ಮ ವೈಭವ ಐಶ್ವರ್ಯ ಪಾಂಡಿತ್ಯ ಎಲ್ಲಕ್ಕೂ ಮೃತ್ಯುವಿನ ಅಂತ್ಯ ಒಂದಿದೆ. ಇದೊಂದೇ ಸತ್ಯ. ನಗರಗಳು ಆಗಿ ಹೋಗಿರುವುವು, ಚಕ್ರಾಧಿಪತ್ಯಗಳು ಏಳಿ ಉರುಳುವುವು. ಗ್ರಹಾವಳಿಗಳು ಚೂರು ಚೂರಾಗಿ ಧೂಳಿಕಣಗಳಾಗಿ ಇತರ ಗ್ರಹಗಳ ವಾತಾವರಣಕ್ಕೆ ಸಿಕ್ಕಿ ತೇಲಾಡುವುವು. ಅನಾದಿಯಿಂದಲೂ ಆಗುತ್ತಿರುವುದೇ ಹೀಗೆ. ಮೃತ್ಯುವೇ ಎಲ್ಲದರ ಅಂತ್ಯ. ಜೀವನ ಸೌಂದರ್ಯ ಅಧಿಕಾರ ಐಶ್ವರ್ಯ ಮತ್ತು ನಮ್ಮ ಸದ್ಗುಣಗಳ ಅಂತ್ಯವೂ ಕೂಡ ಮೃತ್ಯು. ಸಾಧುಪುರುಷರು ಸಾಯುವರು, ಪಾಪಿಗಳು ಸಾಯುವರು, ರಾಜರು ಸಾಯುವರು, ಭಿಕಾರಿಗಳು ಸಾಯುವರು. ಅವರೆಲ್ಲ ಮೃತ್ಯು ಮುಖದೆಡೆಗೆ ಹೋಗುತ್ತಿರುವರು. ಆದರೂ ಜೀವನದಮೇಲೆ ಪ್ರಚಂಡ ಅಭಿಮಾನವಿದೆ. ಅಂತೂ ಏಕೋ ನಮಗೆ ಗೊತ್ತಿಲ್ಲ ಜೀವನಕ್ಕೆ ಆಸಕ್ತರಾಗಿರುವೆವು. ನಾವು ತ್ಯಜಿಸಲಾರೆವು. ಇದೇ ಮಾಯೆ.

ತಾಯಿ ಮಗುವನ್ನು ಅತಿ ಜಾಗರೂಕತೆಯಿಂದ ಪೋಷಿಸುತ್ತಿರುವಳು. ಅವಳ ಮನಸ್ಸೆಲ್ಲಾ, ಪ್ರಾಣವೆಲ್ಲ ಮಗುವಿನಲ್ಲಿದೆ. ಮಗು ಬೆಳೆಯುವುದು, ಮನುಷ್ಯನಾಗುವುದು. ಬಹುಶಃ ಒಬ್ಬ ಪಾತಕಿಯೋ ನೀಚನೋ ಆಗಿ ಪ್ರತಿದಿನ ತಾಯನ್ನು ಒದೆಯುವನು, ಹೊಡೆಯುವನು. ಆದರೂ ತಾಯಿಗೆ ಮಗನ ಮೇಲೆ ಆಸಕ್ತಿ. ಅವಳ ಯುಕ್ತಿ ಜಾಗ್ರತವಾದಾಗ ಅದನ್ನು ಪ್ರೇಮವೆಂದು ಮುಚ್ಚುವಳು. ಅದು ಪ್ರೇಮವಲ್ಲ, ಮತ್ತಾವುದೊ ತನ್ನನ್ನು ಆಕ್ರಮಿಸಿದೆ, ಎಷ್ಟು ಪ್ರಯತ್ನ ಪಟ್ಟರೂ ಅದರಿಂದ ಪಾರಾಗಲು ಸಾಧ್ಯವಿಲ್ಲ, ತಾನಿರುವ ಬಂಧನವನ್ನು ಮೀರಿಹೋಗಲು ಅಸಾಧ್ಯ ಎಂಬುದನ್ನು ಅವಳು ಅರಿಯಳು. ಇದೇ ಮಾಯೆ.

ನಾವೆಲ್ಲ ಸ್ವರ್ಣಕನಸುಗಳನ್ನು ಹಿಂಬಾಲಿಸುತ್ತಿರುವೆವು. ಪ್ರತಿ

ಯೊಬ್ಬನೂ ಅದು ತನಗೆ ದಕ್ಕುವುದೆಂದು ಭಾವಿಸುವನು. ಯುಕ್ತಿಪರಿ ಜ್ಞಾನವುಳ್ಳ ಪ್ರತಿಯೊಬ್ಬನೂ ಇಪ್ಪತ್ತುಕೋಟಿಯಲ್ಲಿ ಒಂದು ಪಾಲು ತಾನು ಗೆಲ್ಲುವ ಸಂಭವವಿದೆ ಎಂದು ಭಾವಿಸಿದರೂ ಪ್ರತಿಯೊಬ್ಬರೂ ಅದಕ್ಕೆ ಹೋರಾಡುವರು. ಇದೇ ಮಾಯೆ.

ನಮ್ಮ ಪ್ರಪಂಚದಲ್ಲಿ ಹಗಲೂ ರಾತ್ರೆ ಮೃತ್ಯು ಸಂಚರಿಸುತ್ತಿದೆ. ಆದರೂ ನಾವು ಶಾಶ್ವತವಾಗಿ ಬಾಳುತ್ತೇವೆ ಎಂದು ಭಾವಿಸುವೆವು. ಯುಧಿಷ್ಠಿರ ಮಹಾರಾಜನನ್ನು ಒಮ್ಮೆ, "ಈ ಪ್ರಪಂಚದಲ್ಲಿ ಯಾವುದು ಅತಿವಿಚಿತ್ರವಿಷಯ" ಎಂದು ಪ್ರಶ್ನೆ ಕೇಳಿದರು. ಅದಕ್ಕೆ ರಾಜ, "ಪ್ರತಿದಿನ ಜನ ನಮ್ಮ ಸುತ್ತ ಸಾಯುತ್ತಿರುವರು. ಆದರೂ ಮನುಷ್ಯ ತಾನು ಸಾಯು ವುದಿಲ್ಲವೆಂದು ಭಾವಿಸುವನು" ಎಂದನು. ಇದೇ ಮಾಯೆ.

ನಮ್ಮ ಯುಕ್ತಿ ಜ್ಞಾನ ಜೀವನದ ಸರ್ವವಿಷಯಗಳಲ್ಲಿಯೂ ಈ ಪ್ರಚಂಡ ವಿರೋಧ ನಮ್ಮನ್ನು ಸುತ್ತಲೂ ಇದಿರಿಸುತ್ತದೆ. ಒಬ್ಬ ಸುಧಾರಕ ಏಳುವನು. ಒಂದು ದೇಶದಲ್ಲಿರುವ ಕೆಲವು ದೋಷಗಳನ್ನು ಪರಿಹರಿಸಲು ಯತ್ನಿಸುವರು. ಅದನ್ನು ಪರಿಹರಿಸುವುದಕ್ಕೆ ಮುಂಚೆ ಬೇರೊಂದು ಕಡೆ ಸಾವಿರಾರು ಇತರ ದೋಷಗಳೇಳುವುವು. ಇದು ಬೀಳುತ್ತಿರುವ ಹಳೆಯ ಮನೆಯಂತೆ. ಒಂದು ಕಡೆ ಸರಿಮಾಡಿದರೆ ಮತ್ತೊಂದು ಕಡೆ ಕುಸಿಯುವುದು. ಭರತಖಂಡದಲ್ಲಿ ನಮ್ಮ ಸುಧಾರಕರು ಬಲಾತ್ಕಾರ ವೈಧವ್ಯಕ್ಕೆ ವಿರೋಧವಾಗಿ ಬೇಕಾದಷ್ಟು ಕೂಗಾಡಿ ಬೋಧಿಸುವರು. ಪಾಶ್ಚಾತ್ಯರಲ್ಲಿ ಮದುವೆಯಾಗದೆ ಇರುವುದು ಒಂದು ಮಹಾದೋಷ. ಒಂದು ಕಡೆ ಮದುವೆಯಾಗದವರು ಇರುವರು. ಅವರು ವ್ಯಥೆಪಡುತ್ತಿರುವರು. ಅವರಿಗೆ ಸಹಾಯಮಾಡಿ. ಮತ್ತೊಂದು ಕಡೆ ವಿಧವೆಯರು ಇರುವರು, ಅವರು ವ್ಯಥೆಪಡುತ್ತಿರುವರು, ಅವರಿಗೆ ಸಹಾಯಮಾಡಿ. ಇದು ದೀರ್ಘ ಕಾಲದಿಂದ ಇರುವ ವಾತರೋಗದಂತೆ. ತಲೆಯಿಂದ ಓಡಿಸಿದರೆ ಕಾಲಿಗೆ ಹೋಗುವುದು. ಸುಧಾರಕರೆದ್ದು ವಿದ್ಯೆ ಐಶ್ವರ್ಯ ಸಂಸ್ಕೃತಿಯೆಲ್ಲಾ ಆರಿಸಿದ ಕೆಲವರಲ್ಲಿ ಇರಕೂಡದು ಎಂದು ಬೋಧಿಸುವರು. ಅದು ಎಲ್ಲರಿಗೂ ದೊರಕಲು ಇವರು ಸಾಧ್ಯವಾದಷ್ಟು ಪ್ರಯತ್ನಪಡುವರು. ಇದರಿಂದ ಕೆಲವರಿಗೆ ಹೆಚ್ಚು ಸಂತೋಷಪ್ರಾಪ್ತವಾಗಬಹುದು. ಬಹುಶಃ ಸಂಸ್ಕೃತಿ ಹೆಚ್ಚಿದಂತೆ ದೈಹಿಕಸುಖದಮೇಲೆ ಆಸಕ್ತಿ ತಗ್ಗಬಹುದು. ಸುಖದ ಜ್ಞಾನ ದುಃಖದ ಜ್ಞಾನವನ್ನೂ ತಗ್ಗಿಸುವುದು. ನಾವು ಯಾವ ದಾರಿಯಲ್ಲಿ ಹೋಗ ಬೇಕು. ನಮಗೆ ಸಿಕ್ಕಿರುವ ಸ್ವಲ್ಪ ಪ್ರಾಪಂಚಿಕ ಸೌಲಭ್ಯದಿಂದ ಮತ್ತೆಲ್ಲೋ

ಅಷ್ಟೆ ದುಃಖವಾಗುತ್ತಿದೆ. ಇದೇ ನಿಯಮ. ತರುಣರಿಗೆ ಇದು ಸ್ಪಷ್ಟವಾಗಿ ಕಾಣದೆ ಇರಬಹುದು. ಯಾರು ಹೆಚ್ಚುಕಾಲ ಬದುಕಿರುವರೋ ಹೋರಾಡಿರುವರೋ ಅವರಿಗೆ ಇದು ವೇದ್ಯ. ಇದೇ ಮಾಯೆ. ಹಗಲೂ ರಾತ್ರಿ ಇದು ನಡೆಯುತ್ತಿದೆ. ಈ ಸಮಸ್ಯೆಯನ್ನು ಬಗೆಹರಿಸುವುದೇ ಅಸಾಧ್ಯ. ಇದೇತಕ್ಕೆ ? ಇದಕ್ಕೆ ಉತ್ತರಕೊಡಲು ಸಾಧ್ಯವಿಲ್ಲ. ಪ್ರಶ್ನೆಯನ್ನು ನಾವು ಯುಕ್ತಿಪೂರಿತವಾಗಿ ಜೋಡಿಸಲಾರೆವು. ನಿಜವಾಗಿ ಹೇಗೆ, ಏತಕ್ಕೆ, ಎಂಬುದಿಲ್ಲ. ಅದು ಹೇಗೋ ಇದೆ, ಅದನ್ನು ನಾವು ಏನೂ ಮಾಡಲಾರೆವು. ಅದನ್ನು ತಿಳಿದುಕೊಳ್ಳುವುದಕ್ಕೆ, ಮನಸ್ಸಿನಲ್ಲಿ ಅದು ಹೀಗೆ ಇದೆ ಎಂದು ಕಲ್ಪಿಸಿಕೊಳ್ಳುವುದಕ್ಕೇ ನಮಗಾಗುವುದಿಲ್ಲ. ಹಾಗಾದರೆ ಅದನ್ನು ಬಗೆಹರಿಸುವುದು ಹೇಗೆ ?

ಪ್ರಪಂಚ ಹೇಗೆ ಸಾಗುತ್ತಿದೆ ಎಂಬುದನ್ನು ಹೇಳುವುದು ಮಾಯೆ. ಜನರಿಗೆ ಇದನ್ನು ಹೇಳಿದರೆ ಸಾಧಾರಣವಾಗಿ ಅಂಜುವರು. ಆದರೆ ನಾವು ಧೈರ್ಯವಾಗಿರಬೇಕು. ವಾಸ್ತವಿಕ ಅಂಶಗಳನ್ನು ಮರೆಮಾಚುವುದಲ್ಲ ಪರಿಹಾರಕ್ಕೆ ಉಪಾಯ. ನಾಯಿಗಳು ಬೆನ್ನಟ್ಟಿ ಬರುವಾಗ ಮೊಲ ತಲೆಯನ್ನು ಕೆಳಗೆ ತಗ್ಗಿಸಿ ನಾನು ಸುಖವಾಗಿರುವೆನೆಂದು ಭಾವಿಸುವುದು ನಿಮಗೆಲ್ಲ ಗೊತ್ತಿದೆ. ನಾವು ಆಶಾವಾದಿಗಳಾದಾಗ ಮೊಲದಂತೆ ಮಾಡುವೆವು. ಆದರೆ ಇದು ಪರಿಹಾರವಲ್ಲ. ಇದನ್ನು ಎಷ್ಟೋ ಜನ ವಿರೋಧಿಸುವರು. ಆದರೆ ಯಾರಿಗೆ ಹಲವು ಜೀವನದ ಸೌಲಭ್ಯಗಳಿವೆಯೋ ಅವರಿಂದ ಮಾತ್ರ ಈ ಆಕ್ಷೇಪಣೆ ಬರಬಹುದೆಂದು ನೀವು ಹೇಳಬಹುದು. ಇಂಗ್ಲೆಂಡಿನಲ್ಲಿ ನಿರಾಶಾವಾದಿಯಾಗುವುದು ಬಹಳ ಕಷ್ಟ. ಪ್ರಪಂಚ ಎಷ್ಟು ಚೆನ್ನಾಗಿದೆ, ಎಷ್ಟೊಂದು ಅಭಿವೃದ್ಧಿಯಾಗುತ್ತಿದೆ ಎಂದು ಎಲ್ಲರೂ ನನಗೆ ಹೇಳುವವರೆ. ಆದರೆ ನಿಜವಾಗಿ ಅವನು ಏನಾಗಿರುವನೋ ಅದು ಮಾತ್ರ ಅವನ ಪ್ರಪಂಚ. ಹಳೆಯ ಪ್ರಶ್ನೆಗಳೇಳುತ್ತವೆ. ಕ್ರೈಸ್ತಧರ್ಮ ಒಂದೇ ಪ್ರಪಂಚದಲ್ಲಿ ನಿಜವಾದ ಧರ್ಮ. ಏಕೆಂದರೆ ಕ್ರೈಸ್ತ ದೇಶಗಳು ಅಭಿವೃದ್ಧಿಯಲ್ಲಿವೆ. ಹೀಗೆ ಹೇಳುವುದೇ ಅದಕ್ಕೆ ವಿರೋಧವಾಗಿದೆ. ಕ್ರೈಸ್ತ ಜನಾಂಗದ ಉನ್ನತಿ ಕ್ರೈಸ್ತೇತರ ಜನಾಂಗದ ಅವನತಿಯಮೇಲೆ ನಿಂತಿದೆ. ಸೂರೆಮಾಡುವುದಕ್ಕೆ ಯಾರಾದರೂ ಒಬ್ಬರು ಹೊರಗೆ ಇರಬೇಕು. ಇಡೀ ಪ್ರಪಂಚ ಕ್ರೈಸ್ತರಾದರೆ ಅವರು ಬಡವರಾಗುವರು. ಏಕೆಂದರೆ ಸೂರೆ ಮಾಡುವುದಕ್ಕೆ ಕ್ರೈಸ್ತೇತರ ಜನಾಂಗಗಳು ಆಗ ಯಾವುದೂ ಇರುವುದಿಲ್ಲ. ಅವರ ವಾದ ಅವರ ನಾಶಕ್ಕೇ ಹೇತುವಾಗುವುದು. ಪ್ರಾಣಿಗಳು ಸಸ್ಯದ ಮೇಲೆ ಜೀವಿಸುವುವು. ಮನುಷ್ಯ ಪ್ರಾಣಿಯಮೇಲೆ ಜೀವಿಸುವನು. ಅತಿ

ಹೀನಾಯವಾದುದೆ ಮನುಷ್ಯ ಮನುಷ್ಯರಮೇಲೆ ಜೀವಿಸುವುದು, ಬಲಾಢ್ಯ ಬಲಹೀನನಮೇಲೆ ಜೀವಿಸುವುದು. ಪ್ರಪಂಚದಲ್ಲೆಲ್ಲಾ ಇದು ನಡೆಯು ತ್ತಿದೆ. ಇದೇ ಮಾಯೆ. ಇದಕ್ಕೇನು ಪರಿಹಾರ? ಪ್ರತಿದಿನ ಹಲವು ಸಮಾಧಾನ ಕೇಳುವೆವು. ಕೊನೆಗೆ ಎಲ್ಲಾ ಶುಭವಾಗುವುದು ಎಂದು ಹೇಳುವರು. ಇದು ಸಾಧ್ಯವೆಂದು ಒಪ್ಪಿಕೊಂಡರೂ, ಈ ರಾಕ್ಷಸೀಯ ರೀತಿಯೆ ಏತಕ್ಕೆ ಶುಭವನ್ನು ಮಾಡಬೇಕು. ಇಂತಹ ಆಸುರೀ ಮಾರ್ಗ ತೊರೆದು ಶುಭವನ್ನು ಶುಭದಮೂಲಕ ಸಾಧಿಸಲು ಆಗುವುದಿಲ್ಲವೆ? ಭವಿಷ್ಯದಲ್ಲಿ ಬರುವ ಮಾನವರ ವಂಶಜರು ಸುಖವಾಗಿರುವರು. ಆದರೆ ಈಗ ಏತಕ್ಕೆ ಇಷ್ಟೊಂದು ಕಷ್ಟವಿರಬೇಕು? ಇದಕ್ಕೆ ಪರಿಹಾರವಿಲ್ಲ. ಇದೇ ಮಾಯೆ. ಪಾಪವನ್ನು ಕಡಿಮೆಮಾಡುವುದು, ಪ್ರಪಂಚದಲ್ಲಿ ಕ್ರಮೇಣ ಈ ಪಾಪ ತಗ್ಗುತ್ತಾಹೋದರೆ ಕೊನೆಗೆ ಒಳ್ಳೆಯದು ಮಾತ್ರ ಉಳಿಯುವುದು ಎಂದು ವಿಕಾಸವಾದ ಹೇಳುವುದನ್ನು ಕೇಳುವೆವು. ಇದು ಕೇಳುವುದಕ್ಕೇನೊ ಹಿತಕರವಾಗಿದೆ. ಯಾರಿಗೆ ಬೇಕಾದಷ್ಟು ಪ್ರಪಂಚದ ಸೌಲಭ್ಯಗಳಿವೆಯೊ, ಪ್ರತಿದಿನ ಯಾರು ಕಷ್ಟವನ್ನು ಅನುಭವಿಸಬೇಕಾ ಗಿಲ್ಲವೊ, ವಿಕಾಸವೆಂಬ ಮಹಾಚಕ್ರದಡಿಯಲ್ಲಿ ಸಿಕ್ಕಿ ನುಚ್ಚುನೂರಾಗಿಲ್ಲವೊ, ಅಂತಹ ಪ್ರತಿಷ್ಠಾವಂತರಿಗೆ ತೃಪ್ತಿತರಬಲ್ಲದು. ಇಂತಹ ಕೆಲವು ಅದೃಷ್ಟ ವಂತರಿಗೇನೋ ಇದರಿಂದ ಸಮಾಧಾನ ದೊರಕಬಹುದು. ಜನಸಾಧಾರ ಣರು ಕಷ್ಟಪಡಬಹುದು. ಅದನ್ನು ಅವರು ಲೆಕ್ಕಿಸುವುದಿಲ್ಲ. ಅವರು ಸತ್ತರೂ ಚಿಂತೆಯಿಲ್ಲ. ಅದರಿಂದ ಏನೂ ನಷ್ಟವಿಲ್ಲ. ಅದೇನೊ ಒಳ್ಳೆಯದೆ. ಆದರೆ ಮೊದಲಿನಿಂದ ಕೊನೆಯವರೆಗೆ ಈ ವಾದ ಅಸಂಬದ್ಧವಾಗಿದೆ. ಮೊದಲನೆಯದೇ, ಈ ಪ್ರಪಂಚದಲ್ಲಿ ವ್ಯಕ್ತವಾಗಿರುವ ಒಳ್ಳೆಯದು ಕೆಟ್ಟದ್ದು ಎರಡೂ ನಿರಪೇಕ್ಷವಾಗಿ ಸತ್ಯವೆಂದು ಊಹಿಸುವುದು. ಎರಡನೆಯದು ಮೊದಲಿನದಕ್ಕಿಂತಲೂ ಅಸಂಬದ್ಧ. ಹೇಳಿಕೆಯನ್ನು ಸಾಧಿಸಲೆತ್ನಿಸುವುದು. ಅದೇ ಒಳ್ಳೆಯದು ಹೆಚ್ಚಾಗುತ್ತಿದೆ ಕೆಟ್ಟದ್ದು ಕಡಮೆಯಾಗುತ್ತಿದೆ ಎಂಬುದು. ಈರೀತಿ ವಿಕಾಸವಾಗುತ್ತಿರುವಾಗ ಕೆಟ್ಟದ್ದು ಕ್ರಮೇಣ ಕಡಮೆ ಯಾಗುತ್ತಿದ್ದರೆ ಕೊನೆಗೆ ಕೆಟ್ಟದ್ದೇ ಇಲ್ಲದೆ ಎಲ್ಲಾ ಒಳ್ಳೆಯದಾಗಿರುವ ಕಾಲ ವೊಂದು ಬರುವುದೆಂದು ಅವರು ಭಾವಿಸುವರು. ಹೀಗೆ ಹೇಳುವುದೇನೋ ಸುಲಭ. ಕೆಟ್ಟದ್ದು ಕಡಮೆಯಾಗುತ್ತಿದೆ ಎಂಬುದನ್ನು ಸಿದ್ಧಾಂತಮಾಡಲು ಸಾಧ್ಯವೆ? ಕಾಡಿನಲ್ಲಿ ವಾಸಮಾಡುವ ಒಬ್ಬ ಮನುಷ್ಯನನ್ನು ತೆಗೆದುಕೊಳ್ಳಿ. ಅವನಿಗೆ ತನ್ನ ಮನಸ್ಸನ್ನು ಹೇಗೆ ರೂಢಿಸಬೇಕೆಂಬುದು ಗೊತ್ತಿಲ್ಲ. ಒಂದು ಪುಸ್ತಕವನ್ನು ಓದಿಲ್ಲ; ಬರೆಹದ ಹೆಸರನ್ನೇ ಕೇಳಿಲ್ಲ. ತುಂಬಾ ಗಾಯ

ಗೊಂಡರೂ ಬಹಳ ಬೇಗ ಗುಣಮುಖವಾಗುವನು. ಆದರೆ ನಮಗೆ ಏನಾದರೂ ಗೀರಿದರೆ ಸಾಯುವೆವು. ಯಂತ್ರಗಳು ವಸ್ತುವನ್ನು ಸುಲಭವಾಗಿ ತಯಾರಿಸುತ್ತಿರುವುವು. ಅಭಿವೃದ್ಧಿ ಮತ್ತು ವಿಕಾಸಕ್ಕೆ ಸಹಾಯಮಾಡುತ್ತಿವೆ. ಒಬ್ಬ ಶ್ರೀಮಂತನಾಗುವುದಕ್ಕೆ ಕೋಟ್ಯಂತರ ಜನ ಬಲಿಯಾಗುತ್ತಿರುವರು. ಏಕಕಾಲದಲ್ಲಿ ಸಹಸ್ರಾರು ಜನ ದಿನದಿನವೂ ದರಿದ್ರರಾಗುತ್ತಾ ಬರುತ್ತಿರುವರು, ಲೆಕ್ಕವಿಲ್ಲದಷ್ಟು ಮಂದಿ ಗುಲಾಮರಾಗುತ್ತಿರುವರು. ಈ ರೀತಿ ನಡೆಯುತ್ತಿದೆ. ಮೃಗೀಯ ಮನುಷ್ಯ ಇಂದ್ರಿಯಗಳಲ್ಲಿ ಜೀವಿಸುವನು. ತಿನ್ನಲು ಸಾಕಾದಷ್ಟು ದೊರೆಯದೆ ಇದ್ದರೆ ಅವನು ವ್ಯಥೆಪಡುವನು. ದೇಹಕ್ಕೆ ಏನಾದರೂ ಆದರೆ ವ್ಯಥೆಪಡುವನು. ಅವನ ಸುಖದುಃಖಗಳೆರಡಕ್ಕೂ ಇಂದ್ರಿಯಗಳೇ ಆದಿ ಅಂತ್ಯ. ಈ ಮನುಷ್ಯ ಅಭಿವೃದ್ಧಿಯಾದರೆ, ಅವನ ಸುಖಕ್ಷೇತ್ರ ವಿಸ್ತಾರವಾಗುತ್ತಾ ಬಂದರೆ, ಅವನ ದುಃಖಕ್ಷೇತ್ರವೂ ಅದಕ್ಕೆ ಸರಿಪ್ರಮಾಣದಲ್ಲಿ ವಿಸ್ತಾರವಾಗುವುದು. ಕಾಡಿನಲ್ಲಿ ಮನುಷ್ಯನಿಗೆ ಅಸೂಯೆ ಎಂದರೇನು ಗೊತ್ತಿಲ್ಲ. ಕೋರ್ಟು ಕಚೇರಿ ಗೊತ್ತಿಲ್ಲ, ಕಂದಾಯ ಗೊತ್ತಿಲ್ಲ, ಸಮಾಜದಿಂದ ಆಕ್ಷೇಪಣೆ ಕೇಳುವುದಿಲ್ಲ. ಪ್ರತಿಯೊಬ್ಬ ಮಾನವ ಹೃದಯವನ್ನು ಭೇದಿಸಿ ಅವನ ರಹಸ್ಯಗಳನ್ನು ಅರಿಯುವಂತೆ ಮಾಡುವ ಪ್ರಚಂಡ ಆಸುರೀ ಹಿಂಸೆಗೆ ರಾತ್ರಿ ಹಗಲು ಒಳಗಾಗುವುದೆಂದರೇನು ಗೊತ್ತಿಲ್ಲ. ಮಾನವ ತನ್ನ ಪಾಂಡಿತ್ಯದ ಅಭಿಮಾನವನ್ನು ಬೇಕಾದಷ್ಟು ಹೆಮ್ಮೆ ಕೊಚ್ಚಿಕೊಂಡರೂ, ಮೃಗಕ್ಕಿಂತ ಸಾವಿರಪಾಲು ಕ್ರೂರವಾಗಿ ಏತಕ್ಕೆ ಆಗುತ್ತಾನೆ ಎಂಬುದನ್ನು ಅವನು ಅರಿಯನು. ನಾವು ಇಂದ್ರಿಯಗಳಿಂದ ಪಾರಾದರೆ ಉತ್ತಮ ವಿಧದ ಸುಖವನ್ನು ರೂಢಿಸುವೆವು. ಅದರೊಡನೆ ಹೆಚ್ಚು ಸಂಕಟವನ್ನೂ ಅನುಭವಿಸಬೇಕಾಗಿದೆ. ನಮ್ಮ ನರಗಳು ಹೆಚ್ಚು ಸೂಕ್ಷ್ಮವಾಗಿ ಹೆಚ್ಚು ದುಃಖವನ್ನು ಅನುಭವಿಸುವ ಸ್ಥಿತಿಗೆ ಬರುವುವು. ಪ್ರತಿಯೊಂದು ಸಮಾಜದಲ್ಲಿಯೂ ಸಾಧಾರಣ ಅಜ್ಞಾನಿಯನ್ನು ನಿಂದಿಸಿದರೆ ಅವನು ಅದನ್ನು ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ, ಆದರೆ ಬಲವಾಗಿ ಪೆಟ್ಟುಕೊಟ್ಟರೆ ವ್ಯಥೆಪಡುವುದು ಕಾಣುವುದು. ಆದರೆ ಭದ್ರ ಮನುಷ್ಯ ಒಂದು ನಿಂದೆಯ ನುಡಿಯನ್ನೂ ಕೇಳಲಾರ. ಅವನ ನರಗಳು ಅಷ್ಟು ಸೂಕ್ಷ್ಮವಾಗಿವೆ. ಹೆಚ್ಚು ಅವನು ಸುಖಕ್ಕೆ ಈಡಾದಂತೆ ದುಃಖವೂ ಹೆಚ್ಚಿದೆ. ವಿಕಾಸವಾದಿಗಳ ಸಿದ್ಧಾಂತವನ್ನು ಇದು ರುಜುವಾತುಪಡಿಸಲಾರದು. ಸುಖಪಡುವುದಕ್ಕೆ ನಾವು ಹೆಚ್ಚು ಶಕ್ತರಾದಷ್ಟೂ ದುಃಖಪಡುವುದಕ್ಕೂ ಹೆಚ್ಚುವುದು. ಸುಖಪಡುವುದಕ್ಕೆ ನಮ್ಮ ಶಕ್ತಿ ಒಂದು ಪ್ರಮಾಣ

ದಲ್ಲಿ ಹೆಚ್ಚಿದರೆ, ದುಃಖಪಡುವುದಕ್ಕೆ ಹತ್ತರಷ್ಟು ಹೆಚ್ಚುವುದೆಂದು ಕೆಲವು ವೇಳೆ ನಾನು ಭಾವಿಸುವೆನು. ಮುಂದುವರಿಯುತ್ತಿರುವ ನಮಗೆ ಹೆಚ್ಚು ಮುಂದುವರಿದಷ್ಟೂ ಸುಖದುಃಖಗಳಿಗೆ ಅವಕಾಶ ಹೆಚ್ಚುವುದೆಂಬುದು ಗೊತ್ತಿದೆ. ಇದೇ ಮಾಯೆ.

ಮಾಯೆ, ಪ್ರಪಂಚವನ್ನು ವಿವರಿಸುವ ಒಂದು ಸಿದ್ಧಾಂತವಲ್ಲ. ಪ್ರಪಂಚ ಇರುವ ಸ್ಥಿತಿಯನ್ನು ಮಾತ್ರ ಹೇಳುವುದೆಂದು ಕಾಣುವುದು. ನಮ್ಮ ಜೀವನದ ಮೂಲವೆ ವಿರೋಧವಾಗಿದೆ. ಎಲ್ಲಾ ಕಡೆಯಲ್ಲಿಯೂ ಈ ಪ್ರಚಂಡ ವಿರೋಧವನ್ನು ಎದುರಿಸಬೇಕಾಗಿದೆ. ಒಳ್ಳೆಯದು ಇರುವ ಕಡೆ ಕೆಟ್ಟದ್ದೂ ಇರಬೇಕಾಗಿದೆ, ಜೀವನ ಇರುವಕಡೆ ಮರಣ ಅದರ ನೆರಳಿನಂತೆ ಹಿಂಬಾಲಿಸಬೇಕು. ನಗುವವರೆಲ್ಲ ಅಳಲೇಬೇಕು, ಅಳುವವರೆಲ್ಲ ನಗಲೂ ಬೇಕು. ಈ ಸ್ಥಿತಿಯನ್ನು ನಾವು ಬದಲಾಯಿಸುವುದಕ್ಕೆ ಆಗುವುದಿಲ್ಲ. ಬರೀ ಒಳ್ಳೆಯದೇ ಇರುವುದು ಕೆಟ್ಟದ್ದು ಇಲ್ಲ, ನಾವುಯಾವಾಗಲೂ ಅಳುವೆವು ನಗುವುದಿಲ್ಲ, ಇಂತಹ ಒಂದು ಸ್ಥಳ ಇದೆ ಎಂದು ನಾವು ಕಲ್ಪಿಸಿಕೊಳ್ಳಬಹುದು. ಸ್ವಭಾವತಃ ಇದು ಅಸಾಧ್ಯ. ಪರಿಸ್ಥಿತಿ ಒಂದೇ ಸಮನಾಗಿರುವುದು. ನಮ್ಮನ್ನು ನಗಿಸುವ ಶಕ್ತಿ ಎಲ್ಲಿದ್ದರೂ, ಅಲ್ಲೇ ದುಃಖವನ್ನು ಕೆರಳಿಸುವ ಶಕ್ತಿಯೂ ಗುಪ್ತಗಾಮಿಯಾಗಿರುವುದು.

ವೇದಾಂತತತ್ತ್ವ ಆದಕಾರಣ ಆಶಾವಾದಿಯೂ ಅಲ್ಲ ನಿರಾಶವಾದಿಯೂ ಅಲ್ಲ. ಉಭಯ ದೃಷ್ಟಿಯನ್ನೂ ಅದು ವ್ಯಕ್ತಗೊಳಿಸುವುದು, ಸ್ಥಿತಿ ಇರುವಂತೆ ಸ್ವೀಕರಿಸುವುದು. ಈ ಪ್ರಪಂಚ ಒಳ್ಳೆಯದು ಕೆಟ್ಟದ್ದು ಸುಖದುಃಖಗಳ ಮಿಶ್ರ, ಒಂದನ್ನು ಹೆಚ್ಚಿಸಿದರೆ ಮತ್ತೊಂದನ್ನೂ ಹೆಚ್ಚಿಸಲೇ ಬೇಕಾಗುವುದು. ಬರೀ ಒಳ್ಳೆಯ ಅಥವಾ ಕೆಟ್ಟ ಪ್ರಪಂಚ ಎಂದಿಗೂ ಇರಲಾರದು. ಈ ಭಾವನೆಯೇ ಅಸಮಂಜಸ. ಈ ವಿಭಜನೆಯಿಂದ ಒಳ್ಳೆಯದು ಕೆಟ್ಟದ್ದು ಬೇರೆ ಬೇರೆ ಇಲ್ಲ ಎಂಬ ರಹಸ್ಯ ನಮಗೆ ಗೊತ್ತಾಗುವುದು. ಪ್ರಪಂಚದಲ್ಲಿ ಯಾವ ಒಂದನ್ನೂ ನೀವು ಕೇವಲ ಒಳ್ಳೆಯದು ಎಂದಾಗಲೀ ಅಥವಾ ಕೇವಲ ಕೆಟ್ಟದ್ದು ಎಂದು ಆಗಲೀ ಕರೆಯಲಾರಿರಿ. ಈಗ ಒಳ್ಳೆಯದರಂತೆ ಕಾಣುತ್ತಿರುವ ಘಟನೆ, ನಾಳೆ ಕೆಟ್ಟದ್ದರಂತೆ ಕಾಣಬಹುದು. ಒಬ್ಬನಿಗೆ ದುಃಖವನ್ನು ಕೊಡುವುದೇ ಮತ್ತೊಬ್ಬನಿಗೆ ಸುಖವನ್ನು ಕೊಡುವುದು. ಮಗುವನ್ನು ಸುಡುವ ಬೆಂಕಿ ಹಸಿದವನಿಗೆ ಒಳ್ಳೆಯ ಅಡಿಗೆ ಮಾಡಲು ಸಹಕಾರಿಯಾಗುವುದು. ದುಃಖದ ಸಂವೇದನೆ ತರುವ ನರಗಳೇ ಸುಖದ ಸಂವೇದನೆ ತರುತ್ತವೆ. ಕೆಟ್ಟದ್ದನ್ನು ನಿಲ್ಲಿಸಬೇಕಾದರೆ ಒಳ್ಳೆಯ

ವನ್ನೂ ನಿಲ್ಲಿಸಬೇಕು. ಬೇರೆ ಮಾರ್ಗವೇ ಇಲ್ಲ. ಮರಣವಿಲ್ಲದಂತೆ ಮಾಡಬೇಕಾದರೆ ಜನನವೂ ಇಲ್ಲದಂತೆ ಮಾಡಬೇಕು. ಮರಣವಿಲ್ಲದ ಸುಖ ವಿರೋಧಪದ. ಇದರಲ್ಲಿ ಯಾವುದನ್ನೂ ನಾವು ಪ್ರತ್ಯೇಕ ಪಡೆಯು ಲಾರೆವು. ದ್ವಂದ್ವಗಳೆರಡೂ ಒಂದೇ ವಸ್ತುವಿನ ಬೇರೆ ಬೇರೆ ಆವಿ ರ್ಭಾವನೆ. ನೆನ್ನೆ ಯಾವುದನ್ನು ನಾನು ಒಳ್ಳೆಯದೆಂದು ಯೋಚಿಸಿದ್ದೆನೊ ಅದನ್ನೇ ಇಂದು ಒಳ್ಳೆಯದೆಂದು ಯೋಚಿಸುವುದಿಲ್ಲ. ಒನ್ನೊಂದು ಕಾಲ ದಲ್ಲಿಯೂ ನನ್ನ ಆದರ್ಶವೇನಾಗಿತ್ತು ಎಂದು ನನ್ನ ಜೀವನವನ್ನು ಪರೀಕ್ಷಿಸಿ ನೋಡಿದರೆ ಇದು ಹಾಗೆಯೇ ತೋರುವುದು. ಒಂದಾನೊಂದು ಕಾಲದಲ್ಲಿ ನನ್ನ ಜೀವನದ ಆದರ್ಶ ಒಂದು ಜೊತೆ ಬಲವಾದ ಕುದುರೆ ಹೊಡೆಯುವು ದಾಗಿತ್ತು. ಬೇರೊಂದು ಸಮಯದಲ್ಲಿ ನನಗೆ ಒಂದು ಬಗೆಯ ಮಿಠಾಯಿ ಮಾಡುವುದಕ್ಕೆ ಬಂದರೆ ನನಗೆ ಪರಮಸಂತೋಷವಾಗುವುದೆಂದು ಭಾವಿ ಸಿದ್ದೆ. ಅನಂತರ ಒಬ್ಬ ಹೆಂಡತಿ, ಮಕ್ಕಳು, ಬೇಕಾದಷ್ಟು ದ್ರವ್ಯವಿದ್ದರೆ ಇನ್ನಾವ ಕೊರತೆಯೂ ನನಗೆ ಇಲ್ಲವೆಂದು ಭಾವಿಸಿದ್ದೆ. ಇಂದು ಅವೆಲ್ಲ ಕೆಲಸಕ್ಕೆ ಬಾರದ ಹುಡುಗಾಟವೆಂದು ನಗುವೆನು. ನಾವು ಹಿಂತಿರುಗಿ ನೋಡಿ ನಮ್ಮ ವ್ಯಕ್ತಿತ್ವವನ್ನು ತ್ಯಜಿಸುವಂತೆ ಮಾಡುವ ಆದರ್ಶಗಳಿಗೆ ಅಂಜಿದುದನ್ನು ಈಗ ನೋಡಿ ನಗುವ ಒಂದು ಸಮಯ ಬರಲೇ ಬೇಕು ಎನ್ನುವುದು ವೇದಾಂತ. ಪ್ರತಿಯೊಬ್ಬರೂ ದೇಹವನ್ನು ಶಾಶ್ವತವಾಗಿ ಇಟ್ಟು ಕೊಂಡಿರಬೇಕು. ಇದರಿಂದ ನಮಗೆ ಬಹಳ ಸುಖವಾಗುವುದೆಂದು ಭಾವಿಸು ವೆವು. ಆದರೆ ಈ ಭಾವನೆಗಳನ್ನು ನೋಡಿ ನಗುವ ಸಮಯ ಒಂದು ಬರುವುದು. ಇದು ಸತ್ಯವಾದರೆ ನಾವಿಂದು ಬಗೆಹರಿಸಲಾಗದ ವಿರೋಧಗಳ ತುಮುಲದಲ್ಲಿರುವೆವು. ಅಸ್ತಿತ್ವವಿಲ್ಲ ನಾಸ್ತಿತ್ವವಿಲ್ಲ, ದುಃಖವಿಲ್ಲ ಸುಖವಿಲ್ಲ, ಇರುವುದೆಲ್ಲ ಅವುಗಳ ಒಂದು ಮಿಶ್ರ. ಹಾಗಾದರೆ ವೇದಾಂತತತ್ತ್ವ ಮತ್ತು ಧರ್ಮಗಳಿಂದ ಪ್ರಯೋಜನವೇನು ? ಎಲ್ಲಕ್ಕಿಂತ ಸತ್ಕರ್ಮದಿಂದ ಪ್ರಯೋಜನವೇನು ? ಮನಸ್ಸಿಗೆ ಬರುವ ಪ್ರಶ್ನೆಯೇ ಇದು. ಕೆಟ್ಟದ್ದನ್ನು ಮಾಡದೆ ಒಳ್ಳೆಯದನ್ನು ಮಾಡಲು ಸಾಧ್ಯವಿಲ್ಲ. ಸುಖಕ್ಕೆ ಪ್ರಯತ್ನಿಸಿ ದಾಗಲೆಲ್ಲಾ ದುಖಃವೂ ಬರುವುದು ಎಂಬುದು ಸತ್ಯವಾದರೆ, "ಒಳ್ಳೆಯ ದನ್ನು ಏತಕ್ಕೆ ಮಾಡಬೇಕು ?" ಎಂದು ಜನ ಕೇಳುವರು. ಅದಕ್ಕೆ ಉತ್ತರವೆ, ಮೊದಲು ನಾವು ದುಃಖವನ್ನು ತಗ್ಗಿಸುವುದಕ್ಕೆ ಕರ್ಮ ಮಾಡ ಬೇಕು. ಇದೊಂದೇ ನಮ್ಮ ಸುಖಕ್ಕೆ ಮಾರ್ಗ. ಪ್ರತಿಯೊಬ್ಬರೂ ನಮ್ಮ ಜೀವನದಲ್ಲಿ ಇಂದೋ ನಾಳೆಯೋ ಅದನ್ನು ಕಂಡುಕೊಳ್ಳುವೆವು. ಬುದ್ಧಿ

ವಂತರು ಅದನ್ನೆ ಬೇಗ ತಿಳಿದುಕೊಳ್ಳುವರು, ದಡ್ಡರು ನಿಧಾನವಾಗಿ ತಿಳಿದು ಕೊಳ್ಳುವರು. ದಡ್ಡರು ಇದನ್ನು ತಿಳಿದುಕೊಳ್ಳುವುದಕ್ಕೆ ಬಹಳ ವ್ಯಥೆಪಡ ಬೇಕು, ಬುದ್ಧಿವಂತರು ಕಡಿಮೆ ವ್ಯಥೆಪಡಬೇಕು. ಎರಡನೆಯದಾಗಿ ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಾವು ಮಾಡಲೇ ಬೇಕು. ನಾವು ನಮ್ಮ ಕನಸಿನಿಂದ ಜಾಗ್ರತರಾಗಿ ಪ್ರಪಂಚದ ಆಟವನ್ನು ತೊರೆಯುವ ವರೆಗೂ ಒಳ್ಳೆಯ ಕೆಟ್ಟ ಶಕ್ತಿಗಳೆರಡೂ ಪ್ರಪಂಚವನ್ನು ನಮಗೆ ವಾಸ್ತವಿಕ ವಾಗಿಟ್ಟಿರುವುವು. ಈ ಪಾಠ ನಾವು ಕಲಿಯಬೇಕಾಗಿದೆ. ಇದನ್ನು ಕಲಿಯು ವುದಕ್ಕೆ ದೀರ್ಘಕಾಲ ಬೇಕು. ಸಾಂತ ಅನಂತನಾಗಿದೆ ಎಂಬ ಆಧಾರದ ಮೇಲೆ ಒಂದು ಸಿದ್ಧಾಂತವನ್ನು ಪ್ರಚಾರಕ್ಕೆ ತರಲು ಜರ್ಮನಿಯಲ್ಲಿ ಪ್ರಯತ್ನಗಳಾಗಿವೆ. ಇಂಗ್ಲೆಂಡಿನಲ್ಲಿಯೂ ಈ ಪ್ರಯತ್ನಗಳಾಗಿವೆ. ಈ ತಾತ್ತ್ವಿಕರ ಪಕ್ಷದ ಸಾರಾಂಶವಿದು : ಅನಂತ ಸೃಷ್ಟಿಯಲ್ಲಿ ವ್ಯಕ್ತವಾಗಲು ಪ್ರಯತ್ನಿಸುತ್ತಿದೆ, ಹೀಗೆ ಮಾಡುವಾಗ ಉತ್ತೀರ್ಣವಾಗುವ ಕಾಲವೊಂದು ಬರುವುದು ಎಂದು ಅವರು ನಂಬುತ್ತಾರೆ. ಇದೇನೊ (ಮಾತಿನಲ್ಲಿ) ಸರಿ; ನಾವು ಅನಂತ (Infinite) ಆವಿರ್ಭಾವನೆ (Manifestation) ವ್ಯಕ್ತ (Expression) ಮುಂತಾದ ಪದವನ್ನು ಉಪಯೋಗಿಸುವೆವು. ಆದರೆ ತಾತ್ತ್ವಿಕರು ಸಾಂತ ಅನಂತವನ್ನು ವ್ಯಕ್ತಪಡಿಸುವುದು ಎಂಬ ನಿರೂಪಣೆಗೆ ಒಂದು ತಾರ್ಕಿತ ಪ್ರಮುಖ ಆಧಾರವನ್ನು ಸ್ವಾಭಾವಿಕವಾಗಿ ಕೇಳುವರು. ನಿರಪೇಕ್ಷವಾದುದು, ಅನಂತವಾದುದು ಮಿತಿಯಮೂಲಕ ಮಾತ್ರ ವಿಶ್ವ ವಾಗುವುದು. ಇಂದ್ರಿಯ ಮನಸ್ಸು ಅಥವಾ ಬುದ್ಧಿಯಮೂಲಕ ಬರುವ ಪ್ರತಿಯೊಂದೂ ಸಾಂತವಾಗಿರಲೇಬೇಕು. ಈ ಸಾಂತವಾಗಿರುವುದು ಅನಂತವಾಗಿರುವುದು ಎಂಬುದು ಅಸಂಬದ್ಧ. ಇದು ಎಂದಿಗೂ ಸಾಧ್ಯವಿಲ್ಲ.

ಆದರೆ ವೇದಾಂತ ಹೀಗೆ ಹೇಳುವುದು : ನಿರಪೇಕ್ಷ ಅಥವಾ ಅನಂತ ವಾಗಿರುವುದು ಸಾಂತದಮೂಲಕ ವ್ಯಕ್ತವಾಗುವುದಕ್ಕೆ ಪ್ರಯತ್ನಿಸುತ್ತಿದೆ ಎಂಬುದೇನೊ ನಿಜ. ಆದರೆ ಇದು ಅಸಾಧ್ಯವೆಂದು ಅದಕ್ಕೆ ಗೊತ್ತಾಗುವ ಒಂದು ಸಮಯ ಬರುವುದು. ಆಗ ಅದು ಹಿಂತಿರುಗಬೇಕಾಗುವುದು. ಈ ಹಿಂತಿರುಗುವಿಕೆಯನ್ನೇ ತ್ಯಾಗವೆನ್ನುವುದು. ಇದೇ ನಿಜವಾದ ಧರ್ಮದ ಆರಂಭ. ಈಗಿನ ಕಾಲದಲ್ಲಿ ತ್ಯಾಗದ ವಿಷಯ ಮಾತನಾಡುವುದೂ ಕಷ್ಟ. ಅಮೆರಿಕಾ ದೇಶದವರು ನನ್ನನ್ನು ಐದುಸಾವಿರ ವರ್ಷಗಳ ಹಿಂದೆ ಅಳಿದು ನಿರ್ನಾಮವಾದ ದೇಶದಿಂದ ಬಂದು ತ್ಯಾಗದ ವಿಷಯ ಈತ ಮಾತನಾಡು ತ್ತಾನೆ ಎಂದರು. ಆಂಗ್ಲ ತಾತ್ತ್ವಿಕನೂ ಹೀಗೆ ಹೇಳಬಹುದು: ಆದರೂ

ಧರ್ಮಕ್ಕೆ ಅದೊಂದೇ ಮಾರ್ಗವೆನ್ನುವುದು ಸತ್ಯ. ತ್ಯಜಿಸು ಬಿಡು. ಕ್ರೈಸ್ತ ಏನು ಹೇಳಿದ? "ಯಾರು ನನಗಾಗಿ ಜೀವನವನ್ನು ಕಳೆದುಕೊಳ್ಳುವರು ಅವರು ಜೀವನವನ್ನು ಪಡೆಯುವರು" ಪೂರ್ಣತೆಗೆ ತ್ಯಾಗ ಒಂದೇ ಮಾರ್ಗ ಎಂದು ಪುನಃ ಪುನಃ ಬೋಧಿಸಿದನು. ಉತ್ಸಾಹಹೀನನು ದೀರ್ಘ ಕನಸಿನಿಂದ ಜಾಗೃತನಾಗುವ ಒಂದು ಸಮಯ ಬರುವುದು. ಮಗು ಆಟವನ್ನು ಬಿಟ್ಟು ತಾಯಿಯೆಡೆಗೆ ಹೋಗಲೆತ್ನಿಸುವುದು. "ಆಸೆ ಆಸೆಯ ಭೋಗದಿಂದ ಎಂದಿಗೂ ತೃಪ್ತವಾಗುವುದಿಲ್ಲ. ಬೆಂಕಿಗೆ ಬೆಣ್ಣೆಯನ್ನು ಹಾಕಿದಂತೆ ಅದು ಮತ್ತೂ ಹೆಚ್ಚುವುದು" ಎಂಬ ಸಿದ್ಧಾಂತದ ಸತ್ಯವನ್ನು ಅರಿಯುವುದು. ಎಲ್ಲಾ ಇಂದ್ರಿಯಭೋಗ ಪಾಂಡಿತ್ಯರಂಜನೆ ಮಾನವನ ಮನಸ್ಸಿಗೆ ನಿಲುಕುವ ಎಲ್ಲಾ ಸುಖದ ಸತ್ಯವೂ ಇದೆ. ಇದೆಲ್ಲ ನಿಷ್ಪ್ರಯೋಜನ, ಇವೆಲ್ಲಾ ಮಾಯಾ ಬಲೆಯಾಗಿವೆ. ಇದನ್ನು ಮೀರಿ ನಾವು ಹೋಗಲಾರೆವು. ಅನಂತ ಕಾಲದವರೆಗೂ ನಾವು ಅಲ್ಲಿ ಸುತ್ತಾಡಬಹುದು. ಆದರೂ ಕೊನೆಯೇ ಇಲ್ಲ. ಸ್ವಲ್ಪ ಸುಖಕ್ಕೆ ನಾವು ಯಾವಾಗ ಪ್ರಯತ್ನ ಪಟ್ಟರೂ ಒಂದು ದುಃಖದರಾಶಿ ನಮ್ಮ ಮೇಲೆ ಬೀಳುವುದು. ಎಂತಹ ಶೋಚನೀಯ ಸ್ಥಿತಿ! ನಾನು ಇದನ್ನು ಕುರಿತು ಯೋಚಿಸಿದರೆ, ಈ ಮಾಯಾವಾದ, ಇದೆಲ್ಲ ಮಾಯೆ ಎನ್ನುವ ಸಿದ್ಧಾಂತ ಒಂದೇ ಅತಿ ಸಮರ್ಪಕವಾದ ಏಕಮಾತ್ರ ವಿವರಣೆ ಎಂದು ಭಾವಿಸದೆ ಇರಲಾರೆ. ಈ ಪ್ರಪಂಚದಲ್ಲಿ ಎಷ್ಟೊಂದು ದುಃಖವಿದೆ? ನೀವು ಹಲವು ದೇಶಗಳನ್ನು ಸಂಚರಿಸಿದರೆ, ಒಂದು ದೇಶ ತನ್ನ ದೋಷವನ್ನು ಒಂದು ರೀತಿಯಲ್ಲಿ ಬಗೆಹರಿಸಲು ಪ್ರಯತ್ನಿಸುತ್ತಿದೆ ಇನ್ನೊಂದು ದೇಶ ಮತ್ತೊಂದು ರೀತಿಯಲ್ಲಿ ಅದನ್ನು ಬಗೆಹರಿಸಲು ಯತ್ನಿಸುತ್ತಿದೆ ಎಂಬುದು ಗೊತ್ತಾಗುವುದು. ಹಲವು ಜನಾಂಗಗಳು ಒಂದೇ ಸಾಮಾನ್ಯ ದೋಷವನ್ನು ತೆಗೆದುಕೊಂಡು ಹಲವು ಪ್ರಯತ್ನಗಳಿಂದ ಅದನ್ನು ಬಗೆಹರಿಸಲು ಪ್ರಯತ್ನಿಸುತ್ತಿರುವರು. ಆದರೂ ಯಾರೂ ಜಯಪ್ರದರಾಗಿಲ್ಲ. ಒಂದು ಕಡೆ ದೋಷ ತಗ್ಗಿದರೆ ಬೇರೊಂದು ಕಡೆ ಅದು ಹೆಚ್ಚಿರುತ್ತದೆ. ಇದು ಹೀಗೇ ಆಗುತ್ತಿದೆ. ಹಿಂದೂಗಳ ಜನಾಂಗದಲ್ಲಿ ಉತ್ತಮ ಪಾತಿವ್ರತ್ಯದ ಆದರ್ಶವನ್ನು ಸಂರಕ್ಷಿಸುವುದಕ್ಕಾಗಿ ಬಾಲ್ಯವಿವಾಹಕ್ಕೆ ಅನುಮತಿ ಕೊಟ್ಟಿರುವರು. ಕಾಲಕ್ರಮೇಣ ಇದು ಇಡೀ ಜನಾಂಗವನ್ನೇ ಅಧೋಗತಿಗೆ ತಂದಿದೆ. ಬಾಲ್ಯವಿವಾಹ ಜನಾಂಗದಲ್ಲಿ ಹೆಚ್ಚು ಪವಿತ್ರತೆ ಇರುವಂತೆ ಮಾಡಿದೆ ಎಂಬುದನ್ನೂ ನಾನು ಒಪ್ಪದೆ ಇರಲಾರೆ. ನಿಮಗೆ ಏನು ಬೇಕು? ಜನಾಂಗದಲ್ಲಿ ಚಾರಿತ್ರಶುದ್ಧಿ ಇರಬೇಕಾದರೆ ಅಲ್ಲಿಯು

ಸ್ತ್ರೀಪುರುಷರನ್ನು ಬಾಲ್ಯವಿವಾಹದಿಂದ ಹೆಚ್ಚು ದುರ್ಬಲಗೊಳಿಸುವಿರಿ. ಆದರೆ ನೀವು ಇಂಗ್ಲೆಂಡಿನಲ್ಲಿ ಅದಕ್ಕಿಂತ ಮೇಲಾಗಿರುವಿರಾ? ಇಲ್ಲ. ಪಾತಿವ್ರತ್ಯವೇ ಜನಾಂಗದ ಜೀವ. ವ್ಯಭಿಚಾರವೇ ಜನಾಂಗದ ಪ್ರಥಮ ಮೃತ್ಯು ಚಿಹ್ನೆ ಎಂಬುದು ನಿಮಗೆ ಇತಿಹಾಸದಲ್ಲಿ ಕಾಣುವುದಿಲ್ಲವೆ? ಎಂದು ಇದು ಜನಾಂಗದಲ್ಲಿ ಪ್ರವೇಶಿಸುವುದೋ ಆಗಲೇ ಜನಾಂಗದ ನಾಶ ಸನ್ನಿಹಿತವಾದಂತೆ. ಹಾಗಾದರೆ ಈ ದುಃಖಕ್ಕೆ ಪರಿಹಾರವೆಲ್ಲಿ ದೊರಕುವುದು? ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಗಂಡ ಹೆಂಡಿರನ್ನು ಆರಿಸಿದರೆ ಈ ದುಃಖವನ್ನು ತಗ್ಗಿಸಬಹುದು. ಭರತಖಂಡದ ಹೆಣ್ಣುಮಕ್ಕಳು ಉದ್ವೇಗಕ್ಕಿಂತ ಹೆಚ್ಚು ಕಾರ್ಯಸಿರತರು. ಆದರೆ ಅವರ ಜೀವನದಲ್ಲಿ ಕಲ್ಪನೆಗೆ ಅವಕಾಶವೇ ಇಲ್ಲ. ಜನ ತಾವೇ ಗಂಡ ಹೆಂಡಿರನ್ನು ಆರಿಸಿಕೊಂಡರೆ ಅದರಿಂದ ಹೆಚ್ಚು ಸುಖ ಬರುವಂತೆಯೂ ಕಾಣುವುದಿಲ್ಲ. ಸಾಧಾರಣವಾಗಿ ಭಾರತೀಯ ನಾರಿಯರು ಸುಖವಾಗಿರುವರು. ಗಂಡಹೆಂಡಿರಲ್ಲಿ ಅಷ್ಟೊಂದು ಮನಸ್ತಾಪ ನಮಗೆ ಕಾಣಬರುವುದಿಲ್ಲ. ಆದರೆ ಎಲ್ಲರಿಗಿಂತ ಹೆಚ್ಚು ಸ್ವಾತಂತ್ರ್ಯವನ್ನು ಪಡೆದ ಸಂಯುಕ್ತಸಂಸ್ಥಾನದಲ್ಲಾದರೊ ದುಃಖಸಂಸಾರ ಮತ್ತು ಮದುವೆ ಲೆಕ್ಕವಿಲ್ಲದಷ್ಟು ಇವೆ. ದುಃಖ ಇಲ್ಲಿ ಅಲ್ಲಿ ಎಲ್ಲೆಲ್ಲಿಯೂ ಇದೆ. ಇದೇನು ತೋರುವುದು? ಈ ಆದರ್ಶಗಳಿಂದ ನಮಗೆ ಅಷ್ಟೇನೂ ಸುಖ ದೊರೆತಿಲ್ಲ ಎಂಬುದನ್ನು ವಿಷದಪಡಿಸುವುದು. ನಾವೆಲ್ಲ ಸುಖಕ್ಕಾಗಿ ಸತತ ಪ್ರಯತ್ನಿಸುತ್ತಿರುವೆವು. ಸ್ವಲ್ಪ ಸುಖ ಒಂದು ಕಡೆ ಸಿಕ್ಕಿದೊಡನೆಯೆ ಬೇರೊಂದು ಕಡೆ ದುಃಖ ಸಿದ್ಧವಾಗಿರುವುದು.

ಹಾಗಾದರೆ ಮತ್ತೊಬ್ಬರ ಹಿತಕ್ಕೆ ನಾವು ಪ್ರಯತ್ನಿಸಬೇಡವೆ? ಹೌದು ಎಂದಿಗಿಂತ ಹೆಚ್ಚು ಉತ್ಸಾಹದಿಂದ ಮಾಡಬೇಕು. ಈ ಭಾವನೆ ನಮ್ಮ ಅಂಧ ಅಭಿಮಾನವನ್ನು ನಾಶಮಾಡುವುದು. ಆಂಗ್ಲೇಯ ಇನ್ನು ಮೇಲೆ ಮತಭ್ರಾಂತನಾಗಿ ಹಿಂದೂಗಳನ್ನು ದೂರುವುದಿಲ್ಲ. ಅನ್ಯಜನಾಂಗದ ಆಚಾರವನ್ನು ಗೌರವಿಸುವುದನ್ನು ಕಲಿಯುವನು. ಮತಭ್ರಾಂತಿ ಕಡಿಮೆಯಾಗುವುದು. ನಿಜವಾದ ಕೆಲಸ ಹೆಚ್ಚುವುದು. ಮತಭ್ರಾಂತರು ಕೆಲಸ ಮಾಡಲಾರರು. ತಮ್ಮ ಮುಕ್ಕಾಲುಪಾಲು ಶಕ್ತಿಯನ್ನು ವ್ಯರ್ಥಮಾಡುವರು. ಸಮಬುದ್ಧಿಯ ಶಾಂತ ವ್ಯವಹಾರ ಚತುರ ಮಾತ್ರ ಕೆಲಸ ಮಾಡುವನು. ಈ ಭಾವನೆಯಿಂದಕೆಲಸ ಮಾಡುವುದಕ್ಕೆ ನಮಗೆ ಹೆಚ್ಚು ಶಕ್ತಿ ದೊರಕುವುದು. ಇದೇ ನಿಜವಾದ ಪರಿಸ್ಥಿತಿ ಎಂದು ತಿಳಿದಮೇಲೆ ಹೆಚ್ಚು ಸಹನೆ ಇರುವುದು. ದುಃಖ ಅಥವಾ ದೋಷವನ್ನು ಕಂಡೊಡನೆಯೆ

ಉದ್ವಿಗ್ನರಾಗಿ ಮತಿಗೆಟ್ಟು ಭ್ರಾಂತಿಯನ್ನು ಅರಸುವಂತೆ ಮಾಡುವುದಿಲ್ಲ. ಪ್ರಪಂಚ ತನ್ನ ರೀತಿಯಲ್ಲೆ ನಡೆಯಬೇಕಾಗಿದೆ ಎಂದು ತಿಳಿದುಬರುವುದು. ಈಗ ಇರುವ ಮನುಷ್ಯರೆಲ್ಲ ಒಳ್ಳೆಯವರಾಗಿಬಿಟ್ಟರೆ ಅಷ್ಟು ಹೊತ್ತಿಗೆ ಪ್ರಾಣಿಗಳು ಮನುಷ್ಯ ಜನ್ಮಧಾರಣೆ ಮಾಡುತ್ತವೆ. ಅವೂ ಕೂಡ ನಮ್ಮಂತೆಯೇ ಸಾಗಿಹೋಗಬೇಕಾಗಿದೆ. ಹಾಗೆಯೆ ಸಸ್ಯವರ್ಗ ಕೂಡ. ಆದರೆ ಒಂದು ಮಾತ್ರ ನಿಶ್ಚಯ. ಈ ಮಹಾನದಿ ಸಮುದ್ರಕ್ಕೆ ಅಭಿಮುಖ ವಾಗಿ ಭರದಿಂದ ಸಾಗುತ್ತಿದೆ. ಈ ಪ್ರವಾಹದಲ್ಲಿರುವ ಪ್ರತಿಯೊಂದು ಬಿಂದುವೂ ಕ್ರಮೇಣ ಅಸೀಮ ಸಾಗರಕ್ಕೆ ಸೇರುವುದು. ಇದರಂತೆಯೇ ದುಃಖ ವ್ಯಸನ ಆನಂದ ಅಳುವಿನಿಂದ ಕೂಡಿದ ಈ ಪ್ರಪಂಚದಲ್ಲಿ ಒಂದು ನಿಶ್ಚಯ. ಎಲ್ಲಾ ಗುರಿಯೆಡೆಗೆ ಧಾವಿಸುತ್ತಿವೆ. ನಾನು ನೀವು ಪ್ರಾಣಿ ಸಸ್ಯ ಪ್ರಪಂಚದಲ್ಲಿರುವ ಪ್ರತಿಯೊಂದು ಜೀವಾಣುವೂ ಕಾಲಕ್ರಮೇಣ ಪರಿ ಪೂರ್ಣವೆಂಬ ಮಹಾಸಾಗರವನ್ನು ಸೇರಲೇಬೇಕಾಗಿದೆ. ಸ್ವಾತಂತ್ರ್ಯವನ್ನು ಪಡೆಯಲೇಬೇಕಾಗಿದೆ. ದೇವರನ್ನು ಸೇರಲೇಬೇಕಾಗಿದೆ.

ವೇದಾಂತ ಸಿದ್ಧಾಂತ ಆಶಾವಾದವೂ ಅಲ್ಲ, ನಿರಾಶಾವಾದವೂ ಅಲ್ಲ ಎಂಬುದನ್ನು ನಾನು ಮತ್ತೊಮ್ಮೆ ಹೇಳುತ್ತೇನೆ. ಈ ಪ್ರಪಂಚವೆಲ್ಲ ಕೆಟ್ಟದ್ದು ಅಥವಾ ಒಳ್ಳೆಯದೆಂದು ಅದು ಹೇಳುವುದಿಲ್ಲ. ನಮ್ಮ ಕೆಟ್ಟದ್ದಕ್ಕೆ ಒಳ್ಳೆಯದಕ್ಕಿಂತ ಕಡಮೆ ಬೆಲೆಯಿಲ್ಲ. ನಮ್ಮ ಒಳ್ಳೆಯದಕ್ಕೆ ಕೆಟ್ಟದ್ದಕ್ಕಿಂತ ಹೆಚ್ಚು ಬೆಲೆಯಿಲ್ಲ ಎಂದು ಹೇಳುವುದು. ಇವೆರಡೂ ಒಂದನ್ನೊಂದು ಆಶ್ರಯಿಸಿವೆ. ಇದೇ ಪ್ರಪಂಚ. ಇದನ್ನು ತಿಳಿದು ಸಾವಧಾನದಿಂದ ಕೆಲಸಮಾಡು. ಏತಕ್ಕೆ ? ನಾವೇಕೆ ಕೆಲಸ ಮಾಡಬೇಕು ? ಪ್ರಪಂಚದ ಪರಿಸ್ಥಿತಿ ಹೀಗಿದ್ದರೆ ನಾವು ಮಾಡುವುದೇನು ? ಅಜ್ಞೇಯವಾದಿ ಏತಕ್ಕೆ ಆಗ ಕೂಡದು? ನಮ್ಮ ಭಾಷೆಯಲ್ಲಿ ಹೇಳುವಂತೆಯೆ ಆಧುನಿಕ ಅಜ್ಞೇಯ ವಾದಿಗಳಿಗೂ ಈ ಸಮಸ್ಯೆಗೆ ಪರಿಹಾರವಿಲ್ಲ. ಮಾಯೆಯಿಂದ ಪಾರಾ ಗಲು ಸಾಧ್ಯವಿಲ್ಲವೆಂದು ಗೊತ್ತಿದೆ. ಅದಕ್ಕೆ ಅವರು ಇದ್ದುದರಲ್ಲಿ ತೃಪ್ತ ರಾಗಿ ಪ್ರಪಂಚವನ್ನು ಅನುಭವಿಸಿ ಎನ್ನುವರು. ಇಲ್ಲೊಂದು ದೋಷವಿದೆ, ಮಹಾದೋಷ, ಯುಕ್ತಿಗೆ ವಿರುದ್ಧವಾದ ದೋಷ. ಅದೇ ಇದು. ಜೀವನ ವೆಂದರೆ ನೀವು ಏನು ಭಾವಿಸುವಿರಿ ? ಕೇವಲ ಇಂದ್ರಿಯ ವ್ಯವಹಾರವೆ ಜೀವನ ? ಹಾಗಾದರೆ ಅತಿಮೂರ್ಖನಿಗೂ ನಮಗೂ ವ್ಯತ್ಯಾಸವೇ ಇಲ್ಲ ವೆನ್ನಬಹುದು. ಕೇವಲ ಇಂದ್ರಿಯಗಳಲ್ಲೇ ನಿರತನಾದವನು ಇಲ್ಲಿ ಯಾರೂ ಇಲ್ಲವೆಂದು ನಾನು ಊಹಿಸುತ್ತೇನೆ. ಹಾಗಾದರೆ ಈಗಿರುವ

ಜೀವನ ಅದಕ್ಕಿಂತ ಸ್ವಲ್ಪ ಮೇಲಾಗಿರಬೇಕು. ನಮ್ಮ ಭಾವನೆ ಆಲೋಚನೆ ಆಕಾಂಕ್ಷೆಗಳೆಲ್ಲ ನಮ್ಮ ಜೀವನದ ಒಂದು ಭಾಗ. ಪೂರ್ಣತೆ ಎಂಬ ಮಹಾ ಆದರ್ಶದೆಡೆಗೆ ಹೋರಾಡುವುದು ನಾವು ಯಾವುದನ್ನು ಜೀವನವೆನ್ನುತ್ತೇವೆಯೋ ಅದರ ಒಂದು ಮುಖ್ಯ ಅಂಗವಲ್ಲವೆ? ಅಜ್ಞೇಯ ವಾದಿಯ ಪ್ರಕಾರ ಪ್ರಪಂಚವನ್ನು ಈಗ ಇರುವಂತೆ ಅನುಭವಿಸಬೇಕು. ಜೀವನವೆಂದರೆ ಎಲ್ಲಕ್ಕಿಂತ ಹೆಚ್ಚಾಗಿ ಆದರ್ಶಶೋಧನೆ. ಜೀವನಸಾರವೇ ಪೂರ್ಣತೆಯೆಡೆಗೆ ಹೋಗುವುದು. ನಮ್ಮಲ್ಲಿ ಅದು ಇರಬೇಕಾಗಿದೆ. ಆದಕಾರಣವೇ ನಾವು ಅಜ್ಞೇಯವಾದಿಗಳಾಗಲಾರೆವು. ಪ್ರಪಂಚ ಹೇಗೆ ತೋರುವುದೊ ಹಾಗೆ ಸ್ವೀಕರಿಸಲಾರೆವು. ಅಜ್ಞೇಯವಾದಿ ಮಹಾ ಆದರ್ಶಸಾಧನೆಯನ್ನು ಕಳೆದು ಉಳಿದುದು ಮಾತ್ರ ಸತ್ಯವೆಂದು ಸ್ವೀಕರಿಸುವನು. ಈ ಆದರ್ಶವನ್ನು ನಾವು ಸಾಧಿಸಲಾರೆವು ಅದಕ್ಕೆ ಅದನ್ನು ತ್ಯಜಿಸುವೆವು ಎನ್ನುವನು ಅಜ್ಞೇಯವಾದಿ. ಇದೇ ಮಾಯೆ, ಪ್ರಕೃತಿ, ವಿಶ್ವ.

ಎಲ್ಲಾ ಧರ್ಮಗಳೂ ಪ್ರಕೃತಿಯಿಂದ ಪಾರಾಗಿಹೋಗುವುದಕ್ಕೆ ಮಾಡಿದ ಸಣ್ಣ ಅಥವಾ ದೊಡ್ಡ ಪ್ರಯತ್ನಗಳು. ಧರ್ಮ ಅನಾಗರಿಕವಾಗಿರಲಿ, ಸುಸಂಸ್ಕೃತವಾಗಿರಲಿ, ಪುರಾಣ ಅಥವಾ ಚಿಹ್ನೆಯ ಮೂಲಕ ಅದನ್ನು ವ್ಯಕ್ತಗೊಳಿಸಿರಲಿ, ದೇವರು, ದೇವದೂತರು, ಅಸುರರು, ಸಾಧು ಸಂತರು, ಋಷಿಗಳು, ಮಹಾತ್ಮರು ಇವರ ಜೀವನಚರಿತ್ರೆಯ ಮೂಲಕ ಅದನ್ನು ವಿವರಿಸಲಿ, ಅಥವಾ ಅದನ್ನು ಸೂಕ್ಷ್ಮತತ್ತ್ವದ ಮೂಲಕ ವಿವರಿಸಲಿ ಅವುಗಳ ಗುರಿಯೆಲ್ಲ ಒಂದೆ. ಅವೆಲ್ಲ ಈ ಪರಿಮಿತಿಯಿಂದ ಪಾರಾಗಲು ಯತ್ನಿಸುತ್ತಿರುವರು. ಒಂದು ಮಾತಿನಲ್ಲಿ ಅವರೆಲ್ಲ ಸ್ವಾತಂತ್ರ್ಯ ಸಾಧನೆಗೆ ಪ್ರಯತ್ನಿಸುತ್ತಿರುವರು. ಮನುಷ್ಯ ಅರಿತೊ ಅರಿಯದೆಯೊ ತಾನು ಬದ್ಧನೆಂದು ಭಾವಿಸುವನು. ತಾನು ಏನಾಗಬೇಕೆಂದು ಬಯಸುವನೊ ಅದಾಗಿಲ್ಲ. ಅವನು ಸುತ್ತಲೂ ನೋಡುವುದಕ್ಕೆ ಪ್ರಯತ್ನ ಪಟ್ಟಾಗಲೆ ಇದನ್ನು ತಿಳಿಯಬೇಕಾಯಿತು. ಆ ತಕ್ಷಣವೇ ತಾನು ಬದ್ಧನಾಗಿರುವೆನು ಎಂದು ತಿಳಿದನು. ಆದರೂ ತನ್ನಲ್ಲಿ ಮತ್ತಾವುದೋ ಒಂದು ಶಕ್ತಿ ಇದೆ. ಅದು ದೇಹ ಅನುಸರಿಸದಕಡೆ ಹಾರಿಹೋಗಬೇಕೆಂದು ಇಚ್ಛಿಸುತ್ತಿತ್ತು. ಆದರೆ ಅದು ಇನ್ನೂ ಹಲವಾರು ಶೃಂಖಲೆಗಳಿಂದ ಬಂಧಿಸಲ್ಪಟ್ಟಿತ್ತು. ಅತಿ ಹೀನ ಧರ್ಮಗಳಲ್ಲಿಯೂ ತಮ್ಮ ಗೆಳೆಯರ ಮನೆಯಲ್ಲಿ ರಕ್ತ ಮತ್ತು ಮದ್ಯಪಾನಾಸಕ್ತರಾಗಿ ಹೊಂಚು ಹಾಕುತ್ತಿದ್ದ ಅತಿಕ್ರೂರ ಪಿತೃಗಳ ಮತ್ತು

ಭೂತಪ್ರೇತಗಳ ಆರಾಧನೆ ಇರುವ ಅತಿ ಹೀನ ಧರ್ಮದಲ್ಲಿಯೂ ಒಂದು ಸಾಮಾನ್ಯ ಭಾವನೆ ಇದೆ. ಅದೇ ಸ್ವಾತಂತ್ರ್ಯ. ದೇವರನ್ನು ಆರಾಧಿಸ ಬೇಕೆಂದು ಬಯಸುವವನು ಅವರಲ್ಲಿ ತನಗಿಂತ ಹೆಚ್ಚು ಸ್ವಾತಂತ್ರ್ಯವನ್ನು ಎಲ್ಲಕ್ಕಿಂತ ಹೆಚ್ಚಾಗಿ ಕಾಣುವನು. ಬಾಗಿಲು ಹಾಕಿದ್ದರೆ ದೇವತೆಗಳು ಅದರ ಮೂಲಕ ಬರ ಬಲ್ಲರು, ಗೋಡೆ ಅವರಿಗೆ ಆತಂಕವಾಗಲಾರದು ಎಂದು ಭಾವಿಸುವನು. ಸಾಕಾರ ಈಶ್ವರನವರೆಗೆ ಬರುವವರೆಗೆ ಈ ಸ್ವಾತಂತ್ರ್ಯ ಭಾವನೆ ಅಭಿವೃದ್ಧಿಯಾಗುತ್ತಾ ಹೋಗುವುದು. ಈಶ್ವರನ ಮುಖ್ಯ ಭಾವನೆಯೆ ಅವನು ಪ್ರಕೃತಿಯನ್ನು ಮೀರಿದವನು, ಮಾಯೆಗೆ ಅತೀತನು ಎಂಬುದು. ಪುರಾತನ ಆರ್ಯಮಹರ್ಷಿಗಳು ಕೆಲವು ಸಣ್ಣ ಕುಟೀರಗಳಲ್ಲಿ ಈ ಪ್ರಶ್ನೆ ವಿಷಯವಾಗಿ ಮಾತನಾಡುವುದು ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಅಂತಹ ಒಂದು ಚರ್ಚಾ ಕೂಟದಲ್ಲಿ ಅತಿ ಹಿರಿಯರು ಪೂಜ್ಯತಮರು ಕೂಡ ಪ್ರಶ್ನೆಯನ್ನು ಬಗೆಹರಿಸದಿರುವಾಗ ಯುವಕನೊಬ್ಬ ಅವರ ಮಧ್ಯದಿಂದೆದ್ದು “ ಅಮೃತಪುತ್ರರೆ, ಕೇಳಿ, ಯಾರು ಶ್ರೇಷ್ಠ ಸ್ವರ್ಗದಲ್ಲಿರುವಿರೊ ಅವರು ಕೂಡ ಕೇಳಿ. ನಾನು ಮಾರ್ಗವನ್ನು ಕಂಡು ಹಿಡಿದಿರುವೆನು. ಅಂಧಕಾರದ ಆಚೆ ಇರುವ ಅವನನ್ನು ತಿಳಿದುಕೊಳ್ಳುವುದರಿಂದ ನಾವು ಮೃತ್ಯುವನ್ನು ಅತಿಕ್ರಮಿಸಿ ಹೋಗಬಹುದು. ”

ಈ ಮಾಯೆ ಎಲ್ಲೆಲ್ಲಿಯೂ ಇರುವುದು. ಅತಿ ಭಯಂಕರವಾಗಿದೆ, ಆದರೂ ನಾವು ಅದರ ಮೂಲಕ ಕೆಲಸ ಮಾಡಬೇಕಾಗಿದೆ. ಪ್ರಪಂಚವೆಲ್ಲ ಉತ್ತಮವಾದಮೇಲೆ ತಾನು ಕೆಲಸ ಮಾಡುತ್ತೇನೆ, ಆನಂದ ಅನುಭವಿಸುತ್ತೇನೆ ಎನ್ನುವವನು ಗಂಗಾನದಿಯ ತೀರದಲ್ಲಿ ಕುಳಿತು ನೀರೆಲ್ಲ ಹರಿದು ಹೋದಮೇಲೆ ನದಿ ದಾಟುತ್ತೇನೆ ಎಂದವನಂತೆ ಯಶಸ್ವಿಯಾಗುವನು. ಮಾಯೆಯಲ್ಲಿ ಮಾರ್ಗವಿಲ್ಲ. ಮಾಯೆಯನ್ನು ಅತಿಕ್ರಮಿಸಿ ಹೋಗಬೇಕು. ನಾವು ಪ್ರಕೃತಿ ಸಹಾಯಕ್ಕಲ್ಲ ಜನ್ಮವೆತ್ತಿರುವುದು. ಅದರೊಂದಿಗೆ ಸ್ಪರ್ಧೆ ಹೂಡುವುದಕ್ಕೆ. ನಾವು ತಿಳಿದುಕೊಳ್ಳಬೇಕಾದ ಮತ್ತೊಂದು ವಿಷಯ ಇದು; ನಾವು ಪ್ರಕೃತಿಯ ಹುಟ್ಟುಸ್ವಾಮಿಗಳು. ಆದರೆ ನಾವು ಬದ್ಧರಾಗುವೆವು. ಈ ಮನೆ ಇಲ್ಲಿ ಏತಕ್ಕೆ ಇದೆ? ಪ್ರಕೃತಿ ಇದನ್ನು ಕಟ್ಟಲಿಲ್ಲ. ಪ್ರಕೃತಿ ಹೋಗಿ ಕಾಡಿನಲ್ಲಿ ವಾಸಮಾಡು ಎನ್ನುವುದು. ಮನುಷ್ಯ ನಾನು ಮನೆಕಟ್ಟಿ ಪ್ರಕೃತಿಯೊಂದಿಗೆ ಹೋರಾಡುವೆನು ಎನ್ನುವನು. ಅದರಂತೆಯೇ ಮಾಡುತ್ತಾನೆ. ಮಾನವನ ಇಡೀ ಇತಿಹಾಸವೆಲ್ಲ ಪ್ರಕೃತಿಯೊಡನೆ ನಡೆಸಿದ ಒಂದು ನಿರಂತರ ಹೋರಾಟ. ಕೊನೆಗೆ ಮಾನವ

ಜಯಪ್ರದನಾಗುವನು. ಆಂತರಿಕ ಪ್ರಪಂಚಕ್ಕೆ ಬಂದರೆ ಅಲ್ಲಿಯೂ ಕೂಡ ಮೃಗೀಯ ಮನುಷ್ಯ ದೈವೀ ಮನುಷ್ಯನಿಗೆ, ಜ್ಞಾನ ಅಜ್ಞಾನಗಳಿಗೆ ಹೋರಾಟ ನಡೆಯುತ್ತಿದೆ. ಅಲ್ಲಿಯೂ ಮನುಷ್ಯ ಕೊನೆಗೆ ವಿಜಯಿಯಾಗುವನು. ಅವನು ಪ್ರಕೃತಿಯನ್ನು ಭೇದಿಸಿ ಸ್ವಾತಂತ್ರ್ಯಕ್ಕೆ ಮಾರ್ಗವನ್ನು ಕಲ್ಪಿಸಿದಂತೆ ಇದೆ. ಮಾಯದಾಚೆ ಮಾಯೆಯಿಂದ ಬದ್ಧನಾಗದವನು ವೇದಾಂತಿಗೆ ಗೋಚರಿಸುವನು. ನಾವು ಅಲ್ಲಿಗೆ ಹೋದರೆ ಮಾಯಾಪಾಶದಿಂದ ಪಾರಾಗುವುದನ್ನು ಕಾಣುವೆವು. ಈ ಭಾವನೆ ಒಂದಲ್ಲ ಒಂದು ರೀತಿಯಿಂದ ಎಲ್ಲಾ ಧರ್ಮಗಳ ಸಾಮಾನ್ಯ ಆಸ್ತಿಯಾಗಿದೆ. ಆದರೆ ವೇದಾಂತಿಗಳಿಗೆ ಇದು ಧರ್ಮದ ಪ್ರಾರಂಭ ಮಾತ್ರ, ಅದರ ಅಂತ್ಯವಲ್ಲ. ಈ ವಿಶ್ವದ ಸೃಷ್ಟಿಪಾಲಕನೆಂದು ಕರೆಯುವ ಆ ಸಾಕಾರ ದೇವರು. ಪ್ರಕೃತಿಯ ಒಡೆಯ. ಈ ಭಾವನೆ ವೇದಾಂತದ ಅಂತ್ಯವಲ್ಲ, ಪ್ರಾರಂಭ ಮಾತ್ರ. ಈ ವೇದಾಂತದ ಭಾವನೆ ವಿಕಾಸವಾಗುತ್ತ ಆಗುತ್ತ ಮೊದಲು ಯಾರನ್ನು ಹೊರಗೆ ಇರುವನು ಎಂದು ಭಾವಿಸಿದ್ದೆವೋ ಅವನು ತಾನೇ ಆಗಿರುವನು, ಸತ್ಯವಾಗಿ ಅಂತರ್ಯದಲ್ಲಿರುವನು ಎಂಬ ಭಾವನೆಯಲ್ಲಿ ಪರ್ಯವಸಾನವಾಗುವುದು. ಸ್ವತಂತ್ರವಾಗಿರುವವನು ಅವನು. ಆದರೆ ಮಾಯೆಯಿಂದ ಬದ್ಧನೆಂದು ಭಾವಿಸಿದ್ದನು.

---

# ಮಾಯೆ ಮತ್ತು ಭಗವದ್ಭಾವನೆಯ ವಿಕಸನ

ಅದ್ವೈತ ವೇದಾಂತದ ಅತಿ ಮುಖ್ಯ ಮೂಲಸಿದ್ಧಾಂತಗಳಲ್ಲಿ ಒಂದಾದ ಮಾಯೆಯ ಭಾವನೆ, ಆಗಲೆ ಸಂಹಿತೆಯಲ್ಲಿ ಅದು ಅಂಕುರಾವಸ್ಥೆಯಲ್ಲಿ ಇರುವುದನ್ನು ನೋಡಿರುವೆವು. ಉಪನಿಷತ್ತಿನಲ್ಲಿ ಯಾವ ಯಾವ ಭಾವನೆ ವ್ಯಕ್ತವಾಗಿದೆಯೋ ಅದು ನಿಜವಾಗಿ ಸಂಹಿತೆಯಲ್ಲಿ ಒಂದಲ್ಲ ಒಂದು ಸ್ಥಿತಿಯಲ್ಲಿದೆ. ಆಗಲೆ ನಿಮ್ಮಲ್ಲಿ ಅನೇಕರಿಗೆ ಮಾಯೆಯ ಭಾವನೆ ಪರಿಚಯವಾಗಿದೆ. ಕೆಲವುವೇಳೆ ಅದನ್ನು ಭ್ರಾಂತಿ ಎಂದು ತಪ್ಪಾಗಿ ವಿವರಿಸಿರುವರು. ಪ್ರಪಂಚವನ್ನು ಮಾಯೆ ಎಂದರೆ ಭ್ರಮೆ ಎಂಬ ಅರ್ಥದಲ್ಲೇ ವಿವರಿಸಬೇಕಾಗುವುದು. ಈ ಪದದ ಭಾಷಾಂತರ ಹಿತಕರವಾಗಿಯೂ ಇಲ್ಲ, ಸತ್ಯವಾಗಿಯೂ ಇಲ್ಲ. ಮಾಯೆ ಒಂದು ಸಿದ್ಧಾಂತವಲ್ಲ. ಪ್ರಪಂಚ ಹೇಗೆ ಇರುವುದೋ ಹಾಗೆ ಹೇಳುವುದು. ನಾವು ಮಾಯೆಗೆ ಅರ್ಥವನ್ನು ತಿಳಿದುಕೊಳ್ಳಬೇಕಾದರೆ ಸಂಹಿತೆಗೆ ಹೋಗಿ ಅಂಕುರಾವಸ್ಥೆಯಲ್ಲಿ ಅದಕೆ ಏನು ಅರ್ಥವಿತ್ತೆಂಬುದನ್ನು ತಿಳಿದುಕೊಳ್ಳುವುದರಿಂದ ಪ್ರಾರಂಭಿಸಬೇಕಾಗಿದೆ. ದೇವತೆಗಳೆಂಬ ಭಾವನೆ ಹೇಗೆ ಬಂತೆಂಬುದನ್ನು ನೋಡಿದೆವು. ಆದಿಯಲ್ಲಿ ಈ ದೇವತೆಗಳು ಕೇವಲ ಪರಾಕ್ರಮ ವ್ಯಕ್ತಿಗಳಾಗಿದ್ದರು, ಅದಕ್ಕಿಂತ ಹೆಚ್ಚು ಇಲ್ಲವೆಂಬುದು ನಮಗೆ ಗೊತ್ತಿದೆ. ಪುರಾತನ ಗ್ರೀಕ್, ಹೆಬ್ರು, ಪರ್ಷಿಯನ್ ಅಥವಾ ಇನ್ನಾವುದಾದರೂ ಶಾಸ್ತ್ರವನ್ನು ಓದಿದರೆ ಆ ಕಾಲದ ದೇವತೆಗಳು ಇಂದು ನಾವೆ ನಾಚುವಂತಹ ಹಲವು ಕಾರ್ಯಗಳನ್ನು ಮಾಡಿರುವುದು ಕಾಣುವುದು. ಆದರೆ ನಾವು ಈ ಗ್ರಂಥಗಳನ್ನು ಓದುತ್ತಿರುವಾಗ, ನಾವು ಹತ್ತೊಂಭತ್ತನೇ ಶತಮಾನದವರು, ಈ ದೇವತೆಗಳು ಹಲವು ಸಹಸ್ರ ವರ್ಷಗಳ ಹಿಂದೆ ಇದ್ದವರು ಎಂಬುದನ್ನು ಸಂಪೂರ್ಣ ಮರೆಯುವೆವು. ಯಾರು ಈ ದೇವತೆಗಳನ್ನು ಪೂಜಿಸುತ್ತಿದ್ದರೋ ಅವರಿಗೆ ಆ ದೇವತೆಗಳ ಜೀವನದಲ್ಲಿ ಅನುಚಿತವಾಗಿರುವುದು ಕಾಣುತ್ತಿರಲಿಲ್ಲ. ಅವರಿಗೆ ಅಂಜುತ್ತಿರಲಿಲ್ಲ. ಏಕೆಂದರೆ ದೇವತೆಗಳೂ ಕೂಡ ಅವರಂತೆಯೆ ಇದ್ದರು ಎಂಬುದನ್ನು ಮರೆಯುವೆವು. ನಮ್ಮ ಜೀವನದಲ್ಲೆಲ್ಲ ಕಲಿತುಕೊಳ್ಳಬೇಕಾದ ಒಂದು ಬಹು ಮುಖ್ಯ ನೀತಿ ಇದು ಎಂಬುದನ್ನೂ ಹೇಳಬೇಕಾಗಿದೆ. ನಮ್ಮ ಆದರ್ಶದ ದೃಷ್ಟಿಯಿಂದ ಮತ್ತೊಬ್ಬರನ್ನು ನಾವು ಯಾವಾಗಲೂ ಪರೀಕ್ಷಿಸುವೆವು. ಇದಲ್ಲ ಸರಿಯಾದ ರೀತಿ. ಪ್ರತಿಯೊಬ್ಬರನ್ನೂ ಅವರವರ ಆದರ್ಶದ ದೃಷ್ಟಿಯಿಂದ ಅಳೆಯಬೇಕೆ ಹೊರತು

ಇತರರ ಆದರ್ಶದ ದೃಷ್ಟಿಯಿಂದ ಅಳೆಯಕೂಡದು. ಇತರರೊಂದಿಗೆ ಇಟ್ಟು ಕೊಂಡಿರುವ ನಮ್ಮ ವ್ಯವಹಾರದಲ್ಲಿ ಪದೇಪದೇ ಈ ದೋಷಕ್ಕೆ ತುತ್ತಾಗು ವೆವು. ನಮ್ಮಲ್ಲಿ ಏಳುವ ಹಲವು ಮನಸ್ತಾಪಗಳಿಗೆಲ್ಲ ಕಾರಣವೆ ಇದು ಎಂದು ನಂಬುತ್ತೇನೆ. ಇತರರ ದೇವತೆಗಳನ್ನು ನಮ್ಮ ದೇವತೆಗಳ ದೃಷ್ಟಿ ಯಿಂದ ಅಳೆಯುವೆವು, ಅವರ ಆದರ್ಶವನ್ನು ನಮ್ಮ ಆದರ್ಶದ ದೃಷ್ಟಿ ಯಿಂದ ಅಳೆಯುವೆವು, ಇತರರ ಉದ್ದೇಶಗಳನ್ನು ನಮ್ಮ ಉದ್ದೇಶದ ದೃಷ್ಟಿಯಿಂದ ಅಳೆಯುವೆವು. ಕೆಲವು ಸನ್ನಿವೇಶದಲ್ಲಿ ನಾನೊಂದು ಕೆಲಸ ಮಾಡಬಹುದು. ಮತ್ತೊಬ್ಬ ನನ್ನಂತೆಯೇ ಮಾಡುತ್ತಿರುವುದನ್ನು ನೋಡಿದಾಗ ಅವನು ಕೂಡ ನನ್ನಲ್ಲಿರುವಂತಹ ಭಾವನೆಯಿಂದಲೇ ಪ್ರೇರಿತನಾಗಿ ಕೆಲಸಮಾಡುತ್ತಿರುವನು ಎಂದು ಭಾವಿಸುವೆನು. ಪರಿಣಾಮ ಒಂದೆ ಆದರೂ, ಹಲವು ಕಾರಣಗಳು ಒಂದೇ ಪರಿಣಾಮವನ್ನು ಉಂಟು ಮಾಡಬಲ್ಲವು ಎಂಬುದನ್ನೂ ಸ್ವಲ್ಪವೂ ಯೋಚಿಸುವುದೇ ಇಲ್ಲ. ನಾನು ಯಾವ ಉದ್ದೇಶದಿಂದ ಕೆಲಸಮಾಡಿದೆನೊ ಅದಕ್ಕಿಂತ ಬೇರೆ ಉದ್ದೇಶ ದಿಂದ ಪ್ರೇರಿತನಾಗಿ ಅವನು ಕೆಲಸಮಾಡಿರಬಹುದು. ಪುರಾತನ ಧರ್ಮ ಗಳನ್ನು ನಾವು ಪರೀಕ್ಷಿಸುವಾಗ ನಮ್ಮ ಉದ್ದೇಶಗಳನ್ನು ಅಲ್ಲಿ ತರಕೂಡದು, ನಾವು ಆಗಿನ ಕಾಲದ ಜೀವನ ಭಾವನೆ ದೃಷ್ಟಿಯಿಂದ ನೋಡಬೇಕು.

ಹಳೆಯ ಟೆಸ್ಟ್‌ಮೆಂಟ್‌ನಲ್ಲಿ ಬರುವ ಕ್ರೂರನಾದ ಜೀಹೋವನ ಭಾವನೆ ಹಲವರಿಗೆ ಅಂಜಿಕೆ ಹುಟ್ಟಿಸಿದೆ. ಇದಕ್ಕೆ ಕಾರಣವೇನು ? ಹಿಂದಿನ ಕಾಲದ ಯಹೂದ್ಯರ ಜೀಹೋವ, ಈಗಿನ ಕಾಲದಲ್ಲಿ ರೂಢಿಯಲ್ಲಿರುವ ದೇವರ ಭಾವನೆಯಂತೆ ಇರಬೇಕು ಎನ್ನುವುದಕ್ಕೆ ಅವರಿಗೇನು ಅಧಿಕಾರ ವಿದೆ ? ನಮ್ಮ ನಂತರ ಜನರು ಬಂದು ನಮ್ಮ ದೇವರು ಧರ್ಮ ಮುಂತಾದ ಭಾವನೆ ನೋಡಿ ನಾವು ಹಿಂದಿನವರನ್ನು ನೋಡಿ ನಗುವಂತೆ ಅವರೂ ನಗುವರು ಎಂಬುದನ್ನು ಮರೆಯಕೂಡದು. ಆದರೂ ಹಲವು ಭಾವನೆಗಳ ಅಂತರಾಳದಲ್ಲೆಲ್ಲಾ ಐಕ್ಯತೆಯ ಸ್ವರ್ಣತಂತು ಒಂದು ಸಂಚರಿಸುತ್ತಿದೆ. ವೇದಾಂತದ ಗುರಿಯೇ ಆ ದಾರವನ್ನು ಕಂಡುಹಿಡಿಯುವುದು. "ಹಲವು ಭಾವನೆಗಳ ಮಣಿಯಲ್ಲಿ ಹರಿಯುವ ಸೂತ್ರ ನಾನೆ" ಎಂದು ಭಗವಾನ್ ಶ್ರೀಕೃಷ್ಣ ಸಾರುವನು. ಇಂದಿನ ಆದರ್ಶದ ದೃಷ್ಟಿಯಿಂದ ನೋಡಿದಾಗ ಆ ಭಾವನೆಗಳು ಎಷ್ಟೋ ಅನುಚಿತವಾಗಿದ್ದರೂ ಬೇಜಾರು ಹಿಡಿಸುವಂತೆ ಇದ್ದರೂ ವಿಭಿನ್ನ ಭಾವನೆಗಳನ್ನು ಸಂಬಂಧಿಸಿರುವ ಸೂತ್ರವನ್ನು ಕಂಡು ಹಿಡಿಯುವುದೇ ವೇದಾಂತದ ಗುರಿ. ಹಿಂದಿನಕಾಲದ ಹಿನ್ನೆಲೆಯ ದೃಷ್ಟಿ

ಯಿಂದ ನೋಡಿದರೆ ಆ ಭಾವನೆ ಸಮನ್ವಯವಾಗಿತ್ತು. ನಮ್ಮ ಆಧುನಿಕ ಭಾವನೆಗಿಂತ ಹೇಯವಾಗಿರಲಿಲ್ಲ. ಆ ಹಿನ್ನೆಲೆಯಿಂದ ಅದನ್ನು ಕಿತ್ತು ನಮ್ಮ ಆಧುನಿಕ ಕಾಲಕ್ಕೆ ಅದನ್ನು ಅನ್ವಯಿಸುವಂತೆ ಮಾಡಿದರೆ ಮಾತ್ರ ಅವು ಅಷ್ಟು ಅಸಹ್ಯಕರವಾಗಿ ಕಾಣುವುವು. ಹಿಂದಿನ ಹಿನ್ನೆಲೆ ನಿರ್ನಾಮ ವಾಗಿಹೋಗಿದೆ. ಹಿಂದಿನಕಾಲದ ಯಹೂದ್ಯ ಸೂಕ್ಷ್ಮಮತಿಯ ಜಾಣ ನಾದ ಈಗಿನ ಯಹೂದ್ಯನಾಗಿರುವಂತೆ ಹಿಂದಿನ ಆರ್ಯ ಚುರುಕಾದ ಈಗಿನ ಹಿಂದೂ ಆಗಿರುವಂತೆ ಜೀಹೋವನೂ ಕೂಡ ಬೆಳೆದಿರುವನು. ದೇವತೆಗಳೂ ಕೂಡ ಬೆಳೆದಿರುವರು. ಉಪಾಸಕರ ವಿಕಸನವನ್ನು ನಾವು ಒಪ್ಪಿಕೊಳ್ಳು ತ್ತೇವೆ, ಆದರೆ ಉಪಾಸ್ಯದ ವಿಕಸನವನ್ನು ನಾವು ಒಪ್ಪಿಕೊಳ್ಳುವುದಿಲ್ಲ. ಇದೇ ದೊಡ್ಡ ತಪ್ಪು. ಭಕ್ತರು ಬೆಳೆದಿರುವಂತೆ ದೇವರೂ ಬೆಳೆದಿರುವನೆಂಬುದನ್ನು ಒಪ್ಪಿಕೊಳ್ಳುವುದಿಲ್ಲ. ಭಾವನೆಯನ್ನು ವ್ಯಕ್ತಗೊಳಿಸುವ ನಾವು, ನೀವು ಬೆಳೆದಿರುವೆವು. ಅದರಂತೆಯೇ ಭಾವನೆಯನ್ನು ವ್ಯಕ್ತಗೊಳಿಸುವ ದೇವರು ಗಳು ಕೂಡ ಬೆಳೆದಿರುವರು. ದೇವರು ಬೆಳೆಯಬಲ್ಲ ಎಂಬುದನ್ನು ಕೇಳಿದಾಗ ನಿಮಗೆ ವಿಚಿತ್ರವಾಗಿ ತೋರಬಹುದು. ಅವನು ಬದಲಾಯಿಸುವುದಿಲ್ಲ, ಅಪರಿವರ್ತಕ ಅವನು. ಇದೇ ದೃಷ್ಟಿಯಲ್ಲಿ ನಿಜವಾದ ಮನುಷ್ಯ ಎಂದಿಗೂ ಬೆಳೆಯುವುದಿಲ್ಲ. ಆದರೆ ಮಾನವನ ಭಗವಂತನ ಭಾವನೆ ಬದಲಾಯಿಸು ತ್ತಿದೆ, ವಿಶಾಲವಾಗುತ್ತಿದೆ. ಪ್ರತಿಯೊಂದು ಮಾನವ ಆವಿರ್ಭಾವನೆ ಹಿಂದೆ ಇರುವ ನಿಜವಾದ ಮನುಷ್ಯ, ಅಚಲ, ಬದಲಾಯಿಸುವುದಿಲ್ಲ, ಶುದ್ಧ ನಿತ್ಯ ಸಿದ್ಧ ಎಂಬುದನ್ನು ನಂತರ ನೋಡುವೆವು. ಇದರಂತೆಯೆ ಭಗವಂತನಿಗೆ ಸಂಬಂಧಪಟ್ಟ ನಮ್ಮ ಭಾವನೆ ಕೂಡ ಕೇವಲ ನಮ್ಮ ಕಲ್ಪನೆ. ಅದರ ಹಿಂದೆ ಎಂದಿಗೂ ಬದಲಾಯಿಸದೆ ನಿತ್ಯಶುದ್ಧನಾದ ಅಧಿಕಾರಿಯಾದ ದೇವರು ಇರುವನು. ಆದರೆ ವ್ಯಕ್ತವಾಗಿರುವುದು ಯಾವಾಗಲೂ ಹಿಂದೆ ಇರುವ ಸತ್ಯವನ್ನು ಹೆಚ್ಚುಹೆಚ್ಚು ತೋರುತ್ತಾ ಬದಲಾಯಿಸುತ್ತಿರುವುದು. ಅಂತರ್ಗತವಾದ ಭಾವನೆಗಳನ್ನು ಹೆಚ್ಚು ವ್ಯಕ್ತಗೊಳಿಸಿದರೆ ವಿಕಸನ ವೆನ್ನುವೆವು, ಅದನ್ನು ಹೆಚ್ಚು ಮುಚ್ಚಿದರೆ ತಿರೋಗತಿ ಎನ್ನುವೆವು. ಹೀಗೆ ನಾವು ಬೆಳೆದಂತೆ ದೇವರೂ ಬೆಳೆಯುವನು. ಸಾಧಾರಣ ದೃಷ್ಟಿಯಿಂದ ವ್ಯಕ್ತಗೊಳಿಸುವಂತೆ ವಿಕಾಸವಾಗುವಂತೆ ದೇವರೂ ಕೂಡ ವ್ಯಕ್ತವಾಗುವನು.

ಈಗ ನಾವು ಮಾಯಾಸಿದ್ಧಾಂತವನ್ನು ಅರ್ಥಮಾಡಿಕೊಳ್ಳಬಲ್ಲ ಸ್ಥಿತಿಯಲ್ಲಿರುವೆವು. ಪ್ರಪಂಚದ ಧರ್ಮಗಳೆಲ್ಲಾ ಬಗೆಹರಿಸಬೇಕೆಂದು ಯತ್ನಿಸುವ ಪ್ರಶ್ನೆ ಇದು. ಅದೇ ಪ್ರಪಂಚದಲ್ಲಿ ಏತಕ್ಕೆ ವೈವಿಧ್ಯತೆ ಇದೆ ?

ಪ್ರಪಂಚದಲ್ಲಿ ಏತಕ್ಕೆ ಪಾಪವಿದೆ? ಅಸಂಸ್ಕೃತಧರ್ಮಗಳ ಭಾವನೆಯ ಆದಿಯಲ್ಲಿ ಈ ಪ್ರಶ್ನೆ ನಮಗೆ ಕಾಣುವುದಿಲ್ಲ. ಪ್ರಪಂಚ ಅನಾಗರಿಕ ಮನುಷ್ಯನಿಗೆ ಅಸಮಂಜಸವಾಗಿರುವಂತೆ ಕಾಣಲಿಲ್ಲ. ಸಂದರ್ಭಗಳು ಅವನಿಗೆ ವಿರೋಧವಾಗಿರಲಿಲ್ಲ. ಅಭಿಪ್ರಾಯಗಳ ಘರ್ಷಣೆ ಇರಲಿಲ್ಲ. ಒಳ್ಳೆಯದು ಮತ್ತು ಕೆಟ್ಟದಕ್ಕೆ ವಿರೋಧಭಾವನೆ ಇರಲಿಲ್ಲ. ಕೇವಲ ಅವನ ಹೃದಯದಲ್ಲಿ ಕೆಲವನ್ನು ಸರಿ ಎಂತಲೂ ಕೆಲವನ್ನು ತಪ್ಪೆಂತಲೂ ಹೇಳುವ ಭಾವನೆ ಮಾತ್ರ ಇತ್ತು. ಆದಿ ಮನುಷ್ಯ ಉದ್ವೇಗ ಜೀವಿ. ತನಗೆ ತೋಚಿದುದನ್ನು ಮಾಡಿದನು; ಮನಸ್ಸಿನಲ್ಲಿ ಹೊಳೆದ ಆಲೋಚನೆ ಗಳನ್ನು ಕಾರ್ಯತಃ ತರಲು ಯತ್ನಿಸಿದನು. ಅದನ್ನು ಸರಿ ತಪ್ಪು ಎಂದು ಯೋಚಿಸುವುದಕ್ಕೆ ತಡೆಯುತ್ತಲೇ ಇರಲಿಲ್ಲ. ಅವನು ಉದ್ವೇಗವನ್ನು ನಿಗ್ರಹಿಸಲು ಯತ್ನಿಸುತ್ತಿದ್ದುದು ಬಹಳ ಅಪರೂಪ. ಅದರಂತೆಯೇ ದೇವತೆಗಳು ಕೂಡ ಉದ್ವೇಗಪರರಾಗಿದ್ದರು. ಇಂದ್ರ ಬಂದು ಅಸುರರ ಶಕ್ತಿಯನ್ನು ನಾಶಮಾಡುವನು. ಜಿಹೋವನಿಗೆ ಒಬ್ಬನಮೇಲೆ ತೃಪ್ತಿ ಮತ್ತೊಬ್ಬನಮೇಲೆ ಅತೃಪ್ತಿ. ಇದಕ್ಕೆ ಕಾರಣ ಯಾರಿಗೂ ಗೊತ್ತಿಲ್ಲ. ಯಾರೂ ಕೇಳುವುದೂ ಇಲ್ಲ. ಆಗ ಪ್ರಶ್ನಿಸುವ ಅಭ್ಯಾಸ ಇನ್ನೂ ಬಂದಿರಲಿಲ್ಲ. ಅವನು ಏನು ಮಾಡಿದರೆ ಅದನ್ನು ಸರಿ ಎಂದು ಭಾವಿಸು ತ್ತಿದ್ದರು. ಒಳ್ಳೆಯದು ಕೆಟ್ಟದ್ದು ಎಂಬ ಭಾವನೆಯೇ ಇರಲಿಲ್ಲ. ದೇವತೆಗಳು ನಮ್ಮ ದೃಷ್ಟಿಯಲ್ಲಿ ಎಷ್ಟೋ ಕೆಲಸಮಾಡಿದರು. ಪದೇ ಪದೇ ಇಂದ್ರ ಮೊದಲಾದ ದೇವತೆಗಳು ಹೀನಕೃತ್ಯವನ್ನೆಸಗುವರು. ಆದರೆ ಇಂದ್ರನ ಭಕ್ತರಿಗೆ ಅದು ಒಳ್ಳೆಯದು ಕೆಟ್ಟದ್ದು ಎಂಬ ಭಾವನೆಯೇ ಬರುತ್ತಿರಲಿಲ್ಲ. ಅದಕ್ಕೇ ಅವರು ಪ್ರಶ್ನಿಸುತ್ತಲೇ ಇರಲಿಲ್ಲ.

ನೈತಿಕಭಾವನೆ ಬೆಳೆದಂತೆ ಹೋರಾಟ ಪ್ರಾರಂಭವಾಯಿತು. ಬೇರೆ ಬೇರೆ ಭಾಷೆಯಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಯುವ ಒಂದು ಭಾವನೆ ಮನುಷ್ಯನಲ್ಲಿ ಉದಿಸಿತು. ದೇವವಾಣಿ ಪೂರ್ವಸಂಸ್ಕಾರಫಲ ಅಥವಾ ಇನ್ನು ಯಾವ ಹೆಸರಿನಿಂದಲಾದರೂ ಅದನ್ನು ಕರೆಯಿರಿ ಇದರಿಂದ ಒಂದು ಪರಿಣಾಮವಾಯಿತು. ಮನುಷ್ಯನ ಸ್ವಾಭಾವಿಕ ಉದ್ವೇಗವನ್ನು ನಿಗ್ರಹಿ ಸಲು ಇದು ಸಹಾಯಮಾಡಿತು. ಮನಸ್ಸಿನಲ್ಲಿ ಇದನ್ನು ಮಾಡು ಎನ್ನುವ ಪ್ರೇರಣೆ ಇದೆ. ಅದರ ಹಿಂದೆ ಇದನ್ನು ಮಾಡಬೇಡ ಎನ್ನುವ ಮತ್ತೊಂದು ಪ್ರೇರಣೆ ಏಳುವುದು. ಇಂದ್ರಿಯಗಳಮೂಲಕ ಹೊರಗೆ ಹೋಗಲು ಯತ್ನಿ ಸುತ್ತಿರುವ ಒಂದು ಬಗೆ ಭಾವನೆ ಮನಸ್ಸಿನಲ್ಲಿದೆ. ಅದರ ಹಿಂದೆ ಎಷ್ಟೇ

ದುರ್ಬಲನಾದರೂ ಹೊರಗೆ ಹೋಗಬೇಡ ಎನ್ನುವ ಕ್ಷೀಣವಾಣಿಯೊಂದು ಇದೆ. ಈ ಭಾವನೆಗೆ ಸುಂದರವಾದ ಎರಡು ಸಂಸ್ಕೃತಪದಗಳಿವೆ. ಅದೇ ಪ್ರವೃತ್ತಿ ಮತ್ತು ನಿವೃತ್ತಿ, ಮುಂದೆ ಹೋಗುವುದು ಮತ್ತು ಹಿಂತಿರುಗುವುದು. ಪ್ರವೃತ್ತಿಯೇ ಸಾಧಾರಣವಾಗಿ ನಮ್ಮ ಕ್ರಿಯೆಗೆ ಕಾರಣ. ನಿವೃತ್ತಿಯಿಂದ ಧರ್ಮ ಪ್ರಾರಂಭವಾಗುವುದು. ಬೇಡ ಎನ್ನುವುದರಿಂದ ಧರ್ಮ ಮೊದಲಾಗುವುದು, ಬೇಡ ಎನ್ನುವುದರಿಂದ ಆಧ್ಯಾತ್ಮ ಮೊದಲಾಗುವುದು. ಬೇಡ ಎನ್ನುವುದು ಅಲ್ಲಿ ಇಲ್ಲದೆ ಇದ್ದರೆ ಧರ್ಮ ಇನ್ನೂ ಪ್ರಾರಂಭವಾಗಿಲ್ಲ. ಕಾದಾಡುವ ದೇವರನ್ನು ಮಾನವ ಪೂಜಿಸುತ್ತಿದ್ದರೂ ಈ ಬೇಡ ಎನ್ನುವುದು ಬಂದು ಮನುಷ್ಯನ ಭಾವನೆ ಬೆಳೆಯುವಂತೆ ಮಾಡಿತು.

ಮಾನವಹೃದಯದಲ್ಲಿ ಸ್ವಲ್ಪ ಪ್ರೀತಿ ಜನಿಸಿತು. ಅದೆಲ್ಲೋ ಬಹಳ ಅಲ್ಪಪ್ರಮಾಣದಲ್ಲಿತ್ತು. ಈಗಲೂ ಕೂಡ ಅದೇನೂ ಅಷ್ಟು ಹೆಚ್ಚಾಗಿಲ್ಲ. ಇದು ಮೊದಲು ಒಂದು ಪಂಗಡಕ್ಕೆ ಮಾತ್ರ ಅನ್ವಯಿಸಿತು. ಬಹುಶಃ ಆ ಪಂಗಡದಲ್ಲಿರುವ ಜನರಿಗೆ ಮಾತ್ರ. ಈ ದೇವತೆಗಳು ತಮ್ಮ ಪಂಗಡವನ್ನು ಪ್ರೀತಿಸಿದರು. ಪ್ರತಿಯೊಂದು ದೇವರೂ ಕೂಡ ಆಯಾ ಪಂಗಡಕ್ಕೆ ದೇವರು, ಆಯಾ ಪಂಗಡದ ರಕ್ಷಕ. ಕೆಲವುವೇಳೆ ಆಯಾ ಪಂಗಡದವರು ಆ ಪಂಗಡಕ್ಕೆ ಸೇರಿದ ದೇವರ ಸಂತತಿಯವರು ತಾವು ಎಂದು ಭಾವಿಸುತ್ತಿದ್ದರು. ಪ್ರತಿಯೊಂದು ದೇಶದಲ್ಲಿಯೂ ಆಯಾ ಕುಲಕ್ಕೆ ಸೇರಿದವರು ಆ ಕುಲದ ಮೂಲಪುರುಷರ ಸಂತತಿಯವರು ತಾವು ಎಂದು ಭಾವಿಸುವಂತೆ. ಹಿಂದಿನ ಕಾಲದಲ್ಲಿ ಮತ್ತು ಈಗಲೂ ಕೂಡ ಕೆಲವರು ಆಯಾ ಕುಲದೇವತೆಗಳ ವಂಶದವರು ತಾವು ಎಂದು ಹೇಳಿಕೊಳ್ಳುವುದಲ್ಲದೆ ತಾವು ಸೂರ್ಯಚಂದ್ರ ವಂಶಕ್ಕೆ ಸೇರಿದವರು ಎಂದು ಹೇಳಿಕೊಳ್ಳುವರು. ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಸೂರ್ಯ ವಂಶದ ಪ್ರಖ್ಯಾತ ಅಳರಸರ ವಿಷಯ ಓದುತ್ತೀರಿ. ಅವರು ಮೊದಲು ಸೂರ್ಯಚಂದ್ರ ಆರಾಧಕರಾಗಿದ್ದರು. ಕ್ರಮೇಣ ತಾವು ಸೂರ್ಯಚಂದ್ರ ಸಂತತಿಯವರು ಮುಂತಾದ್ದಾಗಿ ಭಾವಿಸಿದರು. ಕುಲಭಾವನೆ ಬೆಳೆಯುತ್ತಾ ಹೋದಂತೆ ಸ್ವಲ್ಪ ಪ್ರೀತಿ ಹುಟ್ಟಿತು, ಪರಸ್ಪರ ಕರ್ತವ್ಯಭಾವನೆ, ಸ್ವಲ್ಪ ಸಮಾಜರಚನೆ ಮುಂತಾದುವು ಬಂದವು. "ಒಬ್ಬರನ್ನೊಬ್ಬರು ಸಹಿಸದೆ ಕ್ಷಮಿಸದೆ ಹೇಗೆ ಇರುವುದು" ಎಂಬ ಭಾವನೆ ಸ್ವಾಭಾವಿಕವಾಗಿ ಬಂದಿತು. ಒಬ್ಬನು ಮತ್ತೊಬ್ಬನೊಡನೆ ವಾಸಿಸುವಾಗ ತನ್ನ ಮನೋವೇದನೆಯನ್ನು ಯಾವು

ವಾದರೂ ಕಾರಣದಿಂದ ನಿಗ್ರಹಿಸದೆ ಮನಸ್ಸು ಯಾವುದನ್ನು ಮಾಡು ಎಂದು ಪ್ರೇರೇಪಿಸುವುದೋ ಅದನ್ನು ತಡೆಯದೆ ಹೇಗೆ ಬಾಳುವುದು? ಇದು ಸಾಧ್ಯವೇ ಇಲ್ಲ. ಅದನ್ನು ನಿಗ್ರಹಿಸುವ ಭಾವನೆ ಹೇಗೆ ಬರುವುದು. ಇಡೀ ಸಮಾಜರಚನೆ ನಿಂತಿರುವುದು ನಿಗ್ರಹದಮೇಲೆ. ಸಹಿಸಿ ಕ್ಷಮಿಸಬಲ್ಲ ಮಹಾನೀತಿಯನ್ನು ಕಲಿಯದ ಸ್ತ್ರೀಪುರುಷರ ಬಾಳು ಶೋಚನೀಯ.

ಇಂತಹ ಧಾರ್ಮಿಕಭಾವನೆ ಬಂದಮೇಲೆ ಮನುಷ್ಯನ ಬುದ್ಧಿಗೆ ಹೆಚ್ಚು ನೀತಿಪ್ರದವಾದ ಭವ್ಯವಾದ ಒಂದು ವಿಷಯ ಹೊಳೆಯಿತು. ತಲೆಹರಟೆಯ ಹೋರಾಡುವ ಕುಡಿವ ದನಮಾಂಸಭಕ್ಷಕ ಪುರಾತನ ದೇವತೆಗಳಿಗೆ ಪರಮಸಂತೋಷವೆ ಸುಡುವ ಮಾಂಸದವಾಸನೆ ಮತ್ತು ಮಾದಕದ್ರವ್ಯರಾಶಿ. ಇಂತಹ ದೇವರು ಅಯೋಗ್ಯರೆಂದು ಭಾವಿಸಿದರು. ಕೆಲವುವೇಳೆ ಇಂದ್ರ ಮಿತಿಮೀರಿ ಕುಡಿದು ಪ್ರಜ್ಞೆತಪ್ಪಿ ಬಿದ್ದು ಮನ ಬಂದಂತೆ ಮಾತನಾಡುವನು. ಇಂತಹ ದೇವರನ್ನು ಇನ್ನು ಸಹಿಸಲು ಅಸಾಧ್ಯವಾಯಿತು. ಅವರ ಉದ್ದೇಶವನ್ನು ಕುರಿತು ಪ್ರಶ್ನಿಸುವ ಭಾವನೆ ಮೊಳೆಯಿತು. ದೇವತೆಗಳು ಕೂಡ ಸಮರ್ಪಕವಾಗಿ ಉತ್ತರ ಹೇಳ ಬೇಕಾಯಿತು. ಕೆಲವು ಕೃತ್ಯಗಳಿಗೆ ಕಾರಣ ಕೇಳಿದರು. ಅವರ ಉತ್ತರ ಸಮರ್ಪಕವಾಗಿರಲಿಲ್ಲ. ಮನುಷ್ಯ ಇಂತಹ ದೇವರನ್ನು ತ್ಯಜಿಸಿದನು. ಅಥವಾ ಅದಕ್ಕಿಂತ ಉತ್ತಮವಾದ ಭಗವಂತನ ಭಾವನೆಯನ್ನು ಕಲ್ಪಿಸಿ ಕೊಂಡನು. ಪ್ರತಿಯೊಬ್ಬ ದೇವರ ಗುಣ ಮತ್ತು ಕ್ರಿಯೆ ಎಲ್ಲವನ್ನೂ ಪರೀಕ್ಷಿಸಿ ತಮಗೆ ಸಮರ್ಪಕವಾಗಿಲ್ಲದುದನ್ನು ತ್ಯಜಿಸಿ, ಸೂಕ್ತವಾದುದನ್ನು ಸ್ವೀಕರಿಸಿ ಅವನಿಗೆ ದೇವದೇವನೆಂದು ಹೆಸರುಕೊಟ್ಟರು. ಆರಾಧಿಸುವ ದೇವರು ಕೇವಲ ಶಕ್ತಿ ಸಂಕೇತವಾಗಿರಲಿಲ್ಲ. ಇದಕ್ಕಿಂತಲೂ ಮೀರಿದ ಮತ್ತೊಂದು ಅಲ್ಲಿ ಇರಬೇಕಾಗಿತ್ತು. ಅವನು ಧಾರ್ಮಿಕ ದೇವರು. ಮಾನವಕೋಟಿಯಮೇಲೆ ಅವನಿಗೆ ಅನಂತ ಪ್ರೀತಿ. ಅವರಿಗೆ ಉಪಕಾರ ಮಾಡುವನು. ಆದರೆ ದೇವರ ಭಾವನೆ ಇನ್ನೂ ಉಳಿದಿತ್ತು. ಅವನ ಧಾರ್ಮಿಕ ಪ್ರಾಮುಖ್ಯತೆ ಮತ್ತು ಶಕ್ತಿಯನ್ನೂ ಹೆಚ್ಚಿಸಿತು. ಪ್ರಪಂಚದಲ್ಲಿ ಅತಿಶ್ರೇಷ್ಠ ಧಾರ್ಮಿಕವ್ಯಕ್ತಿ ಆದನು, ಸರ್ವಶಕ್ತನ ಸಮೀಪಕ್ಕೂ ಬಂದನು.

ಈ ಬಗೆಯ ಅಸಮರ್ಪಕ ಕೆಲಸವೇ ಸಾಲದು. ವಿವರಣೆ ಹೆಚ್ಚು ಪ್ರಮುಖವಾದಷ್ಟೂ, ಬಗೆಹರಿಸಬೇಕೆಂಬ ಸಮಸ್ಯೆಯೂ ಬೃಹದಾಕಾರ ತಾಳಿತು. ಒಂದುಪಾಲು ದೇವರಗುಣ ಹೆಚ್ಚುತ್ತಾಬಂದರೆ, ಕಷ್ಟ ಮತ್ತು

ಅನುಮಾನ ದ್ವಿಪ್ರಮಾಣದಲ್ಲಿ ಹೆಚ್ಚುತ್ತಾ ಹೋದವು. ವಿಶ್ವದೇವನಿಗೆ ಹೋಲಿಸಿದರೆ ಜಿಹೋವನ ಕಷ್ಟ ಬಹಳ ಕಡಿಮೆ. ಇಂದಿಗೂ ಈ ಪ್ರಶ್ನೆ ಇರುವುದು. ಸರ್ವಶಕ್ತನಾದ ಪ್ರೇಮನಿಧಿಯಾದ ದೇವರ ಆಳ್ವಿಕೆಯಲ್ಲಿ ಇಂತಹ ಕ್ರೌರ್ಯವೇತಕ್ಕೆ ಇನ್ನೂ ಇರಬೇಕು? ಒಳ್ಳೆಯದಕ್ಕಿಂತ ಇಷ್ಟೊಂದು ಕೆಟ್ಟದ್ದು ಏತಕ್ಕೆ? ನಾವು ಇವುಗಳಾವುದನ್ನೂ ನೋಡದೆ ಇರಬಹುದು. ಆದರೆ ವಾಸ್ತವಿಕಸ್ಥಿತಿ ಹಾಗೆಯೇ ಇರುವುದು. ಇದೊಂದು ಭಯಂಕರ ಪ್ರಪಂಚ. ಹೆಚ್ಚು ಎಂದರೆ ಇದು ಟ್ಯಾಂಟಲಸ್ಸನ ನರಕ. ನಮ್ಮಲ್ಲಿ ಬಹಳ ಬಲವಾದ ಪ್ರೇರಣೆಗಳಿವೆ. ಭೋಗಿಸುವುದಕ್ಕೆ ಅತಿ ಆಸೆ ಇದೆ. ಆದರೆ ಅದನ್ನು ಪೂರ್ಣಮಾಡಿಕೊಳ್ಳಲಾರೆವು. ನಮಗೆ ಇಚ್ಛೆ ಇಲ್ಲದೆ ಇದ್ದರೂ ಮುಂದಕ್ಕೆ ನೂಕಲು ಒಂದು ಅಲೆ ಏಳುವುದು. ನಾವು ಒಂದು ಹೆಜ್ಜೆ ಇಟ್ಟರೆ ತಕ್ಷಣವೇ ಪೆಟ್ಟೊಂದು ಬೀಳುವುದು. ನಾವೆಲ್ಲಾ ಇಲ್ಲಿ *ಟ್ಯಾಂಟಲಸ್ಸಿನಂತೆ ಬಾಳಬೇಕಾಗಿದೆ. ಇದೇ ನಮ್ಮ ಗತಿ. ಇಂದ್ರಿಯ ಆದರ್ಶಗಳ ಮೇರೆ ಮೀರಿದ ಹಲವು ಭಾವನೆಗಳು ನಮ್ಮ ಬುದ್ಧಿಗೆ ಹೊಳೆಯುವುವು. ಅದನ್ನು ವ್ಯಕ್ತಪಡಿಸಲು ಯತ್ನಿಸಿದರೆ ಸಾಧ್ಯವಿಲ್ಲ. ನಮ್ಮ ಸುತ್ತಲೂ ಇರುವ ಪ್ರಪಂಚ ನಮ್ಮನ್ನು ನುಚ್ಚುನೂರು ಮಾಡುವುದು. ಆದರೂ ಈ ಆದರ್ಶವನ್ನು ತ್ಯಜಿಸಿ ಈ ಪ್ರಪಂಚದ ಮೂಲಕ ಹೋರಾಡಿದರೆ ನಾನು ಮೃಗದ ಸ್ಥಿತಿಗೆ ಇಳಿಯುವೆನು, ಅಧೋಗತಿಗೆ ಹೋಗುವೆನು. ಯಾವ ದಾರಿಯಲ್ಲಿಯೂ ಸುಖವಿಲ್ಲ. ತಾವು ಹುಟ್ಟಿದ ಪ್ರಪಂಚದಲ್ಲಿ ತೃಪ್ತರಾಗಿ ಇರೋಣವೆಂದವರ ಗತಿಯೂ ದುಃಖವೇ. ಸತ್ಯ ಮತ್ತು ಉತ್ತಮ ಆದರ್ಶಕ್ಕೆ ನಿಂತು, ಕೇವಲ ಮೃಗೀಯತೆಗಿಂತ ಉತ್ತಮವಾದುದನ್ನು ಬಯಸುವ ಸಾಹಸಿಕರಿಗೆ ಸಾವಿರಪಾಲು ಹೆಚ್ಚು ದುಃಖ. ಇವೆಲ್ಲಾ ಯಥಾರ್ಥಸ್ಥಿತಿ. ಇದಕ್ಕೆ ವಿವರಣೆ ಇಲ್ಲ. ಇದಕ್ಕೆ ವಿವರಣೆ ಎಂದಿಗೂ ಸಾಧ್ಯವಿಲ್ಲ. ಆದರೆ ವೇದಾಂತ ಪಾರಾಗಲು ಒಂದು ದಾರಿ ತೋರುವುದು. ನಿಮಗೆ ಕೆಲವುವೇಳೆ ಅಂಜಿಕೆಯಾಗುವಂತಹ ವಿಷಯವನ್ನು ಹೇಳಬೇಕಾಗಿದೆ ಎಂಬುದನ್ನು ನೀವು ಗಮನದಲ್ಲಿಡಬೇಕು. ನಾನು ಹೇಳಿದುದನ್ನು ಜ್ಞಾಪಕದಲ್ಲಿಟ್ಟು

*ಟ್ಯಾಂಟಲಸ್ ಗ್ರೀಕ್ ಪೌರಾಣಿಕ ವ್ಯಕ್ತಿ. ಯಾವುದೋ ತಪ್ಪಿಗೆ ಅವನಿಗೆ ಸರೋವರದ ಮಧ್ಯದಲ್ಲಿ ಶಿಕ್ಷೆ ವಿಧಿಸಿದರು. ಅಲ್ಲಿ ಬಾಯಾರಿದಾಗ ನೀರನ್ನು ಕುಡಿಯಲು ಹೋದರೆ ನೀರು ಕೆಳಗೆ ಇಳಿಯುತ್ತಿತ್ತು. ಹಸಿದಾಗ ಮೇಲೆ ತೂಗುತ್ತಿರುವ ಹಣ್ಣನ್ನು ಬಿಡಿಸಲು ಕೈಯೆತ್ತಿದರೆ ಅದು ಮೇಲೆ ಸರಿಯುತ್ತಿತ್ತು.

ಮನನಮಾಡಿ ತಿಳಿದುಕೊಂಡರೆ ಅದು ನಿಮ್ಮದಾಗುವುದು. ನಿಮ್ಮನ್ನು ಮೇಲೆತ್ತುವುದು, ಸತ್ಯವನ್ನು ತಿಳಿದು ಅದಕ್ಕಾಗಿ ಬಾಳುವಂತೆ ಮಾಡುವುದು.

ಈ ಪ್ರಪಂಚ ಒಂದು ಟ್ಯಾಂಟಲಸ್ಸನ ನರಕ. ಇದರ ವಿಷಯ ವಾಗಿ ನಮಗೇನೂ ಗೊತ್ತಿಲ್ಲ. ಅದರೂ ನಮಗೇನೂ ಗೊತ್ತಿಲ್ಲವೆಂದು ಹೇಳಲು ಆಗುವುದಿಲ್ಲ. ಇದು ಯಥಾರ್ಥಸ್ಥಿತಿ. ಎದುರಿಗೆ ಇರುವ ಸರಪಣಿ ಏನು ಎಂದು ನನಗೆ ಗೊತ್ತಿಲ್ಲದೆ ಇದ್ದರೆ 'ಇದು' ಎಂದು ನಾನು ಹೇಳಲಾರೆ. ಇದೆಲ್ಲ ನನ್ನ ಭ್ರಾಂತಿ ಇರಬಹುದು, ನಾನು ಕನಸು ಕಾಣುತ್ತಿರಬಹುದು. ನಾನು ನಿಮ್ಮೊಂದಿಗೆ, ಮಾತನಾಡುತ್ತಿರುವೆ, ನೀವು ನನ್ನನ್ನು ಕೇಳುತ್ತಿರುವಿರಿ ಎಂದು ಸ್ವಪ್ನ ಕಾಣುತ್ತಿರಬಹುದು. ಯಾರೂ ಇದು ಸ್ವಪ್ನವಲ್ಲ ಎಂದು ಸಾಧಿಸಲಾರರು. ನನ್ನ ಮೆದುಳೇ ಒಂದು ಭ್ರಾಂತಿಯಾಗಿರಬಹುದು. ಈ ವಿಷಯದಲ್ಲಿ ಇದುವರೆಗೆ ಯಾರೂ ತಮ್ಮ ಮೆದುಳನ್ನು ನೋಡಿಲ್ಲ. ನಾವೆಲ್ಲ ಅದು ಇದೆ ಎಂದು ಭಾವಿಸುವೆವು. ಇದರಂತೆಯೇ ಪ್ರತಿಯೊಂದು ವಸ್ತು ಕೂಡ. ನನ್ನ ದೇಹ ಇದೆ ಎಂದು ನಾನು ಭಾವಿಸುವೆನು. ಅದೇ ಕಾಲದಲ್ಲಿ ಅದು ನನಗೆ ಗೊತ್ತಿಲ್ಲ ಎಂದು ಹೇಳಲಾರೆ. ಜ್ಞಾನಾಜ್ಞಾನಗಳ ಮಧ್ಯದಲ್ಲಿ ನಿಂತಿರುವುದು ಈ ಆಧ್ಯಾತ್ಮ ಅಸ್ಪಷ್ಟತೆ, ಈ ಸತ್ಯಾಸತ್ಯಗಳ ಮಿಶ್ರಣ. ಎಲ್ಲಿ ಅವು ಸಂಧಿಸುವುವು ಎಂದು ಯಾರಿಗೂ ಗೊತ್ತಿಲ್ಲ. ನಾವು ಕನಸ್ಸಿನ ಮಧ್ಯೆ ಅರ್ಧನಿದ್ರೆ ಅರ್ಧಜಾಗ್ರತಾವಸ್ಥೆಯ ಮೊಬ್ಬು ಬೆಳಕಿನಲ್ಲಿ ಜೀವಾದ್ಯಂತವೂ ಸಂಚರಿಸುತ್ತಿರುವೆವು. ಪ್ರತಿಯೊಬ್ಬರ ಹಣೆಯ ಬರೆಹವೂ ಇದೆ. ಇದೇ ಎಲ್ಲಾ ಇಂದ್ರಿಯಜನ್ಯ ಜ್ಞಾನಗತಿ. ಇದೇ ಎಲ್ಲಾ ತತ್ತ್ವ, ಹೆಮ್ಮೆ ಕೊಚ್ಚಿಕೊಳ್ಳುವ ವಿಜ್ಞಾನ ಮತ್ತು ಜ್ಞಾನಗಳ ಗತಿ. ಇದೇ ಪ್ರಪಂಚ.

ನೀವು ಅದನ್ನು ದ್ರವ್ಯ, ಶಕ್ತಿ, ಮನಸ್ಸು ಅಥವಾ ಇನ್ನು ಯಾವುದಾದರೂ ಹೆಸರಿನಿಂದ ಕರೆಯಿರಿ. ಯಥಾರ್ಥಸ್ಥಿತಿ ಮಾತ್ರ ಒಂದೆ. ಅವು ಇವೆ ಅಥವಾ ಇಲ್ಲ ಎಂದು ಹೇಳಲಾರೆವು. ಅವು ಏಕ ಅಥವಾ ಅನೇಕ ಎಂದು ಹೇಳಲಾರೆವು. ಆದಿ ಅಂತ್ಯವಿಲ್ಲದ ಜ್ಞಾನಾಜ್ಞಾನಗಳ ಲೀಲೆ. ಗೊತ್ತುಗುರಿಯಿಲ್ಲದ ವ್ಯತ್ಯಾಸ ತೋರದ ಪ್ರತ್ಯೇಕಿಸಲಾಗದ ಸ್ಥಿತಿ ಯಾವಾಗಲೂ ಇರುವುದು. ಇದು ಸತ್ಯ, ಆದರೂ ಅಸತ್ಯ; ಜಾಗ್ರತೆ, ಆದರೂ ನಿದ್ರೆ, ಇದೇ ಯಥಾರ್ಥಸ್ಥಿತಿ, ಇದನ್ನೇ ಮಾಯೆ ಎನ್ನುವುದು. ನಾವು ಮಾಯೆಯಲ್ಲಿ ಯೋಚಿಸುವೆವು, ಮಾಯೆಯಲ್ಲಿ ಕನಸು ಕಾಣುವೆವು. ನಾವು ಮಾಯೆಯಲ್ಲಿ ತತ್ತ್ವಜ್ಞರು, ಆಧ್ಯಾತ್ಮಿಕ ಜೀವಿಗಳು. ಅದು ಮಾತ್ರ

ವಲ್ಲ, ನಾವು ಮಾಯೆಯಲ್ಲಿ ದೈತ್ಯರು ಮತ್ತು ದಾನವರು. ಸಾಧ್ಯವಾದಷ್ಟು ನಿಮ್ಮ ಭಾವನೆಯನ್ನು ಪಸರಿಸಿ ಮೇಲೆಮೇಲೆ ಹೋಗುವಂತೆ ಮಾಡಿ, ಅನಂತ ಅಥವಾ ಇನ್ನು ಯಾವುದಾದರೂ ಹೆಸರಿನಿಂದಲಾದರೂ ಅದನ್ನು ಕರೆಯಿರಿ. ಈ ಭಾವನೆಯೆಲ್ಲಾ ಮಾಯಾವರಣದೊಳಗೆ ಇರುವುದು. ಬೇರೆ ಸಾಧ್ಯವೇ ಇಲ್ಲ. ಮಾನವ ಜ್ಞಾನವೆಲ್ಲಾ ಈ ಮಾಯೆಯ ಪ್ರಮೇಯ (Generalisation) ನಮಗೆ ತೋರುವಂತೆ ತಿಳಿದುಕೊಳ್ಳಲು ಯತ್ನ. ಇವೆಲ್ಲ ನಾಮರೂಪಗಳ ಕೆಲಸ. ಆಕಾರವಿರುವ ಪ್ರತಿಯೊಂದೂ ನಿಮ್ಮ ಮನಸ್ಸಿನಲ್ಲಿ ಭಾವನೆಯನ್ನು ತರುವ ಪ್ರತಿಯೊಂದು ವಸ್ತುವೂ ಮಾಯಾವರಣದೊಳಗೆ ಇದೆ. ಕಾಲದೇಶ ಕಾರ್ಯಕಾರಣಗಳ ನಿಯಮಾವಳಿಗೆ ಬದ್ಧವಾಗಿರುವುದೆಲ್ಲಾ ಮಾಯೆಯಲ್ಲಿದೆ.

ದೇವರ ಮೊದಲ ಭಾವನೆಗಳೇನಾದುವೆಂಬುದನ್ನು ಸ್ವಲ್ಪ ಪರೀಕ್ಷಿಸೋಣ. ನಮ್ಮನ್ನು ಸದಾ ಪ್ರೀತಿಸುತ್ತಿರುವ, ನಿಸ್ವಾರ್ಥಿಯಾದ ಸರ್ವಶಕ್ತನಾದ ಸೃಷ್ಟಿರಕ್ಷಕನ ಭಾವನೆ ಅವರಿಗೆ ತೃಪ್ತಿತಾರದೆಂಬುದು ನಮಗೆ ತಕ್ಷಣವೇ ತೋರುವುದು. "ನ್ಯಾಯಪರ, ಕರುಣಾಪೂರಿತ ದೇವರೆಲ್ಲಿ?" ಎಂದು ತಾತ್ತ್ವಿಕ ಕೇಳಿದ. ದೇವರ ಕಣ್ಣಿಗೆ ಅವನ ಮಕ್ಕಳಾದ ಮನುಷ್ಯರು ಮೃಗಗಳಂತೆ ಕೋಟಿಗಟ್ಟಲೆ ಸಾಯುವುದು ಕಾಣುವುದಿಲ್ಲವೆ? ಇತರರನ್ನು ಕೊಲ್ಲದೆ ಯಾರು ಒಂದುಕ್ಷಣ ಈ ಪ್ರಪಂಚದಲ್ಲಿ ಬಾಳಬಲ್ಲರು? ಕೋಟ್ಯಂತರ ಜೀವರು ಸಾಯುವುದರಿಂದ ಅವರು ಬಾಳುವರು. ನಿಮ್ಮ ಬಾಳಿನ ಪ್ರತಿಯೊಂದು ಕ್ಷಣವೂ, ನೀವು ಬಿಡುವ ಪ್ರತಿಯೊಂದು ಉಸಿರೂ ಸಹಸ್ರಾರು ಜೀವಿಗಳಿಗೆ ಸಾವು. ನೀವು ಬಾಳುವ ಪ್ರತಿಯೊಂದು ಕ್ಷಣವೂ ಕೋಟ್ಯಂತರ ಜೀವಿಗಳಿಗೆ ಸಾವು. ನೀವು ಊಟಮಾಡುವ ಪ್ರತಿಯೊಂದು ತುತ್ತೂ ಕೋಟ್ಯಂತರ ಪ್ರಾಣಿಗಳಿಗೆ ಮೃತ್ಯು. ಅವು ಏತಕ್ಕೆ ಸಾಯಬೇಕು? ಅವೆಲ್ಲ ಅತಿ ಕೀಳು ಪ್ರಾಣಿವರ್ಗಕ್ಕೆ ಸೇರಿದವು ಎಂಬ ಹಳೆಯ ತರ್ಕವಿದೆ. ಅವು ಒಂದುವೇಳೆ ಆಗಿದ್ದರೂ (ಹಾಗೆ ಆಗಿದೆ ಎನ್ನುವುದು ಚರ್ಚಾವಸ್ತು) ಇರುವೆ ಮನುಷ್ಯನಿಗಿಂತ ದೊಡ್ಡದೊ ಮನುಷ್ಯ ಇರುವೆಗಿಂತ ದೊಡ್ಡದೊ ಯಾರಿಗೆ ಗೊತ್ತು? ಇದೇ ಸರಿ ಅಥವಾ ಅದೇ ಸರಿ ಎಂದು ಯಾರು ಸಾಧಿಸಬಲ್ಲರು. ಒಂದುವೇಳೆ ಅವು ಕೀಳುವರ್ಗಕ್ಕೆ ಸೇರಿವೆ ಎಂದು ಭಾವಿಸಿದರೂ ಅವೇಕೆ ಸಾಯಬೇಕು? ಅವು ಕೀಳು ತರಗತಿಗೆ ಸೇರಿದ್ದರೂ ಜೀವಿಸಲು ಹೆಚ್ಚು ಕಾರಣವಿದೆ. ಏತಕ್ಕೆ ಜೀವಿಸಬಾರದು? ಅವು ಇಂದ್ರಿಯಗಳಲ್ಲಿ ಹೆಚ್ಚು ಬದುಕುವುವು. ನಮಗಿಂತ

ಸಾವಿರಪಾಲು ಹೆಚ್ಚು ನೋವು ಮತ್ತು ಸಂತೋಷವನ್ನು ಅವು ಅನುಭವಿಸ ಬಲ್ಲವು. ನಮ್ಮಲ್ಲಿ ಯಾರು ನಾಯಿ ಅಥವಾ ತೋಳನಷ್ಟು ಉತ್ಸಾಹದಿಂದ ಊಟಮಾಡಬಲ್ಲರು ? ಯಾರೂ ಇಲ್ಲ. ಏಕೆಂದರೆ ನಮ್ಮ ಪ್ರಾಣ ಇಂದ್ರಿಯ ಗಳಲ್ಲಿ ಇಲ್ಲ. ಬುದ್ಧಿಯಲ್ಲಿದೆ ಆತ್ಮನಲ್ಲಿದೆ. ಆದರೆ ಮೃಗಗಳಿಗೆ ಪ್ರಾಣ ವೆಲ್ಲ ಇಂದ್ರಿಯಗಳಲ್ಲಿದೆ: ಅವು ಉನ್ಮತ್ತರಾಗಿ ನಮ್ಮ ಕಲ್ಪನೆಗೂ ಅಸಾಧ್ಯ ವಾಗಿ ಆನಂದಿಸಬಲ್ಲವು. ಸುಖಿಸಿದಷ್ಟೇ ದುಃಖ ಕೂಡ ಉತ್ಕಟವಾಗಿರು ವುದು. ಸುಖದುಃಖಗಳೆರಡೂ ಸಮಪ್ರಮಾಣದಲ್ಲಿ ದೊರಕುವುವು. ಮನುಷ್ಯನ ಸುಖಕ್ಕಿಂತ ಮೃಗಗಳ ಸುಖ ತೀವ್ರವಾದರೆ ಅವುಗಳ ನೋವೂ ಕೂಡ ಮನುಷ್ಯನ ನೋವಿಗಿಂತ ತೀವ್ರವಲ್ಲದೆ ಇದ್ದರೆ ಅಷ್ಟೇ ತೀವ್ರವಾಗಿ ಆದರೂ ಇರುವುದು. ಮನುಷ್ಯನಿಗೆ ಸಾಯುವಾಗ ಆಗುವ ದುಃಖ ನೋವಿಗಿಂತಲೂ ಮೃಗಗಳಲ್ಲಿ ಸಹಸ್ರಪಾಲು ಹೆಚ್ಚಾಗಿರುವುದು. ಆದರೂ ಅವುಗಳ ವ್ಯಥೆಯನ್ನು ಪರಿಗಣಿಸದೆ ಕೊಲ್ಲುತ್ತೇವೆ. ಇದೇ ಮಾಯೆ. ಒಬ್ಬ ಮನುಷ್ಯನಂತೆ ಸೃಷ್ಟಿಕರ್ತನಾದ ಸಾಕಾರ ದೇವರೊಬ್ಬನಿರುವನು ಎಂದು ಭಾವಿಸಿದರೆ, ಪಾಪದಿಂದ ಪುಣ್ಯ ಉದಿಸುವುದು ಎಂಬ ವಿವರಣೆ ಮತ್ತು ಸಿದ್ಧಾಂತಗಳು ಸಮರ್ಪಕವಾಗಿಲ್ಲ. ಇಪ್ಪತ್ತುಸಾವಿರ ಒಳ್ಳೆಯದು ಬರಲಿ. ಆದರೆ ಅವು ಕೆಟ್ಟದ್ದರಿಂದ ಏತಕ್ಕೆ ಬರಬೇಕು ? ಈ ಸಿದ್ಧಾಂತದ ಆಧಾರದಮೇಲೆ, ನನ್ನ ಪಂಚೇಂದ್ರಿಯಗಳ ಸುಖಕ್ಕಾಗಿ ಇತರರನ್ನು ಕೊಲೆಮಾಡಬಹುದು. ಇದು ಸಮರ್ಪಕವಾಗಿಲ್ಲ. ಪಾಪದಿಂದ ಏತಕ್ಕೆ ಪುಣ್ಯ ಬರಬೇಕು ? ಈ ಪ್ರಶ್ನೆಯನ್ನು ಬಗೆಹರಿಸಬೇಕಾಗಿದೆ. ಇದನ್ನು ಬಗೆಹರಿಸಲು ಸಾಧ್ಯವಿಲ್ಲ. ಹಿಂದೂತತ್ತ್ವ ಇದನ್ನು ಒಪ್ಪಿಕೊಳ್ಳಲೇ ಬೇಕಾಯಿತು.

ವೇದಾಂತ ಹಿಂದೆ ಮತ್ತು ಈಗ ಕೂಡ ಅತಿಧೀರ ಧಾರ್ಮಿಕ ಸಿದ್ಧಾಂತ. ಅದು ಎಲ್ಲಿಯೂ ನಿಲ್ಲಲಿಲ್ಲ. ಅದಕ್ಕೆ ಒಂದು ಅನುಕೂಲವಿತ್ತು. ಸತ್ಯವನ್ನು ಹೇಳಬೆಕೆನ್ನಿಸುವವರ ಬಾಯಿಮುಚ್ಚಿಸಲು ಪುರೋಹಿತ ಪಂಗಡ ವಿರಲಿಲ್ಲ. ಯಾವಾಗಲೂ ಯಾವ ಆತಂಕವಿಲ್ಲದ ಪೂರ್ಣ ಧಾರ್ಮಿಕ ಸ್ವಾತಂತ್ರ್ಯವಿತ್ತು. ಇಂಡಿಯಾದೇಶದಲ್ಲಿ ಮೂಢನಂಬಿಕೆಯ ಬಂಧನ ವಿರುವುದು ಸಮಾಜಕ್ಕೆ. ಪಾಶ್ಚಾತ್ಯದೇಶದಲ್ಲಿ ಸಮಾಜ ಸ್ವತಂತ್ರವಾಗಿರು ವುದು. ಭರತಖಂಡದಲ್ಲಿ ಸಾಮಾಜಿಕ ಆಚಾರಗಳಲ್ಲಿ ಬಹಳ ಕಟ್ಟುನಿಟ್ಟು. ಆದರೆ ಧಾರ್ಮಿಕಭಾವನೆಯಲ್ಲಿ ಸ್ವತಂತ್ರರು. ಇಂಗ್ಲೆಂಡಿನಲ್ಲಿ ಅವನು ಹೇಗೆ ಬೇಕಾದರೂ ಬಟ್ಟೆಬರೆಹಾಕಿಕೊಳ್ಳಬಹುದು, ಏನನ್ನು ಬೇಕಾದರೂ ತಿನ್ನ

ಬಹುದು. ಯಾರೂ ಆಕ್ಷೇಪಿಸುವುದಿಲ್ಲ. ಚರ್ಚಿಗೆ ಹೋಗುವುದು ತಪ್ಪಿದರೆ ಆಗಲೆ ಅವನ ಹೆಂಡತಿ ಮೇಲೆ ಬೀಳುವಳು. ಮೊದಲು ಸಮಾಜ ಧರ್ಮವಮೇಲೆ ಏನು ಹೇಳುತ್ತದೆ ಎಂಬುದನ್ನು ಒಪ್ಪಿಕೊಳ್ಳಬೇಕು. ಅನಂತರ ಅವನು ಸತ್ಯವನ್ನು ಕುರಿತು ಆಲೋಚಿಸಬಹುದು. ಆದರೆ ಭರತಖಂಡದಲ್ಲಿ ತನ್ನ ಜಾತಿಗೆ ಸೇರದವರೊಡನೆ ಅವನು ಊಟ ಮಾಡಿದರೆ, ಸಮಾಜ ಅವನಮೇಲೆ ಕ್ರೂರವಾಗಿ ಬಿದ್ದು ಅಲ್ಲೆ ಅವನನ್ನು ನಾಶಮಾಡುವುದು. ತನ್ನ ಪೂರ್ವಿಕರು ಯಾವರೀತಿ ಬಟ್ಟೆಬರೆ ಹಾಕಿಕೊಳ್ಳುತ್ತಿದ್ದರೊ ಅದಕ್ಕಿಂತ ಸ್ವಲ್ಪ ಬೇರೆ ಅವನು ಯತ್ನಿಸಿದರೂ ಆಯಿತು ಅವನ ಪಾಡು. ಒಬ್ಬ ಮೊದಲನೆ ರೈಲ್ವೆಬಂಡಿ ನೋಡಲು ಹಲವು ಮೈಲಿ ನಡೆದುಕೊಂಡುಹೋದನೆಂದು ಅವನನ್ನು ಸಮಾಜ ಬಹಿಷ್ಕರಿಸಿದುದನ್ನು ನಾನು ಕೇಳಿರುವೆನು. ಆಗಲಿ ಅದು ಸತ್ಯವಲ್ಲ ಎಂದು ಬೇಕಾದರೆ ತಿಳಿದುಕೊಳ್ಳೋಣ. ಆದರೆ ಧರ್ಮದಲ್ಲಿ, ನಾಸ್ತಿಕರು ಜಡವಾದಿಗಳು, ಬೌದ್ಧರು ಅತಿಚಿತ್ರವಿಚಿತ್ರವಾದ ಭಾವನೆಗಳವರೂ ಪಕ್ಕ ದಲ್ಲೆ ಇರುವರು. ಎಲ್ಲಾ ಕೋಮಿನವರೂ ತಮ್ಮ ಬೋಧನೆಯನ್ನು ಪ್ರಚಾರಮಾಡಿ ಅನುಯಾಯಿಗಳನ್ನು ಪಡೆಯುವರು. ದೇವಸ್ಥಾನದ ಬಾಗಿಲಿನಲ್ಲೆ ಬ್ರಾಹ್ಮಣರು (ಅವರ ಉದಾರತೆಯನ್ನು ಒಪ್ಪಿಕೊಳ್ಳ ಬೇಕಾಗಿದೆ) ಜಡವಾದಿಗಳು ಮತ್ತು ಇತರರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅವಕಾಶಕೊಡುವರು.

ಬುದ್ಧ ಬಹಳ ವೃದ್ಧಾಪ್ಯದಲ್ಲಿ ಕಾಲವಾದ. ನನ್ನ ಸ್ನೇಹಿತನಾದ ಒಬ್ಬ ಪ್ರಖ್ಯಾತ ಅಮೆರಿಕ ವಿಜ್ಞಾನಿಗೆ ಬುದ್ಧನ ಜೀವನಚರಿತ್ರೆ ಓದುವು ದರಲ್ಲಿ ಬಹಳ ಆಸಕ್ತಿ. ಅವನು ಬುದ್ಧನ ಮರಣರೀತಿಯನ್ನು ಮೆಚ್ಚಲಿಲ್ಲ. ಏಕೆಂದರೆ ಅವನನ್ನು ಶಿಲುಬೆಗೆ ಏರಿಸಲಿಲ್ಲ. ಎಂತಹ ತಪ್ಪು ಭಾವನೆ! ಮನುಷ್ಯ ಮಹಾತ್ಮನಾಗಬೇಕಾದರೆ ಅವನನ್ನು ಕೊಲೆಮಾಡಬೇಕು. ಇಂತಹ ಭಾವನೆ ಭರತಖಂಡದಲ್ಲಿ ಎಂದೂ ಇರಲಿಲ್ಲ. ಈ ಮಹಾಪುರುಷ ಬುದ್ಧ ಭರತಖಂಡದ ದೇವತೆಗಳು ಮತ್ತು ಇಡೀ ವಿಶ್ವದ ದೇವರನ್ನೇ ಟೀಕಿ ಸುತ್ತಾ ದೇಶವಲ್ಲೆಲ್ಲಾ ಸಂಚಾರಮಾಡಿದ. ಆದರೂ ವೃದ್ಧಾಪ್ಯದತನಕ ಬದುಕಿದ್ದ. ಎಂಭತ್ತು ವರ್ಷ ಬದುಕಿದ್ದ. ಭರತಖಂಡದ ಅರ್ಧಭಾಗ ವನ್ನೇ ಬೌದ್ಧರನ್ನಾಗಿ ಮಾಡಿದ್ದ.

ಅನಂತರ ಚಾರ್ವಾಕರಿದ್ದರು. ಹತ್ತೊಂಭತ್ತನೇ ಶತಮಾನದಲ್ಲಿ ಕೂಡ ಬಹಿರಂಗವಾಗಿ ವ್ಯಕ್ತಗೊಳಿಸಲಾಗದ ಅತಿಹೇಯವಾದ ನಿಸ್ಸಂದೇಹ

ವಾದ, ಪ್ರತ್ಯಕ್ಷವಾದ ಜಡವಾದವನ್ನು ಬೋಧಿಸತೊಡಗಿದರು. ದೇವಸ್ಥಾನ ದಿಂದ ದೇವಸ್ಥಾನಕ್ಕೆ, ಊರಿಂದೂರಿಗೆ, ಧರ್ಮ ಕೆಲಸಕ್ಕೆ ಬಾರದುದು ಇದೆಲ್ಲ ಪೂಜಾರಿಗಳ ಕಲ್ಪನೆ, ವೇದಗಳು ಬುದ್ಧಿ ಇಲ್ಲದ ಮೂರ್ಖರು ಮೋಸಗಾರರು ಅಸುರರು ಬರೆದುದು, ದೇವರು ಇಲ್ಲ ಅನಂತಾತ್ಮನೂ ಇಲ್ಲ ಎಂದು ಸಾರಿದರು. ನಿಜವಾಗಿ ಒಂದು ಆತ್ಮವಿದ್ದರೆ ಹೆಂಡತಿ ಮಕ್ಕಳ ಪ್ರೀತಿಯಿಂದ ಆಕರ್ಷಿತವಾಗಿ ಏತಕ್ಕೆ ಕಾಲವಾದಮೇಲೆ ಹಿಂತಿರುಗಿ ಬರಲಿಲ್ಲ? ಒಂದು ಆತ್ಮವಿದ್ದರೆ ಅದು ಮರಣಾನಂತರವೂ ಪ್ರೀತಿಸಬೇಕು ತಿನ್ನುವುದಕ್ಕೆ ರುಚಿಕರವಾಗಿರುವುದು ಬೇಕು, ಉಡುವುದಕ್ಕೆ ಸುಂದರ ವಾಗಿರುವುದು ಬೇಕು ಎಂದು ಅವರ ಭಾವನೆ. ಆದರೆ ಯಾರೂ ಚಾರ್ವಾಕರಿಗೆ ಹಿಂಸೆಕೊಡಲಿಲ್ಲ.

ಭರತಖಂಡದಲ್ಲಿ ಅದ್ಭುತವಾದ ಧಾರ್ಮಿಕಸ್ವಾತಂತ್ರ್ಯವಿತ್ತು. ಅಭಿವೃದ್ಧಿಗೆ ಸ್ವಾತಂತ್ರ್ಯವೇ ಪ್ರಥಮನಿಯಮವೆಂಬುದನ್ನು ಜ್ಞಾಪಕ ದಲ್ಲಿಡಬೇಕು. ಯಾವುದನ್ನು ನೀವು ಸ್ವತಂತ್ರಮಾಡಲಾರಿರೊ ಅದು ವಿಕಾಸವಾಗುವುದಿಲ್ಲ. ನೀವು ಮಾತ್ರ ಗುರುವಿನ ಸ್ವಾತಂತ್ರ್ಯವನ್ನು ಇಟ್ಟು ಕೊಂಡು, ಇತರರಿಗೆ ಅದನ್ನು ಕೊಡದೆ, ಇತರರ ವಿಕಾಸಕ್ಕೆ, ಅವರ ಬೆಳವಣಿಗೆಗೆ, ನೀವು ಅವರಿಗೆ ಮಾರ್ಗದರ್ಶಕರಾಗಬಹುದು, ಬುದ್ಧಿಹೇಳ ಬಹುದೆಂಬುದೆಲ್ಲಾ ವ್ಯರ್ಥ. ಇದೊಂದು ಅಪಾಯಕರವಾದ ಅನೃತ. ಪ್ರಪಂಚದಲ್ಲಿ ಕೋಟ್ಯಂತರ ಜೀವಿಗಳ ಬೆಳವಣಿಗೆಗೆ ಇದು ಆತಂಕವಾಗಿದೆ. ಮನುಷ್ಯನಿಗೆ ಸ್ವಾತಂತ್ರ್ಯಪ್ರಕಾಶ ದೊರಕಲಿ. ಅದೇ ಬೆಳವಣಿಗೆಗೆ ಏಕಮಾತ್ರ ನಿಯಮ.

ಭರತಖಂಡದಲ್ಲಿ ಆಧ್ಯಾತ್ಮಿಕ ವಿಷಯದಲ್ಲಿ ನಾವು ಬೇಕಾದಷ್ಟು ಸ್ವಾತಂತ್ರ್ಯವನ್ನು ಕೊಟ್ಟೆವು. ಅದಕ್ಕೇ ಇಂದಿಗೂ ಧಾರ್ಮಿಕಭಾವನೆ ಯಲ್ಲಿ ಪ್ರಚಂಡಶಕ್ತಿ ಇದೆ. ಸಮಾಜಕ್ಕೆ ನೀವು ಇದೇ ಸ್ವಾತಂತ್ರ್ಯ ಕೊಟ್ಟರೆ ಅದ್ಭುತ ಸಮಾಜ ರಚನೆ ಆಗುವುದು. - ಸಾಮಾಜಿಕ ವಿಷಯ ಗಳಲ್ಲಿ ನಾವು ಸ್ವಾತಂತ್ರ್ಯ ಕೊಡದೆ ಇದ್ದುದರಿಂದ ಅದು ಸಂಕುಚಿತವಾಗಿದೆ. ನೀವು ಧಾರ್ಮಿಕ ಭಾವನೆಗೆ ಎಂದಿಗೂ ಸ್ವಾತಂತ್ರ್ಯ ವನ್ನೇ ಕೊಟ್ಟಿಲ್ಲ. ಯಾವಾಗಲೂ ಕತ್ತಿ ಕೋವಿಯ ಮೂಲಕ ನಿಮ್ಮ ಭಾವನೆಯನ್ನು ಬಲಾತ್ಕರಿಸಿರುವಿರಿ. ಆದಕಾರಣವೇ ಐರೋಪ್ಯರಲ್ಲಿ ಧರ್ಮ ಬೆಳದೇ ಇಲ್ಲ. ಅಧೋಗತಿಯಲ್ಲಿರುವುದು. ಭರತಖಂಡದಲ್ಲಿ ಸಮಾಜಶೃಂಖಲೆ ತೆಗೆಯಬೇಕು, ಯೂರೋಪಿನಲ್ಲಿ ಧಾರ್ಮಿಕ ಪ್ರಗತಿಗೆ

ಇರುವ ಆತಂಕವನ್ನು ನಿವಾರಿಸಬೇಕು. ಆಗ ಮನುಷ್ಯ ಅದ್ಭುತವಾಗಿ ಬೆಳೆಯುವನು, ವಿಕಾಸವಾಗುವನು. ಆಧ್ಯಾತ್ಮಿಕ, ನೈತಿಕ, ಸಾಮಾಜಿಕ ಬೆಳವಣಿಗೆಯಲ್ಲೆಲ್ಲಾ ಒಂದು ಐಕ್ಯತೆ ಇದೆ ಎಂಬುದನ್ನು ಕಂಡುಹಿಡಿದಾಗ, ಪೂರ್ಣವಾಗಿ ಧಾರ್ಮಿಕ ಭಾವನೆ ಸಮಾಜಕ್ಕೆ ಬರಬೇಕು, ನಮ್ಮ ನಿತ್ಯ ಜೀವನಕ್ಕೆ ಇಳಿಯಬೇಕು. ವೇದಾಂತದ ದೃಷ್ಟಿಯಿಂದ, ಎಲ್ಲಾ ಶಾಸ್ತ್ರಗಳೂ ಧರ್ಮದ ಆವಿರ್ಭಾವನೆ, ಅದರಂತೆಯೇ ಪ್ರಪಂಚದಲ್ಲಿ ಇರುವುದೆಲ್ಲ ಎಂಬುದನ್ನು ತಿಳಿದುಕೊಳ್ಳುವಿರಿ.

ಸ್ವಾತಂತ್ರ್ಯದಿಂದ ವಿಜ್ಞಾನ ಬೆಳೆಯಿತು ಎಂಬುದನ್ನು ನಾವು ನೋಡುವೆವು. ಅವುಗಳಲ್ಲಿ ಎರಡು ಬಗೆಯ ಅಭಿಪ್ರಾಯಗಳಿವೆ, ಒಂದು ಜಡವಾದ ವಿರೋಧಿಸುವುದು, ಮತ್ತೊಂದು ಸ್ಪಷ್ಟವಾದ ಪೂರಕ ಭಾವನೆಯದು. ಇದೊಂದು ವಿಚಿತ್ರ ವಿಷಯ. ಇದನ್ನು ಪ್ರತಿಯೊಂದು ಸಮಾಜದಲ್ಲಿಯೂ ನೋಡುತ್ತೇವೆ. ಸಮಾಜದಲ್ಲಿ ಒಂದು ದೋಷವಿದ್ದರೆ ಒಂದು ಪಕ್ಷದವರು ಅದನ್ನು ಕಟುವಾಗಿ ಟೀಕಿಸುವರು. ಅದು ಕೆಲವು ವೇಳೆ ಧರ್ಮಾಂಧತೆಯಾಗುವುದು. ಪ್ರತಿಯೊಂದು ಸಮಾಜದಲ್ಲಿಯೂ ಮತಭ್ರಾಂತರಿರುವರು. ಅನೇಕವೇಳೆ ಈ ಕೂಗಾಟಕ್ಕೆ ಹೆಂಗಸರು ಸೇರುವರು. ಅವರ ಉದ್ವೇಗ ಸ್ವಭಾವವೇ ಇದಕ್ಕೆ ಕಾರಣ. ಯಾವುದನ್ನಾದರೂ ದೂರುವ ಪ್ರತಿಯೊಬ್ಬ ಮತಭ್ರಾಂತನಿಗೂ ಕೆಲವು ಅನುಯಾಯಿಗಳು ದೊರಕುವರು. ಧ್ವಂಸಮಾಡುವುದು ಬಹಳ ಸುಲಭ. ಹುಚ್ಚ ತನ್ನ ಮನಸ್ಸಿಗೆ ತೋಚಿದುದನ್ನು ಮುರಿದುಹಾಕಬಲ್ಲ. ಆದರೆ ಯಾವುದನ್ನು ರಚಿಸಬೇಕಾದರೂ ಬಹಳ ಕಷ್ಟ. ಮತಭ್ರಾಂತರು ತಮ್ಮ ದೃಷ್ಟಿಯಲ್ಲಿ ಸ್ವಲ್ಪ ಒಳ್ಳೆಯದನ್ನು ಮಾಡಬಹುದು. ಆದರೆ ಅದಕ್ಕಿಂತ ಹೆಚ್ಚು ನಾಶ ಮಾಡುವರು. ಒಂದು ದಿನದಲ್ಲಿ ಸಮಾಜ ಸುಸ್ಥಿತಿಯನ್ನು ರಚಿಸಲು ಆಗುವುದಿಲ್ಲ. ಅವುಗಳನ್ನು ಬದಲಾಯಿಸಬೇಕಾದರೆ ಮೂಲಕಾರಣವನ್ನು ತೆಗೆಯಬೇಕಾಗಿದೆ. ಒಂದು ದೋಷವಿದೆ ಎಂದು ಭಾವಿಸೋಣ. ಸುಮ್ಮನೆ ಅದನ್ನು ಟೀಕಿಸಿದರೆ ಬಗೆಹರಿಸಲಾರೆವು. ಅದರ ಮೂಲಕ್ಕೆ ಹೋಗಿ ಕೆಲಸ ಮಾಡಬೇಕು. ಮೊದಲು ಅದಕ್ಕೆ ಕಾರಣ ಕಂಡುಹಿಡಿಯಿರಿ, ಅನಂತರ ಅದನ್ನು ನಿರ್ಮೂಲನಮಾಡಿ, ಆಗ ಪರಿಣಾಮವೂ ಮಾಯವಾಗುವುದು. ಸುಮ್ಮನೆ ತಪ್ಪು ಕಂಡುಹಿಡಿಯುವುದರಿಂದ ಪ್ರಯೋಜನವಿಲ್ಲ. ಅದರಿಂದ ಬರೀ ದುರ್ದೆಸೆ ಮಾತ್ರ ಪ್ರಾಪ್ತವಾಗಬಹುದು.

ಮತ್ತೆ ಕೆಲವರ ಹೃದಯದಲ್ಲಿ ಅನುಕಂಪವಿತ್ತು. ಕಾರಣದ

ಮೂಲಕ್ಕೆ ಪರಿಹಾರಕ್ಕಾಗಿ ಹೋಗಬೇಕೆಂಬುದು ಅವರಿಗೆ ಗೊತ್ತಿತ್ತು. ಇವರೇ ಮಹಾತ್ಮರು. ಪ್ರಪಂಚದ ಶ್ರೇಷ್ಠಗುರುಗಳೆಲ್ಲಾ ತಾವು ಧ್ವಂಸಕ್ಕೆ ಬರಲಿಲ್ಲ, ಪೂರೈಸುವುದಕ್ಕೆ ಬಂದವರು ಎಂದು ಸಾರುವುದನ್ನು ನೀವು ಜ್ಞಾಪಕದಲ್ಲಿಡಬೇಕು. ಅನೇಕವೇಳೆ ಇದನ್ನು ಅರ್ಥಮಾಡಿಕೊಳ್ಳದೆ ಅವರ ಸಹನೆ ಗುಣವನ್ನು ನೋಡಿ, ರೂಢಿಯಲ್ಲಿರುವ ಸಾಮಾನ್ಯ ಅಭಿಪ್ರಾಯದೊಂದಿಗೆ ಯೋಗ್ಯವಲ್ಲದ ರೀತಿಯಲ್ಲಿ ರಾಜಿಮಾಡಿಕೊಂಡಿರುವರು ಎಂದು ಭಾವಿಸಿದ್ದೇವು. ಈ ಮಹಾವ್ಯಕ್ತಿಗಳು, ಗುರುಗಳು ಕೆಲವುವೇಳೆ ಹೇಡಿಗಳು, ಯಾವುದು ಸರಿಯೆಂದು ತೋರಿತ್ತೋ ಅದನ್ನು ಹೇಳಲಿಲ್ಲ, ಮಾಡಲಿಲ್ಲ ಎನ್ನುವುದನ್ನು ಈಗಲೂ ಕೆಲವುವೇಳೆ ಕೇಳುತ್ತೀರಿ. ಈ ಮಹಾತ್ಮರ ಹೃದಯದಲ್ಲಿದ್ದ ಅಪಾರ ಪ್ರೇಮಶಕ್ತಿ ಮತಭ್ರಾಂತರಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಈ ಮಹಾತ್ಮರು ಪ್ರಪಂಚದಲ್ಲಿರುವವರನ್ನು ತಮ್ಮ ಮಕ್ಕಳೆಂದು ಭಾವಿಸಿದರು. ಅವರೇ ನಿಜವಾದ ಪಿತೃಗಳು, ದೇವರು. ಪ್ರತಿಯೊಬ್ಬರಿಗೂ ಅನಂತ ಸಹಾನುಭೂತಿ ಮತ್ತು ಸಹನೆ ಇತ್ತು. ಸಹಿಸುವುದಕ್ಕೆ ಕ್ಷಮಿಸುವುದಕ್ಕೆ ಸಿದ್ಧರಾಗಿದ್ದರು. ಮಾನವ ಸಮಾಜ ಹೇಗೆ ಬೆಳೆಯಬೇಕೆಂಬುದು ಅವರಿಗೆ ಗೊತ್ತಿತ್ತು. ಸಹನೆಯಿಂದ ಸಾವಧಾನದಿಂದ ನಿಶ್ಚಯವಾಗಿ ಅದನ್ನು ಸರಿಪಡಿಸುತ್ತಾ ಹೋದರು. ಜನರನ್ನು ಅಲ್ಲಗಳೆದು, ಅಂಜಿಸಿ ಮಾಡಲಿಲ್ಲ. ಮೆಟ್ಟಲು ಮೆಟ್ಟಲಾಗಿ ದಯೆಯಿಂದ ಮೃದುವಾಗಿ ಮೇಲಮೇಲಕ್ಕೆ ಕರೆದುಕೊಂಡು ಹೋದರು. ಉಪನಿಷತ್ತಿನ ಕರ್ತೃಗಳು ಇಂತಹವರು. ದೇವರ ಹಳೆಯ ಭಾವನೆಯನ್ನು, ಅಭಿವೃದ್ಧಿಹೊಂದಿದ ನೈತಿಕ ಭಾವನೆಯೊಂದಿಗೆ ಹೊಂದಿಸಲು ಸಾಧ್ಯವಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ನಾಸ್ತಿಕರು ಏನನ್ನು ಬೋಧಿಸುತ್ತಿದ್ದರೊ ಅದರಲ್ಲಿ ಸತ್ಯಾಂಶಗಳಿದ್ದುವು, ಇಲ್ಲಿ ಸತ್ಯದ ಘಟ್ಟಗಳೇ ಇದ್ದುವು, ಆದರೆ ಹಲವು ಮಣಿಗಳನ್ನು ಒಂದುಗೂಡಿಸಿರುವ ಸೂತ್ರವನ್ನು ಯಾರು ಛೇದಿಸಲು ಇಚ್ಛಿಸುತ್ತಿದ್ದರೊ, ಹೊಸದೊಂದು ಸಮಾಜವನ್ನು ಯಾವ ಆಸರೆಯೂ ಇಲ್ಲದೆ ನಿರ್ಮಿಸಲು ಯತ್ನಿಸುತ್ತಿದ್ದರೊ, ಅವರ ಪ್ರಯತ್ನ ಪೂರ್ಣ ನಿಷ್ಫಲವಾಗುವುದೆಂದೂ ಅವರಿಗೆ ಗೊತ್ತಿತ್ತು.

ನಾವು ಹೊಸದಾಗಿ ಏನನ್ನೂ ಕಟ್ಟುವುದಿಲ್ಲ. ಸ್ಥಳಬದಲಾಯಿಸುವೆವು, ಅಷ್ಟೆ. ನಮಗೆ ಹೊಸದಾವುದೂ ದೊರಕದು. ಇರುವ ವಸ್ತುವಿನ ಸ್ಥಿತಿಯನ್ನು ಬದಲಾಯಿಸುವೆವು. ಬೀಜ ಸಾವಧಾನದಿಂದ ನಿಧಾನವಾಗಿ ಮರವಾಗುವುದು. ನಾವು ನಮ್ಮ ಶಕ್ತಿಯನ್ನು ಸತ್ಯದ ಕಡೆಗೆ ಹರಿಸಬೇಕು.

ಹೊಸದನ್ನು ಸೃಷ್ಟಿಸಲು ಯತ್ನಿಸಕೂಡದು. ಹಳೆಯ ದೇವರಭಾವನೆ ಆಧುನಿಕಕಾಲಕ್ಕೆ ಸರಿಹೋಗದೆಂದು ಅದನ್ನು ದೂರುವ ಬದಲು, ಅವುಗಳ ಅಂತರಾಳವಲ್ಲಿರುವ ಸತ್ಯವನ್ನರಿಯಲು ಯತ್ನಿಸಿದರು. ಇದರ ಪ್ರತಿಫಲವೇ ವೇದಾಂತತತ್ತ್ವ. ಪುರಾತನ ಹಲವು ದೇವತೆಗಳಿಂದ, ಸೃಷ್ಟಿಪಾಲಕನಾದ ಏಕದೇವಭಾವನೆಯಿಂದ ಮತ್ತು ಉತ್ತಮತರಭಾವನೆಗಳನ್ನು ನಿರಾಕಾರಬ್ರಹ್ಮನಲ್ಲಿ ಕಂಡರು. ವಿಶ್ವದಲ್ಲೆಲ್ಲ ಐಕ್ಯತಾಭಾವನೆಯನ್ನು ಕಂಡರು.

ಯಾರು ಈ ವೈವಿಧ್ಯತೆಯಿಂದ ತುಂಬಿತುಳುಕಾಡುತ್ತಿರುವ ಜಗತ್ತಿನಲ್ಲಿ, ಈ ವೈವಿಧ್ಯತೆಗಳ ಅಂತರಾಳದಲ್ಲಿ ಹರಿಯುತ್ತಿರುವ ಏಕವನ್ನು ನೋಡುವರೋ, ಈ ಮೃತ್ಯು ಜೀವನದಲ್ಲಿ ಯಾರು ಅನಂತಾತ್ಮನನ್ನು ನೋಡುವರೋ, ಈ ಜಡ ಮತ್ತು ಅಜ್ಞಾನ ಜಗತ್ತಿನಲ್ಲಿ ಆ ಒಂದು ಪ್ರಕಾಶವನ್ನು ಜ್ಞಾನವನ್ನು ಕಾಣುವರೊ ಅವನಿಗೆ ಮಾತ್ರ ಶಾಶ್ವತ ಶಾಂತಿ, ಇತರರಿಗಿಲ್ಲ.

—–—

# ಮಾಯೆ ಮತ್ತು ಮುಕ್ತಿ

ದಿವ್ಯಪ್ರಭೆಯ ಮೇಘಮಾಲೆಯಂತೆ ನಾವು ಬರುತ್ತೇವೆ ಎನ್ನುವನು ಕವಿ. ನಾವೆಲ್ಲ ದಿವ್ಯಪ್ರಭೆಯ ಮುಗಿಲಿನಂತೆ ಬರುವುದಿಲ್ಲ. ನಮ್ಮಲ್ಲಿ ಕೆಲವರು ಕಪ್ಪೆಗೆಯಂತೆ ಬರುವರು. ಇದರಲ್ಲಿ ಸಂದೇಹವೇ ಇಲ್ಲ. ಪ್ರತಿಯೊಬ್ಬರೂ ರಣರಂಗದಲ್ಲಿ ಹೋರಾಡುವುದಕ್ಕೆ ಬರುವಂತೆ ಬರುವರು. ಅಳುತ್ತಾ, ಒಂದು ಮಾರ್ಗಕ್ಕಾಗಿ ಹೋರಾಡಲು ಸಾಧ್ಯವಾದಷ್ಟು ಪ್ರಯತ್ನಿಸುವೆವು. ಅನಂತಭವಸಾಗರದಲ್ಲಿ ನಮಗೊಂದು ದಾರಿಗಾಗಿ ಯತ್ನಿಸುವೆವು. ಮುಂದೆ ಮುಂದೆ ಹೋಗುತ್ತೇವೆ. ನಮ್ಮ ಹಿಂದೆ ಅನಂತಕಾಲವಿದೆ, ನಮ್ಮ ಮುಂದೆ ಅನಂತ ಅಸೀಮ ದೇಶವಿದೆ. ಮೃತ್ಯು ಬರುವವರೆಗೆ ಹೀಗೆ ಸಾಗುತ್ತಿರುವೆವು. ನಮ್ಮನ್ನು ಕಾರ್ಯಕ್ಷೇತ್ರದಿಂದ ಸೋತೆವೊ ಗೆದ್ದೆವೊ ಯಾವುದೂ ಗೊತ್ತಿಲ್ಲ, ಅಂತೂ ಒಯ್ಯುವುದು. ಇದೇ ಮಾಯೆ.

ಬಾಲ್ಯದಲ್ಲಿ ಭರವಸೆ ಬಲವಾಗಿರುವುದು. ಕಣ್ತೆರೆಯುವ ಮಗುವಿಗೆ ಪ್ರಪಂಚವೆಲ್ಲ ಒಂದು ಸ್ವರ್ಣಸ್ವಪ್ನ. ತನ್ನ ಇಚ್ಛೆಯನ್ನು ಮೀರುವುದಾವುದೂ ಇಲ್ಲ ಎಂದು ಭಾವಿಸುವುದು. ಅವನು ಮುಂದುವರಿದಂತೆ ಹೆಜ್ಜೆಹೆಜ್ಜೆಗೆ ಅವನ ಭವಿಷ್ಯದೇಳಿಗೆಗೆ ಆತಂಕವಾಗಿ ಅಭೇದ್ಯಕೋಟೆಯಂತೆ ಪ್ರಕೃತಿ ನಿಲ್ಲುವುದು. ಅದನ್ನು ಭೇದಿಸುವುದಕ್ಕೆ ಪದೇ ಪದೇ ಅದರಮೇಲೆ ಬೀಳಬಹುದು. ಅವನು ಮುಂದೆ ಸರಿದಂತೆ ಆದರ್ಶವೂ ಮೃತ್ಯು ಸಮೀಪಿಸುವ ಪರಿಯಂತರ ಮುಂದೆ ಮುಂದೆ ಸರಿಯುವುದು: ಬಹುಶಃ ಮೃತ್ಯುವಿನಲ್ಲಿ ಬಿಡುಗಡೆ ಇರಬಹುದು! ಇದೇ ಮಾಯೆ.

ವಿಜ್ಞಾನಿಯೊಬ್ಬ ಏಳುವನು. ಜ್ಞಾನಾಕಾಂಕ್ಷಿಯಾಗಿರುವನು. ಇದಕ್ಕಾಗಿ ಯಾವ ತ್ಯಾಗವೂ ದೊಡ್ಡದಲ್ಲ. ಯಾವ ಹೋರಾಟವೂ ನಿರಾಶೆಯಲ್ಲ. ಪ್ರಕೃತಿಯ ರಹಸ್ಯಗಳನ್ನು ಒಂದಾದಮೇಲೊಂದು ಕಂಡು ಹಿಡಿಯುತ್ತಾ ಹೋಗುವನು. ಪ್ರಕೃತಿಯ ಹೃದಯಾಂತರಾಳದಿಂದ ರಹಸ್ಯಗಳನ್ನು ಭೇದಿಸಿ ತೆಗೆಯುವನು. ಇದು ಏತಕ್ಕೆ? ಇದೆಲ್ಲ ಏತಕ್ಕೆ? ಅವನಿಗೇತಕ್ಕೆ ಕೀರ್ತಿ ಕೊಡಬೇಕು? ಅವನೇತಕ್ಕೆ ಕೀರ್ತಿ ಸಂಪಾದಿಸಬೇಕು? ಮನುಷ್ಯನಿಗಿಂತ ಪ್ರಕೃತಿ ಅದನ್ನು ಅನಂತವಾಗಿ ಮಾಡಲಾರದೇನು? ಪ್ರಕೃತಿ ಜಡ ಅಚೇತನ, ಜಡ ಅಚೇತನ ಪ್ರಕೃತಿಯನ್ನು ಅನುಕರಿಸುವುದಕ್ಕೆ ಏತಕ್ಕೆ ಕೀರ್ತಿ? ಪ್ರಕೃತಿ ಎಷ್ಟು ದೂರಕ್ಕೆ ಬೇಕಾದರೂ,

ಯಾವ ಪ್ರಮಾಣದ ಮಿಂಚನ್ನು ಬೇಕಾದರೂ ಎಸೆಯಬಲ್ಲದು. ಅದರಲ್ಲಿ ಎಲ್ಲೋ ಒಂದು ಅಂಶಮಾಡಿದರೆ ಮನುಷ್ಯನನ್ನು ಹೊಗಳಿ ಆಕಾಶಕ್ಕೆ ಏರಿಸುವೆವು. ಏಕೆ? ಪ್ರಕೃತಿ ಅನುಕರಣಕ್ಕೆ, ಮೃತ್ಯು ಅನುಕರಣಕ್ಕೆ ಜಡ ಅಚೇತನದ ಅನುಕರಣಕ್ಕೆ ಏತಕ್ಕೆ ಅವನನ್ನು ಹೊಗಳಬೇಕು?

ಆಕರ್ಷಣಶಕ್ತಿ ಪ್ರಪಂಚದಲ್ಲಿರುವ ವಸ್ತುಗಳಲ್ಲೆಲ್ಲಾ ಬೃಹದಾಕಾರವಾದುದನ್ನು ಕೂಡ ಸೆಳೆದು ಪುಡಿಪುಡಿ ಮಾಡಬಲ್ಲದು. ಆದರೂ ಇದು ಜಡ. ಜಡವನ್ನು ಅನುಕರಿಸುವುದು ಒಂದು ಮಹಿಮೆ ಏನು? ಆದರೂ ನಾವೆಲ್ಲ ಇದಕ್ಕಾಗಿ ಹೋರಾಡುತ್ತಿರುವೆವು. ಇದೇ ಮಾಯೆ.

ಇಂದ್ರಿಯಗಳು ಮನುಷ್ಯನನ್ನು ಬಹಿರ್ಮುಖಮಾಡುವುವು. ಮನುಷ್ಯ ಸುಖ ಆನಂದವನ್ನು ಅದು ಎಲ್ಲಿ ದೊರಕದೊ ಅಲ್ಲಿ ಹುಡುಕುತ್ತಿರುವನು. ಅನಾದಿಕಾಲದಿಂದಲೂ ಇದೆಲ್ಲ ವ್ಯರ್ಥ ಪ್ರಯೋಜನವೆಂಬುದಿಲ್ಲ, ಇಲ್ಲಿ ಸುಖವೆಂಬುದಿಲ್ಲವೆಂದು ನಮಗೆ ಬೋಧಿಸಿರುವರು. ಆದರೂ ನಾವು ಕಲಿತುಕೊಳ್ಳುವುದಿಲ್ಲ. ನಮ್ಮ ಅನುಭವದ ಮೂಲಕವಲ್ಲದೆ ಬೇರೆ ಹಾಗೆ ಮಾಡಲು ಸಾಧ್ಯವೇ ಇಲ್ಲ. ನಾವು ಪ್ರಯತ್ನಿಸುವೆವು. ಪೆಟ್ಟೊಂದು ಬೀಳುವುದು. ಆಗಲಾದರೂ ಕಲಿಯುವೆವೆ? ಆಗಲೂ ಇಲ್ಲ. ಪತಂಗ ಜ್ಯೋತಿಗೆ ಧಾವಿಸುವಂತೆ, ತೃಪ್ತಿ ಸಿಕ್ಕುವುದೆಂದು ಇಂದ್ರಿಯ ಸುಖದೆಡೆಗೆ ನಾವು ಪುನಃಪುನಃ ಧಾವಿಸುತ್ತಿರುವೆವು. ಮತ್ತೆ ಮತ್ತೆ ಹೊಸ ಉತ್ಸಾಹದಿಂದ ಬರುವೆವು. ಮೋಸಪಟ್ಟು ಶಕ್ತಿಗುಂದುವವರೆಗೂ ಹೀಗೆ ಹೋಗಿ ಒಂದು ದಿನ ಸಾಯುವೆವು. ಇದೇ ಮಾಯೆ.

ಇದರಂತೆಯೇ ನಮ್ಮ ಯುಕ್ತಿ ಕೂಡ ವಿಶ್ವದ ರಹಸ್ಯವನ್ನು ಭೇದಿಸಬೇಕೆಂಬ ಇಚ್ಛೆಯಿಂದ ನಾವು ಪ್ರಯತ್ನಿಸುವುದನ್ನು ನಿಲ್ಲಿಸುವುದೇ ಇಲ್ಲ. ತಿಳಿಯಬೇಕೆಂದು ಆಸೆ. ಯಾವ ಜ್ಞಾನವೂ ಸಾಧ್ಯವಿಲ್ಲ ಎಂಬುದನ್ನು ನಂಬುವುದೇ ಇಲ್ಲ. ಕೆಲವು ಅಡಿಗಳು ಹೋಗುವುದರೊಳಗೆ ನಾವು ಭೇದಿಸಲಾಗದ ಆದಿ ಅಂತ್ಯವಿಲ್ಲದ ಕಾಲವೆಂಬ ಗೋಡೆ ಏಳುವುದು. ಕೆಲವು ಅಡಿಗಳು ಹೋಗುವುದರೊಳಗೆ ನಾವು ಪಾರಾಗಲು ಅಸಾಧ್ಯವಾದ ಅಸೀಮ ಆಕಾಶದ ಕೋಟೆ ಏಳುವುದು. ವಿಶ್ವವೆಲ್ಲ ಕಾರ್ಯಕಾರಣಗಳ ಬಿಡಿಸಲಸದಳವಾದ ಕೋಟೆಯಿಂದ ಸುತ್ತುವರಿಯಲ್ಪಟ್ಟಿದೆ. ಇದನ್ನು ಮೀರಿ ನಾವು ಹೋಗಲಾರೆವು ಆದರೂ ಹೋರಾಡುತ್ತೇವೆ, ಹೋರಾಡಲೇಬೇಕು? ಇದೇ ಮಾಯೆ.

ನಮ್ಮ ಉಚ್ಛ್ವಾಸ ನಿಶ್ವಾಸದೊಂದಿಗೆ, ನಮ್ಮ ಹೃದಯದ ಪ್ರತಿ

ಸ್ಪಂದನದೊಂದಿಗೆ ನಮ್ಮ ಪ್ರತಿಯೊಂದು ಚಲನವಲನಗಳಲ್ಲಿ ನಾವು ಸ್ವತಂತ್ರರು ಎಂದು ಭಾವಿಸುತ್ತೇವೆ. ಅದೇ ಕ್ಷಣ ನಾವು ಅಸ್ವತಂತ್ರ ರೆಂಬುದನ್ನು ಅದು ತೋರುವುದು. ನಾವೆಲ್ಲ ಬದ್ಧಗುಲಾಮರು. ದೇಹ, ಮನಸ್ಸು, ಆಲೋಚನೆ, ಭಾವನೆ ಪ್ರತಿಯೊಂದರಲ್ಲಿಯೂ ನಾವು ಪ್ರಕೃತಿಯ ಬದ್ಧಸೇವಕರು. ಇದೇ ಮಾಯೆ.

ತನ್ನ ಮಗ ಪ್ರಚಂಡ ಪ್ರತಿಭಾವಂತ, ಇದುವರೆಗೆ ಪ್ರಪಂಚದಲ್ಲಿ ಹುಟ್ಟಿದ ಅಸಾಧಾರಣ ಶಿಶು ಎಂದು ಭಾವಿಸದ ತಾಯಿಯೆ ಇಲ್ಲ. ಆ ಮಗುವನ್ನು ಮುದ್ದಿಸುವಳು. ಆಕೆಯ ಪ್ರಾಣವೆಲ್ಲ ಮಗುವಿನಲ್ಲಿರುವುದು. ಮಗು ಬೆಳೆಯುವುದು. ಬಹುಶಃ ಒಬ್ಬ ಕುಡುಕನೊ ಕ್ರೂರನೊ ಆಗಿ ತಾಯಿಯನ್ನು ಹಿಂಸಿಸುವುದು. ಇದು ಹಿಂಸಿಸಿದಷ್ಟೂ ತಾಯಿಯ ಪ್ರೀತಿ ಹೆಚ್ಚುವುದು. ಪ್ರಪಂಚ ತಾಯಿಯ ನಿಸ್ವಾರ್ಥಪ್ರೇಮವೆಂದು ಇದನ್ನು ಹೊಗಳುವುದು. ಅದನ್ನು ಪ್ರೀತಿಸದೆ ವಿಧಿಯೇ ಇಲ್ಲ ಎನ್ನು ವುದು ಪ್ರಪಂಚಕ್ಕೆ ತಿಳಿಯದು ಸಾವಿರಸಲಿ ಈ ಹೊರೆಯಿಂದ ಪಾರಾಗ ಬೇಕೆಂದು ಅವಳು ಆಲೋಚಿಸಬಹುದು. ಆದರೂ ಸಾಧ್ಯವಿಲ್ಲ. ಆದನ್ನು ಹೂವಿನ ರಾಶಿಯಿಂದ ಮುಚ್ಚಿ ಅದ್ಭುತಪ್ರೇಮ ಎಂದು ಕರೆಯುವಳು. ಇದೇ ಮಾಯೆ.

ನಾವೆಲ್ಲಾ ಪ್ರಪಂಚದಲ್ಲಿ ಹೀಗಿರುವೆವು. ನಾರದ ಶ್ರೀಕೃಷ್ಣನನ್ನು "ಭಗವಾನ್ ಮಾಯೆಯನ್ನು ತೋರು'' ಎಂದು ಕೇಳಿದ ಕಥೆಯೊಂದಿದೆ. ಕೆಲವು ದಿನಗಳಾಯಿತು. ಶ್ರೀಕೃಷ್ಣ ನಾರದರನ್ನು ಮರಳುಕಾಡಿನಕಡೆ ತನ್ನೊಡನೆ ಬರುವಂತೆ ಹೇಳಿದನು. ಕೆಲವು ಮೈಲಿಗಳು ಹೋದಮೇಲೆ "ನಾರದ, ನನಗೆ ಬಾಯಾರಿಕೆ ಸ್ವಲ್ಪ ನೀರು ತರುವೆಯಾ?" ಎಂದನು. "ತಕ್ಷಣ ಹೋಗಿ ತರುತ್ತೇನೆ ಸ್ವಾಮಿ" ಎಂದು ನಾರದ ಹೊರಟ. ಸ್ವಲ್ಪ ದೂರದಲ್ಲಿ ಒಂದು ಹಳ್ಳಿ ಇತ್ತು. ನೀರನ್ನು ಹುಡುಕಿಕೊಂಡು ಹಳ್ಳಿ ಪ್ರವೇಶಿಸಿದ. ಒಂದು ಮನೆ ಬಾಗಿಲನ್ನು ತಟ್ಟಿದಾಗ ಒಬ್ಬ ಅತಿ ಸುಂದರಳಾದ ಯುವತಿ ತೆರೆದಳು. ಅವಳನ್ನು ನೋಡಿದೊಡನೆಯೆ ತನ್ನ ಸ್ವಾಮಿ ನೀರಿಗೆ ಕಾಯುತ್ತಿರುವನು. ಅದಕ್ಕಾಗಿ ಪ್ರಾಣಬಿಡುತ್ತಿರುವನು ಎಂಬುದನ್ನು ಸಂಪೂರ್ಣ ಮರೆತನು. ಎಲ್ಲಾ ಮರೆತು ಆ ಹುಡುಗಿ ಯೊಡನೆ ಮಾತನಾಡಲುಪಕ್ರಮಿಸಿದನು. ಆ ದಿನವೆಲ್ಲಾ ತನ್ನ ಸ್ವಾಮಿ ಹತ್ತಿರ ಬರಲೇ ಇಲ್ಲ. ಮಾರನೆದಿನವೂ ಅದೇ ಮನೆಯಲ್ಲಿ ಹುಡುಗಿ ಯೊಂದಿಗೆ ಮಾತನಾಡುತ್ತಿದ್ದ. ಮಾತು ಪ್ರೇಮದಲ್ಲಿ ಪರ್ಯವಸಾನ

ವಾಯಿತು. ಹುಡುಗಿ ತಂದೆಯನ್ನು ತನಗೆ ಅವಳನ್ನು ಮದುವೆಮಾಡಿಕೊಡ ಬೇಕೆಂದು ಕೇಳಿಕೊಂಡನು. ಅವರು ಮದುವೆಯಾಗಿ ವಾಸವಾಗಿದ್ದರು. ಮಕ್ಕಳು ಆದವು. ಹೀಗೆ ಹನ್ನೆರಡುವರುಷ ಕಳೆಯಿತು. ಮಾವ ಸತ್ತು ಹೋದ. ಅವನ ಆಸ್ತಿಯೂ ಇವನಿಗೆ ಬಂದಿತು. ಹೆಂಡತಿ, ಮಕ್ಕಳು, ಹೊಲ, ದನ ಇವುಗಳೊಂದಿಗೆ ತಾನು ಭಾವಿಸಿದಂತೆ ಸುಖವಾಗಿಯೇ ಇದ್ದನು. ಒಂದು ದಿನ ಪ್ರವಾಹ ಬಂತು. ಒಂದು ದಿನ ರಾತ್ರೆ ನದಿ ಪ್ರವಾಹದಿಂದ ಉಕ್ಕಿ ದಡ ಮೀರಿ ಹರಿದು ಹಳ್ಳಿಯನ್ನು ಮುಳುಗಿಸಿತು. ಮನೆಗಳು ಬಿದ್ದವು. ಮನುಷ್ಯರು ಪ್ರಾಣಿಗಳು ಕೊಚ್ಚಿಕೊಂಡುಹೋದವು. ಎಲ್ಲಾ ಪ್ರವಾಹದಲ್ಲಿ ತೇಲಿಹೋಗುತ್ತಿತ್ತು. ನಾರದ ತಪ್ಪಿಸಿಕೊಳ್ಳ ಬೇಕಾಯಿತು. ಒಂದು ಕೈಯಲ್ಲಿ ಹೆಂಡತಿ ಮತ್ತೊಂದು ಕೈಯಲ್ಲಿ ಇಬ್ಬರು ಮಕ್ಕಳು, ಮತ್ತೊಂದು ಮಗು ಅವನ ಭುಜದಮೇಲೆ ಕರೆದುಕೊಂಡು ಆ ಮಹಾ ಪ್ರವಾಹವನ್ನು ದಾಟಲು ಯತ್ನಿಸುತ್ತಿದ್ದನು. ಕೆಲವು ಅಡಿ ಹೋಗುವುದರೊಳಗಾಗಿ ಪ್ರವಾಹ ಪ್ರಬಲವಾಯಿತು. ಹೆಗಲ ಮೇಲಿದ್ದ ಮಕ್ಕಳು ಬಿದ್ದು ಕೊಚ್ಚಿಕೊಂಡುಹೋದರು. ನಾರದ ಸಹಿಸ ಲಾರದೆ ಸಿಟ್ಟುಸಿರುಬಿಟ್ಟನು. ಆ ಮಗನನ್ನು ರಕ್ಷಿಸುವುದಕ್ಕೆ ಪ್ರಯತ್ನಿ ಸಿದಾಗ ಮತ್ತೊಂದು ಮಗುವಿನಮೇಲೆ ಇದ್ದ ಹಿಡಿತ ಸಡಿಲವಾಯಿತು. ಅದೂ ಮುಳುಗಿಹೋಯಿತು. ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಅಪ್ಪಿಕೊಂಡಿದ್ದ ಹೆಂಡತಿಯೂ ಕೊನೆಗೆ ಕೊಚ್ಚಿಕೊಂಡುಹೋದಳು. ಅಳುತ್ತಾ ಕರೆಯುತ್ತಾ ಪ್ರವಾಹ ರಭಸಕ್ಕೆ ಸಿಕ್ಕಿ ದಡದಮೇಲೆ ಬಂದು ಬಿದ್ದನು. ಅವನ ಹಿಂದೆ ಒಂದು ಮೃದುವಾಣಿ, "ಮಗು, ನೀರೆಲ್ಲಿ? ನೀನು ಒಂದು ಚೊಂಬು ನೀರು ತರಲು ಹೋದೆ, ನಿನಗಾಗಿ ಕಾಯು ಕಾಯುತ್ತಿರುವೆ. ನೀನು ಹೋಗಿ ಆಗಲೇ ಅರ್ಧಗಂಟೆಯ ಮೇಲಾ ಯಿತು" ಎಂದಿತು. "ಅರ್ಧಗಂಟೆ ಮಾತ್ರವೆ!" ಎಂದು ನಾರದ ಆಶ್ಚರ್ಯ ಪಟ್ಟ. ಅವನ ಮನಸ್ಸಿನಲ್ಲಿ ಹನ್ನೆರಡು ದೀರ್ಘ ವರುಷಗಳಾಗಿತ್ತು. ಇವೆಲ್ಲಾ ಕೇವಲ ಅರ್ಧಗಂಟೆಯಲ್ಲಿ ಆಗಿತ್ತು! ಇದೇ ಮಾಯೆ. ಒಂದಲ್ಲ ಒಂದು ರೀತಿಯಲ್ಲಿ ನಾವೆಲ್ಲ ಅದರಲ್ಲಿ ಇರುವೆವು. ತಿಳಿದುಕೊಳ್ಳುವುದಕ್ಕೆ ಇದು ಬಹಳ ಕಷ್ಟ, ಬಹಳ ಜಟಿಲ. ಪ್ರತಿಯೊಂದು ದೇಶದಲ್ಲಿಯೂ ಇದನ್ನು ಬೋಧಿಸಿರುವರು, ಪ್ರಚಾರಮಾಡಿರುವರು. ಎಲ್ಲೋ ಕೆಲವರು ಮಾತ್ರ ಇದನ್ನು ನಂಬುವರು. ತಮಗೇ ಅನುಭವ ಬರುವವರೆಗೆ ನಾವು ಅದರಲ್ಲಿ ನಂಬಲಾರೆವು. ಇದೇನು ತೋರುವುದು. ಬಹಳ ಭಯಾನಕ ವಾಗಿರುವುದು. ಏಕೆಂದರೆ ಇದೆಲ್ಲ ವ್ಯರ್ಥ.

ಪ್ರತಿಯೊಂದನ್ನು ನೆಲಸಮಮಾಡುವ ಕಾಲಪುರುಷ ಬರುವನು. ಯಾವುದನ್ನೂ ಬಿಡುವುದಿಲ್ಲ. ಯತಿ ಪಾತಿ ರಾಜ ಭಿಕ್ಷುಕ ಕುರೂಪಿ ಸುಂದರ ಎಲ್ಲವನ್ನೂ ಆಪೋಷನ ತೆಗೆದುಕೊಳ್ಳುವನು. ಯಾವುದನ್ನೂ ಬಿಡುವುದಿಲ್ಲ. ನಮ್ಮ ಜ್ಞಾನ ಕಲೆ ವಿಜ್ಞಾನ ಎಲ್ಲಾ ಅದರ ಕಡೆಗೆ ಧಾವಿಸುತ್ತಿವೆ. ಯಾರೂ ಅದನ್ನು ತಡೆಯಲಾರರು. ಯಾರೂ ಅದನ್ನು ಒಂದುಕ್ಷಣವೂ ಹಿಂದಕ್ಕೆ ತಳ್ಳಿ ನಿಲ್ಲಿಸಲಾರರು. ಪ್ಲೇಗಿನ ಉಪದ್ರವ ಇರುವ ಊರಿನಲ್ಲಿ ಕುಡಿದು ಕುಣಿದು ಉನ್ಮತ್ತರಾಗಿ ಮರೆಯಲು ಯತ್ನಿಸುವಂತೆ ನಾವೂ ಪ್ರಯತ್ನಿಸಬಹುದು. ಎಲ್ಲಾ ಬಗೆಯ ಇಂದ್ರಿಯ ಸುಖಭೋಗಗಳಿಂದ ನಾವು ಅದನ್ನು ಮರೆಯುವುದಕ್ಕೆ ಪ್ರಯತ್ನಿಸುತ್ತಿರುವೆವು. ಇದೇ ಮಾಯೆ.

ಎರಡು ಮಾರ್ಗವನ್ನು ತೋರುವರು. ಎಲ್ಲರಿಗೂ ತಿಳಿದಿರುವ ಒಂದು ಮಾರ್ಗವೇ ಸರ್ವಸಾಧಾರಣವಾದುದು. ಇದೇನೊ ನಿಜವಾಗಿರಬಹುದು. ಆದರೆ ಅದನ್ನು ಕುರಿತು ಯೋಚಿಸಬೇಡಿ. ಗಾಳಿ ಬಂದಾಗ ತೂರಿಕೊಳ್ಳಿ ಎನ್ನುವ ಗಾದೆಯಂತೆ. ಇದೆಲ್ಲ ಸತ್ಯ, ವಾಸ್ತವ, ಆದರೆ ಗಮನಿಸಬೇಡಿ. ಸಾಧ್ಯವಾದಷ್ಟು ಸುಖ ಎಷ್ಟು ಸಿಕ್ಕಿದರೆ ಅಷ್ಟನ್ನು ದೋಚಿ. ದುಃಖದಕಡೆ ನಿರಾಶೆಯಕಡೆ ನೋಡಬೇಡಿ. ಯಾವಾಗಲೂ ಸ್ಪಷ್ಟವಾದ ಭರವಸೆಯಕಡೆ ನೋಡಿ ಎನ್ನುವುದು. ಇದರಲ್ಲಿ ಸ್ವಲ್ಪ ಸತ್ಯಾಂಶವೇನೊ ಇದೆ. ಆದರೆ ಬಹಳ ಅಪಾಯವೂ ಇದೆ. ಇದು ಕ್ರಿಯೋತ್ತೇಜನಕಾರಿ ಎಂಬುದೇನೋ ನಿಜ. ನಮ್ಮ ಜೀವನಕ್ಕೆ ಭರವಸೆ ಮತ್ತು ಸ್ಪಷ್ಟಭಾವನೆ ಚಾಲಕಶಕ್ತಿಯೇನೊ ನಿಜ. ಆದರೆ ಇದರಲ್ಲಿ ಒಂದು ಅಪಾಯವೂ ಇದೆ. ನಿರಾಶೆಯಿಂದ ಹೋರಾಟವನ್ನು ನಿಲ್ಲಿಸುವುದೇ ಅಪಾಯ. ಹೀಗೆ ಬೋಧಿಸುವವರ ಬಾಳೇ ಹೀಗೆ. ಪ್ರಪಂಚ ಹೇಗೆ ಇದೆಯೊ ಹಾಗೆ ತೆಗೆದುಕೊಳ್ಳಿ. ಸಾಧ್ಯವಾದಷ್ಟೂ ಆರಾಮದಿಂದ ಶಾಂತಿಯಿಂದ ಕುಳಿತುಕೊಳ್ಳಿ. ಈ ದುಃಖವನ್ನು ನೋಡಿ ಗೊಣಗಾಡಬೇಡಿ. ಪೆಟ್ಟುಬಿದ್ದಾಗ ಅದು ಪೆಟ್ಟಲ್ಲ ಪುಷ್ಪ ಎನ್ನಿ. ಹಗಲು ರಾತ್ರಿ ನಿಮಗೆ ಮತ್ತು ಇತರರಿಗೆ ಸುಳ್ಳು ಹೇಳಿ. ಏಕೆಂದರೆ ಸುಖವಾಗಿರುವುದಕ್ಕೆ ಇದೊಂದೇ ಮಾರ್ಗ ಇದನ್ನೇ ವ್ಯವಹಾರಧರ್ಮ ಎನ್ನುವುದು. ಇದು ಎಂದಿಗೂ ಹತ್ತೊಂಬತ್ತನೇ ಶತಮಾನದಲ್ಲಿ ಇದ್ದಷ್ಟು ಪ್ರಬಲವಾಗಿರಲಿಲ್ಲ. ಏಕೆಂದರೆ ಈಗಿನಷ್ಟು ಎಂದೂ ಬಲವಾದ ಪೆಟ್ಟು ಬಿದ್ದಿರಲಿಲ್ಲ. ಈಗಿನಷ್ಟು ಸ್ಪರ್ಧೆ ಇರಲಿಲ್ಲ, ಮನುಷ್ಯ ಮತ್ತೊಬ್ಬನನ್ನು ಕಂಡರೆ

ಎಂದಿಗೂ ಈಗಿನಷ್ಟು ಕ್ರೂರನಾಗಿರಲಿಲ್ಲ. ಆದಕ್ಕೇ ಈ ಸಮಾಧಾನವನ್ನು ಕೊಡಬೇಕಾಗಿದೆ. ಈಗಿನ ಕಾಲದಲ್ಲಿ ಅದನ್ನು ಸಾಧ್ಯವಾದಷ್ಟು ಸಮರ್ಪಕ ವಾಗಿ ಇಟ್ಟಿರುವರು. ಯಾವಾಗಲೂ ಅದು ವ್ಯರ್ಥವಾಗುವಂತೆಯೇ ಈಗಲೂ ವ್ಯರ್ಥವಾಗುವುದು. ಹೆಣವನ್ನು ಗುಲಾಬಿಹೂವಿನಿಂದ ಮರೆ ಮಾಡುವುದಕ್ಕೆ ಆಗುವುದಿಲ್ಲ. ಇದು ಅಸಾಧ್ಯ. ಇದು ಬಹಳಕಾಲ ಇರುವುದಿಲ್ಲ. ಬೇಗ ಗುಲಾಬಿ ಬಾಡುವುದು. ಹಿಂದಿಗಿಂತ ಹೆಣ ಬೇಗ ಕೊಳೆತು ನಾರುವುದು. ಹೀಗೆಯೇ ನಮ್ಮ ಜೀವನ ಕೂಡ. ನಾವು ನಮ್ಮ ಹಳೆಯ ಕೊಳೆತು ನಾರುತ್ತಿರುವ ಗಾಯವನ್ನು ಸ್ವರ್ಣವಸ್ತ್ರದಿಂದ ಮುಚ್ಚಲೆತ್ನಿಸಬಹುದು. ಆದರೆ ಸ್ವರ್ಣದ ವಸ್ತ್ರವನ್ನು ತೆಗೆಯುವ ಒಂದು ದಿನ ಬರುವುದು. ಆಗ ಅಸಹ್ಯಕರವಾದ ಗಾಯ ಹೊರಗೆ ಕಾಣುವುದು.

ಹಾಗಾದರೆ ಭರವಸೆಯೇ ಇಲ್ಲವೆ? ನಾವೆಲ್ಲ ಮಾಯೆಯ ದಾಸರು ನಿಜ. ಮಾಯೆಯಲ್ಲಿ ಹುಟ್ಟಿ ಮಾಯೆಯಲ್ಲಿ ಜೀವಿಸುತ್ತಿರುವೆವು. ಹಾಗಾದರೆ ಪಾರಾಗಲು ಮಾರ್ಗವೇ ಇಲ್ಲವೆ? ಭರವಸೆಯೇ ಇಲ್ಲವೆ? ನಾವೆಲ್ಲ ದುಃಖದಲ್ಲಿರುವೆವು. ಈ ಪ್ರಪಂಚ ನಿಜವಾಗಿ ಒಂದು ಸೆರೆಮನೆ. ನಮ್ಮ ಬುದ್ಧಿ ಮತ್ತು ಮನಸ್ಸು ಕೂಡ ಸೆರೆಮನೆಯೆ. ಇದು ಸಹಸ್ರಾರು ವರುಷಗಳಿಂದ ನಮಗೆ ಗೊತ್ತಿದೆ. ಯಾವ ಒಂದು ಜೀವಿಯಾಗಲಿ, ಮನುಷ್ಯನಾಗಲಿ ಅವನೆಷ್ಟೇ ಮಾತನಾಡಿದರೂ ಒಂದಲ್ಲ ಒಂದು ಸಮಯ ದಲ್ಲಿ ಇದನ್ನು ಹೀಗೆ ಭಾವಿಸದೆ ಇಲ್ಲ. ವೃದ್ಧರು ಇದನ್ನು ಹೆಚ್ಚು ಅನು ಭವಿಸುವರು. ಅವರಲ್ಲಿ ಇಡೀ ಜೀವನದ ಅನುಭವ ಶೇಖರವಾಗಿದೆ. ಪ್ರಕೃತಿಯ ಸುಳ್ಳಿಗೆ ಅವರು ಸುಲಭವಾಗಿ ಭ್ರಾಂತರಾಗುವುದಿಲ್ಲ. ಹಾಗಾದರೆ ಪಾರಾಗಲು ಬೇರೆ ಮಾರ್ಗವೇ ಇಲ್ಲವೆ? ಇಂತಹ ಭಯಂಕರ ವಿಷಯಗಳು ನಮ್ಮೆದುರಿಗೆ ಇದ್ದರೂ ದುಃಖಸಂಕಟಗಳ ಮಧ್ಯದಲ್ಲಿ, ಜನನ ಮರಣಗಳು ಪರ್ಯಾಯಪದದಂತೆ ಇರುವ ಈ ಪ್ರಪಂಚದಲ್ಲಿ, ಸಣ್ಣ ದೊಂದು ವಾಣಿ ಅನಂತಕಾಲದಿಂದಲೂ ಎಲ್ಲಾ ದೇಶಗಳಲ್ಲಿಯೂ, ಪ್ರತಿಯೊಂದು ಹೃದಯದಲ್ಲಿಯೂ ಕೇಳಿಬರುವುದು.

ದೈವೀ ಹ್ಯೇಶಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂತರಂತಿ ತೇ ॥

"ಇದು ದೈವೀ ಮಾಯೆ. ಗುಣಗಳಿಂದಾದುದು. ದಾಟುವು ದಕ್ಕೆ ಅಸಾಧ್ಯವಾದುದು. ಆದರೆ ಯಾರು ನನ್ನ ಹತ್ತಿರ ಬರುವರೋ ಅವರು ಮಾಯೆಯನ್ನು ದಾಟುವರು."

"ಯಾರು ಕಷ್ಟಪಟ್ಟು ಕೆಲಸಮಾಡುತ್ತಿರುವರೊ ಭಾರ ಹೊತ್ತಿರುವರೊ ಅವರೆಲ್ಲ ನನ್ನೆಡೆಗೆ ಬನ್ನಿ. ನಾನು ವಿಶ್ರಾಂತಿಯನ್ನು ಕೊಡುವೆನು." ಈ ವಾಣಿಯೆ ನಮ್ಮನ್ನು ಮುಂದಕ್ಕೆ ಒಯ್ಯುತ್ತಿರುವುದು. ಮನುಷ್ಯ ಇದನ್ನು ಕೇಳಿರುವನು, ಅನಂತಕಾಲದಿಂದಲೂ ಇದನ್ನು ಕೇಳುತ್ತಿರುವನು. ಪ್ರತಿಯೊಂದೂ ನಾಶವಾದಂತೆ ತೋರಿದಾಗ, ಭರವಸೆ ಅಳಿದಾಗ, ಮನುಷ್ಯನಿಗೆ ಆಶ್ರಯವಾದ ಸ್ವಂತಶಕ್ತಿಯೇ ಉಡುಗಿ ಹೋದಾಗ, ಎಲ್ಲಾ ಕೈಬೆರಳುಗಳಿಂದ ನುಸುಳಿಹೋದಂತೆ ಕಂಡಾಗ, ಜೀವನದ ನೆಚ್ಚಿಗೆ ಅಳಿದು ಹಾಳಾದಾಗ ಈ ವಾಣಿ ಮಾನವನಿಗೆ ಬರುವುದು. ಅವನು ಆಗ ಅದನ್ನು ಕೇಳುವನು. ಇದನ್ನೇ ಧರ್ಮವೆನ್ನುವುದು.

ಒಂದುಕಡೆ ಇದೆಲ್ಲ ನಿಷ್ಪ್ರಯೋಜನ, ಮಾಯೆ, ಎಂಬ ಧೈರ್ಯವಾದ ಸಿದ್ಧಾಂತವಿದೆ. ಆದರೆ ಜೊತೆಗೆ ವಿಶೇಷ ಆಶಾಜನಕವಾದುದೂ ಇದೆ. ಅದೇ ಮಾಯೆಯ ಆಚೆ ಒಂದು ಮಾರ್ಗವಿದೆ ಎನ್ನುವುದು. ವ್ಯವಹಾರ ಚತುರರು, "ಧರ್ಮ, ತತ್ತ್ವ ಮುಂತಾದುವುಗಳಿಂದ ತಲೆ ಕೆಡಿಸಿಕೊಳ್ಳಬೇಡಿ. ಇದೇನೊ ಕೆಟ್ಟ ಪ್ರಪಂಚವೇ ನಿಜ. ಆದರೆ ಸಾಧ್ಯವಾದಷ್ಟು ಸುಖವನ್ನು ಅನುಭವಿಸಿ" ಎನ್ನುವರು. ಇದನ್ನು ಸ್ಪಷ್ಟಭಾಷೆಯಲ್ಲಿ ಹೇಳಿದರೆ ಅಷಾಢಭೂತಿಯ, ಸುಳ್ಳು ಹೇಳುವ, ಮೋಸಮಾಡುವ ಜೀವನ ನಡೆಸು. ಕೊಳೆತು ನಾರುವ ಹುಣ್ಣುಗಳನ್ನೆಲ್ಲಾ ಸಾಧ್ಯವಾದಷ್ಟು ಚೆನ್ನಾಗಿ ಮುಚ್ಚು. ತೇಪೆಹಾಕುತ್ತ ಹಾಕುತ್ತ ಹೋಗಿ ಕೊನೆಗೆ ಅದೆಲ್ಲ ಮಾಯವಾಗಿ ಬರೀ ಒಂದು ತೇಪೆಯ ಬೊಂತೆಯಾಗುವುದು. ಇದನ್ನೇ ವ್ಯಾವಹಾರಿಕ ಜೀವನ ಎನ್ನುವುದು. ಯಾರು ಈ ತೇಪೆಯ ಕೆಲಸದಲ್ಲಿ ತೃಪ್ತರಾಗಿರುವರೋ ಅವರೆಂದಿಗೂ ಧರ್ಮಕ್ಕೆ ಬರುವುದಿಲ್ಲ. ನಮ್ಮ ಈಗಿನ ಜೀವನದಲ್ಲಿ ತೀವ್ರ ಅತೃಪ್ತಿ, ತೇಪೆಹಾಕುವ ಜೀವನದಲ್ಲಿ ನಿಕಟದ್ವೇಷ, ಸುಳ್ಳು ಮೋಸಜೀವನಕ್ಕೆ ಅಪಾರ ಜಿಗುಪ್ಸೆಯಿಂದ ಧರ್ಮ ಪ್ರಾರಂಭವಾಗುವುದು. ಆ ಮಹಾಧೀರ ಬುದ್ಧ ಒಮ್ಮೆ ಆಲದಮರದ ಕೆಳಗೆ ಕುಳಿತಾಗ ಈ ವ್ಯಾವಹಾರಿಕ ದೃಷ್ಟಿ ಅವನಿಗೆ ಹೊಳೆಯಿತು. ಪಾರಾಗುವುದಕ್ಕೆ ಮಾರ್ಗ ಕಾಣದಿದ್ದರೂ ಇದು ನಿಷ್ಪ್ರಯೋಜನ ಎಂದು ಹೇಳುವಷ್ಟು ಧೈರ್ಯವಿದ್ದವನು ಮಾತ್ರ ಧಾರ್ಮಿಕನಾಗಬಲ್ಲ. ಸತ್ಯಾನ್ವೇಷಣೆ ತ್ಯಜಿಸಿ, ಸಂಸಾರಕ್ಕೆ ಹಿಂತಿರುಗಿ, ಹಿಂದಿನ ಮೋಸ ಜೀವನವನ್ನು ನಡೆಸುತ್ತಾ ತಪ್ಪು ಹೆಸರಿನಿಂದ ವಸ್ತುಗಳನ್ನು ಕೂಗುತ್ತ, ತನಗೆ ಮತ್ತು ಇತರರಿಗೆ ಸುಳ್ಳು ಹೇಳುತ್ತಾ ಇರು ಎಂಬ ಪ್ರಲೋಭನೆ ಬುದ್ಧನಿಗೆ ಬಂದಾಗ ಆ ಮಹಾನುಭಾವ ಅದನ್ನು

ಧಿಕ್ಕರಿಸಿ "ಅಜ್ಞಾನಾಂಧಕಾರದಲ್ಲಿ ತೊಳಲುವುದಕ್ಕಿಂತ ಮೃತ್ಯು ಲೇಸು. ಸೋಲನ್ನು ಒಪ್ಪಿಕೊಂಡು ಬಾಳುವುದಕ್ಕಿಂತ ಸಮರದಲ್ಲಿ ಮಡಿವುದು ಲೇಸು" ಎಂದನು. ಇದೇ ಧರ್ಮದ ತಳಹದಿ. ಮನುಷ್ಯ ಹೀಗೆ ನಿಂತಾಗ ಸತ್ಯಶೋಧನೆಯ ಮಾರ್ಗದಲ್ಲಿರುವನು. ಭಗವಂತನನ್ನು ಸೇರುವ ಮಾರ್ಗದಲ್ಲಿರುವನು. ಧಾರ್ಮಿಕನಾಗಬೇಕಾದರೆ ಮೊದಲು ಈ ಪ್ರತಿಜ್ಞೆ ಆವಶ್ಯಕ. ನನಗೆ ನಾನೇ ಒಂದು ಮಾರ್ಗವನ್ನು ಮಾಡಿಕೊಳ್ಳು ತ್ತೇನೆ. ನಾನು ಸತ್ಯವನ್ನು ಅರಿಯುವೆನು ಇಲ್ಲವೆ ಪ್ರಯತ್ನದಲ್ಲಿ ಪ್ರಾಣ ತ್ಯಜಿಸುವೆನು. ಇತ್ತ ಕಡೆ ಸಂಸಾರದಲ್ಲಿ ಏನೂ ಇಲ್ಲ. ಎಲ್ಲ ಹೋಯಿತು. ಪ್ರತಿದಿನ ಮಾಯವಾಗುತ್ತಿದೆ. ಇಂದಿನ ಸುಂದರ ಆಶಾಭರಿತ ತರುಣ ನಾಳೆಯ ವೃದ್ಧ. ಭರವಸೆ, ಆನಂದ, ಸುಖಗಳು ಶೀತಲ ನೀರ್ಗಲ್ಲಿಗೆ ಸಿಕ್ಕಿ ಅಳಿವ ಅಲರಂತೆ ನಾಶವಾಗುವುವು. ಇದು ಒಂದು ದೃಶ್ಯ. ದಿಗ್ವಿ ಜಯದ ಮಹದಾನಂದವಿದೆ, ಜೀವನದ ದುಃಖಸಂಕಟಗಳೆಲ್ಲದರಿಂದ ಪಾರಾಗಬಹುದು, ಜೀವನವನ್ನೆ ಗೆಲ್ಲಬಹುದು, ವಿಶ್ವವನ್ನೆ ಗೆಲ್ಲಬಹುದು. ಆ ಕಡೆ ಮನುಷ್ಯ ನಿಲ್ಲಬಹುದು. ಯಾರು ಧರ್ಮಕ್ಕೆ, ಜಯಕ್ಕೆ, ಸತ್ಯಕ್ಕೆ, ನಿಂತು ಛಲದಿಂದ ಹೋರಾಡಬಲ್ಲರೋ ಅವರು ಸರಿಯಾದ ಮಾರ್ಗ ದಲ್ಲಿರುವರು. ಇದನ್ನೇ ವೇದ ಸಾರುವುದು. "ನಿರಾಶರಾಗಬೇಡಿ. ಹರಿದ ಅಲಗಿನ ಮೇಲೆ ನಡೆದಂತೆ ಮಾರ್ಗ ಕಠಿಣ. ಆದರೂ ನಿರಾಶ ರಾಗಬೇಡಿ. ಏಳಿ, ಜಾಗ್ರತರಾಗಿ ಆದರ್ಶವನ್ನು ಗುರಿಯನ್ನು ಕಾಣಿ."

ವಿಭಿನ್ನ ಧಾರ್ಮಿಕ ಭಾವನೆಗಳು ಯಾವ ರೀತಿ ಮಾನವನಿಗೆ ಬಂದಿ ದ್ದರೂ ಅವುಗಳಲ್ಲಿ ಒಂದು ಮುಖ್ಯ ಸರ್ವಸಾಮಾನ್ಯಭಾವನೆ ಇದೆ. ಅದೇ ಸ್ವಾತಂತ್ರ್ಯಬೋಧನೆ. ಸಂಸಾರದಿಂದ ಪಾರಾಗುವುದು. ಅವರು ಪ್ರಪಂಚ ಮತ್ತು ಧರ್ಮಕ್ಕೆ ರಾಜಿಮಾಡಲು ಬರುವುದಿಲ್ಲ. ಮೂಲ ಅಜ್ಞಾನವನ್ನು ಛೇದಿಸಿ ಪ್ರಪಂಚದೊಂದಿಗೆ ರಾಜಿಮಾಡಕೊಳ್ಳದೆ ಧರ್ಮವನ್ನು ಸ್ವಂತ ಅದರ ಧ್ಯೇಯದ ಮೇಲೆ ಸ್ಥಾಪಿಸುವುದು. ಇದನ್ನೆ ಎಲ್ಲಾ ಧರ್ಮಗಳು ಸಾರುವುದು. ವೇದಾಂತದ ಕರ್ತವ್ಯ, ಹಲವು ಆಕಾಂಕ್ಷೆಗಳಲ್ಲಿ ಒಂದು ಸಾಮರಸ್ಯವನ್ನು ಉಂಟುಮಾಡುವುದು, ಎಲ್ಲಾ ಕೀಳುಮೇಲು ಧರ್ಮ ಗಳಲ್ಲಿರುವ ಸರ್ವಸಾಮಾನ್ಯಭಾವನೆಯನ್ನು ವ್ಯಕ್ತಪಡಿಸುವುದು. ಯಾವು ದನ್ನು ಕಡುಮೂಢನಂಬಿಕೆ ಎನ್ನುವೆವೋ ಅದಕ್ಕೂ ಮತ್ತು ಅತಿ ಶ್ರೇಷ್ಠ ತತ್ತ್ವಕ್ಕೂ ಒಂದು ಸಾಮಾನ್ಯ ಗುರಿ ಇದೆ. ನಾವಿರುವ ಕಷ್ಟದಿಂದ ಪಾರಾಗುವುದಕ್ಕೆ ದಾರಿತೋರಲೆತ್ನಿಸುವುದು. ಅನೇಕವೇಳೆ ಇದಕ್ಕೆ

ಇರುವ ಮಾರ್ಗವೇ ಪ್ರಕೃತಿನಿಯಮಗಳಿಂದ ಯಾರು ಬದ್ಧನಾಗಿಲ್ಲವೋ ಅಂದರೆ ಮುಕ್ತನಾಗಿರುವನೊ ಅಂತಹವನ ಸಹಾಯದ ಮೂಲಕ. ಅಂತಹ ಮುಕ್ತಜೀವಿಯ ವಿಷಯದಲ್ಲಿ ನಮಗೆ ಎಷ್ಟೋ ಭಿನ್ನಾಭಿಪ್ರಾಯಗಳಿದ್ದರೂ ತೊಂದರೆಗಳಿದ್ದರೂ ಅವನೊಬ್ಬ ಸಾಕಾರ ದೇವರಾಗಲಿ ನಮ್ಮಂತೆ ಒಬ್ಬ ಮಾನವನಾಗಲಿ ಅವನು ಗಂಡಸೆ ಹೆಂಗಸೆ ಅಥವಾ ನಪುಂಸಕನೆ ಆಗಲಿ ಇವರ ವಿಷಯದಲ್ಲಿ ಎಷ್ಟೋ ಚರ್ಚೆ ನಡೆದಿದ್ದರೂ—ಅವುಗಳಲ್ಲಿರು ಮುಖ್ಯಾಭಿಪ್ರಾಯ ಒಂದೆ. ವಿಭಿನ್ನಸಂಪ್ರದಾಯಗಳ ವಿರೋಧ ತುಮುಲದಲ್ಲಿ ಅವುಗಳ ಮಧ್ಯದಲ್ಲೆಲ್ಲ ಒಂದು ಐಕ್ಯತೆಯ ಸ್ವರ್ಣ ತಂತು ಇರುವುದನ್ನು ನೋಡುವೆವು. ಈ ತತ್ತ್ವದಲ್ಲಿ, ಆ ಸ್ವರ್ಣತಂತು ವನ್ನು ಕಂಡುಹಿಡಿದಿರುವರು. ಇದನ್ನು ನಮ್ಮ ದೃಷ್ಟಿಗೆ ಕ್ರಮೇಣ ತರುವರು. ಎಲ್ಲರೂ ಸ್ವಾತಂತ್ರ್ಯದೆಡೆಗೆ ಹೋಗುತ್ತಿರುವರು ಎಂಬ ಸಾಮಾನ್ಯ ಭಾವನೆಯೇ ಈ ದಿವ್ಯದರ್ಶನದ ಪ್ರಥಮ ಸೋಪಾನ.

ನಮ್ಮ ಸುಖದುಃಖ ಹೋರಾಟತೊಂದರೆಯ ಮಧ್ಯದಲ್ಲೆಲ್ಲ ಇರುವ ಒಂದು ವಿಚಿತ್ರವಿಷಯವೇ ನಾವೆಲ್ಲ ನಿಜವಾಗಿ ಸ್ವಾತಂತ್ರ್ಯದೆಡೆಗೆ ಪ್ರಯಾಣಮಾಡುತ್ತಿರುವುದು. ಪ್ರಶ್ನೆ ನಿಜವಾಗಿ ಇದು: “ಈ ಪ್ರಪಂಚ ವೆಂದರೇನು? ಎಲ್ಲಿಂದ ಇದು ಬರುವುದು? ಪುನಃ ಮತ್ತೆ ಎಲ್ಲಿಗೆ ಹೋಗು ವುದು?” ಇದಕ್ಕೆ ಉತ್ತರವೆ “ಸ್ವಾತಂತ್ರ್ಯದಿಂದ ಇದೇಳುವುದು, ಸ್ವಾತಂತ್ರ್ಯದಲ್ಲಿರುವುದು, ಸ್ವಾತಂತ್ರ್ಯಕ್ಕೆ ಸಾಗುವುದು.” ನೀವು ಈ ಸ್ವತಂತ್ರಭಾವನೆಯನ್ನು ತ್ಯಜಿಸಲಾರಿರಿ. ಇದಿಲ್ಲದೆ ನಿಮ್ಮ ಜೀವನ ಕ್ರಿಯೆ ಯಾವುದೂ ಇರುವುದಿಲ್ಲ. ಪ್ರತಿಕ್ಷಣವೂ ಪ್ರಕೃತಿ ನಮ್ಮನ್ನು ಸ್ವತಂತ್ರರಲ್ಲ, ಗುಲಾಮರೆಂದು ತೋರುತ್ತಿದೆ. ಆದರೂ ನಾವು ಸ್ವತಂತ್ರರೆಂಬ ಭಾವನೆ ಜೊತೆಯಲ್ಲಿಯೇ ಏಳುವುದು. ಪ್ರತಿ ಹೆಜ್ಜೆಗೂ ಮಾಯೆ ನಮ್ಮನ್ನು ಅಪ್ಪಳಿಸಿ ನಾವು ಬದ್ಧರೆಂದು ತೋರುವುದು. ಆದರೂ ಇದೇ ಕಾಲದಲ್ಲಿ ಏಟಿನೊಡನೆ, ನಾವು ಬದ್ಧರು ಎಂಬ ಭಾವನೆಯೊಡನೆ ನಾವು ಮುಕ್ತರು ಎಂಬ ಭಾವನೆಯೂ ಬರುವುದು. ಯಾವುದೊ ಅಂತರ್ವಾಣಿ ನಾವು ಸ್ವತಂತ್ರರು ಎಂದು ಉಸುರುವುದು. ಆದರೆ ಆ ಸ್ವತಂತ್ರವನ್ನು ಪಡೆಯ ಲೆತ್ನಿಸಿದರೆ, ವ್ಯಕ್ತಿಗೊಳಿಸಲು ಯತ್ನಿಸಿದರೆ ಅಸಾಧ್ಯ ಕಷ್ಟಪರಂಪರೆ ಗಳನ್ನು ಇದಿರಿಸಬೇಕಾಗುವುದು. ಆದರೂ ಅಂತರ್ಯದಲ್ಲಿ ಅದು “ನಾನು ಮುಕ್ತ, ಮುಕ್ತ” ಎಂದು ಉಸಿರುತ್ತಲೇ ಇರುವುದು. ನೀವು ಪ್ರಪಂಚದ ಹಲವು ಧರ್ಮಗಳನ್ನು ಪರೀಕ್ಷಿಸಿದರೆ ಈ ಭಾವನೆ ವ್ಯಕ್ತವಾಗುವುದು

ತೋರುವುದು. ಧರ್ಮಮಾತ್ರವಲ್ಲ, ಇದನ್ನು ನೀವು ಅಷ್ಟು ಸಂಕುಚಿತ ದೃಷ್ಟಿಯಲ್ಲಿ ನೋಡಬಾರದು. ಇಡೀ ಸಮಾಜದ ಜೀವನವೇ ಸ್ವತಂತ್ರ ಸಿದ್ಧಾಂತದ ಪ್ರತಿಪಾದನೆ. ಎಲ್ಲಾ ಚಲನವಲನಗಳೂ ಆ ಸ್ವತಂತ್ರದ ಪ್ರತಿಪಾದನೆ. "ನನ್ನೆಡೆಗೆ ಕಷ್ಟಪಡುವವರೆಲ್ಲ ಬನ್ನಿ, ಭಾರಹೊರವವರೆಲ್ಲ ಬನ್ನಿ" ಎಂಬ ವಾಣಿ ಗೊತ್ತಿರಲಿ ಗೊತ್ತಿಲ್ಲದೆ ಇರಲಿ ಎಲ್ಲರೂ ಕೇಳಿರುವರು. ಈ ವಾಣಿ ಅದೇ ಭಾಷೆಯಲ್ಲಿ ಇಲ್ಲದೆ ಇರಬಹುದು. ಅದೇ ರೀತಿ,ಇಲ್ಲದೆ ಇರಬಹುದು. ಯಾವುದಾದರೊಂದು ರೀತಿ ಸ್ವಾತಂತ್ರ್ಯವನ್ನು ಪೋಷಿಸುತ್ತಿರುವ ವಾಣಿ ನಮ್ಮಲ್ಲಿರುವುದು. ಹೌದು, ಆ ವಾಣಿ ದೆಸೆಯಿಂದ ನಾವು ಜನ್ಮತಾಳಿರುವೆವು. ನಮ್ಮ ಪ್ರತಿಯೊಂದು ಕ್ರಿಯೆಯೂ ಅದಕ್ಕಾಗಿ. ಅದು ನಮಗೆ ಗೊತ್ತಿರಲಿ ಗೊತ್ತಿಲ್ಲದೆ ಇರಲಿ ನಾವೆಲ್ಲ ಸ್ವತಂತ್ರದೆಡೆಗೆ ಧಾವಿಸುತ್ತಿರುವೆವು. ನಾವೆಲ್ಲ ಆ ವಾಣಿಯನ್ನೆ ಅನುಸರಿಸುತ್ತಿರುವೆವು. ಹಳ್ಳಿಯ ಹುಡುಗರು ಕೊಳಲಿನ ನಾದಕ್ಕೆ ಆಕರ್ಷಿತರಾದಂತೆ ನಾವೆಲ್ಲರೂ ತಿಳಿಯದೆ ಆ ಗಾನಧ್ವನಿಯನ್ನು ಅನುಸರಿಸುತ್ತಿರುವೆವು.

ನಾವು ಅದನ್ನು ಅನುಸರಿಸಿದಾಗ ನೀತಿವಂತರು. ಮಾನವನೊಬ್ಬನೇ ಅಲ್ಲ, ಅತಿ ಕೀಳುಪ್ರಾಣಿಯಿಂದ ಸರ್ವೋತ್ಕೃಷ್ಟವಾದ ಪ್ರಾಣಿಯವರೆಗೆ ಎಲ್ಲರೂ ಆ ಧ್ವನಿಕೇಳಿರುವರು. ಅದರೆಡೆಗೆ ಧಾವಿಸುತ್ತಿರುವರು. ಈ ಹೋರಾಟದಲ್ಲಿ ಒಬ್ಬರು ಮತ್ತೊಬ್ಬರೊಡನೆ ಸೇರುವರು ಅಥವಾ ಇರುವವರನ್ನು ಆಚೆ ದಬ್ಬುವರು. ಇದರಿಂದ ಸ್ಪರ್ಧೆ, ಸಂತೋಷ, ಹೋರಾಟ, ಜನನ, ಮರಣ, ಸುಖ ಎಲ್ಲವೂ ಪ್ರಾಪ್ತವಾಗುವುದು. ಈ ವಿಶ್ವವೆಲ್ಲ ಆ ವಾಣಿಯನ್ನು ಸೇರಲು ಉನ್ಮತ್ತ ಹೋರಾಟವಲ್ಲದೆ ಬೇರಲ್ಲ. ಇದೇ ಪ್ರಕೃತಿಯ ಆವಿರ್ಭಾವನೆ.

ಅನಂತರ ಏನಾಗುವುದು? ದೃಶ್ಯ ಬದಲಾಯಿಸುವುದು. ನೀವು ಆ ಧ್ವನಿಯನ್ನು ಕೇಳಿದೊಡನೆಯೆ, ತಿಳಿದೊಡನೆಯೆ ದೃಶ್ಯವೆಲ್ಲ ಬದಲಾಯಿಸುವುದು. ಮಾಯೆಯ ಭಯಂಕರ ಸಮರಭೂಮಿಯಂತೆ ಇದ್ದ ಪ್ರಪಂಚ ಸುಂದರವಾಗಿ, ಭವ್ಯವಾಗಿ ಮಾರ್ಪಡುವುದು. ನಾವು ಇನ್ನು ಮೇಲೆ ಪ್ರಕೃತಿಯನ್ನು ದೂರುವುದಿಲ್ಲ. ಪ್ರಪಂಚ ಭಯಂಕರ, ಎಲ್ಲಾ ವ್ಯರ್ಥ ಎನ್ನುವುದಿಲ್ಲ. ನಾವಿನ್ನು ಮೇಲೆ ಅಳುತ್ತ ಗೋಳಾಡಬೇಕಾಗಿಲ್ಲ. ಈ ವಾಣಿಯನ್ನು ನಾವು ತಿಳಿದೊಡನೆಯೇ ಹೋರಾಟ, ಸ್ಪರ್ಧೆ, ಕಷ್ಟ, ಕ್ರೌರ್ಯ, ಸ್ವಲ್ಪ ಆನಂದ ಸುಖಗಳು ಏತಕ್ಕೆ ಇಲ್ಲಿರಬೇಕು ಎಂಬುದು

ನಮಗೆ ಗೊತ್ತಾಗುವುದು. ಇದೆಲ್ಲ ಪ್ರಕೃತಿ ಸ್ವಭಾವ. ಇದಿಲ್ಲದೆ ಇದ್ದರೆ ನಾವು ನಮಗೆ ಗೊತ್ತಿರಲಿ ಇಲ್ಲದಿರಲಿ ಯಾವುದನ್ನು ಪಡೆಯಲೇ ಬೇಕೋ ಅದರೆಡೆಗೆ ಹೋಗುತ್ತಲೇ ಇರಲಿಲ್ಲ. ಎಲ್ಲಾ ಮಾನವರ ಬಾಳು, ಪ್ರಪಂಚವೆಲ್ಲ ಆ ಸ್ವತಂತ್ರವನ್ನು ಪಡೆಯಲು ಹೋರಾಡುತ್ತಿದೆ. ಆ ಗುರಿಗಾಗಿ ಸೂರ್ಯ ಚಲಿಸುತ್ತಿರುವನು, ಇದಕ್ಕಾಗಿ ಭೂಮಿ ಸೂರ್ಯನನ್ನು ಪ್ರದಕ್ಷಿಣೆ ಮಾಡುತ್ತಿದೆ, ಇದಕ್ಕಾಗಿ ಚಂದ್ರ ಭೂಮಿಯನ್ನು ಸುತ್ತುತ್ತಿರುವನು. ಆ ಗುರಿಗಾಗಿ ಗ್ರಹಗಳು ಸಂಚರಿಸುತ್ತಿವೆ. ಗಾಳಿ ಬೀಸುತ್ತಿದೆ, ಪ್ರತಿಯೊಂದೂ ಅದರೆಡೆಗೆ ಹೋಗಲು ಹೋರಾಡುತ್ತಿದೆ. ಸಾಧು ಆ ವಾಣಿ ಎಡೆಗೆ ಹೋಗುತ್ತಿರುವನು. ಅವನಿಗೆ ಬೇರೆ ಮಾರ್ಗವೇ ಇಲ್ಲ. ಇದರಿಂದ ಏನೂ ಅವನಿಗೆ ಕೀರ್ತಿಯಿಲ್ಲ. ಇದರಂತೆ ಪಾಪಿ ಕೂಡ ಆ ಧ್ವನಿಯೆಡೆಗೆ ನೇರ ಹೋಗುತ್ತಿರುವನು. ಅವನನ್ನು ತಡೆಯಲು ಸಾಧ್ಯವಿಲ್ಲ. ಕೃಪಣ ಕೂಡ ಅದೇ ಗುರಿಯೆಡೆಗೆ ಹೋಗುತ್ತಿರುವನು. ಪರೋಪಕಾರಮಾಡುವ ಶ್ರೇಷ್ಠ ವ್ಯಕ್ತಿಯೂ ಈ ವಾಣಿಯನ್ನು ತನ್ನ ಅಂತರಾಳದಲ್ಲಿ ಕೇಳುವನು. ಅದನ್ನು ಅವನು ತಡೆಯಲಾರ. ಆ ಧ್ವನಿಯೆಡೆಗೆ ಇವನು ಧಾವಿಸಬೇಕು. ಇದರಂತೆಯೇ ಕೆಲಸಕ್ಕೆ ಬಾರದ ಶುದ್ಧ ಸೋಮಾರಿ ಕೂಡ ಒಬ್ಬ ಮತ್ತೊಬ್ಬನಿಗಿಂತ ಹೆಚ್ಚು ಎಡಹುವನು. ಯಾರು ಹೆಚ್ಚು ಎಡಹುವರೊ ಅವರನ್ನು ಕೆಟ್ಟವರು ಎನ್ನುವೆವು. ಕಡಿಮೆ ಎಡಹುವವರನ್ನು ಒಳ್ಳೆಯವರು ಎನ್ನುವೆವು. ಒಳ್ಳೆಯದು ಕೆಟ್ಟದ್ದು ಎರಡೂ ಪ್ರತ್ಯೇಕವಸ್ತುಗಳಲ್ಲ ಅದೆರಡೂ ಒಂದೆ. ವಸ್ತುವಿನಲ್ಲಿ ಅಲ್ಲ ವ್ಯತ್ಯಾಸವಿರುವುದು, ತರತಮದಲ್ಲಿ.

ಸ್ವತಂತ್ರ ಶಕ್ತಿಯ ಆವಿರ್ಭಾವನೆಯೇ ಪ್ರಪಂಚವನ್ನು ಆಳುತ್ತಿದ್ದರೆ ನಮ್ಮ ವಿಶೇಷ ಅಧ್ಯಯನವಾದ ಧರ್ಮಕ್ಕೆ ಇದನ್ನು ಅನ್ವಯಿಸಿದರೆ ಈ ಒಂದು ಭಾವನೆಯೆ ಧರ್ಮದಲ್ಲೆಲ್ಲ ವ್ಯಕ್ತವಾಗಿರುವುದು ನಮಗೆ ಕಾಣುವುದು. ಪಿತೃಪೂಜೆ ಅಥವಾ ಕ್ರೂರಪರಾಕ್ರಮ ದೇವತೆಗಳನ್ನು ಪೂಜಿಸುವ ಅತಿ ಕೀಳುಧರ್ಮವನ್ನು ತೆಗೆದುಕೊಂಡರೂ ಈ ದೇವತೆ ಅಥವಾ ಪಿತೃಗಳಲ್ಲಿರುವ ವಿಶೇಷ ಗುಣವೇನು ? ಅವರು ಪ್ರಕೃತಿಗೆ ಮೀರಿದವರು. ಅದರ ನಿಯಮಗಳಿಗೆ ಬದ್ಧರಲ್ಲ. ಭಕ್ತನಿಗೆ ನಿಸ್ಸಂದೇಹವಾಗಿ ಪ್ರಕೃತಿಜ್ಞಾನವಿರುವುದು ಬಹಳ ಕಡಿಮೆ. ಅವನು ಗೋಡೆಯ ಮೂಲಕ ಹೋಗಲಾರ, ಆಕಾಶದಲ್ಲಿ ಹಾರಲಾರ. ಆದರೆ ಇವನು ಪೂಜಿಸುವ ದೇವರು ಇದನ್ನು ಮಾಡಬಲ್ಲನು. ತಾತ್ತ್ವಿಕದೃಷ್ಟಿಯಿಂದ ಹೀಗೆಂದರೇನು ? ಸ್ವತಂತ್ರದ

ಪ್ರತಿಪಾದನೆ ಅಲ್ಲದೆ ತಾನು ಪೂಜಿಸುವ ದೇವತೆಗಳು ಅವನಿಗೆ ತಿಳಿ ವಂತೆಯೇ ಪ್ರಕೃತಿಯನ್ನು ಮೀರಿದವರು. ಇದಕ್ಕೂ ಶ್ರೇಷ್ಟವ್ಯಕ್ತಿಗಳನ್ನು ಆರಾಧಿಸುವವರು ಕೂಡ ಹೀಗೆ. ಪ್ರಕೃತಿಭಾವನೆ ವಿಕಾಸವಾದಂತೆ, ಪ್ರಕೃತಿ ಗಿಂತ ಮಿಗಿಲಾದ ಆತ್ಮನ ಭಾವನೆ ಕೂಡ ವಿಕಾಸವಾಗುತ್ತಾ ಬರುವುದು. ಕೊನೆಗೆ ಮಾಯೆಯಿದೆ ಅದನ್ನು ಅಳುವವನೊಬ್ಬ ಇರುವನು ಎಂಬ ಏಕ ಈಶ್ವರನ ಭಾವನೆಗೆ ಬರುವೆವು.

ಏಕ ಈಶ್ವರನ ಭಾವನೆ ಕಾಣಲು ಪ್ರಾರಂಭವಾದಾಗ ವೇದಾಂತ ಮೊದಲಾಗುವುದುವುದು. ವೇದಾಂತತತ್ತ್ವಕ್ಕೆ ಹೆಚ್ಚು ವಿವರಣೆ ಬೇಕು. ಈ ಮಾಯೆಯ ಆಚೆ ಇದಕ್ಕಿಂತ ಮಿಗಿಲಾಗಿ ಸ್ವತಂತ್ರನಾದವನು ಒಬ್ಬ ನಿರುವನು ; ಅವನು ನಮ್ಮನ್ನು ಆತನೆಡೆ ಆಕರ್ಷಿಸುತ್ತಿರುವನು. ನಾವೆಲ್ಲ ಅವನೆಡೆಗೆ ಹೋಗುತ್ತಿರುವೆವು ಎಂಬ ಭಾವನೆಯೇನೊ ಬಹಳ ಒಳ್ಳೆ ಯದು. ಪ್ರತ್ಯಕ್ಷವಾಗಿ ಯುಕ್ತಿಯನ್ನು ವಿರೋಧಿಸದೆ ಇದ್ದರೂ ದರ್ಶನ ಸ್ಪಷ್ಟವಾಗಿಲ್ಲ. ಅಸ್ಪಷ್ಟವಾಗಿ ಮೊಬ್ಬುಮೊಬ್ಬಾಗಿದೆ. ನಿಮ್ಮ ಪ್ರಾರ್ಥನೆ ಯಲ್ಲಿ “ ನಿನ್ನೆಡೆಗೆ ನನ್ನ ದೇವರೆ” ಎನ್ನುವಿರಿ. ಇದೇ ಪ್ರಾರ್ಥನೆ ವೇದಾಂತಿಗೆ ಚೆನ್ನಾಗಿರುವುದು. ಆದರೆ ಅದರ ಒಂದು ಪದವನ್ನು ಮಾತ್ರ ಬದಲಾಯಿಸಿ, “ ನನ್ನ ದೇವರೆ, ನನ್ನ ಸಮೀಪಕ್ಕೆ ” ಎಂದು ಮಾಡ ಬೇಕು. ಗುರಿ ಬಹುದೂರದಲ್ಲಿರುವುದು, ಪ್ರಕೃತಿಯಾಚೆಯಿರುವುದು. ನಮ್ಮನ್ನೆಲ್ಲ ಅದರೆಡೆಗೆ ಆಕರ್ಷಿಸುತ್ತಿರುವುದು ಎಂಬ ಭಾವನೆಯನ್ನು ಅಧೋಗತಿಗೆಳೆಯದೆ, ಹೀನಮಾಡದೆ ಸಮೀಪಕ್ಕೆ ತರಬೇಕು. ಸ್ವರ್ಗದ ದೇವರು ಪ್ರಕೃತಿಯ ದೇವರಾಗುವನು. ಪ್ರಕೃತಿಯಲ್ಲಿರುವ ದೇವರು ಪ್ರಕೃತಿಯಂತೆ ಇರುವ ದೇವರಾಗುವನು. ಪ್ರಕೃತಿಯಂತೆ ಇರುವ ದೇವರು ದೇಹದೇಗುಲದಲ್ಲಿರುವ ದೇವರಾಗುವನು. ಕೊನೆಗೆ ದೇಹ ದೇಗುಲದಲ್ಲಿರುವ ದೇವರು, ದೇಗುಲವೇ ಆಗುವನು, ಮಾನವನ ಆತ್ಮ ನಾಗುವನು. ಬೋಧನೆಯ ಪರಾಕಾಷ್ಠತೆಯನ್ನು ಅದು ಇಲ್ಲಿ ಮುಟ್ಟು ವುದು. ಮಹಾತ್ಮರು ಯಾರನ್ನು ಎಲ್ಲೆಡೆಯಲ್ಲೂ ಅರಸುತ್ತಿರುವರೋ ಅವನು ನಮ್ಮ ಹೃದಯಾಂತರಾಳದಲ್ಲೇ ಇರುವನು. ನೀವು ಆಲಿಸಿದ ಧ್ವನಿ ಸತ್ಯ ವೇದಾಂತ. ಆದರೆ ಅದು ಎಲ್ಲಿಂದ ಬಂತು ಎಂಬುದು ತಪ್ಪು. ನೀವು ಗ್ರಹಿಸಿದ ಸ್ವತಂತ್ರಭಾವನೆ ಸರಿ. ಆದರೆ ನೀವು ಅದನ್ನು ಹೊರಗೆ ಆಲೋಚಿಸಿದಿರಿ. ಅದೇ ನಿಮ್ಮ ತಪ್ಪು. ಇದು ಅನವರತವೂ ನಿಮ್ಮ ಹೃದಯಾಂತರಾಳದಲ್ಲೇ ಇತ್ತು. ನಿಮ್ಮ ಆತ್ಮದ ಆತ್ಮ ಎಂದು ತಿಳಿಯುವ

ವರೆಗೂ ಹತ್ತಿರಹತ್ತಿರಕ್ಕೆ ತನ್ನಿ. ಆ ಸ್ವತಂತ್ರವೇ ನಿನ್ನ ಸ್ವಭಾವ. ಈ ಮಾಯೆ ಎಂದಿಗೂ ನಿನ್ನನ್ನು ಬಂಧಿಸಿರಲಿಲ್ಲ. ಪ್ರಕೃತಿಗೆ ಎಂದಿಗೂ ನಿನ್ನ ಮೇಲೆ ಅಧಿಕಾರವಿರಲಿಲ್ಲ. ಅಂಜಿದ ಮಗುವಿನಂತೆ ಯಾರೋ ನಿಮ್ಮ ಕತ್ತನ್ನು ಹಿಸುಕಿದಂತೆ ಭಾವಿಸಿದ್ದಿರಿ. ಈ ಅಂಜಿಕೆಯಿಂದ ಪಾರಾಗುವುದೇ ಗುರಿ. ಇದನ್ನು ಕೇವಲ ಯುಕ್ತಿಯ ದೃಷ್ಟಿಯಿಂದ ನೋಡುವುದು ಮಾತ್ರವಲ್ಲ. ನಾವು ಬಾಹ್ಯ ಜಗತ್ತನ್ನು ನೋಡುವುದಕ್ಕಿಂತ ಸ್ಪಷ್ಟವಾಗಿ ಗ್ರಹಿಸಬೇಕು, ಅನುಷ್ಠಾನಕ್ಕೆ ತರಬೇಕು. ಆಗ ನಾವು ಮುಕ್ತರೆಂದು ಗೊತ್ತಾಗುವುದು. ಆಗ ಮಾತ್ರ ಕಷ್ಟಗಳು ಮಾಯವಾಗುವುವು, ಸಂದೇಹಗಳು ದೂರವಾಗುವುವು. ಆಗ ಹೃದಯದ ವಕ್ರತೆ ನೇರವಾಗುವುದು. ಆಗ ವೈವಿಧ್ಯತೆಯ ಭ್ರಾಂತಿ ಮತ್ತು ಪ್ರಕೃತಿ ಮಾಯವಾಗುವುದು. ಆಗ ಮಾಯೆ ಈಗಿರುವಂತೆ ಭಯಂಕರ ಭರವಸೆಹೀನ ಸ್ವಪ್ನವಾಗದೆ ಸುಂದರವಾಗುವುದು. ಈ ಪ್ರಪಂಚ ಸೆರೆಮನೆಯಾಗದೆ ಕ್ರೀಡಾಭೂಮಿಯಾಗುವುದು. ಅಪಾಯ ಕಷ್ಟ ಸಂಕಟಗಳೆಲ್ಲ ದೈವೀ ಸ್ವರೂಪ ತಾಳಿ ತಮ್ಮ ನೈಜಸ್ವಭಾವವನ್ನು ತೋರುವುವು. ಎಲ್ಲದರ ಹಿಂದೆ ಎಲ್ಲದರ ಸಾರದಂತೆ ಅವನು ನಿಂತಿರುವನು. ಅವನೊಬ್ಬನೇ ನಿಜವಾದ ಆತ್ಮ.

——

# ಬ್ರಹ್ಮ ಮತ್ತು ಜಗತ್ತು

ಅನಂತವಾದುದು ನಿರಪೇಕ್ಷವಾದುದು ಹೇಗೆ ಸಾಂತ ಜಗತ್ತಾಯಿತು? ಅದ್ವೈತ ಸಿದ್ಧಾಂತವನ್ನು ಗ್ರಹಿಸಲು ಬಹಳ ಕಷ್ಟಕರವಾದ ಪ್ರಶ್ನೆಯೇ ಇದು. ಪುನಃಪುನಃ ಈ ಪ್ರಶ್ನೆಯನ್ನೇ ಕೇಳುವರು. ಇದು ಎಂದೆಂದಿಗೂ ಬಗೆಹರಿಯದೆ ಉಳಿಯುವುದು. ನಾನು ಈ ಪ್ರಶ್ನೆಯನ್ನು ತೆಗೆದುಕೊಂಡು ವಿವರಿಸುವುದಕ್ಕೆ ಒಂದು ನಕ್ಷೆ ಉಪಯೋಗಿಸುವೆನು.

| (ಎ) ಪರಬ್ರಹ್ಮ |
|---|
| (ಸಿ)<br>ಕಾಲ<br>ದೇಶ<br>ಕಾರ್ಯ<br>ಕಾರಣ |
| (ಬಿ) ಜಗತ್ತು |

ಇಲ್ಲಿ (ಎ) ಎಂಬ ಪರಬ್ರಹ್ಮವಿದೆ. ಕೆಳಗೆ (ಬಿ) ಎಂಬ ಜಗತ್ತಿದೆ. ಪರಬ್ರಹ್ಮ ಜಗತ್ತಾಗಿದೆ. ಜಗತ್ತು ಎಂದರೆ ಕೇವಲ ಜಡಜಗತ್ತು ಮಾತ್ರವಲ್ಲ. ಜೊತೆಗೆ ಮಾನಸಿಕ, ಆಧ್ಯಾತ್ಮಿಕ, ಸ್ವರ್ಗ, ಮರ್ತ್ಯ ವಿಶ್ವದಲ್ಲಿ ಏನಿದೆ ಅದೆಲ್ಲ. ಮನಸ್ಸು ಬದಲಾವಣೆಗೆ ಒಂದು ಹೆಸರು, ದೇಹ ಮತ್ತೊಂದು ಬದಲಾವಣೆ ಹೆಸರು. ಇಂತಹ ಬದಲಾವಣೆಗಳೆಲ್ಲ ಸೇರಿ ವಿಶ್ವವಾಗಿದೆ. "ಎ" ಎಂಬ ಪರಬ್ರಹ್ಮ ಕಾಲದೇಶ ಕಾರ್ಯಕಾರಣಗಳೆಂಬ "ಸಿ" ಮೂಲಕ ಪ್ರವೇಶಿಸಿ "ಬಿ" ಎಂಬ ಜಗತ್ತಾಗಿದೆ. ಇದೇ ಅದ್ವೈತದ ಮುಖ್ಯಭಾವನೆ. ಪರಬ್ರಹ್ಮನನ್ನು ನೋಡುವ ಕನ್ನಡಿಯಂತೆ ಇದೆ ಕಾಲದೇಶ ಕಾರ್ಯಕಾರಣ ಎಂಬುದು. ಅದನ್ನು ಕೆಳಗಿನ ದೃಷ್ಟಿಯಿಂದ ನೋಡಿದಾಗ ವಿಶ್ವದಂತೆ ತೋರುವುದು. ಇದರಿಂದ ನಾವು ಪರಬ್ರಹ್ಮನಲ್ಲಿ ಕಾಲದೇಶಕಾರಣಗಳಿಲ್ಲ ಎಂದು ತಕ್ಷಣ ಊಹಿಸುವೆವು. ಮನಸ್ಸು ಆಲೋಚನೆಯಲ್ಲಿ ಇಲ್ಲದುದರಿಂದ ಕಾಲದ ಭಾವನೆ ಅಲ್ಲಿ ಇರಲಾರದು. ಬಾಹ್ಯಬದಲಾವಣೆಗಳು ಅಲ್ಲಿ ಇಲ್ಲದೆ ಇರುವುದರಿಂದ ದೇಶದ ಭಾವನೆ ಅಲ್ಲಿ ಇರಲಾರದು. ಎಲ್ಲಿ ಒಂದು ಮಾತ್ರ ಇದೆಯೊ ಅಲ್ಲಿ ಚಲನೆ ಮತ್ತು ಕಾರಣಗಳು ಇರಲಾರವು. ನಾವು ಹೇಳಬಹುದಾವರೆ, ನಾವು ಯಾವುದನ್ನು ಕಾರಣ ಎನ್ನುವೆವೊ ಅಂತಹ ಪರಬ್ರಹ್ಮ ಜಗತ್ತೆಂಬ ಅವನತಿಗೆ ಬರುವುದು ಅನಂತರ ಪ್ರಾರಂಭವಾಗುವುದು, ಮೊದಲಲ್ಲ. ನಮ್ಮ ಇಚ್ಛೆ ಆಸೆ ಮುಂತಾದುವುಗಳೆಲ್ಲ ನಂತರ ಬರುವುದು. ಇದನ್ನು ನಾವು ಅರ್ಥಮಾಡಿಕೊಳ್ಳಬೇಕು; ಜ್ಞಾಪಕದಲ್ಲಿಡಬೇಕು. ಶೋಫನಿಯರನು ವೇದಾಂತತತ್ತ್ವವನ್ನು ವಿವರಿಸುವಾಗ ಒಂದು ತಪ್ಪು

ಮಾಡಿರುವರೆಂದು ನಾನು ತಿಳಿಯುವೆನು. ಅದೇ ಇಚ್ಛೆಯನ್ನೇ ಸರ್ವ ವ್ಯಾಪಿಯನ್ನಾಗಿ ಮಾಡುವುದು. ಶೋಫನೀಯರ್ ಪರಬ್ರಹ್ಮಸ್ಥಾನದಲ್ಲಿ ಇಚ್ಛಾಶಕ್ತಿಯನ್ನು ಸ್ಥಿಲ್ಲಿಸುವನು. ಪರಬ್ರಹ್ಮನನ್ನು ಇಚ್ಛಾಶಕ್ತಿ ಎಂದು ಕರೆಯಲಾರೆವು. ಇಚ್ಛೆ ಬದಲಾಯಿಸುವಂಥಹುದು, ಇಂದ್ರಿಯಗೋಚರ. ದೇಶ, ಕಾಲ, ಕಾರ್ಯ ಕಾರಣಗಳಾಚೆ ಯಾವ ಬದಲಾವಣೆಯೂ ಇಲ್ಲ. ಯಾವ ಚಲನೆಯೂ ಇಲ್ಲ. ಅದರ ಈಚೆ ಮಾತ್ರ ಬಾಹ್ಯ ಮತ್ತು ಆಲೋಚನೆ ಎಂಬ ಆಂತರಿಕ ಬದಲಾವಣೆ ಪ್ರಾರಂಭವಾಗುವುದು. ಕಾಲ ದೇಶಕಾರ್ಯಕಾರಣಗಳಾಚೆ ಯಾವ ಇಚ್ಛಾಶಕ್ತಿಯೂ ಇಲ್ಲ. ಆದಕಾರಣ ಇಚ್ಛೆ ಪ್ರಪಂಚಕ್ಕೆ ಹೇತುವಲ್ಲ. ನಾವಿನ್ನೂ ಸಮೀಪಕ್ಕೆ ಬಂದರೆ ನಮ್ಮ ದೇಹದಲ್ಲಿ ಪ್ರತಿಯೊಂದು ಬದಲಾವಣೆಗೂ ಇಚ್ಛೆಯೇ ಕಾರಣವಲ್ಲ ವೆಂಬುದು ತೋರುವುದು. ನಾನು ಕುರ್ಚಿಯನ್ನು ಚಲಿಸುತ್ತೇನೆ. ನನ್ನ ಇಚ್ಛೆಯೇ ಈ ಚಲನೆಗೆ ಕಾರಣ. ಈ ಇಚ್ಛಾಶಕ್ತಿ ಮಾಂಸಖಂಡದ ಚಲನೆಯಂತೆ ಮತ್ತೊಂದುಕಡೆ ವ್ಯಕ್ತವಾಗುವುದು. ಕುರ್ಚಿಯನ್ನು ನೂಕುತ್ತಿರುವ ಶಕ್ತಿಯೇ, ಹೃದಯ ಶ್ವಾಸಕೋಶ ಇವುಗಳ ಚಲನೆಗೂ ಕಾರಣ. ಆದರೆ ಇಚ್ಛಾಶಕ್ತಿಯಿಂದಲ್ಲ. ಶಕ್ತಿ ಒಂದೇ ಆದರೂ ಅದು ನಮ್ಮ ಪ್ರಜ್ಞಾವಸ್ಥೆಗೆ ಬಂದಾಗ ಇಚ್ಛೆಯಾಗುವುದು. ಅದು ಈ ಸ್ಥಿತಿಗೆ ಬರುವುದಕ್ಕೆ ಮುಂಚೆ ಅದನ್ನು ಇಚ್ಛೆ ಎನ್ನುವುದು ಅಪಪ್ರಯೋಗ. ಶೋಫನಿಯರನ ತತ್ತ್ವದಲ್ಲಿ ಇದರಿಂದಲೇ ಎಷ್ಟೋ ಗೊಂದಲವಾಗುವುದು.

ಕಲ್ಲೊಂದು ಬೀಳುವುದು. ಏತಕ್ಕೆ ಎಂದು ಪ್ರಶ್ನಿಸುವೆವು. ಯಾವುದೂ ಕಾರಣವಿಲ್ಲದೆ ಸಾಧ್ಯವಾಗದು ಎಂಬ ಊಹೆಯ ಆಧಾರದ ಮೇಲೆ ಇದು ಸಾಧ್ಯ. ಮೊದಲು ಇದನ್ನು ಚೆನ್ನಾಗಿ ಗ್ರಹಿಸಿ ಎಂದು ಕೋರುತ್ತೇನೆ. ಯಾವಾಗಲಾದರೂ ಏತಕ್ಕೆ ಒಂದು ಘಟನೆ ಆಗು ವುದು ಎಂದು ಪ್ರಶ್ನಿಸಿದಾಗ, ಪ್ರತಿಯೊಂದು ಘಟನೆಗೂ ಒಂದು ಕಾರಣವಿರ ಬೇಕು ಎಂದು ಊಹಿಸುವೆವು. ಎಂದರೆ ಇದಕ್ಕೆ ಮುಂಚೆ ಕಾರಣದಂತೆ ಯಾವುದೊ ನಡೆದಿರಬೇಕು ಎಂದು ಅರ್ಥ. ಹಿಂದೆ ಮತ್ತು ಮುಂದೆ ಆಗುವುದನ್ನೆ ಕಾರ್ಯಕಾರಣ ಸಂಬಂಧ ಎನ್ನುವೆವು. ಎಂದರೆ ಪ್ರಪಂಚ ದಲ್ಲಿರುವ ಪ್ರತಿಯೊಂದೂ ಒಮ್ಮೆ ಕಾರಣವಾಗಿ ಅನಂತರ ಕಾರ್ಯವಾಗು ವುದು. ಇದರ ನಂತರ ಬರುವುದಕ್ಕೆ ಇದೊಂದು ಕಾರಣವಾಗುವುದು, ಇದರ ಹಿಂದಿನದಕ್ಕೆ ಇದೇ ಒಂದು ಪರಿಣಾಮವಾಗುವುದು. ಇದೇ ಕಾರ್ಯ ಕಾರಣ ಸಂಬಂಧ. ನಮ್ಮ ಆಲೋಚನೆಗೆ ಇದು ಅತ್ಯಾವಶ್ಯಕ. ಪ್ರಪಂಚ

ದಲ್ಲಿರುವ ಪ್ರತಿಯೊಂದು ಕಣವೂ ಅದು ಏನಾದರೂ ಆಗಲಿ ಮತ್ತೊಂದು ಕಣದ ದೃಷ್ಟಿಯಿಂದ ಮಾತ್ರ ಇದೆ ಎಂದು ನಾವು ನಂಬುತ್ತೇವೆ. ಈ ಭಾವನೆ ಹೇಗೆ ಬಂತು ಎಂದು ಬೇಕಾದಷ್ಟು ಚರ್ಚೆಯಾಗಿದೆ. ಯೂರೋಪಿನಲ್ಲಿ ಅಂತರ್‌ದೃಷ್ಟಿಯ ತಾತ್ತ್ವಿಕರು (Intuition philosophers) ಇರುವರು. ಅವರು ಹಾಗೆ ನಂಬುವುದು ಅವನ ಸ್ವಭಾವದಲ್ಲೆ ಹುಟ್ಟಿಬಂದ ಗುಣ ಎನ್ನುವರು. ಮತ್ತೆ ಕೆಲವರು ಇದು ಅಭ್ಯಾಸ ಬಲದಿಂದ ಜನಿಸಿತು ಎನ್ನುವರು. ಈ ಪ್ರಶ್ನೆಯನ್ನು ಇನ್ನೂ ಇತ್ಯರ್ಥ ಮಾಡಿಲ್ಲ. ವೇದಾಂತ ಈ ವಿಷಯದಲ್ಲಿ ಏನು ಹೇಳುವುದೆಂಬುದನ್ನು ನೋಡೋಣ. ಆದರೆ ಮೊದಲು ನಾವು ಇದನ್ನು ತಿಳಿದುಕೊಳ್ಳಬೇಕು. ಅದೇ, ಏತಕ್ಕೆ ಎಂಬ ಪ್ರಶ್ನೆಯನ್ನು ಕೇಳುವುದರಿಂದಲೇ, ಸುತ್ತಲೂ ಇರುವ ಪ್ರತಿಯೊಂದು ವಸ್ತುವಿಗಿಂತ ಹಿಂದೆ ಏನೊ ಇದ್ದಿತು, ಅನಂತರ ಏನೊ ಇರುವುದು ಎಂಬುದನ್ನು ದೃಢಪಡಿಸುವುದು. ಈ ಪ್ರಶ್ನೆಯಲ್ಲಿ ಸೇರಿರುವ ಮತ್ತೊಂದು ಅಭಿಪ್ರಾಯವೆ ಪ್ರಪಂಚದಲ್ಲಿ ಯಾವುದೂ ಸ್ವತಂತ್ರವಲ್ಲ, ಪ್ರತಿಯೊಂದೂ ಮತ್ತೊಂದು ವಸ್ತುವಿನ ಪ್ರಭಾವಕ್ಕೆ ಒಳಪಟ್ಟಿದೆ ಎಂಬುದು. ಅನ್ಯೋನ್ಯ ಆಶ್ರಯವೆ ವಿಶ್ವದ ನಿಯಮ. ಪರಬ್ರಹ್ಮ ಯಾವುದರಿಂದಾಯಿತು ಎಂದು ಕೇಳುವುದರಿಂದ ಎಂತಹ ತಪ್ಪನ್ನು ನಾವು ಮಾಡುತ್ತಿರುವೆವು! ಈ ಪ್ರಶ್ನೆಯನ್ನು ಕೇಳಬೇಕಾದರೆ ಪರಬ್ರಹ್ಮ ಕೂಡ ಮತ್ತೊಂದಕ್ಕೆ ಬದ್ಧವಾಗಿದೆ, ಮತ್ತೊಂದರ ಅಧೀನದಲ್ಲಿದೆ ಎಂದು ಊಹಿಸಬೇಕಾಗಿದೆ. ನಾವು ಹೀಗೆ ಊಹಿಸುವುದರಿಂದ ಬ್ರಹ್ಮನನ್ನು ಜಗತ್ತಿನ ಸ್ಥಿತಿಗೆ ಎಳೆಯುವೆವು. ನಿರಪೇಕ್ಷದಲ್ಲಿ ದೇಶಕಾಲ, ಕಾರ್ಯ ಕಾರಣಗಳಾವುವೂ ಇಲ್ಲ. ಅದೆಲ್ಲ ಒಂದು. ಯಾವುದು ಸ್ವತಃ ಸಿದ್ಧವಾಗಿರುವುದೊ ಅದಕ್ಕೆ ಮತ್ತಾವ ಕಾರಣವೂ ಬೇಕಾಗಿಲ್ಲ. ಸ್ವತಂತ್ರಕ್ಕೆ ಕಾರಣ ಮತ್ತಾವುದೂ ಇರಲಾರದು. ಇದ್ದರೆ ಸ್ವತಂತ್ರವಾಗುತ್ತಿರಲಿಲ್ಲ. ಬದ್ಧವಾಗುತ್ತಿತ್ತು. ಸಾಪೇಕ್ಷವಾದುದು ಸ್ವತಂತ್ರವಾಗಲಾರದು. ನಿರಪೇಕ್ಷ ಸಾಪೇಕ್ಷ ಹೇಗೆ ಆಯಿತು ಎಂದು ಕೇಳುವ ಪ್ರಶ್ನೆಯೇ ಅಸಾಧ್ಯ. ಇದು ಪರಸ್ಪರ ವಿರೋಧ. ಸೂಕ್ಷ್ಮವಿಷಯಗಳಿಂದ ವ್ಯಾವಹಾರಿಕ ಸಾಮಾನ್ಯ ಯುಕ್ತ ದೃಷ್ಟಿಯಿಂದ, ನಿರಪೇಕ್ಷ ಸಾಪೇಕ್ಷ ಹೇಗೆ ಆಯಿತೆಂಬುದನ್ನು ಬೇರೊಂದು ದೃಷ್ಟಿಯಿಂದ ನೋಡಬಹುದು. ಒಂದುವೇಳೆ ಇದಕ್ಕೆ ಉತ್ತರ ಸಿಕ್ಕಿದರೆ ನಿರಪೇಕ್ಷ, ನಿರಪೇಕ್ಷವಾಗಿಯೇ ಉಳಿಯುವುದೆ? ಅದು ಸಾಪೇಕ್ಷವಾಗುವುದು. ನಮ್ಮ ಸಾಧಾರಣ ವ್ಯಾವಹಾರಿಕ ದೃಷ್ಟಿಯಿಂದ

ಜ್ಞಾನ ಎಂದರೇನು? ನಮ್ಮ ಮನಸ್ಸಿನ ಪರಿಮಿತಿಗೆ ಸಿಕ್ಕಿರುವ ಯಾವುದೋ ವಸ್ತು. ಅದನ್ನು ನಾವು ತಿಳಿದಿರುವೆವು ಎನ್ನುವೆವು. ಅದು ನಮ್ಮ ಮನಸ್ಸನ್ನು ಮೀರಿಹೋಗಿದ್ದರೆ ಜ್ಞಾನವಲ್ಲ. ಪರಬ್ರಹ್ಮ ಮನಸ್ಸಿನ ಪರಿಮಿತಿಗೆ ಸಿಲುಕಿದರೆ ಅದು ಇನ್ನು ಪರಬ್ರಹ್ಮವಲ್ಲ. ಇದು ಸಾಂತ ವಾಗಿರುವುದು. ಮನಸ್ಸಿನ ಪರಿಮಿತಿಗೆ ಸಿಲುಕಿರುವುದೆಲ್ಲ ಸಾಂತವಾಗಿರು ವುದು. ನಾನು ಪರಬ್ರಹ್ಮನನ್ನು ತಿಳಿಯುತ್ತೇನೆ ಎಂಬುದು ವಿರೋಧೋಕ್ತಿ. ಅದಕ್ಕೇ ಈ ಪ್ರಶ್ನೆಯನ್ನು ಬಗೆಹರಿಸಲು ಸಾಧ್ಯವಿಲ್ಲ. ಇದನ್ನು ಬಗೆ ಹರಿಸಲು ಸಾಧ್ಯವಾದರೆ ಅದು ಪರಬ್ರಹ್ಮವಾಗುವುದಿಲ್ಲ. ತಿಳಿದ ಬ್ರಹ್ಮ ಬ್ರಹ್ಮನೇ ಅಲ್ಲ. ಅವನು ಕೂಡ ನಮ್ಮಂತೆ ಸಾಂತನಾಗಿರುವನು. ಅವನನ್ನು ತಿಳಿಯಲಾರೆವು. ಅವನು ಯಾವಾಗಲೂ ಅಜ್ಞಾತ.

ಆದರೆ ಅದ್ವೈತ, ದೇವರು ನಾವು ತಿಳಿದುದಕ್ಕಿಂತ ಮಿಗಿಲಾಗಿದೆ ಎಂದು ಹೇಳುವುದು. ಇದೊಂದು ತಿಳಿದುಕೊಳ್ಳಬೇಕಾದ ಮುಖ್ಯ ವಿಷಯ: ಅಜ್ಞೇಯವಾದಿಗಳು ನಾವು ದೇವರನ್ನು ತಿಳಿಯಲಾರೆವು ಎಂಬ ದೃಷ್ಟಿ ಯಿಂದ ನೀವು ಭಾವಿಸಬಾರದು. ಉದಾಹರಣೆಗೆ ಇಲ್ಲೊಂದು ಕುರ್ಚಿ ಇದೆ. ಇದು ನಮಗೆ ಗೊತ್ತಿದೆ. ಆದರೆ ಆಕಾಶದ ಆಚೆ ಏನಿದೆ, ಅಲ್ಲಿ ಜನರಿರುವರೆ ಇಲ್ಲವೆ ಎಂಬುದನ್ನು ತಿಳಿಯುವುದು ಅಸಾಧ್ಯವಾದುದು. ಈ ದೃಷ್ಟಿಯಲ್ಲಿ ದೇವರು ನಮಗೆ ತಿಳಿದವನೂ ಅಲ್ಲ, ತಿಳಿಯದವನೂ ಅಲ್ಲ. ತಿಳಿದಿರುವುದ ಕ್ಕಿಂತ ಅವನು ಮಿಗಿಲು. ದೇವರು ನಮಗೆ ಗೊತ್ತಿಲ್ಲ, ಗೊತ್ತಾಗಲು ಸಾಧ್ಯ ವಿಲ್ಲ ಎಂಬುದರ ಅರ್ಥವೇ ಇದು. ಇದನ್ನು ಕೆಲವು ಪ್ರಶ್ನೆಗಳು ನಮಗೆ ಗೊತ್ತಿಲ್ಲ, ಗೊತ್ತಾಗಲು ಸಾಧ್ಯವಿಲ್ಲ ಎಂಬ ದೃಷ್ಟಿಯಿಂದ ಹೇಳಿಲ್ಲ. ದೇವರು ನಮಗೆ ತಿಳಿದಿರುವುದಕ್ಕಿಂತ ಹೆಚ್ಚು. ಈ ಕುರ್ಚಿ ಗೊತ್ತಿದೆ. ಆದರೆ ದೇವರು ಇದಕ್ಕಿಂತಲೂ ಮತ್ತೂ ಹೆಚ್ಚಾಗಿರುವನು. ಏಕೆಂದರೆ ನಾವು ಅವನಿಂದ, ಅವನ ಮೂಲಕ ಮಾತ್ರ ಕುರ್ಚಿಯನ್ನು ತಿಳಿದುಕೊಳ್ಳ ಬಹುದು. ಅವನು ಸಾಕ್ಷಿ, ಎಲ್ಲಾ ಜ್ಞಾನಕ್ಕೂ ನಿತ್ಯಸಾಕ್ಷಿ, ನಮಗೆ ಗೊತ್ತಿರುವುದೆಲ್ಲ ಅವನಿಂದ, ಅವನ ಮೂಲಕ ಮಾತ್ರ ಸಾಧ್ಯ. ಅವನೇ ನಮ್ಮ ಆತ್ಮದಸಾರ. ಅವನೇ ನಮ್ಮ ಅಹಂಕಾರದ ಮೂಲ. ನಾವು ಏನನ್ನು ಬೇಕಾದರೂ ಈ ಅಹಂಕಾರದ ಮೂಲಕ ಮಾತ್ರ ತಿಳಿಯಲು ಸಾಧ್ಯ. ಆದಕಾರಣವೇ ಪ್ರತಿಯೊಂದೂ ಬ್ರಹ್ಮನಮೂಲಕ ಮಾತ್ರ ಸಾಧ್ಯ. ಕುರ್ಚಿ ತಿಳಿಯಬೇಕಾದರೆ ದೇವರಮೂಲಕ ಮಾತ್ರ ಸಾಧ್ಯ. ಆದಕಾರಣವೆ ದೇವರು ಕುರ್ಚಿಗಿಂತಲೂ ಹೆಚ್ಚು ಸಮೀಪದಲ್ಲಿರುವನು. ಆದರೂ ಇದ

ಕ್ಕಿಂತಲೂ ಹೆಚ್ಚು ಪ್ರಧಾನ. ತಿಳಿದಿರುವುದೂ ಅಲ್ಲ, ತಿಳಿಯದೆ ಇರುವುದೂ ಅಲ್ಲ, ಇವೆರಡಕ್ಕೂ ಅನಂತವಾಗಿ ಮೀರಿರುವುದು. ಅವನೇ ಆತ್ಮ. "ಆ ಪುಣ್ಯಾತ್ಮ ವ್ಯಾಪಿಸದೇ ಇದ್ದರೆ ಈ ಪ್ರಪಂಚದಲ್ಲಿ ಯಾರು ಒಂದುಕ್ಷಣ ಬದುಕುತ್ತಿದ್ದರು, ಉಸಿರಾಡುತ್ತಿದ್ದರು." ಅವನಿಂದ, ಅವನ ಮೂಲಕ ಮಾತ್ರ ಉಸಿರಾಡುವೆವು, ಅವನಿಂದ, ಅವನ ಮೂಲಕ ಮಾತ್ರ ಜೀವಿಸಿರುವೆವು. ಅವನೆಲ್ಲೋ ನಿಂತು ನನ್ನ ರಕ್ತವನ್ನು ಚಲಿಸುತ್ತಿರುವನೆಂದು ಅಲ್ಲ. ಅವನೇ ಇವುಗಳೆಲ್ಲದುದರ ಸಾರ ಆತ್ಮದ ಆತ್ಮ. ಅವನು ನಮಗೆ ಗೊತ್ತಿರುವನೆಂದು ಯಾವ ವಿಧದಲ್ಲಿಯೂ ಹೇಳಲಾರೆವು. ಇದರಿಂದ ಅವನನ್ನು ಅಧೋಗತಿಗೆ ಒಯ್ದಂತೆ. ನೀವು ನಿಮ್ಮನ್ನು ಮೀರಿ ಹೋಗಲಾರಿರಿ. ಅದಕ್ಕೇ ನೀವು ಅವನನ್ನು ತಿಳಿಯಲಾರಿರಿ. ಜ್ಞಾನವೇ ವಿಷಯೀಕರಣ. ಉದಾಹರಣೆಗೆ, ನಿಮ್ಮ ನೆನಪಿನಲ್ಲಿ ಹಲವು ವಸ್ತುಗಳನ್ನು ಮೂರ್ತೀಕರಿಸುತ್ತಿರುವಿರಿ. ನಿಮ್ಮಿಂದ ಹೊರಗೆ ಆರೋಪ ಮಾಡುತ್ತಿರುವಿರಿ. ನನ್ನ ನೆನಪು ನಾನು ನೋಡಿದ ಮತ್ತು ತಿಳಿದ ವಿಷಯಗಳೆಲ್ಲ ನನ್ನ ಮನಸ್ಸಿನಲ್ಲಿರುವುವು. ಚಿತ್ರಗಳು ಇವೆಲ್ಲದುದರ ಪರಿಣಾಮ. ಇವೆಲ್ಲ ನಮ್ಮ ಮನಸ್ಸಿನಲ್ಲಿರುವುದು. ಅವನ್ನು ನಾನು ತಿಳಿಯಲು ಪ್ರಯತ್ನಪಟ್ಟಾಗ, ಆಲೋಚಿಸಲು ಪ್ರಯತ್ನಪಟ್ಟಾಗ ಮಾಡುವ ಪ್ರಥಮ ಕ್ರಿಯೆಯೆ ಅದನ್ನು ಹೊರಗೆ ಆರೋಪಿಸುವುದು. ನಾವು ಬ್ರಹ್ಮನನ್ನು ಈ ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ. ಏಕೆಂದರೆ ಅವನೇ ನಮ್ಮ ಆತ್ಮಸಾರ. ನಮ್ಮಿಂದ ಹೊರಗೆ ಅವನನ್ನು ಆರೋಪಿಸಲು ಸಾಧ್ಯವೇ ಇಲ್ಲ. ವೇದಾಂತದಲ್ಲೆಲ್ಲಾ ಅತಿಗಹನಭಾವನೆಯೇ ಇದು. "ಓ! ಶ್ವೇತಕೇತು, ಯಾವುದು ನಿನ್ನ ಜೀವದ ಸಾರವೊ ಅವನೇ ಸತ್ಯ, ಅವನೇ ಆತ್ಮ, ನೀನೆ ಅದು.'' ನೀನೇ ಬ್ರಹ್ಮ ಎಂದರೆ ಅರ್ಥ ಇದೆ. ಅವನನ್ನು ನೀವು ಮತ್ತಾವ ಭಾಷೆ ಮೂಲಕವೂ ವ್ಯಕ್ತಗೊಳಿಸಲಾರಿರಿ. ಅವನನ್ನು ನಮ್ಮ ತಂದೆ, ಸಹೋದರ, ಪ್ರೀತಿಪಾತ್ರ, ಸಖ ಎಂದು ಕರೆಯುವ ಭಾಷೆಯ ಪ್ರಯತ್ನವೆಲ್ಲ ಅವನನ್ನು ಇಂದ್ರಿಯಗೋಚರನನ್ನಾಗಿ ಮಾಡುವ ಯತ್ನ. ಇದನ್ನು ನಾವು ಹಾಗೆ ಮಾಡಲಾರೆವು. ಅವನೇ ಎಲ್ಲಕ್ಕೂ ನಿತ್ಯಸಾಕ್ಷಿ. ನಾನು ಈ ಮೇಜಿನ ಕರ್ತೃ, ನಾನು ಮೇಜನ್ನು ನೋಡುತ್ತೇನೆ. ಹಾಗೆಯೇ ಬ್ರಹ್ಮ ನನ್ನಾತ್ಮದ ನಿತ್ಯಸಾಕ್ಷಿ. ನಿಮ್ಮ ಆತ್ಮದ ಸಾರವನ್ನೆ, ಸರ್ವದ ಸತ್ಯವನ್ನೆ ನೀವು ಹೇಗೆ ವಿಷಯೀಕರಿಸುವಿರಿ? ನಾನು ಮತ್ತೊಮ್ಮೆ ನಿಮಗೆ ಬ್ರಹ್ಮನನ್ನು ಜ್ಞೇಯ ಅಥವಾ

ಅಜ್ಞೇಯವೆಂದು ಹೇಳಲಾರೆ. ಆದರೆ ಇವೆರಡನ್ನೂ ಅನಂತವಾಗಿ ಮೀರಿರುವುದು, ಅವನು ನಮ್ಮೊಂದಿಗೆ ತದೈಕ್ಯನಾಗಿರುವನು. ಯಾವುದು ತದೈಕ್ಯವಾಗಿರುವುದೋ ಅದು ನಮ್ಮ ಆತ್ಮನಂತೆಯೇ ಜ್ಞೇಯವೂ ಅಲ್ಲ, ಅಜ್ಞೇಯವೂ ಅಲ್ಲ. ನೀವು ನಿಮ್ಮ ಆತ್ಮನನ್ನೇ ತಿಳಿಯಲಾರಿರಿ. ನೀವು ಅದರಿಂದ ಬೇರೆಯಾಗಿ ಒಂದು ವಸ್ತುವಿನಂತೆ ನೋಡಲಾರಿರಿ. ಏಕೆಂದರೆ ನೀವೇ ಅದಾಗಿರುವಿರಿ. ನೀವು ಅದರಿಂದ ಬೇರೆ ಆಗಲಾರಿರಿ. ಅದು ಅಜ್ಞೇಯವೂ ಅಲ್ಲ. ನಿಮ್ಮ ಆತ್ಮನಿಗಿಂತ ಯಾವುದು ನಿಮಗೆ ಚೆನ್ನಾಗಿ ಗೊತ್ತಿದೆ? ಇದೇ ನಮ್ಮ ಜ್ಞಾನಕ್ಕೆ ಮುಖ್ಯ. ಇದೇ ರೀತಿ ಬ್ರಹ್ಮ ಜ್ಞೇಯವೂ ಅಲ್ಲ ಅಜ್ಞೇಯವೂ ಅಲ್ಲ, ಆದರೆ ಇವೆರಡನ್ನೂ ಮೀರಿರುವನು. ಏಕೆಂದರೆ ಅವನೇ ನಿಜವಾದ ನಮ್ಮ ಆತ್ಮ.

ಮೊದಲು ಬ್ರಹ್ಮನಿಗೆ ಯಾವುದು ಕಾರಣ ಎಂಬ ಪ್ರಶ್ನೆಯೇ ಅಸಮಂಜಸ. ಎರಡನೆಯದಾಗಿ ಅದ್ವೈತದಲ್ಲಿ ಬರುವ ಬ್ರಹ್ಮಭಾವನೆ ಐಕ್ಯತೆ, ಆದಕಾರಣ ಅವನನ್ನು ನಾವು ವಿಷಯೀಕರಿಸಲಾರೆವು. ನಮಗೆ ಗೊತ್ತಿರಲಿ, ಇಲ್ಲದೆ ಇರಲಿ ನಾವು ಯಾವಾಗಲೂ ಅವನಲ್ಲಿ ಜೀವಿಸಿ ಸಂಚರಿಸುತ್ತಿರುವೆವು. ನಾವು ಏನು ಮಾಡಿದರೂ ಅದು ಯಾವಾಗಲೂ ಅವನಿಂದ. ದೇಶಕಾಲ ಕಾರ್ಯಕಾರಣಗಳೆಂದರೇನು ಎಂಬುದೇ ಈಗಿನ ಪ್ರಶ್ನೆ. ಅದ್ವೈತವೆಂದರೆ ದ್ವೈತವಲ್ಲದುದು, ಎರಡಲ್ಲ ಒಂದೇ ಇರುವುದು. ದೇಶಕಾಲ ಕಾರ್ಯಕಾರಣಗಳಮೂಲಕ ಏಕ ಅನೇಕವಾಗಿದೆ ಎಂಬ ಪ್ರಮೇಯವಿದೆ. ಬ್ರಹ್ಮ ಮತ್ತು ಮಾಯೆ (ದೇಶಕಾಲ ಕಾರ್ಯಕಾರಣಗಳ ಮೊತ್ತ) ಎರಡೂ ಇರುವಂತೆ ತೋರುತ್ತಿದೆ. ಎರಡೂ ಇದೆ ಎಂದು ಸದ್ಯಕ್ಕೆ ಒಪ್ಪುವಂತೆಯೇ ತೋರುತ್ತದೆ. ಇದಕ್ಕೆ ಅದ್ವೈತಿ ಅದನ್ನು ಎರಡು ಎಂದು ಹೇಳಲಾಗುವುದಿಲ್ಲ, ಎನ್ನುವನು. ಎರಡು ಇರಬೇಕಾದರೆ ಸೃಷ್ಟಿಸಲಾಗದ ಎರಡು ಪ್ರತ್ಯೇಕ ನಿರಪೇಕ್ಷವಸ್ತುಗಳು ಇರಬೇಕಾಯಿತು. ಮೊದಲನೆಯದಾಗಿ ಕಾಲದೇಶಕಾರ್ಯಕಾರಣಗಳು ಸ್ವತಂತ್ರವೆನ್ನಲಾಗುವುದಿಲ್ಲ. ಕಾಲ ಮತ್ತೊಂದನ್ನು ಆಶ್ರಯಿಸಬೇಕು. ನಮ್ಮ ಮನಸ್ಸು ಬದಲಾದಂತೆ ಅದರಂತೆ ಅದೂ ಬದಲಾಯಿಸುವುದು. ಕೆಲವುವೇಳೆ ಸ್ವಪ್ನದಲ್ಲಿ ಹಲವು ವರುಷ ಬಾಳಿದನೆಂದು ತಿಳಿಯುತ್ತಾನೆ. ಮತ್ತೆ ಕೆಲವು ವೇಳೆ ಒಂದು ಕ್ಷಣ ಹಲವು ತಿಂಗಳಾದಂತೆ ಭಾಸವಾಗುವುದು. ಕಾಲ ಸಂಪೂರ್ಣವಾಗಿ ನಮ್ಮ ಮನಸ್ಸನ್ನು ಆಶ್ರಯಿಸಿಕೊಂಡಿದೆ. ಎರಡನೆಯದಾಗಿ ಕೆಲವು ವೇಳೆ ಕಾಲದ ಭಾವನೆ ಸಂಪೂರ್ಣ ಮಾಯವಾಗುವುದು. ಇದರಂತೆಯೇ

ದೇಶ ಕೂಡ. ದೇಶವೆಂದರೇನೆಂಬುದು ನಮಗೆ ಗೊತ್ತಾಗುವುದಿಲ್ಲ. ಆದರೂ ಅದು ಅಲ್ಲದೆ ಅದನ್ನು ವಿವರಿಸಲಸದಳ. ಮತ್ತೊಂದರ ಆಶ್ರಯ ವಿಲ್ಲದೆ ಅದು ಇರಲಾರದು. ಇದರಂತೆಯೇ ಕಾರ್ಯಕಾರಣ.

ಕಾಲದೇಶ ಕಾರ್ಯಕಾರಣಗಳ ಒಂದು ಸ್ವಭಾವವೇ ಅದು ಮತ್ತೊಂದರ ಆಶ್ರಯವಿಲ್ಲದೆ ಇರಲಾರವು. ಬಣ್ಣ ಮೇರೆ ಮತ್ತು ಮತ್ತೊಂದರ ಸಂಬಂಧವಿಲ್ಲದ ಕೇವಲ ಅಂತರವನ್ನು ಕುರಿತು ಯೋಚಿಸಲೆತ್ನಿಸಿ. ಇದು ಸಾಧ್ಯವೇ ಇಲ್ಲ. ಎರಡು ಮೇರೆಗಳ ಮಧ್ಯದಲ್ಲಿರುವುದು, ಅಥವಾ ಮೂರು ವಸ್ತುಗಳ ಮಧ್ಯದಲ್ಲಿರುವುದು ಎಂದು ಭಾವಿಸಬೇಕಾಗುವುದು. ಅದು ಇರಬೇಕಾದರೆ ಯಾವುದಾದರೊಂದು ವಸ್ತು ಸಂಬಂಧವಿರಬೇಕು. ಇದರಂತೆಯೇ ಕಾಲ ಕೂಡ. ಕೇವಲ ಸ್ವತಂತ್ರಕಾಲಭಾವನೆ ನಮಗೆ ಸಾಧ್ಯವೇ ಇಲ್ಲ. ಹಿಂದೆ ಆದುದು, ಮುಂದೆ ಆಗುವುದು, ಎಂಬ ಎರಡು ಘಳಿಗೆ ತೆಗೆದುಕೊಂಡು ಅದನ್ನು ಅನುಕ್ರಮದಲ್ಲಿ ಜೋಡಿಸಬೇಕು. ದೇಶವನ್ನು ನಾವು ಹೇಗೆ ಹೊರಗೆ ಇರುವ ವಸ್ತುವಿನೊಂದಿಗೆ ಸಂಬಂಧಿಸಬೇಕೊ ಹಾಗೆಯೆ ಕಾಲಕ್ಕೆ ಎರಡು ಘಟನೆಗಳ ಆಶ್ರಯ ಬೇಕು. ಕಾರ್ಯಕಾರಣಗಳ ಭಾವನೆಯನ್ನು ಕಾಲದೇಶಗಳಿಂದ ಬೇರ್ಪಡಿಸಲಾಗುವುದೇ ಇಲ್ಲ. ಅವಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಇದೇ ಅದರ ವಿಚಿತ್ರ.

ಕುರ್ಚಿ ಗೋಡೆಗೆ ಇರುವ ಅಸ್ತಿತ್ವ ಕೂಡ ಅವಕ್ಕೆ ಇಲ್ಲ. ಎಲ್ಲ ವಸ್ತುಗಳ ಹಿಂದೆ ಇರುವ ಛಾಯೆಯಂತೆ ಇದೆ. ನೀವು ಅದನ್ನು ಹಿಡಿಯಲಾರಿರಿ. ಅದಕ್ಕೇ ಸ್ವತಂತ್ರ ಅಸ್ತಿತ್ವವಿಲ್ಲ. ಆದರೂ ಅವು ಇಲ್ಲವೆಂದಲ್ಲ. ಏಕೆಂದರೆ ಅದರ ಮೂಲಕ ಮಾತ್ರ ವಿಶ್ವ ವ್ಯಕ್ತವಾಗುತ್ತಿದೆ. ಮೊದಲನೆಯದಾಗಿ ಕಾಲದೇಶ ಕಾರ್ಯಕಾರಣಗಳ ಸಂಯೋಗ ಇದೆ ಅಥವಾ ಇಲ್ಲ ಎಂದು ಹೇಳಲಾರೆವು. ಎರಡನೆಯದಾಗಿ ಕೆಲವು ವೇಳೆ ಅದು ಅದೃಶ್ಯವಾಗುವುದು. ಉದಾಹರಣೆಗೆ: ಸಮುದ್ರದಲ್ಲಿ ಒಂದು ಅಲೆ ಇದೆ ಎಂದು ಭಾವಿಸೋಣ. ನಿಜವಾಗಿ ಅಲೆಯೂ ಸಮುದ್ರವೇ, ಅದರೂ ಅಲೆ ಸಮುದ್ರದಿಂದ ಬೇರೆ ಎಂದು ಭಾವಿಸುತ್ತೇವೆ. ಈ ವ್ಯತ್ಯಾಸಕ್ಕೆ ಕಾರಣವೇನು? ನಾಮರೂಪ, ಎಂದರೆ ಮನಸ್ಸಿನಲ್ಲಿ ಅದರ ಭಾವನೆ ಮತ್ತು ರೂಪು. ಅಲೆ ಸಮುದ್ರದಿಂದ ಬೇರೆ ಎಂದು ಯೋಚಿಸಲು ಸಾಧ್ಯವೆ? ಎಂದಿಗೂ ಇಲ್ಲ. ಯಾವಾಗಲೂ ಅದಕ್ಕೆ ಸಮುದ್ರ ಭಾವನೆಯೊಂದಿಗೆ ಸಂಬಂಧವಿದೆ. ಅಲೆ ನಿಂತರೆ ತಕ್ಷಣ ಅದರ ರೂಪು ಮಾಯವಾಗುವುದು. ಆದರೂ ಇದು ಒಂದು ಭ್ರಾಂತಿಯಲ್ಲ. ಎಲ್ಲಿಯವರೆಗೂ ಅಲೆ ಇತ್ತೊ ಅಲ್ಲಿಯವರೆಗೆ ರೂಪು ಇತ್ತು. ನಾವು ಅದನ್ನು ನೋಡಲೇಬೇಕಾಗಿತ್ತು ಇದೇ ಮಾಯೆ.

ಈ ವಿಶ್ವವೆಲ್ಲ ಒಂದು ವಿಚಿತ್ರರೀತಿಯಲ್ಲಿದೆ. ಪರಬ್ರಹ್ಮವೇ ಸಾಗರ. ನಾವು ನೀವು ಸೂರ್ಯ ನಕ್ಷತ್ರ ಮುಂತಾದುವುಗಳೆಲ್ಲ ಸಾಗರದ ಅಲೆ. ಅಲೆಯನ್ನು ಬೇರ್ಪಡಿಸುವುದಾವುದು? ರೂಪೊಂದೆ. ಅದೇ ಕಾಲ ದೇಶ ಕಾರ್ಯ ಕಾರಣ. ಎಲ್ಲ ಅಲೆಯ ಆಧಾರದ ಮೇಲಿದೆ. ಅಲೆ ನಿಂತೊಡನೆ ರೂಪು ಕೂಡ ಮಾಯವಾಗುವುದು. ವ್ಯಕ್ತಿ ಮಾಯೆಯನ್ನು ತ್ಯಜಿಸಿದರೆ ಅವನಿಗೆ ಇದು ಮಾಯವಾಗುವುದು. ಅವನು ಮುಕ್ತನಾಗುವನು. ನಮ್ಮ ಮಾರ್ಗದಲ್ಲಿ ಯಾವಾಗಲೂ ಕಂಟಕಪ್ರಾಯವಾಗಿರುವ ಕಾಲದೇಶಕಾರ್ಯ ಕಾರಣಗಳಿಗೆ ಇರುವ ಆಸಕ್ತಿಯನ್ನು ತ್ಯಜಿಸುವುದಕ್ಕೆ ಹೋರಾಡುವನು. ವಿಕಾಸವಾದವೆಂದರೇನು? ಎರಡು ಮುಖ್ಯ ವಿಷಯಗಳೇನು? ಅದ್ಭುತ ಸುಪ್ತವಾಗಿರುವ ಶಕ್ತಿ ವ್ಯಕ್ತವಾಗಲು ಯತ್ನಿಸುತ್ತಿದೆ. ಪರಿಸ್ಥಿತಿ ಅದಕ್ಕೆ ಆತಂಕವಾಗಿದೆ. ವಾತಾವರಣ ವ್ಯಕ್ತಗೊಳಿಸುವುದಕ್ಕೆ ಅವಕಾಶ ಕೊಡುತ್ತಿಲ್ಲ. ಪರಿಸ್ಥಿತಿಯೊಂದಿಗೆ ಹೋರಾಡಲು ಅದು ಹೊಸಹೊಸ ದೇಹ ಧರಿಸುತ್ತಿದೆ. ಜೀವಾಣು ಈ ಹೋರಾಟದಲ್ಲಿ ಮತ್ತೊಂದು ದೇಹವನ್ನು ಪಡೆದು ಕೆಲವು ಆತಂಕಗಳಿಂದ ಪಾರಾಗುವುದು. ಹೀಗೆ ಮನುಷ್ಯನ ಜೀವನ ಪಡೆಯುವವರೆಗೂ ಬೇರೆಬೇರೆ ದೇಹ ಪಡೆಯುತ್ತ ಹೋಗುವುದು. ಈ ಭಾವನೆಯ ಪರಾಕಾಷ್ಠತೆಗೆ ನಾವು ತಾರ್ಕಿಕ ರೀತಿ ಬಂದರೆ ಯಾವ ಶಕ್ತಿ ಜೀವಾಣುವಿನಲ್ಲಿತ್ತೊ, ಯಾವುದು ಅದನ್ನು ಮಾನವನಂತೆ ಮಾಡಿತೋ ಅದೇ ಶಕ್ತಿ ಪ್ರಕೃತಿಯೊಡ್ಡುವ ಆತಂಕಗಳೆಲ್ಲದರಿಂದ ಪಾರಾಗಿ, ಪರಿಸ್ಥಿತಿಯಿಂದ ಮುಕ್ತನಾಗುವ ಒಂದು ಸಮಯ ಬರಲೇಬೇಕಾಗುವುದು. ಇದನ್ನು ತಾತ್ತ್ವಿಕ ರೀತಿ ವಿವರಿಸಿದರೆ ಅದು ಈ ರೂಪು ಧಾರಣೆಮಾಡುವುದು. ಪ್ರತಿಯೊಂದು ಘಟನೆಗೂ ಎರಡು ಭಾಗಗಳಿವೆ; ಒಂದು ಕರ್ತೃ ಮತ್ತೊಂದು ಬಾಹ್ಯವಸ್ತು. ಜೀವನದ ಒಂದು ಗುರಿಯೇ ಕರ್ತೃ ವಿಷಯಕ್ಕೆ ಸ್ವಾಮಿಯಾಗಬೇಕು. ಉದಾಹರಣೆಗೆ, ಒಬ್ಬ ನನ್ನನ್ನು ನಿಂದಿಸುತ್ತಾನೆ. ಅದರಿಂದ ದುಃಖಿಯಾಗುತ್ತೇನೆ. ಪರಿಸ್ಥಿತಿಯನ್ನು ಇದುರಿಸುವಷ್ಟು ಸಮರ್ಥನಾಗುವುದೆ ನನ್ನ ಹೋರಾಟದ ಗುರಿಯಾಗುವುದು. ಅವನು ನನ್ನನ್ನು ನಿಂದಿಸಿದರೂ ನನ್ನಮೇಲೆ ಪರಿಣಾಮವಾಗಕೂಡದು. ನಾವೆಲ್ಲ ಇದರಿಂದ ಪಾರಾಗುವುದಕ್ಕೆ ಯತ್ನಿಸುತ್ತಿರುವುದೇ ಹೀಗೆ. ನೀತಿ ಎಂದರೇನು? ಕರ್ತೃವನ್ನು ಪರಬ್ರಹ್ಮನೊಂದಿಗೆ ಸಂಬಂಧಪಡಿಸಿ ಅವನನ್ನು ಬಲಗೊಳಿಸುವುದೇ ನೀತಿ. ಇದರಿಂದ ಬಾಹ್ಯ ಪ್ರಕೃತಿಗೆ ನಮ್ಮಮೇಲೆ ಯಾವ ಸ್ವಾಧೀನವೂ ಇರುವುದಿಲ್ಲ. ಎಲ್ಲಾ

ಸನ್ನಿವೇಶಗಳನ್ನೂ ಜಯಿಸುವ ಒಂದು ಸಮಯ ಬಂದೇಬರುವುದೆಂಬುದು ನಮ್ಮ ವೇದಾಂತದ ನ್ಯಾಯಸಿದ್ಧಾಂತ. ಏಕೆಂದರೆ, ಪ್ರಕೃತಿ ಸಾಂತ.

ನಾವಿಲ್ಲಿ ಮತ್ತೊಂದು ವಿಷಯವನ್ನು ಕಲಿಯಬೇಕಾಗಿದೆ. ಪ್ರಕೃತಿ ಸಾಂತವೆಂದು ನಿಮಗೆ ಹೇಗೆ ಗೊತ್ತು? ಇದನ್ನು ನಾವು ಕೇವಲ ತತ್ತ್ವ ಶಾಸ್ತ್ರದಿಂದ ಮಾತ್ರ ತಿಳಿಯಬಹುದು. ಸಾಂತವಾಗಿರುವ ಅನಂತನೇ ಪ್ರಕೃತಿ. ಆದಕಾರಣ ಇದು ಸಾಂತ. ಪರಿಸ್ಥಿತಿಯನ್ನೆಲ್ಲ ನಾವು ಗೆಲ್ಲುವ ಒಂದು ಕಾಲ ಬಂದೇಬರುವುದು. ನಾವು ಅದನ್ನು ಗೆಲ್ಲುವುದು ಹೇಗೆ? ಎಲ್ಲಾ ವಾಸ್ತವಿಕ ಪರಿಸ್ಥಿತಿಯನ್ನೂ ನಾವು ಗೆಲ್ಲದಿರಬಹುದು, ಸಾಧ್ಯವೇ ಇಲ್ಲ. ಕಿರುಮೀನೊಂದು ನೀರಿನಲ್ಲಿ ತನ್ನ ವೈರಿಗಳಿಂದ ಪಾರಾಗಲು ಯತ್ನಿಸುವುದು. ಅದು ಇದನ್ನು ಹೇಗೆ ಮಾಡುವುದು? ರೆಕ್ಕೆ ಬೆಳೆಸಿ ಒಂದು ಹಕ್ಕಿಯಾಗುವುದರಿಂದ. ಮೀನು ನೀರು ಅಥವಾ ಗಾಳಿಯನ್ನು ಬದಲಾಯಿಸಲಿಲ್ಲ. ಬದಲಾವಣೆ ತನ್ನಲ್ಲಿ ಆಯಿತು. ಬದಲಾವಣೆ ಯಾವಾಗಲೂ ವ್ಯಕ್ತಿಗತವಾದುದು. ವಿಕಾಸದಲ್ಲೆಲ್ಲಾ ಪ್ರಕೃತಿಯಮೇಲೆ ಗೆಲವು ವ್ಯಕ್ತಿಯಲ್ಲಿ ಆದ ಬದಲಾವಣೆಯಿಂದ ಉಂಟಾಗುವುದು ನಿಮಗೆ ಕಾಣುವುದು. ಇದನ್ನು ಧರ್ಮ ಮತ್ತು ನೀತಿಗೆ ಅನ್ವಯಿಸಿದರೆ ಪಾಪ ವನ್ನು ಗೆಲ್ಲುವುದು ವ್ಯಕ್ತಿಯ ಬದಲಾವಣೆಯಿಂದ ಮಾತ್ರ ಸಾಧ್ಯ. ಆದ ಕಾರಣವೇ ಅದ್ವೈತವೇದಾಂತದಲ್ಲಿ ವ್ಯಕ್ತಿಗೆ ಇಷ್ಟೊಂದು ಪ್ರಾಧಾನ್ಯ. ಪಾಪದುಃಖಕ್ಕೆ ಅರ್ಥವಿಲ್ಲ. ಏಕೆಂದರೆ ಅವು ಮನುಷ್ಯನಿಂದ ಹೊರಗೆ ಇಲ್ಲ. ನಾನು ಕೋಪಕ್ಕೆ ಒಗ್ಗಿಹೋದರೆ ಕೋಪಿಸಿಕೊಳ್ಳುವುದೇ ಇಲ್ಲ. ನಾನು ಎಲ್ಲಾ ದ್ವೇಷಕ್ಕೂ ಸಗ್ಗದವನಾದರೆ ದ್ವೇಷವೇ ಪಡುವುದಿಲ್ಲ.

ವ್ಯಕ್ತಿಯಮೂಲಕ, ವ್ಯಕ್ತಿಯನ್ನು ಪೂರ್ಣಗೊಳಿಸುವಮೂಲಕ ಆ ದಿಗ್ವಿಜಯವನ್ನು ಸಂಪಾದಿಸಬಹುದು. ಭೌತಿಕ ಮತ್ತು ನೈತಿಕಮಾರ್ಗ ದಲ್ಲಿ ನವನವಾನ್ವೇಷಣೆ ಒಪ್ಪಿಕೊಂಡು ಕೆಲವುವೇಳೆ ಆದಕ್ಕೂ ಮೀರಿ ಹೋಗಬಲ್ಲ ಧೈರ್ಯ ಅದ್ವೈತವೇದಾಂತ ಒಂದೇ ಎಂದು ನಾನು ಧೈರ್ಯ ವಾಗಿ ಹೇಳುತ್ತೇನೆ. ಆಧುನಿಕ ವೈಜ್ಞಾನಿಕರಿಗೆ ಇದರಮೇಲೆ ಆದಕಾರಣವೆ ಅಷ್ಟು ಒಪ್ಪಿಗೆ. ಪುರಾತನ ದ್ವೈತಸಿದ್ಧಾಂತಗಳು ಅವರಿಗೆ ಸಾಲವು. ಅವರ ಆವಶ್ಯಕತೆಯನ್ನು ಪೂರ್ಣಮಾಡಲಾರವು. ಮನುಷ್ಯನಿಗೆ ಶ್ರದ್ಧೆ ಮಾತ್ರವಲ್ಲ ಯುಕ್ತಿಬದ್ಧಶ್ರದ್ಧೆಯೂ ಬೇಕು. ಈಗ ಹತ್ತೊಂಬತ್ತನೇ ಶತಮಾನದ ಅಂತ್ಯಭಾಗದಲ್ಲಿ ತಾನು ಹುಟ್ಟಿದ ಧರ್ಮವಲ್ಲದೆ ಬೇರಾವ ರ್ಮವೂ ಸತ್ಯವಲ್ಲ ಎಂಬ ಭಾವನೆ, ಇನ್ನೂ ದುರ್ಬಲತೆ ನಮ್ಮಲ್ಲಿ

ಉಳಿದಿದೆ ಎಂಬುದನ್ನು ತೋರುವುದು. ಇಂತಹ ಭಾವನೆಗಳನ್ನು ನಾವು ತ್ಯಜಿಸಬೇಕು. ಇಂತಹ ಪರಿಸ್ಥಿತಿ ಈ ದೇಶದಲ್ಲಿ ಮಾತ್ರ ಇದೆ ಎಂದಲ್ಲ. ಎಲ್ಲಾ ದೇಶದಲ್ಲಿಯೂ ಇದೆ. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ದೇಶದಲ್ಲಿ ಇದೆ. ಸಾಧಾರಣಜನಕ್ಕೆ ಈ ಅದ್ವೈತಸಂಪರ್ಕದ ಅವಕಾಶವೇ ಇರಲಿಲ್ಲ. ಮೊದಲು ಎಲ್ಲೋ ಕೆಲವು ಸನ್ಯಾಸಿಗಳಿಗೆ ಮಾತ್ರ ಇದು ಗೊತ್ತಾಯಿತು. ಅದನ್ನೆ ಅವರು ಕಾಡಿಗೆ ಒಯ್ದರು. ಅವಕ್ಕೆ "ಅರಣ್ಯಕ" ಎಂದು ಹೆಸರಾಯಿತು. ಭಗವಂತನ ದಯೆಯಿಂದ ಬುದ್ಧ ಬಂದು ಜನಸಾಮಾನ್ಯರಿಗೆ ಇದನ್ನು ಬೋಧಿಸಿದನು. ಇಡೀ ದೇಶದ ಜನ ಬೌದ್ಧರಾದರು. ಇದಾದ ಹಲವು ವರುಷಗಳ ನಂತರ ಪುನಃ ನಾಸ್ತಿಕರು ಮತ್ತು ಅಜ್ಞೇಯವಾದಿಗಳು ದೇಶವನ್ನು ಹಾಳುಮಾಡಿದಾಗ ಭರತಖಂಡವನ್ನು ಜಡವಾದದಿಂದ ಪಾರುಮಾಡಲು ಅದ್ವೈತ ಒಂದೇ ಉಪಾಯ ಎಂಬುದನ್ನು ಕಂಡರು.

ಅದ್ವೈತ ಭರತಖಂಡವನ್ನು ಎರಡುವೇಳೆ ಜಡವಾದದಿಂದ ಪಾರು ಮಾಡಿತು. ಬುದ್ಧನ ಆಗಮನಕ್ಕೆ ಮುಂಚೆ ಜಡವಾದ ಭಯಂಕರವಾಗಿ ವ್ಯಾಪಿಸಿತ್ತು. ಅದು ಇಂದಿನಂತೆ ಅಲ್ಲ, ಇದಕ್ಕಿಂತ ಘೋರವಾದ ಅವಸ್ಥೆಯಲ್ಲಿತ್ತು. ನಾನೂ ಒಂದು ದೃಷ್ಟಿಯಿಂದ ದ್ರವ್ಯವಾಸ್ತವತಾವಾದಿಯೆ. ಏಕೆಂದರೆ ಇರುವುದು ಒಂದೇ ದ್ರವ್ಯವೆಂದು ನಾನೂ ನಂಬುತ್ತೇನೆ. ಜಡವಾದಿ ನಿಮ್ಮನ್ನು ನಂಬಿ ಎನ್ನುವುದೂ ಅದನ್ನೇ. ಅವನು ಅದನ್ನು ದ್ರವ್ಯ ಎನ್ನುವನು. ನಾನು ಬ್ರಹ್ಮ ಎನ್ನುವೆನು. ಜಡವಾದಿ ಈ ದ್ರವ್ಯ ಒಂದರಿಂದ ಧರ್ಮ ಭರವಸೆಗಳೆಲ್ಲ ಬಂದಿವೆ ಎನ್ನುವನು. ಇವುಗಳೆಲ್ಲ ಬ್ರಹ್ಮನಿಂದ ಬಂದಿವೆ ಎಂದು ನಾನು ನಂಬುತ್ತೇನೆ. ಆದರೆ ಬುದ್ಧನ ಕಾಲಕ್ಕೆ ಮುಂಚೆ ಇದ್ದ ಜಡವಾದ ಅತಿಹೀನ ಸ್ಥಿತಿಗೆ ಸೇರಿದುದು. "ತಿನ್ನಿ ಕುಡಿಯಿರಿ ಸಂತೋಷವಾಗಿರಿ. ದೇವರು ಆತ್ಮ ಸ್ವರ್ಗವೆಂಬುದೇನೂ ಇಲ್ಲ. ಧರ್ಮವೆಂಬುದು ದುಷ್ಟ ಪೂಜಾರಿಗಳ ಕಲ್ಪನೆ" ಎಂದು ಬೋಧಿಸುತ್ತಿತ್ತು. ಎಲ್ಲಿಯವರೆಗೂ ನೀವು ಬದುಕಿರುವಿರೊ ಅಲ್ಲಿಯವರೆಗೆ ನೀವು ಸುಖವಾಗಿರಬೇಕು. ಸಾಲಮಾಡಿಯಾದರೂ ತಿನ್ನಿ, ಹಿಂತಿರುಗಿ ಕೊಡುವುದನ್ನು ಗಮನಿಸಬೇಕಾಗಿಲ್ಲ ಎಂದು ಬೋಧಿಸಿತು. ಇದೇ ಹಿಂದಿನ ಜಡವಾದ. ಇದು ದೇಶದಲ್ಲೆಲ್ಲಾ ವ್ಯಾಪಿಸಿತು. ಈಗಲೂ ಅದನ್ನು ಜನಸಾಮಾನ್ಯ ತತ್ತ್ವವೆನ್ನುವರು. ಬುದ್ಧ ವೇದಾಂತವನ್ನು ಬೆಳಕಿಗೆ ತಂದು ಜನರಿಗಿತ್ತು, ಭರತಖಂಡವನ್ನು ಉದ್ಧರಿಸಿದನು. ಅವನ

ಅವಸಾನದ ಒಂದುಸಾವಿರವರುಷಗಳಾದಮೇಲೆ ಹಿಂದಿನ ಸ್ಥಿತಿಯೇ ಪುನಃ ಪ್ರಾಪ್ತವಾಯಿತು. ಹಲವು ಜನಾಂಗದ ಜನರ ಹಿಂಡುಗಳು ಬೌದ್ಧ ರಾಗಿದ್ದರು. ಸ್ವಾಭಾವಿಕವಾಗಿ ಬುದ್ಧನ ಸಂದೇಶ ಕಾಲಕ್ರಮೇಣ ಅಧೋಗತಿಗೆ ಬಂತು. ಏಕೆಂದರೆ ಬಹುಜನ ಅದರಲ್ಲಿ ಅಜ್ಞಾನಿಗಳಿದ್ದರು. ಬುದ್ಧಧರ್ಮದಲ್ಲಿ ದೇವರಿಲ್ಲ, ಸೃಷ್ಟಿಪಾಲಕನಿಲ್ಲ. ಸಾಧಾರಣಜನ ತಮ್ಮ ಹಳೆಯ ದೇವರು, ಭೂತಪ್ರೇತಗಳನ್ನೆಲ್ಲ ತಂದರು. ಬೌದ್ಧಧರ್ಮ ಭರತ ಖಂಡದಲ್ಲಿ ವಿಚಿತ್ರ ಕಲಸುಮೇಲೋಗರವಾಯಿತು. ಪುನಃ ಜಡವಾದ ಮೇಲಿನ ಅಂತಸ್ತಿನವರಲ್ಲಿ ಸ್ವಚ್ಛಂದವಾದಂತೆ, ಕೆಳಗಿನವರಲ್ಲಿ ಮೂಢ ನಂಬಿಕೆಯಂತೆ ತಲೆದೋರಿತು. ಆಗ ಶಂಕರಾಚಾರ್ಯರು ಉದಿಸಿ ವೇದಾಂತ ತತ್ತ್ವಕ್ಕೆ ಪುನಃ ಪ್ರಾಣಪ್ರತಿಷ್ಠೆಮಾಡಿದರು. ಅದನ್ನು ಯುಕ್ತಿಬದ್ಧ ತತ್ತ್ವವನ್ನಾಗಿ ಮಾಡಿದರು. ಉಪನಿಷತ್ತಿನಲ್ಲಿ ವಾದಸರಣಿ ಅನೇಕವೇಳೆ ಅತಿ ಅಸ್ಪಷ್ಟವಾಗಿದೆ. ಬುದ್ಧ ತತ್ತ್ವದ ನೈತಿಕ ಪಕ್ಷಕ್ಕೆ ಪ್ರಾಧಾನ್ಯ ಕೊಟ್ಟನು. ಶಂಕರಾಚಾರ್ಯರು ಅದರ ಯುಕ್ತಿಯ ಪಕ್ಷಕ್ಕೆ ಪ್ರಾಧಾನ್ಯ ಕೊಟ್ಟರು. ಅದನ್ನು ಒಂದು ಸುವ್ಯವಸ್ಥಿತ ಸ್ಥಿತಿಗೆ ತಂದು ಯುಕ್ತಿಬದ್ಧ ಮಾಡಿ ಜನರಿಗೆ ಅದ್ಭುತವಾದ ಸಮಂಜಸ ಅದ್ವೈತತತ್ತ್ವವನ್ನು ಕೊಟ್ಟರು.

ಇಂದು ಯೂರೋಪಿನಲ್ಲಿ ಜಡವಾದ ಹರಡಿದೆ. ಆಧುನಿಕ ಸಂದೇಹ ವಾದಿಗಳ ಮೋಕ್ಷಕ್ಕೆ ನೀವು ಪ್ರಾರ್ಥಿಸಬಹುದು. ಆದರೆ ಅವರು ಅದಕ್ಕೆ ಸೋಲುವುದಿಲ್ಲ. ಅವರಿಗೆ ಯುಕ್ತಿ ಬೇಕಾಗಿದೆ. ಯುಕ್ತಿಬದ್ಧ ಧರ್ಮದ ಮೇಲೆ ಯೂರೋಪಿನ ಉದ್ಧಾರ ನಿಂತಿದೆ. ಏಕವಾದ ನಿರಾಕಾರ ಪರಬ್ರಹ್ಮನ ಭಾವನೆ ಮಾತ್ರ ಯುಕ್ತಿಮತಿಗಳಿಗೆ ತೃಪ್ತಿತರಬಲ್ಲದು. ಎಂದು ಧರ್ಮ ಮಾಯವಾದಂತೆ ತೋರುವುದೊ ಅಧರ್ಮ ತಾಂಡವಾಡುವುದೊ ಆಗ ಅದು ಬರುವುದು. ಆದಕಾರಣವೆ ಇಂದು ಅದು ಯೂರೋಪು ಅಮೆರಿಕಾದೇಶಗಳಲ್ಲಿ ಬೇರುಬಿಟ್ಟಿರುವುದು.

ಈ ತತ್ತ್ವಕ್ಕೆ ಸಂಬಂಧಪಟ್ಟ ಮತ್ತೊಂದು ಭಾವನೆಯನ್ನು ನಿಮಗೆ ಹೇಳುವೆನು. ಪುರಾತನ ಉಪನಿಷತ್ತಿನಲ್ಲಿ ಅತಿ ಭವ್ಯಕಾವ್ಯವನ್ನು ನೋಡು ವೆವು. ಅದರ ಕರ್ತೃಗಳು ಕವಿಗಳು. ಪ್ಲೇಟೊ, ಸ್ಫೂರ್ತಿ ಕಾವ್ಯದ ಮೂಲಕ ಬರುವುದೆನ್ನುವನು. ಈ ಪುರಾತನ ಋಷಿಗಳು ಮಂತ್ರದ್ರಷ್ಟಿ ಯುಳ್ಳವರು. ಕಾವ್ಯದ ಮೂಲಕ ಈ ಸತ್ಯವನ್ನು ವ್ಯಕ್ತಗೊಳಿಸಲು ಮಾನವರಿಗಿಂತ ಮೇಲೇರಿಹೋದರು ಎಂಬುದನ್ನು ತೋರಿದಂತೆ ಇದೆ.

ಅವರು ಬೋಧಿಸಲಿಲ್ಲ, ಸಿದ್ಧಾಂತಮಾಡಲಿಲ್ಲ, ಬರೆಯಲಿಲ್ಲ. ಅವರ ಹೃದಯಾಂತರಾಳದಿಂದ ಗಾನ ಜಿನುಗಿ ಬಂತು. ಬುದ್ಧನಲ್ಲಿ ವಿಶ್ವಕ್ಕೆ ಅನುಕಂಪಿಸುವ ಹೃದಯವಿತ್ತು, ಅನಂತ ತಾಳ್ಮೆ ಇತ್ತು. ಧರ್ಮವನ್ನು ಅನುಷ್ಠಾನಯೋಗ್ಯಮಾಡಿ ಎಲ್ಲರಿಗೂ ನಿಲುಕುವಂತೆ ಮಾಡಿದನು. ಶಂಕರಾಚಾರ್ಯರಲ್ಲಿ ಪ್ರಚಂಡಬುದ್ಧಿಶಕ್ತಿಯನ್ನು ನೋಡಿದೆವು. ಎಲ್ಲದರ ಮೇಲೂ ಅದು ತನ್ನ ತೀಕ್ಷ್ಣಪ್ರಭೆಯನ್ನು ಬೀರುತ್ತಿತ್ತು. ದೇದೀಪ್ಯಮಾನ ಜ್ಞಾನಜ್ಯೋತಿ, ಅನಂತ ಅಪೂರ್ವಪ್ರೇಮ ಮತ್ತು ದಯಾಮೂರ್ತಿ ಬುದ್ಧನೊಂದಿಗೆ ಸಂಗಮವಾಗಬೇಕು. ಈ ಸಂಧಿ ನಮಗೆ ಅತಿ ಶ್ರೇಷ್ಠತತ್ತ್ವವನ್ನು ನೀಡುವುದು. ವಿಜ್ಞಾನ ಮತ್ತು ಧರ್ಮ ಸಂಧಿಸಿ ಕರಲಾಘವವನ್ನು ಕೊಡುವುವು. ಕಾವ್ಯ ಮತ್ತು ತತ್ತ್ವ ಸಖರಾಗುವುವು. ಇದೇ ಭವಿಷ್ಯಧರ್ಮ. ಇದನ್ನೆಲ್ಲಾ ನಾವು ಯಶಸ್ವಿಮಾಡಿದರೆ ಇದು ಎಲ್ಲಾ ಕಾಲಕ್ಕೂ ಎಲ್ಲಾ ದೇಶಕ್ಕೂ ಅನ್ವಯಿಸುವುದು. ಆಧುನಿಕ ವಿಜ್ಞಾನ ಇದನ್ನೆ ಸ್ವೀಕರಿಸುವ ಸ್ಥಿತಿಯಲ್ಲಿದೆ. ವಿಜ್ಞಾನ ಅದನ್ನು ಅತಿ ಸಮೀಪಿಸಿದೆ. ಎಲ್ಲಾ ಒಂದು ಶಕ್ತಿಯ ಆವಿರ್ಭಾವನೆ ಎಂದು ವಿಜ್ಞಾನಿ ಸಾಧಿಸುವಾಗ, "ಒಂದು ಬೆಂಕಿ ಜಗತ್ತಿಗೆ ಬಂದು ಹಲವು ರೂಪಿನಲ್ಲಿ ವ್ಯಕ್ತವಾಗುವಂತೆ ಒಂದೇ ಆತ್ಮ ಹಲವು ಜೀವಿಗಳಲ್ಲಿ ವ್ಯಕ್ತವಾಗಿದೆ. ಆದರೂ ಅದು ಎಲ್ಲವನ್ನೂ ಮೀರಿದೆ'' ಎಂಬ ಉಪನಿಷತ್ತಿನ ವಾಣಿ ನಿಮಗೆ ಜ್ಞಾಪಕವಾಗುವುದಿಲ್ಲವೆ? ವಿಜ್ಞಾನ ಎತ್ತಕಡೆ ಸಾಗುತ್ತಿದೆ ಎಂಬುದನ್ನು ನೋಡುವುದಿಲ್ಲವೆ? ಹಿಂದೂ ಜನಾಂಗದ ಮನಸ್ಸು ಆಧ್ಯಾತ್ಮ ತರ್ಕ ಇವುಗಳ ಮಾರ್ಗದಲ್ಲಿ ಹೋಯಿತು. ಐರೋಪ್ಯಜನಾಂಗಗಳು ಬಾಹ್ಯ ಜಗತ್ತಿನಿಂದ ಪ್ರಾರಂಭವಾಗುವುವು. ಈಗ ಅವರೂ ಅದೇ ನಿರ್ಣಯಕ್ಕೆ ಬರುತ್ತಿರುವರು. ಮನಸ್ಸನ್ನು ಹುಡುಕಾಡಿ ಕೊನೆಗೆ ಸರ್ವವ್ಯಾಪಿಯಾದ ಪ್ರತಿಯೊಂದು ವಸ್ತುವಿನ ಅಂತರಾತ್ಮ, ಪ್ರತಿಯೊಂದು ವಸ್ತುವಿನ ಸಾರ, ಸತ್ಯವಾದ, ನಿತ್ಯಮುಕ್ತ, ನಿತ್ಯಾನಂದ, ನಿರಂತರವಾಗಿರುವ ಸತ್ಯಕ್ಕೇ ಬರುವೆವು. ಭೌತಶಾಸ್ತ್ರದ ಮೂಲಕವೂ ಕೊನೆಗೆ ನಾವು ಇದೇ ಅದ್ವೈತಕ್ಕೆ ಬರುವೆವು. ಇಂದು ವಿಜ್ಞಾನ ಪ್ರಪಂಚದಲ್ಲಿರುವುದೆಲ್ಲ ಒಂದು ವಸ್ತುವಿನ ಆವಿರ್ಭಾವನೆ ಎಂದು ಹೇಳುತ್ತಿರುವರು. ಇರುವ ಎಲ್ಲಾ ವಸ್ತುಗಳ ಮೊತ್ತವೇ ಆ ಶಕ್ತಿ. ಮಾನವನ ಗಮನ ಸ್ವಾತಂತ್ರದೆಡೆಗೆ ಇದೆ. ಬಂಧನದೆಡೆಗೆ ಇಲ್ಲ. ಜನರೇಕೆ ಧಾರ್ಮಿಕರಾಗಬೇಕು. ಮುಕ್ತಿಗೆ ಧರ್ಮವೇ ಮಾರ್ಗ, ಅಧರ್ಮವೇ ಬಂಧನಕ್ಕೆ ಹೇತು.

ಅದ್ವೈತ ದರ್ಶನದ ಮತ್ತೊಂದು ವೈಶಿಷ್ಟ್ಯವೇ ಮೊದಲಿನಿಂದಲೂ ಅದು ಯಾವುದನ್ನೂ ಧ್ವಂಸಮಾಡುವುದಿಲ್ಲ. "ಯಾರ ಭಕ್ತಿಗೂ ಭಂಗ ತರಬೇಡಿ. ಅಜ್ಞಾನದಿಂದ ಕೆಳಗಿರುವ ಅನ್ಯದೇವತಾರಾಧನೆಯಲ್ಲಿ ಆಸಕ್ತರಾಗಿದ್ದರೂ ಚಿಂತೆಯಿಲ್ಲ" ಎಂದು ಧೈರ್ಯವಾಗಿ ಬೋಧಿಸುವುದೊಂದು ಇದರ ಮಹಿಮೆ. ಭಂಗತರಬೇಡಿ. ಪ್ರತಿಯೊಬ್ಬರಿಗೂ ಇಡೀ ಮಾನವ ಕೋಟಿಗೆ ಮೇಲಿಮೇಲೆ ಹೋಗುವುದಕ್ಕೆ ಸಹಾಯಮಾಡಿ. ಈ ತತ್ತ್ವ ಎಲ್ಲದರ ಸಮಷ್ಟಿಯಾದ ದೇವರನ್ನು ಬೋಧಿಸುವುದು. ಪ್ರತಿಯೊಬ್ಬರಿಗೂ ಅನ್ವಯಿಸುವ ವಿಶ್ವಧರ್ಮ ನಿಮಗೆ ಬೇಕಾದರೆ ಆ ಧರ್ಮದಲ್ಲಿ ಎಲ್ಲೋ ಕೆಲವು ಅಂಶಗಳಿದ್ದರೆ ಸಾಲದು. ಅದು ಎಲ್ಲದರ ಸಮಷ್ಟಿಯಾಗಿರಬೇಕು; ಎಲ್ಲಾ ಬಗೆಯ ಧಾರ್ಮಿಕಭಾವನೆಯ ಬೆಳವಣಿಗೆಯೂ ಇರಬೇಕು.

ಮತ್ತಾವ ಧಾರ್ಮಿಕಸಿದ್ಧಾಂತದಲ್ಲಿಯೂ ಇದು ಅಷ್ಟು ಸ್ಪಷ್ಟವಾಗಿ ಕಾಣುವುದಿಲ್ಲ. ಇವೆಲ್ಲ ಅಂಶ, ಪೂರ್ಣತೆ ಪಡೆಯಲು ಸರಿಸಮನಾಗಿ ಪ್ರಯತ್ನಿಸುತ್ತಿವೆ. ಅಂಶವಿರುವುದು ಇದಕ್ಕಾಗಿ. ಪ್ರಾರಂಭದಿಂದಲೂ ಅದ್ವೈತಕ್ಕೆ ಭರತಖಂಡದಲ್ಲಿರುವ ಮತ್ತಾವ ಪಂಗಡದಮೇಲೂ ವಿರೋಧ ವಿಲ್ಲ. ಇಂದು ದ್ವೈತಿಗಳು ಇರುವರು. ಅವರ ಸಂಖ್ಯೆಯೇ ಹೆಚ್ಚು ಭರತಖಂಡದಲ್ಲಿ. ಸಾಧಾರಣವಾಗಿ ದ್ವೈತಭಾವನೆ ಅಷ್ಟು ವಿದ್ಯಾವಂತ ರಲ್ಲದವರಿಗೆ ರುಚಿಸುವುದು. ಇದು ಜಗತ್ತಿನ ಸುಲಭವಾದ, ಸ್ವಾಭಾವಿಕ ವಾದ, ವ್ಯವಹಾರದೃಷ್ಟಿಯ ವಿವರಣೆ. ಅದ್ವೈತಕ್ಕೆ ಇಂತಹ ದ್ವೈತಿ ಗಳೊಡನೆ ಯಾವ ಹೋರಾಟವೂ ಇಲ್ಲ. ಒಬ್ಬ ದೇವರು ಪ್ರಪಂಚದಾಚೆ ಎಲ್ಲೋ ಸ್ವರ್ಗದಲ್ಲಿರುವನು ಎಂದು ನಂಬುವನು. ಮತ್ತೊಬ್ಬ ಅದೇ ತನ್ನಾತ್ಮ, ಅದು ತನ್ನಿಂದ ದೂರದಲ್ಲಿದೆ ಎನ್ನುವುದು ಈಶ್ವರನಿಂದನೆ ಎನ್ನುವನು. ಅನ್ಯತಾಭಾವನೆ ಭಯಂಕರವಾಗಿರುವುದು. ಹತ್ತಿರಕ್ಕಿಂತ ಹತ್ತಿರದವನವನು. ಅದ್ವೈತ ಎಂಬ ಪದವಲ್ಲದೆ ಈ ನಿಕಟತೆಯನ್ನು ವ್ಯಕ್ತ ಗೊಳಿಸುವುದಕ್ಕೆ ಮತ್ತಾವ ಭಾಷೆಯಲ್ಲೂ ಬೇರೆ ಪದವೇ ಇಲ್ಲ. ದ್ವೈತಿಗೆ ಅದ್ವೈತಭಾವನೆ ಗಾಬರಿಯಾಗಿ ಅದು ಈಶ್ವರನಿಂದೆ ಎಂದು ಭಾವಿಸು ವನು. ಅದ್ವೈತಿಗೆ ಮತ್ತಾವ ಭಾವನೆಯೂ ತೃಪ್ತಿತರಲಾರದು. ಇತರ ಭಾವನೆಗಳೂ ಇರಲೇಬೇಕು ಎಂದು ಅದ್ವೈತಿಗೆ ಗೊತ್ತಿದೆ. ಸರಿಯಾದ ಮಾರ್ಗದಲ್ಲಿರುವ ದ್ವೈತಿಗಳೊಂದಿಗೆ ಅವನು ವಾದಿಸುವುದೇ ಇಲ್ಲ. ಅವನ ದೃಷ್ಟಿಯಿಂದ ದ್ವೈತಿ ಅನೇಕವನ್ನು ನೋಡಲೇಬೇಕಾಗಿದೆ. ಇದು ಅವನ ದೃಷ್ಟಿಜನಿತ ಆವಶ್ಯಕತೆ. ಅದನ್ನು ಇಟ್ಟುಕೊಳ್ಳಲಿ. ಅವನ

ಸಿದ್ಧಾಂತವೇನಾದರೂ ಇರಲಿ, ತಾನು ಯಾವ ಗುರಿಯೆಡೆಗೆ ಹೋಗು ತ್ತಿರುವನೊ ಇವನೂ ಕೂಡ ಅದೇ ಗುರಿಯೆಡೆಗೆ ಹೋಗುತ್ತಿರುವನು ಎಂದು ಅದ್ವೈತಿಗೆ ಗೊತ್ತಿದೆ. ಇಲ್ಲಿ ಅವನು ದ್ವೈತಿಗಿಂತ ಸಂಪೂರ್ಣ ಬೇರೆ. ದ್ವೈತಿ ತನ್ನ ದೃಷ್ಟಿಯಿಂದ ತಾನಲ್ಲದೆ ಉಳಿದವರೆಲ್ಲ ತಪ್ಪು ಎಂದು ಭಾವಿಸಲೇಬೇಕಾಗುತ್ತದೆ. ಪ್ರಪಂಚದಲ್ಲಿರುವ ದ್ವೈತಿಗಳೆಲ್ಲ ಸಾಧಾರಣ ಸಾಕಾರ ದೇವರಲ್ಲಿ ನಂಬುವರು. ಇದು ಮನುಷ್ಯತ್ವ ಆರೋಪಣ. ಅವನೊಬ್ಬ ಪ್ರಪಂಚದಲ್ಲಿ ದೊಡ್ಡ ರಾಜನಂತೆ. ಕೆಲವರ ಮೇಲೆ ತೃಪ್ತಿ, ಮತ್ತೆ ಕೆಲವರ ಮೇಲೆ ಅತೃಪ್ತಿ. ಕೆಲವು ದೇಶ ಅಥವಾ ಜನಾಂಗದವರನ್ನು ಕಂಡರೆ ಅವನಿಗೆ ಅವರ ಮೇಲೆ ಸಕಾರಣವಿಲ್ಲದೆ ಪ್ರೀತಿ ಉದಿಸಿ ಆಶೀರ್ವಾದವನ್ನೂ ವರ್ಷಿಸುವನು. ದ್ವೈತಿಗಳಲ್ಲಿ ದೇವರಿಗೆ ಕೆಲವು ಪ್ರೀತಿಪಾತ್ರರಿರುವರು. ಅವರಲ್ಲಿ ತಾನೂ ಒಬ್ಬನಾಗ ಬಹುದೆಂದು ಇವರು ಭಾವಿಸುವರು. ಪ್ರತಿಯೊಂದು ಧರ್ಮದಲ್ಲಿಯೂ ಈ ಭಾವನೆ ಇರುವುದು ನಿಮಗೆ ಕಾಣುವುದು. "ನಾವೇ ನಮ್ಮ ದೇವರ ಪ್ರೀತಿಪಾತ್ರರು. ನಮ್ಮಂತೆ ನೀವು ನಂಬಿದರೆ ಮಾತ್ರ ಅವನ ವಿಶ್ವಾಸ ವನ್ನು ಗಳಿಸಬಹುದು" ಎನ್ನುವರು. ಕೆಲವು ದ್ವೈತಿಗಳು ಯಾವ ಕೆಲವರು ದೇವರ ಆಶೀರ್ವಾದ ದೊರಕುವುದೆಂದು ಪೂರ್ಣ ನಿರ್ಣಯ ವಾಗಿದೆಯೊ ಅವರು ಮಾತ್ರ ಉದ್ಧಾರವಾಗುವರು, ಉಳಿದವರು ಎಷ್ಟೇ ಪ್ರಯತ್ನಪಟ್ಟರೂ ದೇವರು ಅವರನ್ನು ಸ್ವೀಕರಿಸುವುದಿಲ್ಲ ಎಂದು ಅತಿ ಸಂಕೋಚಭಾವವನ್ನು ವ್ಯಕ್ತಪಡಿಸುವರು. ಈ ಸಂಕುಚಿತಭಾವನೆ ಸ್ವಲ್ಪ ಹೆಚ್ಚುಕಡಿಮೆ ಇಲ್ಲದ ಯಾವುದಾದರೂ ದ್ವೈತಧರ್ಮವಿದ್ದರೆ ತೋರಿ ಎಂದು ಕೇಳುವೆನು. ಸ್ವಭಾವತಃ ದ್ವೈತಧರ್ಮದಲ್ಲಿ ಪರಸ್ಪರಕಲಹಗಳಿದ್ದೇ ಇರುತ್ತವೆ. ಇದನ್ನು ಅವರು ಎಂದಿನಿಂದಲೂ ಮಾಡುತ್ತಿರುವರು. ಅವಿದ್ಯಾವಂತರ ಒಣ ಅಹಂಕಾರವನ್ನು ಉಬ್ಬಿಸಿ ಸಾಮಾನ್ಯ ಮೆಚ್ಚಿಗೆ ಪಡೆಯುವರು. ತಮಗೇ ಪ್ರತ್ಯೇಕ ಹಕ್ಕುಗಳಿವೆ ಎಂದು ಯೋಚಿಸಲು ಅವರಿಗೆ ಆಸೆ. ನಿಮ್ಮನ್ನು ಶಿಕ್ಷಿಸುವುದಕ್ಕೆ ಕೈಯಲ್ಲಿ ಬೆತ್ತವಿಲ್ಲದ ದೇವರು ಇಲ್ಲದೆಇದ್ದರೆ ನೀವು ನೀತಿವಂತರಾಗಿರಲಾರಿರಿ ಎಂದು ದ್ವೈತಿ ಭಾವಿ ಸುವನು. ಯೋಚಿಸದ ಜನಸಾಮಾನ್ಯರು ಸಾಧಾರಣ ದ್ವೈತಿಗಳು. ಪಾಪ, ಪ್ರತಿ ದೇಶದಲ್ಲಿಯೂ ಸಾವಿರಾರು ವರ್ಷಗಳಿಂದಲೂ ಅವರನ್ನು ತುಳಿದಿರುವರು. ಆದಕಾರಣವೇ ಅವರ ಮುಕ್ತಿಯ ಭಾವನೆ ಶಿಕ್ಷೆಯ ಭಯದಿಂದ ಪಾರಾಗುವುದು. ಅಮೆರಿಕಾದೇಶದಲ್ಲಿ ಒಬ್ಬ ಪಾದ್ರಿ, "ಏನು!

ನಿಮ್ಮ ಧರ್ಮದಲ್ಲಿ ಸೈತಾನನಿಲ್ಲವೆ? ಇದು ಹೇಗೆ ಸಾಧ್ಯ?" ಎಂದು ಕೇಳಿದನು. ಪ್ರಪಂಚದಲ್ಲಿ ಜನ್ಮವೆತ್ತಿ ಅತಿಶ್ರೇಷ್ಠ ಮಾನ್ಯವ್ಯಕ್ತಿಗಳು ಇಂತಹ ಅವ್ಯಕ್ತವಾದ ಭಾವನೆಯಿಂದ ಪ್ರೇರಿತರಾಗಿ ದುಡಿದಿರುವರು. "ನಾನು ನನ್ನ ತಂದೆ ಒಂದೆ" ಎಂದು ಹೇಳಿದವನ ಶಕ್ತಿ ಕೋಟ್ಯಂತರ ಜನಕ್ಕೆ ಸ್ಫೂರ್ತಿದಾಯಕವಾಗಿದೆ. ಸಹಸ್ರಾರು ವರುಷಗಳಿಂದ ಇದು ಮಾನವಕೋಟಿಯ ಹಿತಕ್ಕೆ ಸಾಧಕವಾಗಿದೆ. ಅವನು ಅದ್ವೈತಿಯಾದುದರಿಂದ ಮತ್ತೊಬ್ಬರಿಗೆ ದಯೆ ತೋರಲು ಸಾಧ್ಯವಾಯಿತು. ಸಾಕಾರ ದೇವರಿಗಿಂತ ಹೆಚ್ಚು ಗ್ರಹಿಸಲಾಗದ ಸಾಮಾನ್ಯ ಜನರಿಗೆ "ಸ್ವರ್ಗದಲ್ಲಿರುವ ದೇವರಿಗೆ ಪ್ರಾರ್ಥಿಸಿ" ಎಂದನು. ಇದಕ್ಕಿಂತ ಉತ್ತಮ ಭಾವನೆ ಗ್ರಹಿಸಲು ಶಕ್ಯವಿದ್ದವರಿಗೆ "ನಾನು ಬಳ್ಳಿ, ನೀವು ಅದರ ಶಾಖೆಗಳು" ಎಂದನು. ತನ್ನ ಜ್ಞಾನವನ್ನು ಹೆಚ್ಚು ವ್ಯಕ್ತಗೊಳಿಸಿದ ತನ್ನ ಶಿಷ್ಯರಿಗೆ "ನಾನು ನನ್ನ ತಂದೆ ಒಬ್ಬರೇ" ಎಂಬ ಶ್ರೇಷ್ಠ ತತ್ತ್ವವನ್ನು ಹೇಳಿದನು.

ಭಗವಾನ್ ಬುದ್ಧ ದ್ವೈತ ದೇವರುಗಳನ್ನು ಲೆಕ್ಕಿಸಲಿಲ್ಲ. ನಾಸ್ತಿಕ ಜಡವಾದಿ ಎಂದು ಅವನನ್ನು ಕರೆದಿರುವರು. ಆದರೂ ತನ್ನ ಪ್ರಾಣವನ್ನು ಒಂದು ಕುರಿಗೆ ಬದಲಾಗಿ ಬಲಿ ಕೊಡಲು ಸಿದ್ಧನಾಗಿದ್ದನು. ಯಾವ ದೇಶದಲ್ಲಿಯೂ ಇಲ್ಲದ ಅತಿಶ್ರೇಷ್ಠ ನೈತಿಕಭಾವನೆಯನ್ನು ಪ್ರಚಾರಕ್ಕೆ ತಂದವನವನು. ಎಲ್ಲಿ ಒಂದು ನೀತಿಸಿಯಮವಿದೆಯೊ ಇದು ಆ ಮಹಾವ್ಯಕ್ತಿಯ ಒಂದು ಕಿರಣ. ಮಹಾವ್ಯಕ್ತಿಗಳ ಹೃದಯವನ್ನು ಅತಿ ಸಂಕುಚಿತ ಕ್ಷೇತ್ರದಲ್ಲಿಟ್ಟು ಕೂಡಿಡಲು ಅಸಾಧ್ಯ. ಅದರಲ್ಲೂ ಇಂತಹ ಮಾನವ ಇತಿಹಾಸಕಾಲದಲ್ಲಿ ನೂರುವರುಷಗಳ ಹಿಂದೆ ನಾವು ಕನಸು ಕೂಡ ಕಾಣದ ಒಂದು ಮಹಾಜ್ಞಾನ ಜಾಗೃತಿಯಾಗಿರುವಾಗ, ಐವತ್ತುವರುಷಗಳ ಹಿಂದೆ ಕೂಡ ಯಾರೂ ಕನಸುಕಾಣದ ವೈಜ್ಞಾನಿಕ ಜ್ಞಾನತರಂಗ ವೆದ್ದಿರುವಾಗ, ಇದು ಸಾಧ್ಯವೇ ಇಲ್ಲ. ಮನುಷ್ಯರನ್ನು ಬಲಾತ್ಕಾರವಾಗಿ ಸಂಕುಚಿತರನ್ನಾಗಿ ಮಾಡುವುದರಿಂಪ ಅವರನ್ನು ಮೃಗಸಮಾನ ಮಾಡುವೆವು. ವಿವೇಚನಾಹೀನರನ್ನಾಗಿ ಮಾಡುವೆವು. ನೀವು ಅವರ ನೈತಿಕ ಧರ್ಮವನ್ನು ನಾಶಮಾಡುವಿರಿ. ನಮಗಿಂದು ಬೇಕಾಗಿರುವುದು ಅದ್ಭುತ ಹೃದಯ ಮತ್ತು ಪ್ರಚಂಡ ಪ್ರತಿಭೆಯ ಸಂಗಮ. ಅನಂತಜ್ಞಾನ ಅನಂತ ಪ್ರೇಮದೊಂದಿಗೆ ಮಿಲನವಾಗಬೇಕು. ವೇದಾಂತಿಗಳು ಬ್ರಹ್ಮನನ್ನು ಸತ್ ಚಿತ್ ಆನಂದ ಎಂದು ಮಾತ್ರ ಕರೆಯುವರು. ಈ ಮೂರನ್ನೂ ಅವನು ಏಕವೆಂದು ಭಾವಿಸುವನು. ಸತ್ಯ ಚಿತ್ ಅಥವಾ ಆನಂದವಿಲ್ಲದೆ

ಇರಲಾರದು. ಆನಂದವಿಲ್ಲದ ಚಿತ್ತಾಗಲಿ ಸತ್ಯವಿಲ್ಲದ ಆನಂದವಾಗಲಿ ಇರಲಾರದು. ನಮಗೆ ಇಂದು ಬೇಕಾಗಿರುವುದು ಸತ್ ಚಿತ್ ಆನಂದ ಸಾಮರಸ್ಯ. ಇದೇ ನಮ್ಮ ಗುರಿ. ನಮಗೆ ಸಾಮರಸ್ಯ ಬೇಕು, ಏಕ ಮುಖಪ್ರಗತಿಯಲ್ಲ. ಶಂಕರಾಚಾರ್ಯರ ಬುದ್ಧಿಶಕ್ತಿ, ಬುದ್ಧನ ಹೃದಯ ಪಡೆಯಲು ಸಾಧ್ಯ. ಇಂತಹ ಪವಿತ್ರ ಸಮನ್ವಯ ಪಡೆಯಲು ನಾವೆಲ್ಲ ಪ್ರಯತ್ನಿಸುವ.



# ದೇವರೆಲ್ಲದರಲ್ಲಿ

ನಾವೆಷ್ಟೇ ಪ್ರಯತ್ನಪಟ್ಟರೂ ಜೀವನದ ಬಹುಭಾಗ ಅನಿವಾರ್ಯವಾಗಿ ದೋಷದಿಂದ ಆವೃತವಾಗಿರುವುದನ್ನು ನಾವು ನೋಡಿರುವೆವು. ಕಾರ್ಯತಃ ಈ ದೋಷಗಳ ಮೊತ್ತ ಅನಂತವಾಗಿಯೇ ತೋರುವುದು. ಅನಾದಿಕಾಲದಿಂದಲೂ ನಾವು ಇದನ್ನು ನಿವಾರಿಸಲು ಯತ್ನಿಸುತ್ತಿರುವೆವು. ಆದರೆ ಎಲ್ಲಾ ಹೆಚ್ಚುಕಡಿಮೆ ಹಾಗೆಯೆ ಇರುವುದು. ನಾವು ಹೆಚ್ಚು ಕಾರಣೋಪಾಯ ಕಂಡುಹಿಡಿದಷ್ಟೂ ಅನ್ಯಸೂಕ್ಷ್ಮದೋಷಗಳ ಬಲಿಗೆ ವಶರಾಗಿರುವುದು ಕಾಣುವುದು. ಧರ್ಮಗಳೆಲ್ಲ ಈ ತೊಂದರೆಯಿಂದ ಪಾರಾಗುವುದಕ್ಕೆ ಒಬ್ಬ ದೇವರನ್ನು ಸೂಚಿಸುವುವು. ವ್ಯವಹಾರಚತುರರು ಈಗಿನಕಾಲದಲ್ಲಿ ಹೇಳುವಂತೆ ಪ್ರಪಂಚವನ್ನು ಸ್ವೀಕರಿಸಿದರೆ ದೋಷವಲ್ಲದೆ ಮತ್ತಾವುದೂ ನಮ್ಮ ಪಾಲಿಗೆ ಉಳಿಯುವುದಿಲ್ಲ ಎಂದು ಧರ್ಮಗಳೆಲ್ಲ ಸಾರುವುವು. ಪ್ರಪಂಚದಾಚೆ ಇನ್ನೇನೊ ಇರುವುದೆಂದೂ ಅವರು ಸಮರ್ಥಿಸುವರು. ಪಂಚೇಂದ್ರಿಯಗಳ ವಲಯದೊಳಗಿನ ಬಾಳುವೆ, ಜಡಜಗತ್ತಿನ ಬಾಳುವೆಯೇ ಸರ್ವಸ್ವವಲ್ಲ. ಇದೆಲ್ಲೊ ಏಕಾಂಶ, ಕೇವಲ ತೋರಿಕೆಯದು. ಅದರ ಹಿಂದೆ ಮತ್ತು ಅದರಾಚೆ ಅನಂತವಿರುವುದು. ಅಲ್ಲಿ ಯಾವ ದೋಷವೂ ಇಲ್ಲ. ಕೆಲವರು ಅವನನ್ನು ದೇವರು, ಅಲ್ಲ, ಜಿಹೋವ, ಜೋವಿ ಮುಂತಾದ ಹೆಸರಿನಿಂದ ಕರೆಯುವರು. ವೇದಾಂತಿಗಳು ಅವನನ್ನು ಬ್ರಹ್ಮನೆಂದು ಕರೆಯುವರು.

ಧಾರ್ಮಿಕ ಬೋಧನೆಯ ಪ್ರಥಮ ಅಭಿಪ್ರಾಯ ನಮ್ಮ ಬಾಳನ್ನು ಕೊನೆಗಾಣಿಸುವುದೊಳ್ಳೆಯದು ಎಂಬಂತೆ ತೋರುವುದು. ಜೀವನದ ದೋಷಗಳನ್ನು ನಿವಾರಿಸುವುದು ಹೇಗೆ ಎಂಬ ಪ್ರಶ್ನೆಗೆ ಜೀವನವನ್ನು ಕೊನೆಗಾಣಿಸುವುದೊಂದೇ ಸುಲಭೋಪಾಯದಂತೆ ತೋರುವುದು. ಇದು ಒಂದು ಹಳೆ ಕಥೆಯನ್ನು ಜ್ಞಾಪಕಕ್ಕೆ ತರುವುದು. ಸೊಳ್ಳೆಯೊಂದು ಒಬ್ಬನ ತಲೆಮೇಲೆ ಕುಳಿತುಕೊಂಡಿತು. ಸೊಳ್ಳೆಯನ್ನು ಕೊಲ್ಲಬೇಕೆಂದು ಮನುಷ್ಯನೊಬ್ಬ ಬಲವಾದ ಪೆಟ್ಟುಕೊಟ್ಟನು. ಇದರಿಂದ ಮನುಷ್ಯ ಸೊಳ್ಳೆ ಇಬ್ಬರನ್ನೂ ಕೊಂದನು. ದೋಷನಿವಾರಣೆಗೆ ಇಂತಹುದೇ ಚಿಕಿತ್ಸೋಪಾಯದಂತೆ ತೋರುವುದು. ಜೀವನದಲ್ಲಿ ಅನಂತ ಕಷ್ಟವಿದೆ. ಪ್ರಪಂಚದಲ್ಲಿ ದೋಷ ತುಂಬಿತುಳುಕಾಡುತ್ತಿದೆ. ಅನುಭಾವಿಗಳಾರೂ ಈ ಸತ್ಯವನ್ನು ಅಲ್ಲಗಳೆಯುವಂತಿಲ್ಲ.

ಧರ್ಮಗಳು ಯಾವ ನಿವಾರಣೋಪಾಯವನ್ನು ಸೂಚಿಸುತ್ತವೆ? ಈ ಪ್ರಪಂಚದಲ್ಲಿ ಏನೂ ಇಲ್ಲ. ಪ್ರಪಂಚದಾಚೆ ಏನೊ ಸತ್ಯವಾಗಿರುವುದಿದೆ ಎನ್ನುವುವು. ಇಲ್ಲಿ ಕಷ್ಟ ಬರುವುದು. ಚಿಕಿತ್ಸೆ ಸರ್ವನಾಶದಂತೆ ತೋರುವುದು. ಇದು ಹೇಗೆ ಚಿಕಿತ್ಸೆಯಾಗಬಲ್ಲುದು? ಧರ್ಮಗಳು ಏನನ್ನು ಸೂಚಿಸುವುವೊ ಅದು ಸತ್ಯ, ಆದರೆ ಅವನ್ನು ಸರಿಯಾದ ದೃಷ್ಟಿಯಲ್ಲಿ ಅರ್ಥ ಮಾಡಿಕೊಳ್ಳಬೇಕು ಎನ್ನುವುದು ವೇದಾಂತ. ಅನೇಕವೇಳೆ ಇದನ್ನು ತಪ್ಪು ಅರ್ಥಮಾಡಿಕೊಳ್ಳುವರು. ಏಕೆಂದರೆ ಧರ್ಮಗಳ ಅರ್ಥ ಸ್ಪಷ್ಟವಾಗಿಲ್ಲ. ನಮಗಿಂದು ಬೇಕಾಗಿರುವುದು ಹೃದಯ ಮತ್ತು ಬುದ್ಧಿಯ ಸಹಕಾರ. ಹೃದಯವೇನೊ ಬಹಳ ಮುಖ್ಯ ಸರಿ. ಜೀವನದಲ್ಲಿ ಅದ್ಭುತ ಸ್ಫೂರ್ತಿ ವ್ಯಕ್ತವಾಗುವುದು, ಹೃದಯದ ಮೂಲಕ. ಬುದ್ಧಿಯೇ ಇಲ್ಲದೆ ಸ್ವಲ್ಪ ಹೃದಯವಿರುವುದನ್ನು ಎಲ್ಲಾ ಬುದ್ಧಿ ಆದರೆ ಶೂನ್ಯಹೃದಯಕ್ಕಿಂತ ನೂರು ಪಾಲು ಆಶಿಸುವೆನು. ಯಾರಿಗೆ ಹೃದಯವಿದೆಯೋ ಅವನಿಗೆ ಜೀವನ ಸಾಧ್ಯ, ಬೆಳವಣಿಗೆ ಸಾಧ್ಯ, ಆದರೆ ಯಾರಿಗೆ ಹೃದಯವೇ ಇಲ್ಲವೋ ಬರೀ ಬುದ್ಧಿಮಯವಾಗಿರುವನೊ ಅವನು ಶೂನ್ಯಹೃದಯದವನಾಗಿ ಸಾಯುವನು.

ಯಾರು ಹೃದಯದಿಂದ ಮಾತ್ರ ಪ್ರೇರೇಪಿತರಾಗಿರುವರೊ ಅವರು ಬಹುಕಷ್ಟಪಡಬೇಕಾಗುವುದು. ಅನೇಕವೇಳೆ ಅವನು ವ್ಯಥೆಗೀಡಾಗುವುದನ್ನು ನೋಡುವೆವು. ನಮಗಿಂದು ಬೇಕಾಗಿರುವುದು ಹೃದಯ ಮತ್ತು ಭಾವನೆಯ ಸಂಯೋಗ. ಮನುಷ್ಯ ಬುದ್ಧಿಗಾಗಿ ತನ್ನ ಹೃದಯವನ್ನು ತ್ಯಜಿಸಬೇಕಾಗಿಲ್ಲ, ಅಥವಾ ಹೃದಯಕ್ಕಾಗಿ ಬುದ್ಧಿ ಬಿಡಬೇಕಾಗಿಲ್ಲ. ಪ್ರತಿಯೊಬ್ಬರಲ್ಲಿಯೂ ಬೇಕಾದಷ್ಟು ಹೃದಯ ಭಾವನೆಗಳಿರಲಿ, ಜೊತೆಗೆ ಬೇಕಾದಷ್ಟು ಬುದ್ಧಿಯೂ ಇರಲಿ.

ಪ್ರಪಂಚದಲ್ಲಿ ನಾವು ಇಚ್ಛಿಸುವುದಕ್ಕೆ ಒಂದು ಮಿತಿ ಇದೆಯೆ? ಪ್ರಪಂಚ ಅಮಿತವಲ್ಲವೆ? ಅನಂತಭಾವನೆಗೆ ಅವಕಾಶವಿದೆ, ಇದರ ಜೊತೆಗೆ ಅನಂತ ಸಂಸ್ಕೃತಿ ಮತ್ತು ಬುದ್ಧಿಗೂ ಅವಕಾಶವಿದೆ. ಯಾವ ಮಿತಿಯೂ ಇಲ್ಲದೆ ಇವು ಸಂಧಿಸಲಿ, ಸಮಾನಾಂತರದಲ್ಲಿ ಎರಡೂ ಸಂಚರಿಸುತ್ತಿರಲಿ.

ಮುಕ್ಕಾಲುಪಾಲು ಧರ್ಮಗಳಿಗೆ ಈ ಸತ್ಯ ಗೊತ್ತಾಗುವುದು. ಆದರೆ ಅವರೆಲ್ಲ ಮಾಡುವ ತಪ್ಪು ಒಂದೆ. ಅದೇ ಕೇವಲ ಉದ್ವೇಗಪರವಶರಾಗುವರು. ಪ್ರಪಂಚದಲ್ಲಿ ದೋಷವಿದೆ. ಅದಕ್ಕೇ ಪ್ರಪಂಚ ತ್ಯಜಿಸಿ. ಇದು ಮಹತ್ವಪೂರ್ಣ ಏಕಮಾತ್ರ ಸಂದೇಶವೇನೊ ಸರಿ, ಇದರಲ್ಲಿ ಸಂಶ

ಯವಿಲ್ಲ. ಪ್ರಪಂಚವನ್ನು ತ್ಯಜಿಸಿ. ಇದರಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಸತ್ಯವನ್ನು ತಿಳಿಯಬೇಕಾದರೆ ಅಸತ್ಯ ತ್ಯಜಿಸಬೇಕು ; ಒಳ್ಳೆಯದು ಬೇಕಾದರೆ ಕೆಟ್ಟದ್ದನ್ನು ತ್ಯಜಿಸಬೇಕು, ಜನನ ಬೇಕಾದರೆ ಮರಣ ತ್ಯಜಿಸಬೇಕು.

ನಮಗೆ ತಿಳಿದಿರುವಂತೆ ಈ ಸಿದ್ಧಾಂತದ ಪ್ರಕಾರ ಇಂದ್ರಿಯ ಜೀವನ ತ್ಯಜಿಸಬೇಕಾದರೆ ನಮಗೆ ಉಳಿಯುವುದೇನು ? ಜೀವನ ಎಂದರೆ ನಾವು ಮತ್ತೇನು ಭಾವಿಸುವೆವು. ಇದನ್ನು ನಾವು ಬಿಟ್ಟರೆ ಉಳಿಯುವುದೇನು ?

ಅನಂತರ ವೇದಾಂತದ ಗಹನ ತತ್ತ್ವಭಾಗಕ್ಕೆ ಬಂದಾಗ ನಾವು ಇದನ್ನು ಚೆನ್ನಾಗಿ ತಿಳಿದುಕೊಳ್ಳಬಹುದು. ವೇದಾಂತದಲ್ಲಿ ಮಾತ್ರ ಸಮಸ್ಯೆಯನ್ನು ಯುಕ್ತಿಯುಕ್ತವಾಗಿ ಬಗೆಹರಿಸಬಲು ಸಾಧ್ಯ ಎಂದು ಸದ್ಯಕ್ಕೆ ಹೇಳುತ್ತೇನೆ. ವೇದಾಂತದರ್ಶನ ಯಾವುದನ್ನು ಬೋಧಿಸಬೇಕೆಂದಿರುವುದೊ ಅದನ್ನು ಮಾತ್ರ ನಿಮ್ಮ ಮುಂದಿಡುವೆನು. ಅದೇ ಪ್ರಪಂಚವನ್ನು ದೈವೀಕರಣಮಾಡುವುದು (Deification).

ವೇದಾಂತ ನಿಜವಾಗಿ ಪ್ರಪಂಚವನ್ನು ತ್ಯಜಿಸುವುದಿಲ್ಲ. ತ್ಯಾಗದ ಆದರ್ಶ ವೇದಾಂತ ಸಂದೇಶ ಬಿಟ್ಟರೆ ಮತ್ತೆಲ್ಲೂ ಅಷ್ಟು ಉಚ್ಚವರ್ಗಕ್ಕೆ ಏರದು. ಆದರೂ ಶುಷ್ಕ ಆತ್ಮಹಾನಿಕರವಾದ ಸಂದೇಶ ನೀಡುವುದಿಲ್ಲ. ನಿಜವಾಗಿ ಪ್ರಪಂಚವನ್ನು ದೈವೀದೃಷ್ಟಿಯಿಂದ ನೋಡುವುದು. ಅಂದರೆ ಪ್ರಪಂಚವನ್ನು ನಾವು ಭಾವಿಸಿದಂತೆ ಅದು ನಮಗೆ ತೋರುವುದನ್ನು ತ್ಯಜಿಸುವುದು. ಅದರ ಸತ್ಯಸ್ಥಿತಿಯನ್ನು ತಿಳಿಯುವುದು. ಅದನ್ನು ದೇವರನ್ನಾಗಿ ಮಾಡಿ. ಅದು ದೇವರೆ. ಒಂದು ಪುರಾತನ ಉಪನಿಷತ್ತಿನ ಪ್ರಾರಂಭದಲ್ಲಿ "ಪ್ರಪಂಚದಲ್ಲಿ ಏನಿರುವುದೊ ಅದನ್ನೆಲ್ಲ ದೇವರಿಂದ ವ್ಯಾಪಿಸಬೇಕು" ಎಂದು ಹೇಳುವುದು.

ಪ್ರತಿಯೊಂದನ್ನೂ ಭಗವಂತನಿಂದ ತುಂಬಬೇಕು. ಎಲ್ಲ ಸುಖವೆಂಬ ಸುಳ್ಳಿನಿಂದ ಅಲ್ಲ, ಪ್ರಪಂಚದ ದೋಷಕ್ಕೆ ಕಣ್ಣುಮುಚ್ಚುವುದರಿಂದ ಅಲ್ಲ. ನಿಜವಾಗಿ ದೇವರನ್ನು ಎಲ್ಲದರಲ್ಲಿ ನೋಡುವುದರಿಂದ ಆವರಿಸಬೇಕು. ನಾವು ಪ್ರಪಂಚವನ್ನು ತ್ಯಜಿಸಬೇಕು. ಪ್ರಪಂಚವನ್ನು ತ್ಯಜಿಸಿದರೆ ಉಳಿಯುವುದೇನು ? ದೇವರು ಎಂದರೆ ಅರ್ಥವೇನು ? ನೀನು ಹೆಂಡತಿಯನ್ನು ಇಟ್ಟುಕೊಂಡಿರಬಹುದು. ನೀನು ಅವಳನ್ನು ತ್ಯಜಿಸಬೇಕೆಂದು ಅರ್ಥವಲ್ಲ. ಹೆಂಡತಿಯಲ್ಲಿ ನೀನು ದೇವರನ್ನು ನೋಡಬೇಕು. ನಿಮ್ಮ ಮಕ್ಕಳನ್ನು ತ್ಯಜಿಸಬೇಕು ಎಂದರೆ ಅರ್ಥವೇನು ? ಪ್ರತಿಯೊಂದು ದೇಶ

ದಲ್ಲಿಯೂ ಕೆಲವು ಮಾನವ ಮೃಗಗಳು ಮಾಡುವಂತೆ ಮನೆಯಿಂದ ಅವರನ್ನು ಬಿಟ್ಟು ಓಡಿಸಬೇಕೆ? ನಿಜವಾಗಿಯೂ ಇಲ್ಲ. ಇದು ರಾಕ್ಷಸೀ ಕೃತ್ಯ, ಧರ್ಮವಲ್ಲ. ಆದರೆ ನಿಮ್ಮ ಮಕ್ಕಳಲ್ಲಿ ದೇವರನ್ನು ನೋಡಿ. ಅದರಂತೆಯೇ ಪ್ರತಿಯೊಂದು ವಸ್ತುವಿನಲ್ಲಿಯೂ ಜನನಮರಣಗಳಲ್ಲಿ ಸುಖದುಃಖಗಳಲ್ಲಿ ದೇವರು ಒಂದೇ ಸಮನಾಗಿರುವನು. ಇಡೀ ಪ್ರಪಂಚ ಅವನಿಂದ ತುಂಬಿತುಳುಕಾಡುತ್ತಿದೆ. ನಿಮ್ಮ ಕಣ್ತೆರೆದು ಅವನನ್ನು ನೋಡಿ, ವೇದಾಂತ ಬೋಧಿಸುವುದೇ ಇದನ್ನು. ನೀವು ಊಹಿಸಿದ ಪ್ರಪಂಚವನ್ನು ತ್ಯಜಿಸಿ. ನಿಮ್ಮ ಊಹೆ ಅಲ್ಪ ಅನುಭವದಮೇಲೆ ನಿಂತದ್ದು. ಯುಕ್ತಿ ಬಹಳ ದುರ್ಬಲವಾಗಿತ್ತು, ನಿಮ್ಮ ನಿಶ್ಶಕ್ತಿಯ ಆಧಾರದ ಮೇಲಿತ್ತು. ಇಲ್ಲಿಯ ವರೆವಿಗೂ ನಾವು ಭಾವಿಸುತ್ತಿದ್ದ ಪ್ರಪಂಚವನ್ನು, ಇಲ್ಲಿಯವರೆಗೆ ನಾವು ಆಸಕ್ತರಾದ ಪ್ರಪಂಚವನ್ನು ತ್ಯಜಿಸಿ, ಇದು ಸ್ವಯಂಕೃತಭ್ರಾಂತಿ ಜಗತ್ತು. ಅದನ್ನು ತ್ಯಜಿಸಿ ಕಣ್ಣುಬಿಟ್ಟುನೋಡಿ, ಅದೆಂದಿಗೂ ಹಾಗೆ ಇರಲಿಲ್ಲ. ಇದೊಂದು ಮಾಯೆ, ಕನಸು. ಇದ್ದದ್ದು ಭಗವಂತನೊಬ್ಬನೇ. ಅವನೇ ಮಗುವಿನಲ್ಲಿ, ಸತಿಯಲ್ಲಿ, ಪತಿಯಲ್ಲಿ ಇರುವುದು. ಅವನೇ ಒಳ್ಳೆಯದು ಕೆಟ್ಟದರಲ್ಲಿ ಇರುವುದು. ಅವನೇ ಪಾಪದಲ್ಲಿ ಮತ್ತು ಪಾಪಿಯಲ್ಲಿ ಇರುವುದು, ಅವನೇ ಜನನಮರಣಗಳಲ್ಲಿರುವುದು.

ಅದ್ಭುತ ಪ್ರತಿಪಾದನೆ! ಆದರೂ ವೇದಾಂತ ತೋರಲು, ಬೋಧಿಸಲು, ಪ್ರಚಾರಮಾಡಲಿಚ್ಛಿಸುವುದೇ ಇದನ್ನು. ಇದು ಕೇವಲ ಪ್ರಾರಂಭ ಮಾತ್ರ.

ಜೀವನದ ಅಪಾಯ ಮತ್ತು ದೋಷಗಳಿಂದ ನಾವು ಹೀಗೆ ಪಾರಾಗಬಹುದು. ಯಾವುದನ್ನೂ ಆಶಿಸಬೇಡಿ. ಯಾವುದು ನಮ್ಮನ್ನು ದುಃಖಿಗಳಾಗಿ ಮಾಡುವುದು? ನಾವು ವ್ಯಥೆಪಡುವ ದುಃಖಕ್ಕೆಲ್ಲ ಕಾರಣ ಆಸೆ. ಏನನ್ನೊ ಆಶಿಸುತ್ತೀರಿ. ಅದು ಈಡೇರುವುದಿಲ್ಲ, ವ್ಯಥೆಪಡುವಿರಿ. ಆಸೆ ಇಲ್ಲದೆ ಇದ್ದರೆ ವ್ಯಥೆ ಇರುತ್ತಿರಲಿಲ್ಲ. ಆದರೆ ಇಲ್ಲಿ ಕೂಡ ನನ್ನನ್ನು ನೀವು ತಪ್ಪು ತಿಳಿದುಕೊಳ್ಳುವ ಸಂಭವ ಇದೆ. ಆಸೆಯನ್ನು ತೊರೆದು ಎಲ್ಲಾ ದುಃಖಗಳಿಂದ ಪಾರಾಗುವುದೆಂದರೇನೆಂಬುದನ್ನು ವಿವರಿಸುವುದು ಅವಶ್ಯಕ. ಗೋಡೆಗೆ ಯಾವ ಆಸೆಯೂ ಇಲ್ಲ. ಅದು ವ್ಯಥೆಪಡುವುದಿಲ್ಲ, ನಿಜ. ಆದರೆ ಅದು ಅಭಿವೃದ್ಧಿಯಾಗುವುದಿಲ್ಲ. ಕುರ್ಚಿಗೆ ಯಾವ ಆಸೆಯೂ ಇಲ್ಲ, ಅದು ವ್ಯಥೆಪಡುವುದಿಲ್ಲ. ಆದರೆ ಅದು ಯಾವಾಗಲೂ ಕುರ್ಚಿಯಾಗಿಯೇ ಇರುವುದು. ಸುಖದಲ್ಲಿ ಒಂದು ಮಹಿಮೆ ಇದೆ, ದುಃಖದಲ್ಲಿ

ಒಂದು ಮಹಿಮೆ ಇವೆ. ನಾನು ಧೈರ್ಯವಾಗಿ ಹೇಳಬೇಕಾದರೆ ಪಾಪ ದಿಂದಲೂ ಪ್ರಯೋಜನ ಉಂಟು. ದುಃಖದಿಂದ ಬರುವ ದೊಡ್ಡ ನೀತಿ ನಿಮಗೆಲ್ಲ ಗೊತ್ತಿದೆ. ನಾವು ನೂರಾರು ಕೆಲಸಗಳನ್ನು ಜೀವನದಲ್ಲಿ ಮಾಡಿರುವೆವು. ಅದನ್ನು ಮಾಡದೆ ಇದ್ದರೆ ಚೆನ್ನಾಗಿರುತ್ತಿತ್ತು ಎನ್ನಿಸು ವುದು. ಆದರೆ ಅವೂ ನಮಗೆ ದೊಡ್ಡ ಗುರುವಿನಂತೆ ಇವೆ. ನಾನೇನೊ ಕೆಲವು ಒಳ್ಳೆಯದನ್ನು ಮಾಡಿರುವುದರಿಂದ ಸಂತೋಷ, ಹಲವು ತಪ್ಪು ಗಳನ್ನು ಮಾಡಿಯೂ ಸಂತೋಷ. ಏಕೆಂದರೆ ಪ್ರತಿಯೊಂದೂ ನನಗೆ ನೀತಿದಾಯಕವಾಗಿದೆ. ಈಗಿರುವ ನಾನು ಏನೇನು ಹಿಂದೆ ಮಾಡಿದೆನೊ ಆಲೋಚಿಸುವೆನೊ ಅವುಗಳೆಲ್ಲದರ ಪರಿಣಾಮ. ಪ್ರತಿಯೊಂದು ಕರ್ಮ ಮತ್ತು ಆಲೋಚನೆ ತಮ್ಮ ಪರಿಣಾಮವನ್ನು ಬಿಟ್ಟಿವೆ. ಈ ಪರಿಣಾಮವೆ ನನ್ನ ಒಟ್ಟು ಜೀವನ ವಿಕಾಸ.

ಆಸೆ ಕೆಟ್ಟದ್ದು ಎಂದು ನಮಗೆಲ್ಲ ಗೊತ್ತಿದೆ. ಹಾಗಾದರೆ ಆಸೆ ತ್ಯಜಿಸುವುದೆಂದರೇನು ? ಜೀವನ ಹೇಗೆ ಸಾಧ್ಯ ? ಆಸೆ ಮತ್ತು ಮನುಷ್ಯ ನನ್ನು ಕೊಲ್ಲುವಂತಹ ಆತ್ಮಹಾನಿಕರವಾದ ಉಪದೇಶದಂತೆಯೇ ಆಗು ವುದು. ಇದಕ್ಕೆ ಪರಿಹಾರವೆ ಇದು. ನಿಮಗೆ ಆಸ್ತಿ ಇರಬಾರದು, ಆವಶ್ಯಕ ವಸ್ತುಗಳಿರಬಾರದು, ಭೋಗಸಾಮಗ್ರಿಗಳಿರಬಾರದೆಂದಲ್ಲ. ನಿಮಗೆ ಬೇಕಾದುದನ್ನೆಲ್ಲ ಇಟ್ಟುಕೊಳ್ಳಿ. ಆದರೆ ಸತ್ಯವೇನು ಎಂದು ಯೋಚಿಸಿ ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಿ. ಐಶ್ವರ್ಯ ಯಾರಿಗೂ ಸೇರಿದ್ದಲ್ಲ. ಅದಕ್ಕೆ ನಾನು ಒಡೆಯ ಎಂಬ ಅಭಿಮಾನ ಇಲ್ಲದೆ ಇರಲಿ. ನೀನು ನಾನು ಅಥವಾ ಮತ್ತಾರೂ ಹೆಚ್ಚಲ್ಲ, ಇದೆಲ್ಲ ದೇವರಿಗೆ ಸೇರಿದ್ದು. ಪ್ರಾರಂಭದ ಶ್ಲೋಕ ಪ್ರತಿಯೊಂದನ್ನೂ ದೇವರಿಂದ ಆವರಿಸಿ ಎಂದು ಹೇಳಿತು. ನೀವು ಅನುಭವಿಸುವ ಐಶ್ವರ್ಯದಲ್ಲಿ ದೇವರು ಇರುವನು. ನಿಮ್ಮ ಮನಸ್ಸಿನಲ್ಲಿ ಏಳುವ ಆಸೆಯಲ್ಲಿ ದೇವರು ಇರುವನು. ನಿಮ್ಮ ಆಸೆಯ ತೃಪ್ತಿಗಾಗಿ ಕೊಳ್ಳುವ ವಸ್ತುವಿನಲ್ಲಿ ಅವನಿರುವನು. ಅವನು ನಿಮ್ಮ ಸುಂದರ ವಸನಭೂಷಣಗಳಲ್ಲಿರುವನು. ನೋಡುವರೀತಿ ಇದು : ನೀವು ಈ ದೃಷ್ಟಿಯಿಂದ ನೋಡಲೆತ್ನಿಸಿದೊಡನೆಯೆ ಎಲ್ಲ ಬೇರೆ ರೂಪು ತಾಳುವುದು. ನಿಮ್ಮ ಚಲನವಲನಗಳಲ್ಲಿ, ಮಾತುಕತೆಯಲ್ಲಿ, ನಿಮ್ಮ ಆಕಾರದಲ್ಲಿ ಪ್ರತಿಯೊಂದರಲ್ಲಿಯೂ ದೇವರನ್ನು ನೀವು ಇಟ್ಟರೆ ದೃಶ್ಯವೇ ಬದಲಾಯಿಸುವುದು. ಪ್ರಪಂಚ ದುಃಖ ಸಂಕಟಗಳಂತೆ ತೋರದೆ ಸ್ವರ್ಗಸಮನಾಗುವುದು.

"ಸ್ವರ್ಗ ನಿನ್ನಲ್ಲಿರುವುದು" ಎಂದು ಜೀಸಸ್ ಹೇಳುವನು. ಇದನ್ನೇ ವೇದಾಂತ ಮತ್ತು ಎಲ್ಲಾ ಪ್ರಖ್ಯಾತ ಗುರುವರ್ಯರೂ ಹೇಳುವರು. "ಯಾರಿಗೆ ನೋಡಲು ಕಣ್ಣುಗಳಿವೆಯೊ ಅವನು ನೋಡಲಿ, ಕೇಳಲು ಕಿವಿ ಇರುವವನು ಕೇಳಲಿ" ಯಾವ ಸತ್ಯವನ್ನು ನಾವು ಇದುವರೆಗೂ ಅಲ್ಲಿ ಇಲ್ಲಿ ಹುಡುಕುತ್ತಿದ್ದೆವೊ ಅದಾಗಲೆ ಇರುವುದು. ಅದು ಸದಾಕಾಲದಲ್ಲಿಯೂ ನಮ್ಮಲ್ಲೇ ಇತ್ತು. ನಮ್ಮ ಅಜ್ಞಾನದಲ್ಲಿ ಅದನ್ನು ಕಳೆದುಕೊಂಡೆವೆಂದು ಭಾವಿಸಿ ಅದನ್ನು ಹುಡುಕುವುದಕ್ಕೆ ಅಳುತ್ತ ಕರೆಯುತ್ತ ಅಲೆದಾಡು ತ್ತಿದ್ದೆವು. ಆದರೆ ಅದು ಯಾವಾಗಲೂ ನಮ್ಮ ಹೃದಯಾಂತರಾಳದಲ್ಲೆ ಇತ್ತು. ನಾವು ಅಲ್ಲಿ ಮಾತ್ರ ಅದನ್ನು ಕಾಣಬಹುದು.

ಪ್ರಪಂಚವನ್ನು ತ್ಯಜಿಸುವುದೆಂದರೆ ಹಿಂದಿನ ಒಂದು ಭಾವನೆಯಲ್ಲಿ ಅರ್ಥಮಾಡಿಕೊಂಡರೆ ಅದು ಹೀಗಾಗುವುದು. ನಾವು ಕೆಲಸಮಾಡ ಕೂಡದು, ಸೋಮಾರಿಗಳಾಗಿರಬೇಕು. ಆಲೋಚಿಸದೆ, ಏನೂ ಕೆಲಸ ಮಾಡದೆ, ಮಣ್ಣಿನ ಮುದ್ದೆಗಳಂತೆ ಸುಮ್ಮನೆ ಕುಳಿತು ಅದೃಷ್ಟವಾದಿಗಳಾಗಿ ಪ್ರಕೃತಿಯಾಣತಿಯ ಘಟನೆಗಳಿಗೆ ಸಿಕ್ಕಿ ತಾರಾಡುತ್ತಿರಬೇಕು. ಇದೇ ಪ್ರತಿಫಲವಾಗುವುದು. ಆದರೆ ಅರ್ಥ ಇದಲ್ಲ. ನಾವು ಕೆಲಸ ಮಾಡಬೇಕು. ಭ್ರಾಂತ ಆಸೆಗಳಿಂದ ಪ್ರೇರಿತ ಮನುಷ್ಯನಿಗೆ ಕೆಲಸವೆಂದ ರೇನು ಗೊತ್ತು? ತನ್ನ ಸ್ವಂತ ಉದ್ವೇಗ ಮತ್ತು ಇಂದ್ರಿಯಗಳಿಂದ ಪ್ರೇರಿತ ನಾದವನಿಗೆ ಕೆಲಸದ ರಹಸ್ಯವೇನು ಗೊತ್ತು? ಯಾರು ತನ್ನ ಸ್ವಂತ ಇಚ್ಛೆ ಯಿಂದ ಪ್ರೇರಿತನಾಗಿಲ್ಲವೊ, ಸ್ವಾರ್ಥದಿಂದ ಪ್ರೇರಿತನಾಗಿಲ್ಲವೊ ಅವನು ಕರ್ಮಮಾಡಬಲ್ಲ. ಯಾರಿಗೆ ಯಾವ ಪ್ರಾಪಂಚಿಕ ಉದ್ದೇಶವಿಲ್ಲವೊ ಅವರು ಕೆಲಸಮಾಡುವರು. ಕೆಲಸದಿಂದ ಏನನ್ನೂ ಯಾರು ಪ್ರಾರ್ಥಿಸರೊ ಅವರು ಕೆಲಸಮಾಡಬಲ್ಲರು.

ಯಾರು ಚಿತ್ರವನ್ನು ಆನಂದಿಸಬಲ್ಲರು? ಮಾರುವವನೆ, ಕೊಳ್ಳು ವವನೆ? ಮಾರುವವನು ಲೆಕ್ಕದಲ್ಲಿ ನಿರತನಾಗಿರುವನು. ಎಷ್ಟು ಲಾಭ ಈ ಚಿತ್ರದಿಂದ ಬರಬಹುದು ಎಂದು ಯೋಚಿಸುತ್ತಿರುವನು. ಅವನ ತಲೆ ಯೆಲ್ಲ ಇದರಿಂದ ತುಂಬಿಹೋಗಿದೆ. ಅವನು ಹರಾಜು ಹಾಕುವವನ ಕೈಯನ್ನು ನೋಡುತ್ತಿರುವನು. ಕೊಳ್ಳುವವರ ಸವಾಲನ್ನೇ ಕೇಳುತ್ತಿರು ವನು. ಸವಾಲು ಎಷ್ಟು ಬೇಗ ಏರುತ್ತಿದೆಯೊ ಅದನ್ನು ನೋಡು ವುದರಲ್ಲಿ ನಿರತನಾಗಿರುವನು. ಮಾರಲು ಅಥವಾ ಕೊಳ್ಳಲು ಯಾರಿಗೆ ಇಚ್ಛೆ ಇಲ್ಲದೆ ಅಲ್ಲಿಗೆ ಹೋಗಿರುವನೊ ಅವನು ಮಾತ್ರ ಚಿತ್ರವನ್ನು ನೋಡಿ

ಆನಂದಿಸುತ್ತಿರುವನು. ಈ ಪ್ರಪಂಚವೆಲ್ಲ ಒಂದು ದೃಶ್ಯ. ಆಸೆ ನಾಯ ವಾದಾಗ ಅವರು ಪ್ರಪಂಚವನ್ನು ನೋಡಿ ಆನಂದಿಸುವರು. ಈಗ ವಸ್ತು ನನ್ನದು ಎಂಬ ಭ್ರಾಂತಭಾವನೆ, ಮಾರುವುದು ಕೊಳ್ಳುವುದು ಎಲ್ಲ ಕೊನೆಗಾಣುವುದು. ಸಾಲ ಕೊಡುವವನು ಹೋದ, ಕೊಳ್ಳುವವನು ಹೋದ, ಮಾರುವವನು ಹೋದ. ಈ ಪ್ರಪಂಚ ಒಂದು ಸುಂದರ ಚಿತ್ರ ವಾಗಿ ನಿಲ್ಲುವುದು. ಇದಕ್ಕಿಂತ ಸುಂದರವಾದ ಭಗವಂತನ ಭಾವನೆಯನ್ನು ನಾನು ಮತ್ತೆಲ್ಲಿಯೂ ಓದಿಲ್ಲ. "ಅವನೊಬ್ಬ ಮಹಾಕವಿ, ಪುರಾಣ ಕವಿ. ಅನಂತ ಆನಂದದಲ್ಲಿ ಸ್ವರಪ್ರಾಸಗಳಿಂದ ಕೂಡಿಬಂದ ಮಹಾಕಾವ್ಯ ಈ ಸೃಷ್ಟಿ ಎಂಬುದು." ನಾವು ಆಸೆಯನ್ನು ತ್ಯಜಿಸಿದರೆ ಆಗ ಮಾತ್ರ ಈ ಭಗವಂತನ ಈ ವಿಶ್ವವನ್ನು ನೋಡಿ ಆನಂದಿಸಬಹುದು. ಆಗ ಎಲ್ಲವೂ ಭಗವತ್ಸ್ವರೂಪ ತಾಳುವುದು. ಮೂಲೆಕೋಣೆಗಳು, ಸಂದಿ ಗೊಂದಿಗಳು ಅಪವಿತ್ರ ಅಜ್ಞಾನವೆಂದು ಯಾವುದನ್ನು ಭಾವಿಸಿದ್ದೆವೊ ಅವೆಲ್ಲ ದೈವೀಸ್ವರೂಪ ತಾಳುವುದು. ಆಗ ಅವೆಲ್ಲ ತಮ್ಮ ಸಹಜಸ್ವಭಾವ ತೋರುವುವು. ಆಗ ನಾವು ನಮ್ಮನ್ನೆ ನೋಡಿ ನಗುವೆವು. ನಮ್ಮ ಅಳು ಕರೆ ಎಲ್ಲ ಮಕ್ಕಳಾಟ. ನಾವು ಇದನ್ನು ನೋಡುತ್ತ ಸುಮ್ಮನೆ ನಿಂತಿದ್ದೆವು.

ಅದಕ್ಕೇ ನಿಮ್ಮ ಕರ್ತವ್ಯಮಾಡಿ ಎನ್ನುವುದು ವೇದಾಂತ. ಮೊದಲು ತೋರಿಕೆಯ ಭ್ರಾಂತಿ ಜಗತ್ತನ್ನು ತ್ಯಜಿಸಿ ಕೆಲಸಮಾಡಿ ಎನ್ನುವುದು ವೇದಾಂತ. ಹಾಗೆಂದರೇನು? ದೇವರನ್ನು ಸರ್ವತ್ರ ನೋಡುವುದು. ಹೀಗೆ ನೀವು ಕೆಲಸಮಾಡಬೇಕು. ನೂರುವರುಷ ಜೀವಿಸಬೇಕಾದರೆ ಜೀವಿಸಿ; ಪ್ರಪಂಚದ ಸುಖಭೋಗಗಳನ್ನೆಲ್ಲ ಬೇಕಾದರೆ ಪಡೆಯಿರಿ. ಆದರೆ ಎಲ್ಲವನ್ನೂ ದೈವೀಸ್ವರೂಪಕ್ಕೆ ತನ್ನಿ, ಪಾವನಮಾಡಿ. ಮತ್ತೊಬ್ಬರಿಗೆ ಉಪಯೋಗಕರವಾಗುವಂತಹ ದೀರ್ಘಜೀವನ, ಆನಂದ ಮತ್ತು ಕರ್ಮ ನಿಷ್ಠೆಯಿಂದ ಕೂಡಿದ ಜೀವನವನ್ನು ಆಶಿಸಿ. ಹೀಗೆ ಕರ್ಮನಿರತನಾದರೆ ಮುಕ್ತರಾಗುವ ಮಾರ್ಗ ತೋರುವುದು. ಬೇರೆ ಮಾರ್ಗವೇ ಇಲ್ಲ. ಸತ್ಯ ವನ್ನು ತಿಳಿಯದೆ ಯಾರು ನಿಷ್ಪ್ರಯೋಜನ ಇಂದ್ರಿಯ ಸುಖಗಳಲ್ಲಿ ತನ್ಮಯರಾಗುವರೊ ಅವರು ತಮ್ಮ ನೆಲೆಯನ್ನು ಕಳೆದುಕೊಳ್ಳುವರು. ಗುರಿ ಸೇರಲಾರರು. ಪ್ರಪಂಚವನ್ನು ದೂರುತ್ತ ಕಾಡಿಗೆ ಹೋಗಿ, ದೇಹಕ್ಕೆ ಯಾತನೆ ಕೊಟ್ಟು ಉಪವಾಸದಿಂದ ಸ್ವಲ್ಪಸ್ವಲ್ಪವಾಗಿ ಯಾರು ಸಾಯು ವರೊ ಹೃದಯವನ್ನು ಯಾರು ಒಂದು ಮರುಭೂಮಿಯಂತೆ ಮಾಡಿ ಎಲ್ಲಾ

ಮೃದುಮಧುರಭಾವನೆಗಳನ್ನು ನಾಶಮಾಡಿ, ನಿಷ್ಠುರನಾಗಿ ಶುಷ್ಕನಾಗಿರುವನೊ ಅವನೂ ಕೂಡ ತನ್ನ ಮಾರ್ಗವನ್ನು ತಪ್ಪುವನು. ಇವೆರಡೂ ಒಂದು ಅತಿ: ಎರಡು ಕೊನೆಗಳಲ್ಲಿರುವ ಒಂದು ತಪ್ಪು. ಇಬ್ಬರೂ ತಮ್ಮ ಮಾರ್ಗ ಕಳೆದುಕೊಂಡಿರುವರು, ಗುರಿ ಕಳೆದುಕೊಂಡಿರುವರು.

ದೇವರನ್ನು ಸರ್ವದರಲ್ಲಿಟ್ಟು ಅವನೇ ಸರ್ವಸ್ವ ಎಂದು ಭಾವಿಸಿ ಕೆಲಸಮಾಡಿ ಎನ್ನುವುದು ವೇದಾಂತ. ಜೀವನವನ್ನು ಪವಿತ್ರಗೊಳಿಸಿ, ಅದೇ ದೇವರೆಂದು ನೋಡಿ, ಬಿಡುವಿಲ್ಲದೆ ಕೆಲಸಮಾಡಿ. ನಾವು ಮಾಡಬೇಕಾದುದಿಷ್ಟೆ, ಕೇಳಬೇಕಾದುದಿಷ್ಟೆ ಎಂದು ತಿಳಿಯಿರಿ. ದೇವರೆ ಸರ್ವಸ್ವ. ಅವನನ್ನು ಅರಸಲು ಮತ್ತೆಲ್ಲಿ ಹೋಗಬೇಕು? ಅವನಾಗಲೆ ಪ್ರತಿಯೊಂದು ಕ್ರಿಯೆ, ಆಲೋಚನೆ, ಭಾವನೆಯಲ್ಲಿಯೂ ಇರುವನು. ಈ ದೃಷ್ಟಿಯಿಂದ ಕೆಲಸಮಾಡಬೇಕು. ಇದೊಂದೇ ಉಪಾಯ. ಅನ್ಯಥಾ ಮಾರ್ಗವೇ ಇಲ್ಲ. ಕರ್ಮಫಲ ಆಗ ನಮ್ಮನ್ನು ಬಂಧಿಸುವುದಿಲ್ಲ. ನಮ್ಮ ಸಂಕಟ ದೋಷಕ್ಕೆಲ್ಲ ಕಾರಣ ಕೆಲಸಕ್ಕೆ ಬಾರದ ಆಸೆಗಳೆಂಬುದನ್ನು ನಾವು ಆಗಲೆ ನೋಡಿರುವೆವು. ಆದರೆ ಇದನ್ನು ಭಗವಂತನ ಮೂಲಕ ದೈವೀಸ್ವರೂಪಕ್ಕೆ ತಂದರೆ, ಪರಿಶುದ್ಧಮಾಡಿದರೆ ಯಾವ ದೋಷವೂ ಬರುವುದಿಲ್ಲ. ಯಾರು ಈ ರಹಸ್ಯವನ್ನು ಅರಿತಿಲ್ಲವೊ ಅವರು ಇದನ್ನು ತಿಳಿಯುವವರೆಗೆ ಆಸುರೀ ಪ್ರಪಂಚದಲ್ಲಿರಬೇಕು. ಅವುಗಳಲ್ಲಿ ಸುತ್ತುಮುತ್ತ ಎಲ್ಲೆಲ್ಲೂ ಎಂತಹ ಒಂದು ಅಸೀಮ ಆನಂದದ ಗಣಿ ಇದೆ ಎಂಬುದು ಅನೇಕರಿಗೆ ಗೊತ್ತಿಲ್ಲ. ಅವರು ಅದನ್ನು ಇನ್ನೂ ಕಂಡುಹಿಡಿದಿಲ್ಲ. ಆಸುರೀ ಪ್ರಪಂಚವೆಂದರೇನು? ಅಜ್ಞಾನ ಎನ್ನುವುದು ವೇದಾಂತ.

ಮಹಾನದೀತೀರದಲ್ಲಿ ಕುಳಿತುಕೊಂಡು ದಾಹದಿಂದ ಪರಿತಪಿಸುತ್ತಿರುವೆವು. ಆಹಾರ ರಾಶಿಯ ಪಕ್ಕದಲ್ಲಿ ಕುಳಿತುಕೊಂಡು ಉಪವಾಸದಿಂದ ನರಳುತ್ತಿರುವೆವು. ಆನಂದಮಯ ವಿಶ್ವವಿಲ್ಲಿದೆ. ಆದರೂ ನಮಗದು ಕಾಣದು. ನಾವು ಯಾವಾಗಲೂ ಅದರಲ್ಲೆ ಇರುವೆವು. ಆದರೂ ನಾವು ಅದನ್ನು ಮರೆಯುವೆವು. ಧರ್ಮ ನಮಗೆ ಇದನ್ನು ಹುಡುಕಿಕೊಡುವುದೆಂದು ಹೇಳುವುದು. ಎಲ್ಲರೂ ಈ ಆನಂದಮಯ ಜಗತ್ತಿಗಾಗಿ ಕಾತರಿಸುತ್ತಿರುವರು- ಎಲ್ಲಾ ಜನಾಂಗಗಳೂ ಹುಡುಕುವುದೇ ಇದನ್ನು. ಇದೇ ಧರ್ಮದ ಏಕಮಾತ್ರ ಗುರಿ. ಈ ಆದರ್ಶವನ್ನು ಬೇರೆಬೇರೆ ಧರ್ಮಗಳು ಹಲವು ಭಾಷೆಯಲ್ಲಿ ವಿವರಿಸುತ್ತವೆ. ತೋರಿಕೆಯ ವ್ಯತ್ಯಾಸಕ್ಕೆಲ್ಲ ಕಾರಣ ಭಾಷಾವೈವಿಧ್ಯತೆ ಅಷ್ಟೆ. ಒಬ್ಬ ಒಂದು ವಿಧವಾಗಿ ವ್ಯಕ್ತಗೊಳಿಸುವನು.

ಮತ್ತೊಬ್ಬ ಮತ್ತೊಂದು ಬಗೆಯಲ್ಲಿ ವ್ಯಕ್ತಗೊಳಿಸುವನು. ಪ್ರತಿಯೊಬ್ಬನೂ ಅನ್ಯಭಾಷೆಯಲ್ಲಿ ಹೇಳುತ್ತಿರುವುದನ್ನೇ ಮನಸ್ಸಿನಲ್ಲಿಟ್ಟುಕೊಂಡಿರಬಹುದು.

ಈ ವಿಷಯಕ್ಕೆ ಸಂಬಂಧಿಸಿದ ಹಲವು ಪ್ರಶ್ನೆಗಳೇಳುವುವು. ಮಾತಾಡುವುದೇನೊ ಸುಲಭ. ಬಾಲ್ಯಾರಭ್ಯ ದೇವರನ್ನು ಎಲ್ಲೆಲ್ಲೂ, ಎಲ್ಲದರಲ್ಲೂ ನೋಡಬೇಕು. ಆಗ ಮಾತ್ರ ನಾನು ನಿಜವಾಗಿ ಪ್ರಪಂಚವನ್ನು ನೋಡಿ ಆನಂದಿಸಬಹುದೆಂದು ಕೇಳುತ್ತಿರುವೆನು. ಆದರೆ ಪ್ರಪಂಚದಲ್ಲಿ ಬೆರೆತು ಒಂದೆರಡು ಪೆಟ್ಟುತಿಂದೊಡನೆಯೆ ಈ ಭಾವನೆ ಮಾಯವಾಗುವುದು. ಪ್ರತಿಯೊಬ್ಬರಲ್ಲಿಯೂ ದೇವರಿರುವನು ಎಂದು ಆಲೋಚಿಸುತ್ತಾ ನಾನು ದಾರಿಯಲ್ಲಿ ನಡೆದುಕೊಂಡು ಹೋಗುತ್ತಿರುವೆನು. ಒಬ್ಬ ಬಲಶಾಲಿ ಬಂದು ನನ್ನನ್ನು ನೂಕುವನು. ನಾನು ಕಾಲುದಾರಿಯಲ್ಲಿ ಬೀಳುವೆನು. ಆಗ ಬಿಗಿದ ಮುಷ್ಟಿಯಿಂದ ಮೇಲೇಳುವೆನು. ಕೋಪ ಉಕ್ಕೇರುವುದು. ಹಿಂದೆ ಮೆಲಕುತ್ತಿದ್ದ ಭಾವನೆ ಮಾಯವಾಗುವುದು. ತಕ್ಷಣ ನಾನು ಉನ್ಮತ್ತನಾಗುವೆನು. ಎಲ್ಲಾ ಮರೆತುಹೋಗುವುದು. ದೇವರನ್ನು ನೋಡುವ ಬದಲು ಸೈತಾನನನ್ನು ನೋಡುವೆನು. ಹುಟ್ಟಿದಾಗಿನಿಂದ ಎಲ್ಲರಲ್ಲಿ ದೇವರನ್ನು ನೋಡಿ ಎಂದು ಬೋಧಿಸಿರುವರು. ಪ್ರತಿಯೊಂದು ಧರ್ಮ ಎಲ್ಲೆಲ್ಲೂ, ಎಲ್ಲದರಲ್ಲಿಯೂ ದೇವರನ್ನು ನೋಡಿ ಎಂದು ಬೋಧಿಸುವುದು. ನ್ಯೂ ಟೆಸ್ಟಮೆಂಟನಲ್ಲಿ ಕ್ರೈಸ್ತ ಹೀಗೆ ಹೇಳುವುದು ಗೊತ್ತಿಲ್ಲವೆ ? ನಮಗೆಲ್ಲ ಇದನ್ನು ಕಲಿಸಿರುವರು. ಆದರೆ ಕಾರ್ಯತಃ ಬಂದಾಗ ಮಾತ್ರ ಕಷ್ಟಬರುವುದು. ಯುಸಾಫ್ಸ್ ಫೇಬಲ್ಸ್‌ನಲ್ಲಿ ಬರುವ ಕಥೆ ನಿಮಗೆ ಜ್ಞಾಪಕವಿರಬಹುದು. ಒಂದು ಜಿಂಕೆ ನೀರಿನಲ್ಲಿ ಬಿದ್ದ ತನ್ನ ದೇಹದ ನೆರಳನ್ನು ನೋಡಿ ತನ್ನ ಮರಿಗೆ " ನಾನೆಷ್ಟು ಬಲಶಾಲಿ, ನನ್ನ ಸುಂದರವಾದ ತಲೆ ನೋಡು, ಅಂಗಾಂಗಗಳನ್ನು ನೋಡು, ಅವೆಷ್ಟು ಬಲವಾಗಿ ದೃಢವಾಗಿವೆ. ನಾನೆಷ್ಟು ವೇಗವಾಗಿ ಓಡಬಲ್ಲೆ'' ಎಂದು ಹೇಳಿಕೊಳ್ಳುತ್ತಿತ್ತು. ಅಷ್ಟರಲ್ಲಿ ದೂರದಲ್ಲಿ ನಾಯಿ ಬೊಗಳುವುದು ಕೇಳಿಸಿತು. ತಕ್ಷಣ ಜಿಂಕೆ ಓಡುವುದು. ಹಲವು ಮೈಲಿ ಓಡಿದ ನಂತರ ಮೇಲುಸಿರುಬಿಡುತ್ತಾ ಹಿಂತಿರುಗಿತು. ಮರಿ, "ಈಗತಾನೆ ನಾನೆಷ್ಟು ಬಲಶಾಲಿ ಎಂದು ಹೇಳಿಕೊಂಡೆಯಲ್ಲ , ನಾಯಿ ಬಗುಳಿದಾಗ ನೀನೇಕೆ ಓಡಿದೆ?" ಎಂದು ಕೇಳಿತು. ಅದಕ್ಕೆ ತಾಯಿ "ಹೌದು ಮಗು, ನಾಯಿ ಬಗುಳಿದರೆ ನನ್ನ ಧೈರ್ಯವೆಲ್ಲ ಮಾಯವಾಗುವುದು" ಎಂದಿತು. ನಾವೂ ಹೀಗೆ ಮಾನವ ಕಲ್ಪನೆಯನ್ನು ಹೊಗಳುವೆವು. ನಾವು ಬಲಶಾಲಿಗಳು, ಧೈರ್ಯಶಾಲಿಗಳು ಎಂದು ಭಾವಿಸುವೆವು.

ದೊಡ್ಡದೊಡ್ಡ ಶಪಥಮಾಡುವೆವು. ಆದರೆ ಪ್ರಲೋಭನ ಮತ್ತು ಕಷ್ಟದ ನಾಯಿ ಬಗುಳಿದರೆ ಕಥೆಯ ಜಿಂಕೆಯಂತೆ ನಾವು ಆಗುವೆವು. ಸ್ಥಿತಿ ಹೀಗಿದ್ದರೆ ಇದನ್ನೆಲ್ಲ ಬೋಧಿಸಿ ಪ್ರಯೋಜನವೇನು ? ಇದರಿಂದ ಮಹಾ ಪ್ರಯೋಜನವಿದೆ. ಬಿಡದೆ ಮುಂದುವರಿದರೆ ಜಯಿಸುವೆವು. ಇದೇ ಪ್ರಯೋಜನ. ಯಾವುದನ್ನೂ ದಿನ ಒಂದರಲ್ಲಿ ಸಾಧಿಸಲಾರೆವು.

ಆತ್ಮನ ವಿಷಯವನ್ನು ಮೊದಲು ಕೇಳಬೇಕು, ನಂತರ ಮನನ, ನಿಧಿಧ್ಯಾಸನ. ಪ್ರತಿಯೊಬ್ಬರೂ ಆಕಾಶವನ್ನು ನೋಡಬಹುದು. ತಿರೆಯ ಮೇಲೆ ತೆವಳುತ್ತಿರುವ ಕ್ರಿಮಿ ಕೂಡ ನೀಲಿ ಆಕಾಶವನ್ನು ನೋಡಬಹುದು. ಆದರೆ ಅದೆಷ್ಟು ದೂರದಲ್ಲಿರುವುದು. ಇದರಂತೆಯೇ ನಮ್ಮ ಆದರ್ಶ ಕೂಡ. ಅದೇನೋ ದೂರದಲ್ಲಿದೆ, ಸಂದೇಹವಿಲ್ಲ. ಆದರೆ ನಾವು ಆದರ್ಶ ವನ್ನು ಸೇರಬೇಕೆಂಬುದೂ ಗೊತ್ತಿದೆ. ನಮಗೆ ಪರಮೋತ್ಕೃಷ್ಟ ಆದರ್ಶವೂ ಬೇಕು. ದುರದೃಷ್ಟವಶಾತ್ ಜೀವನದಲ್ಲಿ ಬಹುಪಾಲು ಜನರು ಯಾವ ಆದರ್ಶವೂ ಇಲ್ಲದೆ ಅಜ್ಞಾನಾಂಧಕಾರದಲ್ಲಿ ತೊಳಲುತ್ತಿರುವರು. ಆದರ್ಶ ವಿರುವ ಮನುಷ್ಯ ಸಾವಿರ ತಪ್ಪನ್ನು ಮಾಡಿದರೆ ಇಲ್ಲದವನು ಐವತ್ತು ಸಾವಿರ ತಪ್ಪನ್ನು ಮಾಡುವನು. ಆದಕಾರಣ ಒಂದು ಆದರ್ಶವಿರುವುದು ಮೇಲು. ಈ ಆದರ್ಶ ನಮ್ಮ ಹೃದ್ಗತವಾಗಿ ನಮ್ಮ ರಕ್ತನಾಳದಲ್ಲೆಲ್ಲ ಸಂಚರಿಸಿ ಪ್ರತಿಯೊಂದು ರಕ್ತಕಣವೂ ಈ ಭಾವನೆಯಿಂದ ಅನುರಣಿತವಾಗಿ ನಮ್ಮ ದೇಹದ ಅಂಗೋಪಾಂಗದಲ್ಲೆಲ್ಲ ಸಂಚರಿಸುವತನಕ ಈ ಆದರ್ಶವನ್ನು ನಾವು ಕೇಳಬೇಕು. ನಾವು ಇದನ್ನು ಕುರಿತು ಧ್ಯಾನಿಸಬೇಕು. ಹೃದಯ ತುಂಬಿತುಳಿಕಾಡಿದಾಗ ಕೈಗಳೂ ಕೆಲಸಮಾಡುವುವು.

ಭಾವನೆ ನಮ್ಮನ್ನು ಪ್ರಚೋದಿಸುವ ಶಕ್ತಿ. ಶ್ರೇಷ್ಠ ಭಾವನೆಗಳಿಂದ ಮನಸ್ಸನ್ನು ತುಂಬಿ, ದಿನಂಪ್ರತಿ ಅದನ್ನು ಕೇಳಿ, ತಿಂಗಳುತಿಂಗಳು ಅದನ್ನು ಆಲೋಚಿಸಿ. ಸೋಲನ್ನು ಲೆಕ್ಕಿಸಬೇಡಿ, ಇದು ಸ್ವಾಭಾವಿಕ. ಈ ಸೋಲೇ ಜೀವನಸೌಂದರ್ಯ. ಇವಿಲ್ಲದೆ ಜೀವನ ಹೇಗಿರುವುದು ? ಹೋರಾಟವಿಲ್ಲದೆ ಇದ್ದರೆ ಜೀವನ ಪಡೆದು ಪ್ರಯೋಜನವಿಲ್ಲ. ಜೀವನದ ಸೌಂದರ್ಯವೆಲ್ಲಿರು ವುದು ? ಹೋರಾಟ ತಪ್ಪುಗಳನ್ನು ಲೆಕ್ಕಿಸಬೇಡಿ. ಹಸು ಸುಳ್ಳುಹೇಳು ವುದನ್ನು ನಾನು ಕೇಳಿಲ್ಲ. ಆದರೆ ಅದೊಂದು ಹಸು ಅಷ್ಟೆ. ಅದೆಂದಿಗೂ ಮನುಷ್ಯನಲ್ಲ. ಸೋಲು ಸ್ವಲ್ಪ ಹಿಂದೆ ಜಾರುವುದು, ಇವನ್ನು ನೀವು ಗಮನಿಸಬೇಕಾಗಿಲ್ಲ. ಸಾವಿರವೇಳೆ ಆದರ್ಶವನ್ನು ಹಿಡಿದುಕೊಳ್ಳಿ. ಸಾವಿರ ಸಲ ಸೋತರೂ ಮತ್ತೊಮ್ಮೆ ಪ್ರಯತ್ನಿಸಿ. ಮಾನವನ ಆದರ್ಶವೇ ಎಲ್ಲ.

ದರಲ್ಲಿಯೂ ದೇವರನ್ನು ನೋಡುವುದು. ಎಲ್ಲದರಲ್ಲೂ ನೋಡಲು ಸಾಧ್ಯವಿಲ್ಲದೆ ಇದ್ದರೆ ನೀವು ಯಾವುದನ್ನು ಹೆಚ್ಚು ಪ್ರೀತಿಸುವಿರೋ ಅದರಲ್ಲಾದರೂ ಮೊದಲು ನೋಡಿ, ಅನಂತರ ಮತ್ತೊಂದರಲ್ಲೂ ನೋಡಿ. ಹಾಗೆ ಮುಂದೆ ನೀವು ಸಾಗಬಹುದು. ಜೀವಿಯ ಮುಂದೆ ಅನಂತ ಕಾಲವಿದೆ. ಆತುರಪಡಬೇಕಾಗಿಲ್ಲ. ಕೊನೆಗೆ ನೀವು ಗುರಿಸೇರುವಿರಿ.

"ಅವನು ಮನಸ್ಸಿಗಿಂತ ಹೆಚ್ಚು ಸ್ಪಂದಿಸುವನು. ಅವನು ಮನಸ್ಸಿಗೆ ಎಂದಿಗೂ ಸಾಧ್ಯವಿಲ್ಲದಷ್ಟು ವೇಗವಾಗಿ ಹೋಗುವನು. ಇಂದ್ರಿಯಗಳು ಕೂಡ ಅವನನ್ನು ಸೇರಲಾರವು. ಆಲೋಚನೆ ಅವನನ್ನು ಗ್ರಹಿಸಲಾರದು. ಅವನು ಚಲಿಸಿದರೆ ಎಲ್ಲಾ ಚಲಿಸುವುದು. ಅವನಲ್ಲಿ ಸರ್ವವೂ ಇರುವುದು. ಅವನು ಚಲಿಸುವನು ಮತ್ತು ಅಚಲನು. ಅವನು ಹತ್ತಿರಕ್ಕೆ ಹತ್ತಿರ, ದೂರಕ್ಕೆ ದೂರ. ಅವನು ಎಲ್ಲದರೊಳಗೆ ಇರುವನು. ಎಲ್ಲದರ ಹೊರಗೆ ಇರುವನು. ಎಲ್ಲದರಲ್ಲೂ ಹಾಸುಹೊಕ್ಕಾಗಿರುವನು. ಪ್ರತಿಯೊಬ್ಬರಲ್ಲಿಯೂ ಒಂದೇ ಆತ್ಮನನ್ನು ಯಾರು ನೋಡಬಲ್ಲರೊ ಅವನೆಂದಿಗೂ ಆತ್ಮನಿಂದ ದೂರವಾಗನು. ಸರ್ವಜೀವನ ಮತ್ತು ವಿಶ್ವವನ್ನು ಈ ಆತ್ಮದಲ್ಲಿ ನೋಡಿದಾಗ ಮಾತ್ರ ಮಾನವ ರಹಸ್ಯವನ್ನು ತಿಳಿದಿರುವನು. ಅವನಿಗೆ ಇನ್ನು ಭ್ರಮೆಯಿಲ್ಲ. ವಿಶ್ವದಲ್ಲಿ ಏಕತ್ವವನ್ನು ನೋಡುವವನಿಗೆ ಇನ್ನೆಲ್ಲಿಯ ದುಃಖ?"

ವೇದಾಂತದ ಮತ್ತೊಂದು ಗಹನ ಆದರ್ಶವೇ ಜೀವನದ ಐಕ್ಯತೆ, ಸರ್ವವಸ್ತುಗಳ ಐಕ್ಯತೆ. ನಮ್ಮ ದುಃಖಕ್ಕೆಲ್ಲಾ ಕಾರಣ ಅಜ್ಞಾನ. ಈ ಅಜ್ಞಾನಕ್ಕೆ ಮೂಲ ವೈವಿಧ್ಯತೆ. ಒಬ್ಬರಿಗೂ ಮತ್ತೊಬ್ಬರಿಗೂ, ಒಂದು ದೇಶಕ್ಕೂ ಮತ್ತೊಂದು ದೇಶಕ್ಕೂ, ಭೂಮಿಗೆ ಚಂದ್ರನಿಗೆ, ಚಂದ್ರನಿಗೆ ಸೂರ್ಯನಿಗೆ ಇರುವ ಪ್ರತ್ಯೇಕ ಭಾವನೆ. ಪ್ರತಿಯೊಂದು ಕಣಕ್ಕೂ ಇರುವ ಪ್ರತ್ಯೇಕ ಭಾವನೆಯಿಂದ ದುಃಖವೆಲ್ಲ ಬರುವುದು. ಈ ಪ್ರತ್ಯೇಕತೆ ಸತ್ಯವಲ್ಲ ಎನ್ನುವುದು ವೇದಾಂತ. ಇದು ಕೇವಲ ಬಾಹ್ಯತೋರಿಕೆ. ವಸ್ತುವಿನ ಅಂತರಾಳದಲ್ಲಿ ಇನ್ನೂ ಐಕ್ಯತೆ ಇದೆ. ನೀವು ಸ್ವಲ್ಪ ಆಳಕ್ಕೆ ಹೋದರೆ ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ, ಒಂದು ದೇಶ ಮತ್ತೊಂದು ದೇಶಕ್ಕೆ, ಉಚ್ಚನೀಚರಿಗೆ, ಧನಿಕದರಿದ್ರರಿಗೆ, ಮಾನವರು ದೇವತೆಗಳಿಗೆ, ಮನುಷ್ಯರಿಗೆ ಪ್ರಾಣಿಗಳಿಗೆ ಒಂದು ಐಕ್ಯತೆಯನ್ನು ಕಾಣುವೆವು. ನೀವು ಇನ್ನೂ ಸ್ವಲ್ಪ ಆಳಕ್ಕೆ ಹೋದರೆ ಎಲ್ಲಾ ಒಂದರ ಆವಿರ್ಭಾವನೆಯಂತೆ ತೋರುವುದು. ಯಾರಿಗೆ ಈ ಒಂದರ

ಅರಿವಾಗಿದೆಯೊ ಅವರಿಗೆ ಇನ್ನು ಮೋಹವಿಲ್ಲ. ಯಾವುದೂ ಅವನನ್ನು ಮೋಹಗೊಳಿಸದು. ಅವನಿಗೆ ಎಲ್ಲಾ ವಸ್ತುಗಳ ಸತ್ಯರಹಸ್ಯ ಅರಿವಾಗಿದೆ. ಅವನಿಗಿನ್ನು ದುಃಖವೆಲ್ಲಿಯದು ? ಅವನೇನು ಆಶಿಸುವನು ? ಅವನು ಪ್ರಪಂಚದ ಸರ್ವವಸ್ತುಗಳ ಸತ್ಯವನ್ನು ಭಗವಂತನಲ್ಲಿ ಕಂಡುಕೊಂಡಿರುವನು. ಅವನೇ ಎಲ್ಲದರ ಕೇಂದ್ರ, ಎಲ್ಲದರ ಐಕ್ಯ. ಅದೇ ಸತ್ ಚಿತ್ ಆನಂದ. ಅಲ್ಲಿ ಮರಣರೋಗವಾಗಲಿ, ದುಃಖಸಂಕಟವಾಗಲಿ, ಅತೃಪ್ತಿಯಾಗಲಿ ಇಲ್ಲ. ಅಲ್ಲಿ ಎಲ್ಲಾ ಪರಿಪೂರ್ಣ ಐಕ್ಯತೆ, ಪರಿಪೂರ್ಣ ಆನಂದ. ಆಗ ಅವನಾರಿಗೆ ಮರುಗುವುದು ? ಸತ್ಯವಾಗಿ ಮರಣದಲ್ಲಿ, ದುಃಖದಲ್ಲಿ ಯಾರಿಗೂ ನಾವು ವ್ಯಥೆಪಡಬೇಕಾಗಿಲ್ಲ, ಅಳಬೇಕಾಗಿಲ್ಲ. ಪರಿಶುದ್ಧ ನಿರಾಕಾರ, ನಿರ್ದೇಹಿ, ಅಕಳಂಕ ಎಲ್ಲವನ್ನೂ ತಿಳಿದವನೂ ಪುರಾಣ ಕವಿ, ಸ್ವಯಂಭು. ಪ್ರತಿಯೊಬ್ಬರಿಗೂ ಅವರವರ ಕರ್ಮಕ್ಕೆ ತಕ್ಕಂತೆ ಪ್ರತಿಫಲ ಕೊಡುವನು. ಅವನು ಸರ್ವವನ್ನೂ ಪ್ರವೇಶಿಸಿರುವನು. ಅಜ್ಞಾನಜನಿತ ಪ್ರಪಂಚವನ್ನು ಯಾರು ಸತ್ಯವೆಂದು ಆರಾಧಿಸುತ್ತಿರುವರೊ ಅವರು ಅಜ್ಞಾನದಲ್ಲಿ ತೊಳಲುತ್ತಿರುವರು. ಯಾರು ಅಜ್ಞಾನದಲ್ಲಿ ಆಸಕ್ತರಾಗಿ ಉತ್ತಮವಾದುದನ್ನು ಕಾಣಲಾರರೊ ಅವರು ಮಾತ್ರ ಘೋರವಾದ ಅಜ್ಞಾನಕ್ಕೆ ತೆರಳುವರು. ಯಾರು ಪ್ರಕೃತಿ ರಹಸ್ಯವನ್ನು ಅರಿಯುವರೋ ಪ್ರಕೃತಿಗೆ ಅತೀತವಾದುದನ್ನು ಪ್ರಕೃತಿಯ ಮೂಲಕ ನೋಡುವರೊ ಅವರು ಮೃತ್ಯುವನ್ನು ದಾಟುವರು. ಪ್ರಕೃತಿಗೆ ಅತೀತವಾಗಿರುವುದರ ಸಹಾಯದಿಂದ ಅನಂತಾನಂದವನ್ನು ಅನುಭವಿಸುವರು. "ಹೇ ಭಾನು ! ಸತ್ಯವನ್ನು ಸ್ವರ್ಣಮಂಡಲದಿಂದ ಮುಚ್ಚಿರುವೆ. ಆ ಆವರಣವನ್ನು ಸರಿಸು. ನಿನ್ನಲ್ಲಿರುವ ಸತ್ಯವನ್ನು ನೋಡಲು ನನಗೆ ಸಾಧ್ಯವಾಗಲಿ. ನಿನ್ನಲ್ಲಿರುವ ಸತ್ಯವನ್ನು ನಾನರಿತೆ. ನಿನ್ನ ಕಿರಣ ಮತ್ತು ಕಾಂತಿಯ ನಿಜವಾದ ಅರ್ಥ ನನಗೆ ತಿಳಿಯಿತು. ನಿನ್ನಲ್ಲಿ ಹೊಳೆಯುವುದನ್ನು ನೋಡಿದೆ. ನಿನ್ನಲ್ಲಿರುವ ಸತ್ಯವನ್ನು ಅರಿತೆ. ನಿನ್ನಲ್ಲಿ ಯಾವುದಿರುವುದೊ ಅದೇ ನನ್ನಲ್ಲಿಯೂ ಇರುವುದು.

——

# ಆತ್ಮಸಾಕ್ಷಾತ್ಕಾರ

ಅತಿ ಸರಳವಾದ ಆದರೂ ಅತಿ ಶ್ರೇಷ್ಠಕಾವ್ಯದಂತಿರುವ ಒಂದು ಉಪನಿಷತ್ತಿನಿಂದ ನಿಮಗೆ ಓದಿಹೇಳುತ್ತೇನೆ. ಇದನ್ನು ಕಠೋಪನಿಷತ್ ಎನ್ನುತ್ತಾರೆ. "ಮೃತ್ಯುರಹಸ್ಯ" ಎಂದು ಎಡ್ವಿನ್ ಆರ್ನಾಲ್ಡ್ ಮಾಡಿದ ಆಂಗ್ಲಭಾಷಾನುವಾದವನ್ನು ನಿಮ್ಮಲ್ಲಿ ಕೆಲವರು ಓದಿರಬಹುದು. ಕಳೆದ ಉಪನ್ಯಾಸದಲ್ಲಿ, ಪ್ರಪಂಚದ ಆದಿ, ಅದು ಹೇಗೆ ಸೃಷ್ಟಿಯಾಯಿತು ಎಂಬುದನ್ನು ಹೊರಗಿನಿಂದ ತೃಪ್ತಿಕರವಾಗಿ ಬಗೆಹರಿಸಲು ಅಸಾಧ್ಯವಾಗಿ ಕೊನೆಗೆ ಅಂತರ್ಮುಖರಾದುದನ್ನು ನೋಡಿದೆವು. ಈ ಗ್ರಂಥ ಆ ಪ್ರಶ್ನೆಯನ್ನು ಮಾನಸಿಕವಾಗಿ ಬಗೆಹರಿಸಲು ಯತ್ನಿಸುವುದು. ಮನುಷ್ಯನ ಆಂತರಿಕ ಸ್ವಭಾವವನ್ನು ಇದು ಪ್ರಶ್ನಿಸುವುದು. ಬಾಹ್ಯಜಗತ್ತನ್ನು ಯಾರು ಸೃಷ್ಟಿಸಿದರು? ಇದು ಹೇಗೆ ಬಂತು? ಎಂದು ಮೊದಲು ಪ್ರಶ್ನಿಸಿದರು. ಈಗಿನ ಪ್ರಶ್ನೆ ಮನುಷ್ಯ ಯಾವುದರಿಂದ ಬದುಕುತ್ತಾನೆ, ಚಲಿಸುತ್ತಾನೆ, ಅವನು ಕಾಲವಾದಮೇಲೆ ಅದು ಏನಾಗುತ್ತದೆ ಎಂಬುದು. ಮೊದಲನೆಯವರು ವಾಸ್ತವಿಕ ಪ್ರಪಂಚವನ್ನು ಪರೀಕ್ಷಿಸಿ ಅದರ ಮೂಲಕ ಪರಮ ಸತ್ಯವನ್ನು ಅರಿಯಲು ಯತ್ನಿಸಿದರು. ಬಹಳ ಹೆಚ್ಚು ಎಂದರೆ ಅವರಿಗೆ ಒಬ್ಬ ಸೃಷ್ಟಿಪಾಲಕ ದೊರೆತನು. ಮಾನವನಿಗಿಂತ ಕೋಟಿಪಾಲು ಹೆಚ್ಚಾದ ಒಬ್ಬ ಮಾನವ ವ್ಯಕ್ತಿ. ಆದರೆ ಉದ್ದೇಶದ ದೃಷ್ಟಿಯಿಂದ ಇದೊಂದು ಮಾನವ ವ್ಯಕ್ತಿಮಾತ್ರವಾಯಿತು. ಆದರೆ ಇದೇ ಪೂರ್ಣ ಸತ್ಯವಾಗಲಾರದು. ಹೆಚ್ಚು ಎಂದರೆ ಇದು ಸತ್ಯದ ಒಂದು ಅಂಶವಾಗುವುದು. ನಾವು ಈ ಸೃಷ್ಟಿಯನ್ನು ಮಾನವರಂತೆ ನೋಡುತ್ತೇವೆ. ನಮ್ಮ ದೇವರ ಭಾವನೆ ವಿಶ್ವಕ್ಕೆಲ್ಲ ನಾವಿತ್ತ ಮಾನವೀಯ ವಿವರಣೆ.

ಹಸುವಿಗೆ ತತ್ತ್ವಾಸಕ್ತಿ ಇದ್ದು ಅದಕ್ಕೊಂದು ಧರ್ಮವಿದ್ದರೆ ಅದಕ್ಕೆ ಹಸುವಿನ ಪ್ರಪಂಚ ಇರುವುದು. ಸಮಸ್ಯೆ ಬಗೆಹರಿಸುವುದಕ್ಕೆ ಹಸುವಿನ ಪರಿಹಾರಮಾರ್ಗ ಒಂದನ್ನು ಕೊಡುವುದು. ಅದಕ್ಕೆ ನಮ್ಮ ದೇವರನ್ನು ನೋಡಲು ಸಾಧ್ಯವೇ ಇರುವುದಿಲ್ಲ. ಬೆಕ್ಕುಗಳು ದಾರ್ಶನಿಕರಾದರೆ, ಅವಕ್ಕೆ ಒಂದು ಬೆಕ್ಕಿನ ಪ್ರಪಂಚ ಕಾಣುವುದು. ವಿಶ್ವಸಮಸ್ಯೆ ಬಗೆಹರಿಸುವುದಕ್ಕೆ ಒಂದು ಮಾರ್ಜಾಲ ಪರಿಹಾರವನ್ನು ಕೊಡುವುದು. ಈ ದೃಷ್ಟಿಯಿಂದ ನೋಡಿದರೆ ನಮ್ಮ ವಿವರಣೆ ಸಮಸ್ಯೆಯನ್ನೆಲ್ಲಾ ಪೂರ್ಣವಾಗಿ ಬಗೆಹರಿಸಲಾರದು. ನಮ್ಮ ಭಾವನೆ ಕೂಡ ವಿಶ್ವವನ್ನೆಲ್ಲಾ ಗ್ರಹಿಸ

ಲಾರದು. ಮನುಷ್ಯ ಅತಿ ಸ್ವಾರ್ಥದೃಷ್ಟಿಯನ್ನು ಇದರಿಂದ ತೆಗೆದುಕೊಳ್ಳ ಬಹುದು. ಇದನ್ನು ಒಪ್ಪಿಕೊಳ್ಳುವುದು ಒಂದು ದೊಡ್ಡ ತಪ್ಪು. ಬಾಹ್ಯ ಪರೀಕ್ಷೆಯಿಂದ ಹೊರಡುವ ವಿಶ್ವಸಮಸ್ಯೆಯ ಪರಿಹಾರೋಪಾಯದಲ್ಲಿ ಈ ಕುಂದು ಇದೆ. ನಾವು ನೋಡುವ ಪ್ರಪಂಚ, ಕೇವಲ ನಮ್ಮ ದೃಷ್ಟಿಗೆ ಮಾತ್ರ ಅನ್ವಯಿಸುವ ಪ್ರಪಂಚ, ಇದು ಸತ್ಯವನ್ನು ನಾವು ನೋಡುವ ರೀತಿ. ನಾವು ಆ ಸತ್ಯವನ್ನು ಇಂದ್ರಿಯಗಳ ಮೂಲಕ ನೋಡಲಾರೆವು, ಗ್ರಹಿಸಲಾರೆವು. ಪಂಚೇಂದ್ರಿಯಗಳನ್ನು ಪಡೆದ ಮನುಷ್ಯರ ದೃಷ್ಟಿಗೆ ಕಾಣುವ ಪ್ರಪಂಚದಂತೆ ಮಾತ್ರ ನಾವು ಅದನ್ನು ನೋಡುತ್ತೇವೆ. ನಮಗೆ ಮತ್ತೊಂದು ಇಂದ್ರಿಯ ದೊರೆತರೆ ಪ್ರಪಂಚ ನಮಗೆ ಬದಲಾಯಿ ಸುವುದು. ಕಾಂತತೆಯ ಇಂದ್ರಿಯ(Magnitic sense) ಒಂದು ನಮಗೆ ಇದ್ದರೆ, ಆಗ ನಮಗೆ ಈಗ ಅರಿವಾಗದಿರುವ (ಅದನ್ನು ಅರಿಯುವುದಕ್ಕೆ ತಕ್ಕ ಸಾಧನ ನಮ್ಮಲ್ಲಿ ಈಗ ಇಲ್ಲ) ಕೋಟ್ಯಂತರ ಶಕ್ತಿಗಳು ಗೋಚರಿಸ ಬಹುದು. ನಮ್ಮ ಇಂದ್ರಿಯಗಳಿಗೊಂದು ಪರಿಮಿತಿ ಇದೆ. ನಿಜವಾಗಿ ಅವು ಕೆಲಸಮಾಡುವ ಎಲ್ಲೆ ಅತಿ ಕಿರಿದು. ನಾವು ಯಾವುದನ್ನು ವಿಶ್ವ ವೆನ್ನುವೆವೊ ಅದು ಈ ಪರಿಮಿತಿ ಎಲ್ಲೆಯೊಳಗಿದೆ. ಆದರೆ ಇದೇ ಒಟ್ಟು ಸಮಸ್ಯೆಗೆ ಪರಿಹಾರವಾಗಲಾರದು. ಮನುಷ್ಯ ಇಲ್ಲೆ ನಿಲ್ಲಲಾರ. ಅವನು ಆಲೋಚನಾ ಜೀವಿ. ವಿಶ್ವವನ್ನೆಲ್ಲಾ ಆಮೂಲಾಗ್ರವಾಗಿ ವಿವರಿಸಬಲ್ಲ ಒಂದು ಉತ್ತರ ಅವನಿಗೆ ಬೇಕಾಗಿದೆ. ಮನುಷ್ಯ, ದೇವತೆ ಮತ್ತು ಸಾಧ್ಯ ವಾದ ಎಲ್ಲಾ ಜೀವಿಗಳೂ ಇರಬಲ್ಲ ವಿಶ್ವವನ್ನು ಮಾನವ ನೋಡಬಯಸು ವನು. ಎಲ್ಲಾ ಸಮಸ್ಯೆಯನ್ನು ಬಗೆಹರಿಸಬಲ್ಲ ಒಂದು ಪರಿಹಾ ರೋಪಾಯ ಅವನಿಗೆ ಬೇಕಾಗಿದೆ.

ಎಲ್ಲಾ ಪ್ರಪಂಚವನ್ನು ಒಳಗೊಂಡ ವಿಶ್ವವನ್ನು ನಾವು ಮೊದಲು ಕಂಡುಹಿಡಿಯಬೇಕಾಗಿದೆ. ಹಲವು ಸ್ಥಿತಿಯಲ್ಲಿರುವ ಪ್ರಪಂಚ ದಲ್ಲೆಲ್ಲ ಏಕಸಮನಾಗಿ ಹರಿಯುತ್ತಿರುವ ವಸ್ತು ಅದು ನಮಗೆ ಇಂದ್ರಿಯಗಳ ಮೂಲಕವಾಗಲಿ ಇಲ್ಲದಿರಲಿ ಮೊದಲು ನಮಗೆ ಗೋಚರ ವಾಗಬೇಕು. ಉಚ್ಚ ಮತ್ತು ನೀಚ ಪ್ರಪಂಚದಲ್ಲಿ ಸಾಮಾನ್ಯವಾಗಿರುವ ಯಾವುದಾದರೊಂದು ವಸ್ತುವನ್ನು ನಾವು ಕಂಡುಹಿಡಿಯಲು ಸಾಧ್ಯ ವಾದರೆ ಆಗ ನಮ್ಮ ಸಮಸ್ಯೆ ಬಗೆಹರಿಯುವುದು. ಕೇವಲ ತರ್ಕಸಿದ್ಧಾಂತ ದಿಂದಲಾದರೂ, ಎಲ್ಲ ಅಸ್ತಿತ್ವಕ್ಕೂ ಒಂದು ಮೂಲವಸ್ತುವಿರಬೇಕೆಂಬ ಒಂದು ನಿರ್ಣಯಕ್ಕೆ ಬಂದರೂ ನಮ್ಮ ಸಮಸ್ಯೆ ಸ್ವಲ್ಪ ಬಗೆಹರಿದಂತೆಯೆ.

ಆದರೆ ನಾವು ಈಗ ನೋಡುವ ತಿಳಿದುಕೊಂಡಿರುವ ಪ್ರಪಂಚದಿಂದ ಮಾತ್ರವೇ ಇದಕ್ಕೆ ಪರಿಹಾರ ದೊರಕಲಾರದು. ಏಕೆಂದರೆ ಇದು ಸಮಷ್ಟಿಯ ಒಂದು ಅಂಶದೃಷ್ಟಿ ಮಾತ್ರ.

ಇನ್ನೂ ಆಳಕ್ಕೆ ಹೋದರೆಮಾತ್ರ ಇದು ಸಾಧ್ಯವೆಂದು ತೋರುತ್ತದೆ. ಪ್ರಥಮ ದಾರ್ಶನಿಕರು ಕೇಂದ್ರದಿಂದ ದೂರವಿದ್ದಷ್ಟೂ ವೈವಿಧ್ಯತೆ ಹೆಚ್ಚು ಕಾಣುತ್ತಿದ್ದು ಕೇಂದ್ರಕ್ಕೆ ಸಮೀಪಿಸಿದಷ್ಟೂ ಐಕ್ಯತೆಗೆ ಹತ್ತಿರವಿದ್ದುದನ್ನು ಕಂಡುಹಿಡಿದರು. ಒಂದು ವೃತ್ತದ ಕೇಂದ್ರದ ಹತ್ತಿರ ಹೋದಷ್ಟೂ ವ್ಯಾಸಾರ್ಧರೇಖೆಗಳು ಸಂಧಿಸುವ ಸ್ಥಳದ ಸಮೀಪಕ್ಕೆ ಹೋಗುವೆವು, ದೂರ ಹೋದಷ್ಟೂ ಅಂತಹ ಸಂಧಿಸ್ಥಳದಿಂದ ದೂರ ಹೋಗುವೆವು. ಬಾಹ್ಯಜಗತ್ತು ಕೇಂದ್ರದಿಂದ ಬಹಳ ದೂರದಲ್ಲಿದೆ. ಆದಕಾರಣ ಅಸ್ತಿತ್ವವೆಲ್ಲ ಸಂಧಿಸುವ ಕೇಂದ್ರದಿಂದ ಅದು ದೂರದಲ್ಲಿದೆ. ಹೆಚ್ಚು ಎಂದರೆ ಬಾಹ್ಯಜಗತ್ತು ಇಡೀ ಬ್ರಹ್ಮಾಂಡದ ಒಂದು ಅಂಶ. ಮಾನಸಿಕ, ನೈತಿಕ ಬೌದ್ಧಿಕ ಮತ್ತು ವಿವಿಧಕ್ಷೇತ್ರದ ಅಸ್ತಿತ್ವವೆಲ್ಲಾ ಅದರ ಇತರ ಅಂಶಗಳು. ಅವರಲ್ಲಿ ಯಾವುದೋ ಒಂದು ಅಂಶವನ್ನು ತೆಗೆದುಕೊಂಡು ಅದರ ಆಧಾರದಮೇಲೆ ಇಡೀ ವಿಶ್ವಸಮಸ್ಯೆ ಬಗೆಹರಿಸುವುದು ಅಸಾಧ್ಯ. ಆದಕಾರಣ ಯಾವ ಒಂದು ಕೇಂದ್ರದಿಂದ ಎಲ್ಲಾ ಅಸ್ತಿತ್ವ ಪ್ರಾರಂಭ ವಾಗುವುದೊ ಅದರ ಆಧಾರದಮೇಲೆ ನಿಂತು ಅದರಮೂಲಕ ಸಮಸ್ಯಾ ಪರಿಹಾರಕ್ಕೆ ಯತ್ನಿಸಬೇಕು. ಅದೇ ಪ್ರಮೇಯ. ಈ ಕೇಂದ್ರವೆಲ್ಲಿ ರುವುದು ? ಇದು ನಮ್ಮಲ್ಲಿರುವುದು. ಹಿಂದಿನ ಋಷಿಗಳು ಆಳಆಳಕ್ಕೆ ಹೋಗಿ ಮನುಷ್ಯನ ಹೃದಯಾಂತರಾಳದಲ್ಲಿ ಇಡೀ ವಿಶ್ವದ ಕೇಂದ್ರವನ್ನು ಕಂಡುಹಿಡಿದರು. ಎಲ್ಲಾ ವಿಭಿನ್ನ ಅಸ್ತಿತ್ವವೂ ಅಲ್ಲಿ ಸಂಧಿಸುವುವು. ಇದೇ ಸಾಮಾನ್ಯ ಸ್ಥಳ. ಅದರ ಆಧಾರದಮೇಲೆ ಮಾತ್ರ ಎಲ್ಲರಿಗೂ ಅನ್ವಯಿ ಸುವ ಪರಿಹಾರ ಸಾಧ್ಯ. ಈ ಪ್ರಪಂಚವನ್ನು ಯಾರು ಸೃಷ್ಟಿಸಿದರು ಎಂಬ ಪ್ರಶ್ನೆ ತಾತ್ತ್ವಿಕವಲ್ಲ. ಇದಕ್ಕೆ ಒಂದು ಉತ್ತರವನ್ನು ಕಂಡು ಹಿಡಿಯುವುದರಿಂದಲೂ ಹೆಚ್ಚು ಉಪಯೋಗವೇನೂ ಆಗುವಂತಿಲ್ಲ.

ಕಠೋಪನಿಷತ್ತು ಅಲಂಕಾರಿಕ ಭಾಷೆಯಲ್ಲಿ ಹೇಳುವುದು. ಹಿಂದಿನ ಕಾಲದಲ್ಲಿ ಒಬ್ಬ ಐಶ್ವರ್ಯವಂತನಿದ್ದ, ಅವನೊಂದು ದೊಡ್ಡ ಯಾಗಮಾಡಿದ. ಆ ಯಾಗದಲ್ಲಿ ತನ್ನಲ್ಲಿ ಇದ್ದುದನ್ನೆಲ್ಲಾ ದಾನಮಾಡಬೇಕಾಗಿತ್ತು. ಈತ ಅಷ್ಟು ಸತ್ಯಸಂಧನಾಗಿರಲಿಲ್ಲ. ಈ ಮಹಾಯಾಗವನ್ನು ತಾನು ಮಾಡಿದೆ ಎಂಬ ಕೀರ್ತಿ, ಯಶಸ್ಸು ಅವನಿಗೆ ಬೇಕಾಗಿತ್ತು. ಆದರೆ ಯಾವುದು

ತನಗೆ ಉಪಯೋಗವಲ್ಲವೊ ಅಂತಹ ವಸ್ತುಗಳನ್ನು ಮಾತ್ರ ದಾನವಾಗಿ ಕೊಡುತ್ತಿದ್ದ. ವಯಸ್ಸಾದ, ಇನ್ನೂ ಕರುಹಾಕದ, ಕುರುಡು, ಕುಂಟ ಹಸುಗಳನ್ನು ಮಾತ್ರ ಕೊಡುತ್ತಿದ್ದ. ಅವನಿಗೆ ನಚಿಕೇತನೆಂಬ ಮಗನಿದ್ದ. ತಂದೆ ಸರಿಯಾದುದನ್ನು ದಾನಮಾಡದೆ ವ್ರತಭಂಗಮಾಡುತ್ತಿರುವುದನ್ನು ಕಂಡನು. ಆದರೆ ಮಗನಿಗೆ ತಂದೆಗೆ ಏನು ಹೇಳಬೇಕೊ ಗೊತ್ತಾಗಲಿಲ್ಲ. ಭರತಖಂಡದಲ್ಲಿ ತಂದೆತಾಯಿಗಳು ಮಕ್ಕಳಿಗೆ ಪ್ರತ್ಯಕ್ಷದೇವರಂತೆ. ಮಗ ಅತಿಗೌರವದಿಂದ ತಂದೆಯ ಹತ್ತಿರ ಬಂದು, ಅತಿವಿನಯದಿಂದ "ತಂದೆ ನೀವು ಯಾರಿಗೆ ನನ್ನನ್ನು ಕೊಡಬೇಕೆಂದಿರುವಿರಿ. ನಿಮ್ಮ ಯಾಗದಲ್ಲಿ ಎಲ್ಲವನ್ನೂ ನೀವು ಕೊಡಬೇಕಾಗಿದೆ" ಎಂದು ಕೇಳಿದನು. ತಂದೆ ಪ್ರಶ್ನೆ ಕೇಳಿ ಕುಪಿತನಾಗಿ "ಮಗು ಏನು ಹೇಳುತ್ತಿ, ತಂದೆ ತನ್ನ ಸ್ವಂತ ಮಗುವನ್ನು ಕೊಡುವುದೆ?" ಎಂದನು. ಹುಡುಗ ಎರಡನೆವೇಳೆ ಮೂರನೆ ವೇಳೆ ಇದೇ ಪ್ರಶ್ನೆಯನ್ನು ಕೇಳಿದನು. ಆಗ ಕುಪಿತನಾದ ತಂದೆ "ನಿನ್ನನ್ನು ಮೃತ್ಯುವಿಗೆ ಕೊಡುತ್ತೇನೆ" ಎಂದನು. ಕಥೆಯಲ್ಲಿ ನಚಿಕೇತ ಯಮರಾಜನ ಬಳಿಗೆ ಹೋದನೆಂದು ಹೇಳಿದೆ. ಮೊದಲು ಸತ್ತವನೆ ಯಮ. ಅವನು ಸ್ವರ್ಗಕ್ಕೆ ಹೋಗಿ ಎಲ್ಲಾ ಪಿತೃಗಳ ಅಧಿಕಾರಿಯಾಗುವನು. ಸತ್ತ ಮಾನವರೆಲ್ಲಾ ಅಲ್ಲಿಗೆ ಹೋಗಿ ಬಹಳಕಾಲ ಅವನೊಂದಿಗೆ ಇರುವರು. ಅವನು ಯಮಧರ್ಮರಾಯ. ಅವನು ಪವಿತ್ರ ಶುದ್ಧ ಜಿತೇಂದ್ರಿಯ. ಹೆಸರೇ ಇದನ್ನು ವ್ಯಕ್ತಗೊಳಿಸುವುದು. ದೇವತೆಗಳು ಕೂಡ ಕೆಲವುವೇಳೆ ಮನೆಯಲ್ಲಿರುತ್ತಿರಲಿಲ್ಲ. ಈ ಹುಡುಗ ಮೂರುದಿನ ಅವನಿಗಾಗಿ ಕಾಯಬೇಕಾಯಿತು. ಮೂರನೆದಿನವಾದಮೇಲೆ ಯಮ ಬಂದ.

ಯಮ "ಪೂಜ್ಯರೆ, ಊಟವಿಲ್ಲದೆ ಮನೆಯಲ್ಲಿ ಮೂರುದಿನ ಕಾಯ್ದುಕೊಂಡಿರುವಿರಿ. ನೀವು ಗೌರವಾರ್ಹ ಅತಿಥಿ. ಬ್ರಾಹ್ಮಣರೆ ನಿಮಗೆ ನಮಸ್ಕಾರ. ನನಗೆ ಒಳ್ಳೆಯದಾಗಲಿ, ಮನೆಯಲ್ಲಿ ಇರದೇ ಇದ್ದುದಕ್ಕೆ ತುಂಬಾ ವ್ಯಥೆಪಡುವೆನು. ಅದಕ್ಕಾಗಿ ಕ್ಷಮೆ ಬೇಡುತ್ತೇನೆ. ಪ್ರತಿದಿನಕ್ಕೆ ಒಂದೊಂದು ವರ ಕೇಳಿ" ಎಂದನು. ಮಗು, "ನನ್ನ ಮೊದಲನೆ ವರವೆ ತಂದೆಗೆ ನನ್ನ ಮೇಲಿರುವ ಕೋಪ ಶಾಂತವಾಗಬೇಕು, ನೀನು ನನ್ನನ್ನು ಮನೆಗೆ ಹಿಂತಿರುಗಿ ಕಳುಹಿಸಿದಮೇಲೆ ಅವನು ನನ್ನನ್ನು ಗುರ್ತಿಸಬೇಕು" ಎಂದು ಬೇಡಿಕೊಂಡನು. ಯಮ ಇದನ್ನು ಕರುಣಿಸಿದನು. ಅನಂತರ ಜನರನ್ನು ಸ್ವರ್ಗಕ್ಕೆ ಒಯ್ಯುವ ಒಂದು ಯಜ್ಞವನ್ನು

ತಿಳಿಯಲಿಚ್ಛಿಸಿದನು. ವೇದದ ಸಂಹಿತಾಭಾಗದಲ್ಲಿ ನಮಗೆ ದೊರಕುವ ಪ್ರಾಚೀನತಮಭಾವನೆಯೇ ಸ್ವರ್ಗ. ಅಲ್ಲಿ ಜನರಿಗೆ ಆಕರ್ಷಣೀಯವಾದ ದೇಹಗಳಿದ್ದು ಪಿತೃಗಳೊಂದಿಗೆ ದೀರ್ಘಕಾಲ ಬಾಳುವರು. ಕ್ರಮೇಣ ಇತರ ಭಾವನೆಗಳೂ ಬಂದುವು. ಆದರೆ ಇದರಿಂದ ತೃಪ್ತಿ ಬರಲಿಲ್ಲ. ಇದಕ್ಕೂ ಶ್ರೇಷ್ಠವಾದುದು ಅವಶ್ಯಕವಿತ್ತು. ಸ್ವರ್ಗದಲ್ಲಿ ಬಾಳುವುದು ಪ್ರಪಂಚದ ಜೀವನಕ್ಕಿಂತ ಹೆಚ್ಚು ಬೇರೆಯಾಗಿರಲಿಲ್ಲ. ಬಹಳ ಹೆಚ್ಚು ಎಂದರೆ ಆರೋಗ್ಯಶಾಲಿ ಐಶ್ವರ್ಯವಂತನ ಜೀವನದಂತೆ. ಬೇಕಾದಷ್ಟು ಭೋಗ ವಸ್ತುಗಳು ರೋಗರುಜಿನಗಳಿಲ್ಲದ ದೇಹ ಇಷ್ಟುಮಾತ್ರ. ಅದು ಈಗಿರುವ ಪ್ರಪಂಚದಂತೆಯೇ. ಆದರೆ ಇದಕ್ಕಿಂತ ಸ್ವಲ್ಪ ಹೆಚ್ಚು ನಯವಾಗಿರುವುದು. ಈ ಕಷ್ಟವನ್ನಾಗಲೆ ನಾವು ನೋಡಿರುವೆವು. ಬಾಹ್ಯ ಜಡ ಜಗತ್ತು ಸಮಸ್ಯೆಯನ್ನು ಎಂದಿಗೂ ಪರಿಹರಿಸಲಾರದು. ಯಾವ ಸ್ವರ್ಗವೂ ಬಗೆಹರಿಸದು. ಈ ಪ್ರಪಂಚ ಸಮಸ್ಯೆಯನ್ನು ಬಗೆಹರಿಸದೆ ಇದ್ದರೆ ಇಂತಹ ಪ್ರಪಂಚಗಳ ಮೊತ್ತ ಅದನ್ನು ಬಗೆಹರಿಸಲಾರದು. ಜಡ ಜಗತ್ತು ಇಡೀ ವಿಶ್ವದ ಯಾವುದೊ ಒಂದು ಅಂಶ ಮಾತ್ರ. ನಾವು ನಿಜ ವಾಗಿ ಗ್ರಹಿಸುವ ಎಷ್ಟೋ ವಿಷಯ ಜಡಜಗತ್ತಲ್ಲ. ಉದಾಹರಣೆಗೆ ನಮ್ಮ ಜೀವನದ ಪ್ರತಿಯೊಂದು ಕ್ಷಣದಲ್ಲಿಯೂ ಆಲೋಚನೆ ಮತ್ತು ಭಾವನೆ ಬಾಹ್ಯಜಗತ್ತಿಗಿಂತ ಎಷ್ಟೊಂದು ದೊಡ್ಡ ಪಾತ್ರವನ್ನು ಧರಿಸಿರು ವುದು. ಪ್ರಚಂಡ ಚಟುವಟಿಕೆಯಿಂದ ಕೂಡಿದ ಆಂತರಿಕಜೀವನ ಎಷ್ಟೊಂದು ವಿಶಾಲವಾಗಿರುವುದು! ಇದರೊಂದಿಗೆ ಹೋಲಿಸಿ ನೋಡಿದರೆ ಪಂಚೇಂ ದ್ರಿಯಗಳಿಗೆ ದೊರಕುವ ಪ್ರಪಂಚ ಬಹಳ ಅಲ್ಪ. ಸ್ವರ್ಗ ಪರಿಹಾರ ಈ ಒಂದು ತಪ್ಪನ್ನು ಮಾಡುವುದು. ಎಲ್ಲಾ ಪಂಚೇಂದ್ರಿಯಗಳಲ್ಲಿದೆ ಎನ್ನುವುದು. ಆದಕಾರಣವೇ ಈ ಸ್ವರ್ಗಭಾವನೆ ಪೂರ್ಣ ತೃಪ್ತಿ ನೀಡ ಲಿಲ್ಲ. ಆದರೂ ನಚಿಕೇತ ಎರಡನೆ ವರವಾಗಿ ಸ್ವರ್ಗಕ್ಕೆ ಹೋಗುವ ಯಜ್ಞವನ್ನು ಕೇಳುವನು. ಇಂತಹ ಯಾಗಯಜ್ಞಗಳಿಂದ ದೇವತೆಗಳಿಗೆ ತೃಪ್ತಿಯಾಗಿ ಅವರು ಮನುಷ್ಯರನ್ನು ಸ್ವರ್ಗಕ್ಕೆ ಒಯ್ಯುವರು ಎಂಬ ಭಾವನೆ ವೇದಗಳಲ್ಲಿದೆ.

ನೀವು ಧರ್ಮಗಳನ್ನು ಪರೀಕ್ಷಿಸಿದರೆ ಹಳೆಯದೆಲ್ಲ ಪವಿತ್ರ ಎನ್ನುವ ಒಂದು ಭಾವನೆ ಕಾಣುವುದು. ನಮ್ಮ ಪೂರ್ವಿಕರು ವಾಲೇಗರಿಯಮೇಲೆ ಬರೆಯುತ್ತಿದ್ದರು. ಕ್ರಮೇಣ ಕಾಗದ ತಯಾರುಮಾಡುವುದನ್ನು ಕಲಿತರು. ಆದರೂ ವಾಲೆಗರಿ ಅತಿಪವಿತ್ರ ಎಂಬ ಭಾವನೆ ಈಗಲೂ ಇರುವುದು.

ಹಿಂದಿನಕಾಲದಲ್ಲಿ ಅಡಿಗೆಮಾಡುತ್ತಿದ್ದ ಒರಟುಪಾತ್ರೆ ಕಾಲಕ್ರಮೇಣ ನಾಜೂಕಾಗಿ ಮಾಡಿದ ಪಾತ್ರೆ ಆದಮೇಲೂ ಹಳೆಯದು ಪವಿತ್ರವಾಗುವುದು. ಇಂತಹ ಭಾವನೆಯನ್ನು ಭರತಖಂಡದಲ್ಲಿ ರಕ್ಷಿಸುವಷ್ಟು ಮತ್ತೆಲ್ಲಿಯೂ ಇಲ್ಲ. ಒಂಭತ್ತುಹತ್ತುಸಾವಿರ ವರ್ಷಗಳ ಹಿಂದೆ ಇದ್ದ ಕಡ್ಡಿಗಳನ್ನು ತೀಡಿ ಬೆಂಕಿಮಾಡುವ ಅಭ್ಯಾಸವನ್ನು ಈಗಲೂ ಅನುಸರಿಸುವರು. ಯಜ್ಞಕಾಲದಲ್ಲಿ ಅನ್ಯಥಾರೀತಿಗೇ ಅವಕಾಶವಿಲ್ಲ. ಇದರಂತೆಯೆ ಏಷ್ಯಾಖಂಡದ ಬೇರೆ ಬೇರೆ ಆರ್ಯಸಂಗಡದಲ್ಲಿ ಕೂಡ. ಅವರ ಆಧುನಿಕ ವಂಶಜರು ಮಿಂಚಿನಿಂದ ಬೆಂಕಿ ಪಡೆಯುತ್ತಿದ್ದರು ಎಂಬುದನ್ನು ತೋರುವುದು. ಇತರ ವಿಧವನ್ನು ಕಲಿತರೂ ಹಿಂದಿನದನ್ನು ಬಿಡಲಿಲ್ಲ. ಅವು ಪವಿತ್ರವಾದವು. ಹೆಬ್ರುಗಳು ಕೂಡ, ಚರ್ಮದ ಕಾಗದದ ಮೇಲೆ ಬರೆಯುತ್ತಿದ್ದರು. ಅವರೀಗ ಕಾಗದದ ಮೇಲೆ ಬರೆಯುವರು. ಆದರೆ ಚರ್ಮದ ಕಾಗದ ಪವಿತ್ರ. ಇವರಂತೆಯೇ ಎಲ್ಲಾ ಜನಾಂಗ. ಈಗ ನೀವು ಪವಿತ್ರವೆಂದು ಭಾವಿಸುವ ಆಚಾರವೂ ಹಿಂದಿನ ಅಭ್ಯಾಸವೇ. ಈಗ ಯಜ್ಞ ಈ ಗುಂಪಿಗೆ ಸೇರಿದುದು. ಕಾಲಕ್ರಮೇಣ ಉತ್ತಮ ಮಾರ್ಗಗಳನ್ನು ಕಂಡುಹಿಡಿದು ಈ ಭಾವನೆ ವಿಕಾಸವಾದರೂ ಹಳೆಯ ರೂಢಿ ಇನ್ನೂ ಇದ್ದವು. ಕಾಲಕಾಲಕ್ಕೆ ಅದನ್ನು ಆಚರಿಸುತ್ತಿದ್ದರು. ಅದನ್ನು ಅತಿ ಪವಿತ್ರವೆಂದು ಭಾವಿಸುತ್ತಿದ್ದರು.

ಅನಂತರ ಒಂದು ಸಂಗಡದವರು ಈ ಯಾಗಯಜ್ಞಗಳ ಆಚರಣೆಯನ್ನು ಒಂದು ವೃತ್ತಿಮಾಡಿಕೊಂಡರು. ಇವರೇ ಪುರೋಹಿತರು. ಯಾಗಯಜ್ಞಾದಿಗಳಮೇಲೆ ತಮ್ಮ ಭವಿಷ್ಯವನ್ನು ಕಟ್ಟುತ್ತಿದ್ದರು. ಅವರಿಗೆ ಇವೇ ಸರ್ವಸ್ವವಾಯಿತು. ಯಾಗಯಜ್ಞಗಳ ಗಂಧಾಸ್ವಾದನಕ್ಕೆ ದೇವತೆಗಳು ಬರುತ್ತಿದ್ದರು. ಯಾಗಯಜ್ಞಗಳಿಂದ ಏನನ್ನು ಬೇಕಾದರೂ ಪ್ರಪಂಚದಲ್ಲಿ ಪಡೆಯಬಹುದೆಂದು ಭಾವಿಸಿದರು. ಕೆಲವು ವಸ್ತುಗಳನ್ನು ಅರ್ಪಿಸಿದರೆ, ಕೆಲವು ಮಂತ್ರ ಉಚ್ಚರಿಸಿದರೆ, ಕೆಲವು ಬಗೆಯ ಯಜ್ಞವೇದಿಕೆ ಮಾಡಿದರೆ ದೇವತೆಗಳು ಮೋಕ್ಷವನ್ನು ಕರುಣಿಸುತ್ತಿದ್ದರು. ಆದಕಾರಣವೇ ನಚಿಕೇತ ಯಾವ ಯಜ್ಞಮಾಡಿದರೆ ಸ್ವರ್ಗಕ್ಕೆ ಹೋಗಬಹುದೆಂದು ಕೇಳುತ್ತಾನೆ. ಯಮ ಎರಡನೇ ವರವನ್ನು ಕೂಡ ತಕ್ಷಣವೇ ಕರುಣಿಸಿ ಆ ಯಾಗವನ್ನು ನಚಿಕೇತನ ಹೆಸರಿನಿಂದಲೇ ಕರೆದನು.

ಮೂರನೆ ವರ ಬರುವುದು. ಇದರಿಂದ ನಿಜವಾದ ಉಪನಿಷತ್ತು ಪ್ರಾರಂಭವಾಗುವುದು. ಹುಡುಗ ಹೀಗೆ ಕೇಳಿದನು: "ಇದೊಂದು

ಅನುಮಾನವಿದೆ. ಮನುಷ್ಯ ಸತ್ತರೆ ಕೆಲವರು ಅವನಿರುವನು ಎನ್ನುವರು. ಮತ್ತೆ ಕೆಲವರು ಇಲ್ಲವೆನ್ನುವರು. ಇದನ್ನು ನಾನು ನಿಮ್ಮ ಮುಖದಿಂದ ತಿಳಿಯಬಯಸುವೆನು." ಯಮನಿಗೆ ಅಂಜಿಕೆಯಾಯಿತು. ಹಿಂದಿನ ಎರಡು ವರಗಳನ್ನು ಸಂತೋಷದಿಂದ ಕರುಣಿಸಿದನು. "ಹಿಂದಿನ ಕಾಲದಲ್ಲಿ ಇದನ್ನು ದೇವತೆಗಳಿಗೇ ಇತ್ಯರ್ಥಮಾಡಲಾಗಲಿಲ್ಲ. ಈ ಸೂಕ್ಷ್ಮವನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ಬೇರೆಯಾವುದಾದರೂ ವರವನ್ನು ಕೇಳು. ಈ ವರಕ್ಕಾಗಿ ನನ್ನನ್ನು ಪೀಡಿಸಬೇಡ. ನನ್ನನ್ನು ಬಿಟ್ಟುಕೊಡು" ಎಂದು ಕೇಳಿಕೊಂಡ.

ಹುಡುಗ ದೃಢಸಂಕಲ್ಪಮಾಡಿದ್ದ. "ದೇವತೆಗಳಿಗೆ ಈ ವಿಷಯದಲ್ಲಿ ಅನುಮಾನ ಮತ್ತು ಇದನ್ನು ತಿಳಿದುಕೊಳ್ಳುವುದು ಸುಲಭವಲ್ಲ ಎಂದು ನೀವು ಹೇಳುವುದು ನಿಜ. ಆದರೆ ನಿಮ್ಮಂತಹ ಗುರು ನನಗೆ ಮತ್ತೊಬ್ಬ ದೊರಕಲಾರ. ಇದಕ್ಕೆ ಸರಿಸಮನಾದ ವರ ಮತ್ತೊಂದಿಲ್ಲ" ಎಂದ ನಚಿಕೇತ.

ಮೃತ್ಯು, ಹೀಗೆಂದನು : "ನೂರು ವರುಷ ಬದುಕುವ ಮಕ್ಕಳೂ ಮೊಮ್ಮಕ್ಕಳನ್ನು ಬೇಕಾದರೆ ಕೇಳು. ಧನ, ಆನೆ, ಕುದುರೆ, ಐಶ್ವರ್ಯ ಬೇಕಾದರೆ ಕೇಳು. ಪ್ರಪಂಚದಲ್ಲಿರುವ ಯಾವ ರಾಜ್ಯವನ್ನಾದರೂ ಕೇಳು. ನೀನು ಇಚ್ಛಿಸಿದಷ್ಟು ವರ್ಷ ಜೀವಿಸು. ಐಶ್ವರ್ಯ ಧೀರ್ಘಾಯುಸ್ಸಿಗೆ ಸರಿಸಮನಾದ ಮತ್ತಾವ ವರವನ್ನಾದರೂ ಕೇಳು. ಈ ವಿಶಾಲ ಪೃಥ್ವಿಗೆ ರಾಜನಾಗು ನಚಿಕೇತ. ಎಲ್ಲ ಆಸೆಗಳನ್ನು ಬೇಕಾದರೆ ಭೋಗಿಸುವಂತೆ ಮಾಡುವೆನು. ಪ್ರಪಂಚದಲ್ಲಿ ಪಡೆಯಲು ಅಸಾಧ್ಯವಾದ ಈ ಆಸೆಗಳೆಲ್ಲವನ್ನೂ ಬೇಕಾದರೆ ಕೇಳು. ಈ ಗಂಧರ್ವ ಕನ್ಯೆಯರು, ರಥ ತಾಳ ಮೇಳಗಳು ಇವನ್ನು ಮನುಜರು ಪಡೆಯಲಾರರು. ಅವೆಲ್ಲ ನಿನ್ನವು. ಅವರು ನಿನ್ನನ್ನು ಸೇವಿಸಲಿ. ಓ ನಚಿಕೇತ, ಮರಣಾನಂತರ ಏನಾಗುವುದೆಂಬುದನ್ನು ಮಾತ್ರ ಪ್ರಶ್ನಿಸಬೇಡ."

ನಚಿಕೇತ, "ಹೇ ಮೃತ್ಯು ಇವೆಲ್ಲ ಕ್ಷಣಿಕ ವಸ್ತು. ಇವು ಇಂದ್ರಿಯಗಳನ್ನು ಶಿಥಿಲ ಗೊಳಿಸುವುವು. ಅತಿದೀರ್ಘ ಜೀವನ ಕೂಡ ಅಲ್ಪ. ಈ ಕುದುರೆ, ರಥ, ನೃತ್ಯ, ಗೀತ ಇವೆಲ್ಲ ನಿನ್ನಲ್ಲೇ ಇರಲಿ. ಮನುಷ್ಯ ಐಶ್ವರ್ಯದಿಂದ ತೃಪ್ತನಾಗಲಾರ. ನಿನ್ನನ್ನು ನೋಡಿದರೆ ನಮ್ಮ ಐಶ್ವರ್ಯ ಉಳಿವುದೆ ? ನೀನು ಇಚ್ಛಿಸಿದಷ್ಟು ಕಾಲ ಮಾತ್ರ ನಾವು ಇರಬಲ್ಲೆವು. ಯಾವ ವರವನ್ನು ಕೇಳಿದೆನೋ ಅದು ಮಾತ್ರ ನನಗೆ ಬೇಕು" ಎಂದನು.

ಯಮನಿಗೆ ಈ ಉತ್ತರ ಕೇಳಿ ಸಂತೋಷವಾಯಿತು. "ಶ್ರೇಯಸ್ಸು ಬೇರೆ. ಪ್ರೇಯಸ್ಸು ಬೇರೆ. ಇವೆರಡರ ಗುರಿ ಬೇರೆಯಾಗಿರುವುದ ರಿಂದ ಇಬ್ಬರನ್ನೂ ಬೇರೆ ಬೇರೆ ಕಾರ್ಯಕ್ಕೆ ಪ್ರಚೋದಿಸುವುದು. ಯಾರು ಶ್ರೇಯಸ್ಸನ್ನು ಆಶಿಸುವರೋ ಅವರು ಪರಿಶುದ್ಧರಾಗುವರು. ಯಾರು ಪ್ರೇಯಸ್ಸನ್ನು ಆರಿಸಿಕೊಳ್ಳುವರೋ ಅವರು ಗುರಿಯನ್ನು ಕಳೆದುಕೊಳ್ಳು ವರು. ಶ್ರೇಯಸ್ಸು, ಪ್ರೇಯಸ್ಸುಗಳೆರಡೂ ಮನುಷ್ಯನ ಮುಂದೆ ಬರು ವುವು. ಜ್ಞಾನಿಗಳು ಎರಡನ್ನೂ ಪರೀಕ್ಷಿಸುವರು. ಪ್ರೇಯಸ್ಸಿಗಿಂತ ಶ್ರೇಯಸ್ಸು ಮೇಲೆಂದು ಅದನ್ನು ಆಶಿಸುವರು. ಆದರೆ ಅಜ್ಞಾನಿಗಳು ದೇಹಸುಖವನ್ನು ಕೊಡುವ ಭೋಗವನ್ನು ಆರಿಸಿಕೊಳ್ಳುವರು. ಹೇ ನಚಿಕೇತ, ತೋರಿಕೆಗೆ ಸುಂದರವಾಗಿ ಕಾಣುವ ವಸ್ತುವನ್ನು ನೀನು ಪರೀಕ್ಷಿಸಿ ವಿವೇಕದಿಂದ ಅದನ್ನು ತ್ಯಜಿಸಿರುವೆ" ಎಂದು ಯಮನು ನಚಿಕೇತ ನಿಗೆ ಬೋಧಿಸಲು ಉಪಕ್ರಮಿಸುವನು

ವೇದಾಂತ ನೀತಿ ಮತ್ತು ತ್ಯಾಗದಲ್ಲಿ ಅತಿ ಮುಂದುವರಿದ ಭಾವನೆ ಯೊಂದು ನಮಗೀಗ ದೊರಕುವುದು. ಅದೇ ಸುಖಿಸಬೇಕೆಂಬ ಆಸೆಯ ನ್ನು ನಿಗ್ರಹಿಸುವ ತನಕ ಸತ್ಯಜ್ಯೋತಿ ಅವನಲ್ಲಿ ಪ್ರಕಾಶಿಸದು ಎಂಬುದು. ಎಲ್ಲಿಯವರೆಗೆ ಕೆಲಸಕ್ಕೆ ಬಾರದ ಇಂದ್ರಿಯಗಳು ವ್ಯರ್ಥ ಆಸೆಯ ತೃಪ್ತಿ ಗಾಗಿ ನಮ್ಮನ್ನು ಬಲಾತ್ಕರಿಸಿ ಹೊರಗೆ ಸೆಳೆಯುತ್ತಿರುವುದೋ ನಾವೆಷ್ಟೇ ಹೆಮ್ಮೆ ಕೊಚ್ಚಿಕೊಂಡರೂ ನಮ್ಮ ಸ್ವಲ್ಪ ಬಣ್ಣ, ರುಚಿ, ಸ್ಪರ್ಶಕ್ಕೆ ಗುಲಾಮರ ನ್ನಾಗಿ ಮಾಡುತ್ತಿದೆಯೋ ಅಲ್ಲಿಯವರೆಗೆ ಸತ್ಯ ನಮ್ಮಲ್ಲಿ ಹೇಗೆ ಪ್ರಕಾ ಶಿಸುವುದು ?

ಯಮ ಹೇಳುವನು : "ಐಶ್ವರ್ಯ ವ್ಯಾಮೋಹದಲ್ಲಿ ಸಿಲುಕಿರುವ ವಿವೇ ಚನೆ ಇಲ್ಲದ ಮಕ್ಕಳಿಗೆ ಯಾವುದು ಅತೀತವಾಗಿರುವುದೋ ಅದೆಂದೂ ತೋರುವುದೇ ಇಲ್ಲ. ಈ ಪ್ರಪಂಚವೇ ಸ್ಥಿರ ಮಿಕ್ಕಿರುವುದಿಲ್ಲ ಎಂದು ಭಾವಿಸಿ ಪುನಃ ಪುನಃ ನನ್ನ ವಶರಾಗುವರು. ಈ ಸತ್ಯವನ್ನು ತಿಳಿದು ಕೊಳ್ಳುವುದು ಬಹಳ ಕಷ್ಟ. ಅನೇಕರು ಇದನ್ನು ಸತತ ಕೇಳುತ್ತಿದ್ದರೂ ಅ ರ್ಥಮಾಡಿಕೊಳ್ಳಲಾರರು. ಏಕೆಂದರೆ ಗುರು ಕುಶಲಿಯಾಗಿರಬೇಕು. ಅಷ್ಟೇ ಕುಶಲಿಯಾಗಿರಬೇಕು ಶಿಷ್ಯ. ಗುರು ಅದ್ಭುತವ್ಯಕ್ತಿಯಾಗಿರಬೇಕು, ಶಿಷ್ಯನೂ ಅದ್ಭುತನಾಗಿರಬೇಕು. ಮನಸ್ಸನ್ನು ಸುಮ್ಮನೆ ವಾದದಿಂದ ಚಂಚಲಗೊಳಿಸುವುದಲ್ಲ. ಇದು ವಾದ ವಸ್ತುವಲ್ಲ. ಅನುಭವವೇದ್ಯ." ಪ್ರತಿ ಯೊಂದು ಧರ್ಮವೂ ಶ್ರದ್ಧೆ ಇರಬೇಕೆಂದು ಹೇಳುವುದನ್ನು ನಾವೆಲ್ಲ ಆಗಲೆ

ಕೇಳಿರುವೆವು. ವಿವೇಚನೆ ಇಲ್ಲದೆ ನಂಬಿ ಎಂದು ನಮಗೆ ಬೋಧಿಸುವರು. ನಿಜವಾಗಿ ಈ ಮೂಢ ಭಕ್ತಿಯೇನೊ ಆಕ್ಷೇಪಣೆಯವಾದುದೇ ಸರಿ. ಆದರೆ ಅದನ್ನು ವಿಭಜನೆಮಾಡಿ ನೋಡಿದರೆ. ಅದರ ಹಿಂದೆ ದೊಡ್ಡ ಸತ್ಯವಿದೆ. ಹಾಗೆಯೇ ಇದು ಆಂತರಿಕ ಜಗತ್ತಿನಲ್ಲಿಯೂ ಏತಕ್ಕೆ ಇರಬಾರದು? ಮನಸ್ಸು ವ್ಯಥಾ ವಾದದಿಂದ ಕ್ಷೋಭೆಗೆ ಈಡಾಗಬಾರದು. ವಾದ ಭಗವತ್ಸಾಕ್ಷಾತ್ಕಾರಕ್ಕೆ ಸಹಾಯ ಮಾಡಲಾರದು. ಇದು ಅನುಭವ ವೇದ್ಯವಾದ ವಸ್ತುವಲ್ಲ. ಎಲ್ಲ ತರ್ಕ ಮತ್ತು ಯುಕ್ತಿ ಕೆಲವು ಅನುಭವ ಜನ್ಯ ಗ್ರಹಿಕೆಯ ಮೇಲೆ ನಿಂತಿದೆ. ಇದಿಲ್ಲದೆ ಯಾವ ತರ್ಕವೂ ಅಸಾಧ್ಯ. ನಾವಾಗಲೇ ನೋಡಿದ ವಸ್ತುಗಳನ್ನು ಪರಸ್ಪರ ಹೋಲಿಸುವುದೇ ಯುಕ್ತಿ. ನಾವಾಗಲೆ ನೋಡಿದ ವಸ್ತುಗಳು ಅಲ್ಲಿಲ್ಲದೆ ಇದ್ದರೆ ಯಾವ ಯುಕ್ತಿಯೂ ಸಾಧ್ಯವಾಗುತ್ತಿರಲಿಲ್ಲ. ಇದು ಬಾಹ್ಯ ಜಗತ್ತಿನಲ್ಲಿ ಸತ್ಯವಾದರೆ ಆಂತರಿಕ ಜಗತ್ತಿನಲ್ಲಿಯೂ ಏತಕ್ಕೆ ಸತ್ಯವಾಗಬಾರದು? ರಸಾಯನಿಕ ಶಾಸ್ತ್ರಜ್ಞ ಕೆಲವು ರಸಾಯನಿಕ ದ್ರವ್ಯಗಳಿಂದ ಕೆಲವು ಪ್ರತಿಫಲವನ್ನು ಕಂಡುಹಿಡಿಯುತ್ತಾನೆ. ಇದು ಸತ್ಯ. ನೀವು ಅದನ್ನು ನೋಡುತ್ತೀರಿ, ಮುಟ್ಟುತ್ತೀರಿ. ನಿಮ್ಮ ರಸಾಯನಿಕ ವಾದಕ್ಕೆಲ್ಲಾ ಅದನ್ನು ಆಧಾರಭೂತವನ್ನಾಗಿ ಮಾಡುವಿರಿ. ಇದರಂತೆಯೇ ಭೌತಶಾಸ್ತ್ರಜ್ಞ ಮತ್ತು ಇತರ ವೈಜ್ಞಾನಿಕರು ಕೂಡ. ಎಲ್ಲ ಜ್ಞಾನವೂ ಕೆಲವು ವಸ್ತುಗಳ ಗ್ರಹಿಕೆ ಮೇಲೆ ನಿಂತಿರಬೇಕು. ಅದರ ಆಧಾರದ ಮೇಲೆ ನಮ್ಮ ಯುಕ್ತಿಯನ್ನು ನಾವು ಕಟ್ಟಬೇಕು. ವಿಚಿತ್ರವಾಗಿ ಮುಕ್ಕಾಲು ಪಾಲು ಮಾನವರು ಈಗಿನ ಕಾಲದಲ್ಲಿ ಧರ್ಮದಲ್ಲಿ ಇಂತಹ ಅನುಭವ ಅಸಾಧ್ಯ; ಕೇವಲ ವ್ಯರ್ಥವಾದದ ಮೂಲಕ ಮಾತ್ರ ಇದನ್ನು ಅರ್ಥಮಾಡಿಕೊಳ್ಳಬೇಕೆಂದು ಭಾವಿಸುವರು. ಆದಕಾರಣವೆ ಮನಸ್ಸನ್ನು ಕೆಲಸಕ್ಕೆ ಬಾರದ ವಾದದಿಂದ ಕೆಡಿಸಿಕೊಳ್ಳಬೇಡಿ ಎನ್ನುವರು. ಧರ್ಮವೆನ್ನುವುದು ಸಾಕ್ಷಾತ್ಕಾರ, ಬಾಯಿಮಾತಲ್ಲ. ನಮ್ಮ ಆತ್ಮವನ್ನೇ ಪರೀಕ್ಷಿಸಿ ಅಲ್ಲೇನಿದೆ ಎಂಬುದನ್ನು ತಿಳಿದು ಕೊಳ್ಳಬೇಕು. ಅದನ್ನು ತಿಳಿದುಕೊಳ್ಳಬೇಕು, ತಿಳಿದುಕೊಂಡುದನ್ನು ಅನುಷ್ಠಾನಕ್ಕೆ ತರಬೇಕು. ಅದೇ ಧರ್ಮ. ನಾವೆಷ್ಟು ಮಾತನಾಡಿದರೂ ಅದು ಧರ್ಮವಾಗುವುದಿಲ್ಲ. ದೇವರಿರುವನೆ ಇಲ್ಲವೆ ಎಂಬುದನ್ನು ಕೇವಲ ವಾದದಿಂದ ನಿಷ್ಕರ್ಶಿಸಲಾಗುವುದಿಲ್ಲ. ಎರಡು ಪಕ್ಷದವರೂ ಬೇಕಾದರೆ ವಾದ ಮಾಡಬಹುದು. ದೇವರಿದ್ದರೆ ಅವನು ನಮ್ಮ ಹೃದಯದಲ್ಲಿರಬೇಕು. ಎಂದಾದರೂ ನೀವು ಅವನನ್ನು ನೋಡಿರುವಿರಾ? ಪ್ರಪಂಚ ಇದೆಯೆ

ಇಲ್ಲವೆ ಎಂಬ ಪ್ರಶ್ನೆ ಇನ್ನೂ ಇತ್ಯರ್ಥವಾಗಿಲ್ಲ. ಭಾವಸತ್ತಾವಾದಿ ಮತ್ತು ಪ್ರಪಂಚ ಸತ್ತಾವಾದಿಗಳ ಚರ್ಚೆಗೆ ಅಂತ್ಯವಿಲ್ಲ. ಆದರೂ ಪ್ರಪಂಚವಿದೆ ಅದು ನಡೆಯುತ್ತಿದೆ ಎಂಬುದು ನಮಗೆ ಗೊತ್ತು. ನಾವು ಪದಗಳ ಅರ್ಥ ಮಾತ್ರ ಬದಲಾಯಿಸುವೆವು. ಅದರಂತೆಯೇ ಜೀವನದ ಎಲ್ಲಾ ಸಮಸ್ಯೆಗಳ ಸತ್ಯಾಂಶವನ್ನು ನಾವು ತಿಳಿಯಬೇಕು. ಕೆಲವು ಧಾರ್ಮಿಕ ಸತ್ಯಗಳನ್ನು ವಿಜ್ಞಾನದಲ್ಲಿ ಸತ್ಯವನ್ನು ನೋಡುವಂತೆ ಗ್ರಹಿಸಿ ಅದರ ಆಧಾರದ ಮೇಲೆ ಧರ್ಮ ನಿಲ್ಲಬೇಕಾಗಿದೆ. ಧರ್ಮದ ಪ್ರತಿಯೊಂದು ಮೂಢ ನಂಬಿಕೆಯನ್ನೂ ನೀವು ಒಪ್ಪಬೇಕೆಂಬುದು ಮಾನವನಿಗೆ ಅವಮಾನ ಮಾಡಿದಂತೆ. ಪ್ರತಿಯೊಂದನ್ನು ನಂಬಬೇಕೆಂದು ಹೇಳುವವನೂ ಅಧೋ ಗತಿಗೆ ಇಳಿಯುವನು, ಕೇಳಿದರೆ ನೀವೂ ಅಧೋಗತಿಗೆ ಬರುವಿರಿ. ಪ್ರಪಂಚದ ಮಹಾತ್ಮರು ತಮ್ಮ ಮನಸ್ಸನ್ನು ವಿಭಜನೆ ಮಾಡಿರುವರು. ಅದರಿಂದ ಸತ್ಯಗಳನ್ನು ಕಂಡುಹಿಡಿದಿರುವರು. ಅವರಿಗೆ ಮಾತ್ರ ನಮಗೆ ಬೋಧಿಸುವುದಕ್ಕೆ ಒಂದು ಅಧಿಕಾರವಿದೆ. ನಾವೂ ಹೀಗೆ ಮಾಡಿದರೆ ನಾವೂ ಕೂಡ ನಂಬಬಹುದು. ಅದಕ್ಕೆ ಮುಂಚೆ ಅಲ್ಲ, ಧರ್ಮದಲ್ಲಿರುವುದೆಲ್ಲ ಇದುಮಾತ್ರ. ಸಾಧಾರಣವಾಗಿ ಧರ್ಮವನ್ನು ವಿರೋಧಿಸುವ ಶೇಖಡ ೯೯.೯ ಮಂದಿ, ತಮ್ಮ ಮನಸ್ಸನ್ನು ಎಂದೂ ವಿಭಜನೆ ಮಾಡಿಲ್ಲ; ಸತ್ಯವನ್ನು ಕಂಡುಹಿಡಿಯುವುದಕ್ಕೆ ಎಂದಿಗೂ ಪ್ರಯತ್ನಪಟ್ಟಿಲ್ಲ ಎಂಬುದನ್ನು ನೀವು ನೆನಪಿನಲ್ಲಿಡಬೇಕು. ಕುರುಡ "ಸೂರ್ಯನನ್ನು ನಂಬುವ ನೀವೆಲ್ಲರೂ ಮೂರ್ಖರು'' ಎನ್ನುವುದರಷ್ಟೇ ಧರ್ಮವನ್ನು ವಿರೋಧಿಸುವವರ ವಾದ ಕೂಡ ಹುರುಳಿಲ್ಲದ್ದು.

ಆತ್ಮಸಾಕ್ಷಾತ್ಕಾರವೆಂಬ ಮಹಾ ಆದರ್ಶವನ್ನು ನಾವು ತಿಳಿಯಬೇಕು. ಅದನ್ನು ಎಂದಿಗೂ ತ್ಯಜಿಸಕೂಡದು. ಧರ್ಮದ ಗೊಂದಲ ಹೋರಾಟ ಭಿನ್ನಾಭಿಪ್ರಾಯ, ಧರ್ಮ ಶಾಸ್ತ್ರದಲ್ಲಿಲ್ಲ ದೇವಸ್ಥಾನದಲ್ಲಿಲ್ಲ ಎಂದು ತಿಳಿದಾಗ ಮಾತ್ರ ನಿಲ್ಲುವುದು. ಧರ್ಮವೆಂದರೆ ಸಾಕ್ಷಾತ್ಕಾರ. ಯಾರು ನಿಜವಾಗಿ ದೇವರು ಮತ್ತು ಆತ್ಮನನ್ನು ಸಂದರ್ಶಿಸಿರುವರೋ ಅವರಿಗೆ ಮಾತ್ರ ಧರ್ಮವಿದೆ. ಹಲವು ಗ್ರಂಥರಾಶಿಯನ್ನು ಹೊರಗೆಡವಬಲ್ಲ ಮತೀಯ ಪ್ರಚಂಡ ವಿದ್ವಾಂಸನಿಗೂ ಅತಿಕೆಳಗಿರುವ ಪಕ್ಕಾ ಜಡವಾದಿಗೂ ನಿಜವಾದ ವ್ಯತ್ಯಾಸವಿಲ್ಲ. ನಾವೆಲ್ಲ ನಾಸ್ತಿಕರು. ಇದನ್ನೂ ಒಪ್ಪಿಕೊಳ್ಳೋಣ. ಕೇವಲ ಯುಕ್ತಿಹಂತದಮೇಲೆ ನಿಂತು ಒಪ್ಪಿಕೊಳ್ಳುವುದರಿಂದ ನಾವು ಧಾರ್ಮಿಕರಾಗಲಾರೆವು. ಪ್ರಪಂಚದಲ್ಲಿ ಕ್ರೈಸ್ತ ಮಹಮ್ಮದೀಯ

ಅಥವಾ ಇನ್ನು ಯಾವುದಾದರೂ ಅನುಯಾಯಿಗಳನ್ನು ತೆಗೆದುಕೊಳ್ಳಿ. ಗುಡ್ಡದಮೇಲಿನ ಉಪನ್ಯಾಸವನ್ನು (sermon on the mount) ಯಾರು ನಿಜವಾಗಿ ಸಾಕ್ಷಾತ್ಕಾರ ಮಾಡಿಕೊಂಡಿರುವರೊ, ಅವನು ಪೂರ್ಣನಾಗುವನು, ತಕ್ಷಣವೇ ದೇವನಾಗುವನು. ಆದರೂ ಪ್ರಪಂಚದಲ್ಲಿ ಕೋಟ್ಯಂತರ ಕ್ರೈಸ್ತರು ಇರುವರು ಎನ್ನುವರು. ಮಾನವರು ಯಾವುದಾದರೊಂದು ಕಾಲದಲ್ಲಿ ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವರು ಎಂದು ಅರ್ಥ. ಎರಡುಕೋಟಿಗೆ ಒಬ್ಬಕೂಡ ನಿಜವಾದ ಕ್ರೈಸ್ತನಲ್ಲ.

ಇದರಂತೆಯೆ ಇಂಡಿಯಾದೇಶದಲ್ಲಿ ಕೂಡ ಮೂವತ್ತುಕೋಟಿ ವೇದಾಂತಿಗಳಿರುವರು ಎನ್ನುವರು. ಆದರೆ ಅವರಲ್ಲಿ ಸಾವಿರಕ್ಕೆ ಒಬ್ಬ ಧರ್ಮಸಾಕ್ಷಾತ್ಕಾರಮಾಡಿಕೊಂಡಿದ್ದರೆ ಈ ಪ್ರಪಂಚ ಎಷ್ಟೋ ಬದಲಾಯಿಸುತ್ತಿತ್ತು. ನಾವೆಲ್ಲ ನಾಸ್ತಿಕರು. ಆದರೂ ಯಾರು ಒಪ್ಪಿಕೊಳ್ಳುವರೊ ಅವನೊಂದಿಗೆ ನಾವೆಲ್ಲ ಹೋರಾಡುವೆವು. ನಾವೆಲ್ಲ ಅಜ್ಞಾನದಲ್ಲಿರುವೆವು. ಧರ್ಮ ನಮಗೆ ಕೇವಲ ಯುಕ್ತಿಯ ಒಪ್ಪಿಗೆ, ಮಾತು, ಮತ್ತೇನೂ ಅಲ್ಲ. ಯಾರು ಚೆನ್ನಾಗಿ ಮಾತನಾಡಬಲ್ಲರೊ ಅವರನ್ನು ಧಾರ್ಮಿಕರೆಂದು ನಾವು ಅನೇಕವೇಳೆ ಭಾವಿಸುವೆವು. ಆದರೆ ಇದಲ್ಲ ಧರ್ಮ. "ವಾಗ್ವೈಖರೀ, ಶಬ್ದಝುರೀ ಶಾಸ್ತ್ರವ್ಯಾಖ್ಯಾನ ಕೌಶಲಂ, ಭುಕ್ತಯೇ ನತು ಮುಕ್ತಯೆ " ನಮ್ಮ ಹೃದಯಾಂತರಾಳದಲ್ಲಿ ಸಾಕ್ಷಾತ್ಕಾರದ ಅರುಣೋದಯವಾದಾಗ ಧರ್ಮ ಪ್ರಾರಂಭವಾಗುವುದು. ಅದೇ ಧರ್ಮೋದಯ; ಆಗ ಮಾತ್ರ ನಾವು ನೀತಿವಂತರಾಗಬಲ್ಲೆವು. ನಾವೀಗ ಮೃಗಗಳಿಗಿಂತ ಹೆಚ್ಚು ನೀತಿವಂತರೇನೋ ಆಗಿಲ್ಲ. ನಾವೀಗ ಸಮಾಜದ ಚಾವಟಿ ಏಟಿಗೆ ಮಾತ್ರ ಅಂಜುತ್ತಿರುವೆವು. ಸಮಾಜ ಇಂದು "ನೀನು ಕದ್ದರೆ ಶಿಕ್ಷಿಸುವುದಿಲ್ಲ" ಎಂದರೆ ಮತ್ತೊಬ್ಬರ ಆಸ್ತಿ ದೋಚಲು ಧಾವಿಸುವೆವು. ನಮ್ಮನ್ನು ನೀತಿವಂತರನ್ನಾಗಿ ಮಾಡಿರುವವನು ಪೋಲಿಸಿನವನು. ಸಮಾಜದ ಅಭಿಪ್ರಾಯ ನಮ್ಮ ನೀತಿಗೆ ಕಾರಣ. ಪ್ರಾಣಿಗಳಿಗಿಂತ ನಾವೇನೂ ಬಹಳ ಮೇಲಿಲ್ಲ. ನಮ್ಮ ಹೃದಯಾಂತರಾಳದಲ್ಲೆ ಇದು ಎಷ್ಟು ಸತ್ಯವೆನ್ನುವುದು ನಮಗೆ ಗೊತ್ತಾಗುವುದು. ಕಪಟಿಗಳಾಗದಿರುವ. ನಾವು ಧಾರ್ಮಿಕರಲ್ಲವೆಂದು ಒಪ್ಪಿಕೊಳ್ಳೋಣ. ಇತರರನ್ನು ಕೀಳೆಣಿಕೆಯಿಂದ ಕಾಣಲು ನಮಗೆ ಅಧಿಕಾರವಿಲ್ಲ. ನಾವೆಲ್ಲ ಸಹೋದರರು. ನಾವು ಧರ್ಮಸಾಕ್ಷಾತ್ಕಾರಮಾಡಿಕೊಂಡಾಗ ಮಾತ್ರ ನಿಜವಾಗಿ ನೀತಿವಂತರಾಗುವೆವು.

ನೀವು ಒಂದು ದೇಶವನ್ನು ನೋಡಿದ್ದರೆ, ಯಾರೊ ನಿಮಗೆ ಅದನ್ನು

ನೋಡಿಲ್ಲ ಎಂದು ಹೇಳು ಎಂದು ಬಲಾತ್ಕರಿಸಿದರೆ, ನಿಮ್ಮ ಮನಸ್ಸಿನ ಅಂತರಾಳದಲ್ಲಿ ಅವನ್ನು ನೋಡಿದೆ ಎಂಬುದು ಗೊತ್ತೇ ಇರುತ್ತದೆ. ನೀವು ಈ ಪ್ರಪಂಚವನ್ನು ನೋಡುವುದಕ್ಕಿಂತ ಹೆಚ್ಚು ತೀವ್ರವಾಗಿ ಸತ್ಯವಾಗಿ ದೇವರು ಧರ್ಮವನ್ನು ಕಂಡಿದ್ದರೆ ಆ ನಂಬಿಕೆಯನ್ನು ಯಾವುದೂ ಅಲುಗಾಡಿಸದು. ಆಗಮಾತ್ರ ನಿಜವಾದ ಶ್ರದ್ಧೆ ಬರುವುದು. "ಸಾಸಿವೆ ಕಾಳಿನಷ್ಟು ಶ್ರದ್ಧೆ ನಿಮ್ಮಲ್ಲಿ ಯಾರಿಗೆ ಇದೆಯೊ" ಎಂದು ನಿಮ್ಮ ಬೈಬಲ್ಲು ಹೇಳಿರುವ ಮಾತಿಗೆ ಇದೇ ಅರ್ಥ. ಆಗ ನಿಮಗೆ ಸತ್ಯ ಗೊತ್ತಾಗುವುದು. ಏಕೆಂದರೆ ನೀವೆ ಸತ್ಯವಾಗಿರುವಿರಿ.

ಧರ್ಮಸಾಕ್ಷಾತ್ಕಾರಮಾಡಿಕೊಳ್ಳಿ, ಮಾತಿನಿಂದ ಪ್ರಯೋಜನವಿಲ್ಲ. ಇದೇ ವೇದಾಂತ ಬೋಧನೆಯ ಪಲ್ಲವಿ. ಆದರೆ ಇದನ್ನು ಬಹಳ ಕಷ್ಟದಿಂದ ಸಾಧಿಸಬೇಕಾಗಿದೆ. ಎಲ್ಲ ಮಾನವ ಜೀವಿಯ ಹೃದಯಾಂತರಾಳದಲ್ಲಿರುವ ಈ ಪುರಾಣಪುರುಷ ಸೂಕ್ಷ್ಮಕಣದಂತರಾಳದಲ್ಲಿ ಹುದುಗಿರುವನು. ಋಷಿಗಳು ಏಕಾಗ್ರಶಕ್ತಿಯಿಂದ ಅವನನ್ನು ಅರಿತರು; ಸುಖದುಃಖಗಳಾಚೆ ಪಾಪಪುಣ್ಯಗಳಾಚೆ ಅಸ್ತಿನಾಸ್ತಿಯ ಆಚೆ ಹೋದರು. ಯಾರು ಅವನನ್ನು ನೋಡಿರುವರೋ ಅವರು ಸತ್ಯವನ್ನು ಕಂಡಿರುವರು. ಹಾಗಾದರೆ ಸ್ವರ್ಗವೆಂದರೇನು? ದುಃಖವಿಲ್ಲದ ಸುಖವೆಂಬ ಭಾವನೆ. ಅಂದರೆ, ನಮಗೆ ಬೇಕಾಗಿರುವುದು ದುಃಖವಿಲ್ಲದಿರುವ ಈ ಪ್ರಪಂಚದ ಸುಖ. ನಿಸ್ಸಂಶಯವಾಗಿ ಇದು ಒಳ್ಳೆಯ ಭಾವನೆಯೇ ಸರಿ. ಇದು ಸ್ವಾಭಾವಿಕವಾಗಿ ಬರುವುದು. ಆದರೆ ಇದು ಮೊದಲಿನಿಂದಲೂ ಬಂದ ತಪ್ಪು. ಏಕೆಂದರೆ ಕೇವಲ ಒಳ್ಳೆಯದು ಅಥವಾ ಕೆಟ್ಟದ್ದು ಎಂಬುದು ಇಲ್ಲ.

ರೋಮಿನ ಒಬ್ಬ ಶ್ರೀಮಂತನ ಕಥೆಯನ್ನು ನೀವೆಲ್ಲ ಕೇಳಿರಬಹುದು. ಒಂದು ದಿನ ಅವನು ತನ್ನ ಆಸ್ತಿಯಲ್ಲಿ ಕೇವಲ ಹತ್ತುಲಕ್ಷಪೌಂಡುಗಳು ಮಾತ್ರ ಉಳಿದಿದೆ ಎಂಬುವನ್ನು ಕೇಳಿ "ನಾಳೆ ನನ್ನ ಗತಿ ಏನು?" ಎಂದು ತಕ್ಷಣ ಆತ್ಮಹತ್ಯಮಾಡಿಕೊಂಡನು. ಹತ್ತುಲಕ್ಷಪೌಂಡುಗಳು ಅವನಿಗೆ ದಾರಿದ್ರ್ಯ. ಸುಖವೇನು? ದುಃಖವೇನು? ಇದು ಮಾಯವಾಗುತ್ತದೆ. ನಿರಂತರ ಮಾಯವಾಗುತ್ತಿದೆ. ನಾನು ಮಗುವಾಗಿದ್ದಾಗ ನಾನೊಬ್ಬ ಕುದುರೆಗಾಡಿ ಹೊಡೆಯುವವನಾದರೆ, ಅದರಲ್ಲಿ ಕುಳಿತು ಗಾಡಿಹೊಡೆಯುವುದೇ ನನ್ನ ಆನಂದದ ಪರಾಕಾಷ್ಠತೆ ಎಂದು ಭಾವಿಸಿದ್ದೆ. ಈಗ ನಾನು ಹಾಗೆ ಭಾವಿಸುವುದಿಲ್ಲ. ಯಾವ ಸುಖವನ್ನು ನೀವು ನೆಚ್ಚಿಕೊಂಡಿರಬಲ್ಲಿರಿ? ನಾವೆಲ್ಲ ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಬೇಕಾದ ಒಂದು

ವಿಷಯ ಇದು. ನಮ್ಮನ್ನು ತ್ಯಜಿಸುವ ಕಟ್ಟಕಡೆಯ ಮೂಢನಂಬಿಕೆ ಇದು. ಪ್ರತಿಯೊಬ್ಬನ ಸುಖದ ಆದರ್ಶವೇ ಬೇರೆ. ಪ್ರತಿದಿನ ಒಂದು ಮುದ್ದೆ ಓಪಿಯಂ ತಿನ್ನದೆ ಇದ್ದರೆ ಸಂತೋಷವೇ ಇಲ್ಲದ ಒಬ್ಬನನ್ನು ನಾನು ನೋಡಿರುವೆನು. ಬರೀ ಓಪಿಯಂ ಮಯವಾದ ಸ್ವರ್ಗವನ್ನೇ ಅವನು ಕನಸುಕಾಣಬಹುದು. ಅವನ ಸ್ವರ್ಗದಿಂದ ನನಗೇನೂ ಪ್ರಯೋಜನವಿಲ್ಲ. ಅನೇಕವೇಳೆ ಅರೇಬಿಯಾ ದೇಶದ ಕವನಗಳಲ್ಲಿ, ಸ್ವರ್ಗವನ್ನು ನದಿಗಳು ಹರಿಯುತ್ತಿರುವ ಸುಂದರ ತೋಟವೆಂದು ಚಿತ್ರಿಸುವರು. ಬರೀ ನೀರಿನ ಮಯದ ದೇಶದಲ್ಲಿ ನಾನು ಜೀವನದ ಬಹುಭಾಗ ಕಳೆದೆ. ಹಲವು ಹಳ್ಳಿಗಳು ಕೊಚ್ಚಿಕೊಂಡುಹೋಗುವುವು. ಸಾವಿರಾರು ಪ್ರಾಣಾಹುತಿಯಾಗುವುವು. ಆದಕಾರಣ ನನ್ನ ಸ್ವರ್ಗದಲ್ಲಿ ನದಿಗಳಿಂದ ಕೂಡಿದ ಉದ್ಯಾನವನವಿರುವುದಿಲ್ಲ. ಬಹಳ ಕಡಿಮೆ ಮಳೆ ಬೀಳುವ ದೇಶವನ್ನು ನಾನು ಆಶಿಸುತ್ತೇನೆ. ನಮ್ಮ ಸುಖ ಕೂಡ ಯಾವಾಗಲೂ ಬದಲಾಯಿಸುತ್ತಿರುವುದು. ಯುವಕ ಸ್ವರ್ಗ ಕಲ್ಪಿಸಿಕೊಂಡರೆ, ಆದರಲ್ಲಿ ಸುಂದರ ಯುವತಿಹೆಂಡತಿಯನ್ನು ಕಲ್ಪಿಸಿಕೊಳ್ಳುವನು. ಇದೇ ಮನುಷ್ಯ ವೃದ್ಧನಾದರೆ ಅವನಿಗೆ ಹೆಂಡತಿ ಬೇಡ. ನಮ್ಮ ಆವಶ್ಯಕತೆಯೇ ಸ್ವರ್ಗಕ್ಕೆ ಕಾರಣ. ನಮ್ಮ ಆವಶ್ಯಕತೆ ಬದಲಾಯಿಸಿದಂತೆ ಸ್ವರ್ಗವೂ ಬದಲಾಯಿಸುವುದು. ಇಂದ್ರಿಯಸುಖಭೋಗವೇ ತಮ್ಮ ಸರ್ವಸ್ವವೆಂದು ಭಾವಿಸುವ ಜನರ ಸ್ವರ್ಗ ನಮಗೆ ದೊರೆತರೆ ನಾವು ಮುಂದುವರಿಯಲಾರೆವು. ಜೀವನಿಗೆ ಇದೊಂದು ಮಹಾರುದ್ರ ಚಿಕಿತ್ಸೆಯಾಗುವುದು. ಕೊನೆಗೆ ನಾವು ಇದೇ ನಿರ್ಧಾರಕ್ಕೆ ಬರುವುದು? ಸ್ವಲ್ಪ ಅಳುವುದು ನೆಗೆದಾಡುವುದು ನಂತರ ಒಂದು ನಾಯಿಯಂತೆ ಸಾಯುವುದು. ಇಂತಹ ವಸ್ತುಗಳನ್ನು ನೀನು ಆಶಿಸುವಾಗ ಎಂತಹಶಾಪಕೊಡುವೆ ಮಾನವ ಕೋಟಿಗೆ! ಈ ಪ್ರಪಂಚದ ಸುಖಗಳಿಗೆ ನೀನು ಕಾತುರನಾಗಿರುವಾಗ ನೀನು ಮಾಡುವುದೇ ಇದನ್ನು. ಯಾವುದು ನಿಜವಾದ ಸಂತೋಷವೆನ್ನುವುದು ನಿನಗೆ. ಗೊತ್ತಿಲ್ಲ. ತತ್ತ್ವ, ಸಂತೋಷವನ್ನು ತ್ಯಜಿಸಿ ಎನ್ನುವುದಿಲ್ಲ. ನಿಜವಾದ ಸಂತೋಷ ಯಾವುದು ಎಂಬುದನ್ನು ತಿಳಿಯಿರಿ ಎನ್ನುವುದು. ನಾರ್ವೆಜನರ ಸ್ವರ್ಗ ಒಂದುಹೋರಾಟದ ಕ್ಷೇತ್ರ. ಓಡಿನ್ನಿನ ಮುಂದೆ ಕುಳಿತುಕೊಳ್ಳುವರು. ಕಾಡುಹಂದಿ ಬೇಟೆ ಆಡುವರು. ಅನಂತರ ಒಬ್ಬರಿಗೊಬ್ಬರು ಕಾದಾಡಿ ಒಬ್ಬರನ್ನೊಬ್ಬರು ಸಿಗಿದಾಡುವರು. ಹೀಗೆ ಕೆಲವು ಗಂಟೆ ಕಾದಾಡಿದ ಮೇಲೆ ಗಾಯವಾಗುವುದು. ಅವರೆಲ್ಲ ಪ್ರಾಂಗಣಕ್ಕೆ ಹೋಗುವರು,

ಅಲ್ಲಿ ಆಗಲೆ ಬೇಯಿಸಿದ ಹಂದಿ ಮಾಂಸ ಸಿದ್ಧವಾಗಿರುವುದು. ಅದನ್ನು ತಿಂದು ಕುಡಿಯುವರು. ಕಾಡುಹಂದಿ ಪುನಃ ರೂಪುತಾಳಿ ಬೇಟೆ ಆಡಿಸಿ ಕೊಳ್ಳುವುದಕ್ಕೆ ಸಿದ್ಧವಾಗಿರುವುದು. ಅದು ನಮ್ಮ ಸ್ವರ್ಗದಂತೆಯೇ. ಅದಕ್ಕಿಂತ ಏನೂ ಕೇಡಲ್ಲ. ನಮ್ಮ ಭಾವನೆ ಅದಕ್ಕಿಂತ ಸ್ವಲ್ಪ ನಾಗರಿಕ ವಾಗಿರಬಹುದು. ನಾವೂ ಕಾಡುಹಂದಿ ಬೇಟೆ ಆಡಬೇಕು. ಎಲ್ಲಾ ಸುಖಗಳು ಕೊನೆಗಾಣದ ಒಂದುಸ್ಥಳಕ್ಕೆ ಹೋಗಬೇಕು. ನಾರ್ವೆ ಯವರು ಪ್ರತಿದಿನ ಹಂದಿ ಬೇಟೆಯಾಡುವರು. ಅದೇಹಂದಿ ಮಾರನೆ ದಿನ ಪುನಃ ಬೇಟೆಗೆ ಸಿದ್ಧವಾಗಿರುವುದು ಎಂದು ಭಾವಿಸುವಂತೆ.

ನಿರಪೇಕ್ಷವಾದ ಆನಂದ ಒಂದಿದೆ, ಅದೆಂದಿಗೂ ಬದಲಾಯಿಸು ವುದಿಲ್ಲವೆಂದು ತತ್ತ್ವ ಹೇಳುವುದು. ಈ ಪ್ರಪಂಚದ ಸುಖ ಸಂತೋಷದಂತೆ ಅಲ್ಲ ಅದು. ಆದರೂ ಪ್ರಪಂಚದಲ್ಲಿ ಸಂತೋಷದಾಯಕವಾದುದೆಲ್ಲ ಆ ಆನಂದದ ಒಂದು ಅಂಶ ಮಾತ್ರ ಎಂದು ವೇದಾಂತ ಸಾರುವುದು. ಏಕೆಂದರೆ ಬೇರೆ ಆನಂದವೇ ಇಲ್ಲ. ನಾವು ಪ್ರತಿ ಕ್ಷಣವೂ ಅನಂತಾ ನಂದವನ್ನೇ ಅನುಭವಿಸುತ್ತಿರುವುದು. ನಾವು ಅದನ್ನು ಮುಚ್ಚಿರಬಹುದು. ಅದನ್ನು ವಿಕೃತ ಮಾಡಿರಬಹುದು. ಎಲ್ಲಿಯಾದರೂ ಆಶೀರ್ವಾದ ಆನಂದ ಸಂತೋಷವಿದ್ದರೆ, ಅದು ಕಳ್ಳನು ಕದಿಯುವುದರಿಂದ ಬರ ಬಹುದು. ಅದುಕೂಡ ಆ ಅನಂತಾನಂದವೇ. ಆದರೆ ಹಲವು ಬಾಹ್ಯ ವಿಶೇಷಣಗಳಿಂದ ಆವೃತವಾಗಿ ಕಾಣದೆ ಇತರ ವಸ್ತುಗಳಲ್ಲಿ ಮಿಶ್ರವಾಗಿ ಅದನ್ನು ತಪ್ಪುತಿಳಿದುಕೊಂಡಿರುವೆವು. ಅದನ್ನು ತಿಳಿದುಕೊಳ್ಳಬೇಕಾದರೆ ನೇತಿ ಮಾರ್ಗದಲ್ಲಿ ಹೋಗಬೇಕು. ಅನಂತರ ಇತಿ ಪ್ರಾರಂಭವಾಗುವುದು. ಅಜ್ಞಾನವನ್ನು ನಾವು ತ್ಯಜಿಸಬೇಕು, ಅಸತ್ಯವನ್ನು ತ್ಯಜಿಸಬೇಕು. ಅನಂತರ ಸತ್ಯ ತಾನೇ ವ್ಯಕ್ತವಾಗಲು ಪ್ರಾರಂಭವಾಗುವುದು. ನಾವು ಸತ್ಯವನ್ನು ಗ್ರಹಿಸಿದಮೇಲೆ ಮೊದಲು ನಾವು ತ್ಯಜಿಸಿದ ವಸ್ತು ಬೇರೆ ಆಕಾರದಿಂದ ತೋರುವುದು. ಬೇರೆ ದೃಷ್ಟಿಯಿಂದ ನಮಗೆ ಕಾಣುವುದು, ಅವೆಲ್ಲ ದೈವೀಸ್ವರೂಪ ತಾಳುವುದು. ಆಗ ನಾವು ಅದನ್ನು ನಿಜವಾದ ದೃಷ್ಟಿಯಲ್ಲಿ ತಿಳಿದುಕೊಳ್ಳಬಹುದು. ಆದರೆ ಮೊದಲು ಅದನ್ನು ತಿಳಿದು ಕೊಳ್ಳಬೇಕಾದರೆ ಮೊದಲು ಸತ್ಯದ ತಾತ್ಕಾಲಿಕ ಅನುಭವವಾದರೂ ಆಗಿರಬೇಕು. ಮೊದಲು ನಾವು ಅದನ್ನು ತ್ಯಜಿಸಬೇಕು. ಅದನ್ನು ಪುನಃ ದೈವೀಸ್ವರೂಪದಂತೆ ಸ್ವೀಕರಿಸುವೆವು. ನಮ್ಮ ದುಃಖ ಸಂಕಟ ಅಲ್ಪಸುಖ ಇವನ್ನೆಲ್ಲ ಮೊದಲು ತ್ಯಜಿಸಬೇಕು.

ಯಾವುದನ್ನು ಎಲ್ಲ ವೇದಗಳು ಸಾರುವುವೊ, ಯಾವುದಕ್ಕಾಗಿ ಎಲ್ಲರೂ ತಪಸ್ಸನ್ನು ಮಾಡುವರೋ, ಯಾವುದನ್ನು ಪಡೆಯುವುದಕ್ಕೆ ಜನರು ಬ್ರಹ್ಮಚರ್ಯವ್ರತವನ್ನು ಆಚರಿಸುವರೊ ಅದನ್ನು ಒಂದು ಪದದಲ್ಲಿ ಹೇಳುತ್ತೇನೆ; ಅದೇ "ಓಂ". ವೇದಗಳು ಈ ಪದವನ್ನು ಶ್ಲಾಘಿಸುತ್ತವೆ. ಇದನ್ನು ಅತಿ ಪವಿತ್ರವೆಂದು ಭಾವಿಸುತ್ತಾರೆ.

ಯಮ ದೇಹ ಕಾಲವಾದಮೇಲೆ ಜೀವ ಏನಾಗುವುದು ಎಂಬ ಪ್ರಶ್ನೆಗೆ ಉತ್ತರ ಕೊಡುವನು. "ಆ ಮಹಾತ್ಮ ಎಂದಿಗೂ ಸಾಯುವುದೂ ಇಲ್ಲ ಹುಟ್ಟುವುದೂ ಇಲ್ಲ. ಇದು ಯಾವುದರಿಂದಲೂ ಹುಟ್ಟುವುದಿಲ್ಲ. ಯಾವುದೂ ಇದರಿಂದ ಹುಟ್ಟುವುದಿಲ್ಲ. ಅಜ ಸನಾತನ, ಶಾಶ್ವತವಾದ ಈ ಪುರಾಣಪುರುಷ ದೇಹನಾಶದಿಂದ ಎಂದಿಗೂ ಸಾಯುವುದಿಲ್ಲ. ಕೊಲ್ಲುವವನು ತಾನು ಕೊಲ್ಲುತ್ತೇನೆ ಎಂದು ಭಾವಿಸಿದರೆ, ಕೊಲ್ಲಿಸಿಕೊಳ್ಳುವವನು ತನ್ನನ್ನು ಕೊಲ್ಲುವರು ಎಂದು ಭಾವಿಸಿದರೆ, ಅವರಿಬ್ಬರಿಗೂ ಸತ್ಯ ತಿಳಿಯದು. ಆತ್ಮ ಎಂದಿಗೂ ಕೊಲ್ಲುವುದಿಲ್ಲ ಅಥವಾ ಕೊಲ್ಲಿಸಿಕೊಳ್ಳುವುದಿಲ್ಲ." ಇದೊಂದು ಅದ್ಭುತವಾದ ಸ್ಥಿತಿ. ಮಹಾತ್ಮ ಎಂಬ ಮೊದಲನೆ ಗುಣವಾಚಕಕ್ಕೆ ನಿಮ್ಮ ಲಕ್ಷ್ಯವನ್ನು ಸೆಳೆಯಲಿಚ್ಛಿಸುವೆನು. ನಾವು ಮುಂದೆ ಹೋದಂತೆ ವೇದಾಂತದ ಆದರ್ಶವಾದ ಜ್ಞಾನ ಪವಿತ್ರತೆಯೆಲ್ಲ ಆಗಲೆ ಆತ್ಮನಲ್ಲಿರುವುದು. ಕೆಲವುವೇಳೆ ಅದು ಮಂದವಾಗಿ ಕೆಲವು ವೇಳೆ ಸ್ಪಷ್ಟವಾಗುತ್ತಿದೆ. ಅದೇ ವ್ಯತ್ಯಾಸ. ಮನುಷ್ಯ ಮನುಷ್ಯರಿಗೆ ಪೃಥ್ವಿಯಲ್ಲಿರುವ ಸಮಸ್ತವಸ್ತುಗಳಿಗೆ ಇರುವ ಭೇದ ತರತಮವಲ್ಲದೆ ವಸ್ತು ವ್ಯತ್ಯಾಸದಲ್ಲಿ ಇಲ್ಲ. ಪ್ರತಿಯೊಂದು ವಸ್ತುವಿನ ಸತ್ಯವೂ ಹಿನ್ನೆಲೆಯೂ ಒಂದೇ ಸನಾತನವಾಗಿರುವ, ನಿತ್ಯಾನಂದ ನಿತ್ಯಶುದ್ಧ ನಿತ್ಯಪರಿಪೂರ್ಣವಾಗಿರುವುದು. ಪಾಪಿಪುಣ್ಯವಂತರಲ್ಲಿ ಸುಖಿದುಃಖಿಗಳಲ್ಲಿ ಸುಂದರ ಕುರೂಪಿಗಳಲ್ಲಿ ಮಾನವರಲ್ಲಿ ಮೃಗಗಳಲ್ಲಿ ಈ ಆತ್ಮ ಒಂದೇ ಪ್ರಕಾಶಿಸುತ್ತಿರುವುದು. ಈ ಸ್ವಯಂಪ್ರಭೆಯೊಂದೇ ಇರುವುದು. ನಾವು ವ್ಯಕ್ತಗೊಳಿಸುವ ತರತಮದಲ್ಲಿ ಮಾತ್ರ ವ್ಯತ್ಯಾಸವಾಗುವುದು. ಕೆಲವರಲ್ಲಿ ಇದು ಹೆಚ್ಚು ವ್ಯಕ್ತವಾಗಿರುವುದು. ಕೆಲವರಲ್ಲಿ ಕಡಿಮೆ. ಈ ಹೆಚ್ಚು ಕಡಿಮೆಯಿಂದ ಆತನಿಗೇನೂ ದೋಷವಿಲ್ಲ. ಒಬ್ಬನ ಪೋಷಾಕು ಅವನ ದೇಹದ ಹೆಚ್ಚು ಭಾಗವನ್ನು ಹೊರಗೆ ತೋರುವುದು, ಮತ್ತೊಬ್ಬನದು ಕಡಿಮೆ ತೋರುವುದು. ಇದರಿಂದ ದೇಹಕ್ಕೆ ಯಾವ ವ್ಯತ್ಯಾಸವೂ ಆಗುವುದಿಲ್ಲ. ಉಡುಪಿನಲ್ಲಿ ಮಾತ್ರ ವ್ಯತ್ಯಾಸ- ವೇದಾಂತ ತತ್ತ್ವದಲ್ಲೆಲ್ಲ

ಒಳ್ಳೆಯದು ಕೆಟ್ಟದ್ದು ಎಂಬ ಎರಡು ಪದಗಳಿಲ್ಲ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಒಂದೇ ಕೆಲವುವೇಳೆ ಒಬ್ಬರಿಗೆ ಒಳ್ಳೆಯದಾಗಬಹುದು, ಮತ್ತೊಬ್ಬರಿಗೆ ಕೆಟ್ಟದ್ದಾಗಬಹುದು. ತರತಮದಲ್ಲಿ ಮಾತ್ರ ವ್ಯತ್ಯಾಸ. ನಾನು ಯಾವುದನ್ನು ಇಂದು ಸುಖ ಎಂದು ಕರೆಯುತ್ತೇನೆಯೋ ನಾಳೆ ಉತ್ತಮಸ್ಥಿತಿಯಲ್ಲಿ ದುಃಖವೆನ್ನಬಹುದು. ನಮಗೆ ಶಾಖ ಕೊಡುವ ಬೆಂಕಿ ನಮ್ಮನ್ನು ಸುಡಲೂ ಬಹುದು. ಇದು ಬೆಂಕಿಯ ತಪ್ಪಲ್ಲ. ಆತ್ಮ ಶುದ್ಧವಾಗಿ ಪರಿಪೂರ್ಣವಾಗಿರುವುದರಿಂದ, ಯಾರು ಕೆಟ್ಟದ್ದನ್ನು ಮಾಡುವರೋ ಅವರು ತಮಗೆ ತಾವೇ ಸುಳ್ಳನ್ನು ಹೇಳಿಕೊಳ್ಳುತ್ತಿರುವರು. ಅವನಿಗೆ ತನ್ನ ಸ್ವಭಾವವೆ ಗೊತ್ತಿಲ್ಲ. ಕೊಲೆಪಾತಕನಲ್ಲಿಯೂ ಪರಿಶುದ್ಧಾತ್ಮವಿದೆ. ಅದೆಂದಿಗೂ ನಾಶವಾಗುವುದಿಲ್ಲ. ಅದನ್ನು ವ್ಯಕ್ತಪಡಿಸಲಾರದೆ ಹೋದುದು ಅವನ ತಪ್ಪು. ಅದನ್ನು ಮುಚ್ಚಿದ್ದನು. ತಾನು ಸತ್ತೆ ಎಂದು ಭಾವಿಸುವವನಲ್ಲಿಯೂ ಆತ್ಮ ಸಾಯುವುದಿಲ್ಲ. ಅದು ಸನಾತನವಾದುದು. ಅದನ್ನೆಂದಿಗೂ ನಾಶಮಾಡಲಾಗುವುದಿಲ್ಲ. ಅಣುಗಿಂತ ಅಣು, ವಿಭುಗಿಂತ ವಿಭು ಅದು. ಈ ಸರ್ವೇಶ್ವರನು ಎಲ್ಲರ ಹೃದಯಾಂತರಾಳದಲ್ಲಿಯೂ ಇರುವನು. ಪರಿಶುದ್ಧಾತ್ಮರು ದುಃಖದಿಂದ ಪಾರಾಗಿ ಭಗವಂತನ ದಯೆಯಿಂದ ಅವನನ್ನು ನೋಡುವರು. ಅವನು ನಿರ್ದೇಹನಾದರೂ ದೇಹದಲ್ಲಿರುವನು, ನಿರ್ದೇಶಿಯಾದರೂ ದೇಶದಲ್ಲಿರುವಂತೆ ಕಾಣುವನು. ಅನಂತ ಸರ್ವವ್ಯಾಪಿ ಅವನು. ಆತ್ಮ ಇಂತಹುದೆಂದು ಅರಿತ ಜ್ಞಾನಿಗಳೆಂದಿಗೂ ದುಃಖಿಸುವುದಿಲ್ಲ.

"ಮಾತಿನಿಂದ, ಬುದ್ಧಿಯಿಂದ, ಅಥವಾ ಶಾಸ್ತ್ರಧರ್ಮದಿಂದಲೂ ಆತ್ಮನನ್ನು ಅರಿಯಲಾಗುವುದಿಲ್ಲ." ಇವು ಅತಿ ಧೀರವಾಣಿ. ನಾನು ನಿಮಗೆ ಹಿಂದೆ ಹೇಳಿದ್ದಂತೆ ಈ ಋಷಿಗಳು ಧೀರತತ್ತ್ವಜ್ಞರು. ಅವರೆಲ್ಲಿಯೂ ನಿಲ್ಲುತ್ತಿರಲಿಲ್ಲ. ಇಂಡಿಯಾದೇಶದಲ್ಲಿ ಜನರು ವೇದವನ್ನು ಕ್ರೈಸ್ತರು ಬೈಬಲ್ಲನ್ನು ನೋಡುವುದಕ್ಕಿಂತಲೂ ಪವಿತ್ರದೃಷ್ಟಿಯಿಂದ ನೋಡುವರು. ನಿಮ್ಮಲ್ಲಿ ಅಪೌರುಷೇಯ ಎಂದರೆ ಒಬ್ಬ ದೇವರಿಂದ ಸ್ಫೂರ್ತಿಗೊಂಡ ಎಂದು. ಆದರೆ ಇಂಡಿಯಾದೇಶದಲ್ಲಿ, ಪ್ರಪಂಚದಲ್ಲಿ ಇವೆಲ್ಲ, ಇರುವುದಕ್ಕೆ ಕಾರಣ ಅವು ವೇದದಲ್ಲಿ ಮೊದಲಿರುವುದರಿಂದ. ವೇದದಿಂದ ವೇದದಮೂಲಕ ಈ ಸೃಷ್ಟಿಯೆಲ್ಲ ಬಂದಿದೆ. ಜ್ಞಾನವೆನ್ನುವುದೆಲ್ಲ ವೇದದಲ್ಲಿದೆ. ಪ್ರತಿಯೊಂದು ಶಬ್ದವೂ ಪವಿತ್ರ, ಅನಂತ, ಆತ್ಮನಿಗೆ ಆದಿಅಂತ್ಯವಿಲ್ಲದಂತೆ. ಸೃಷ್ಟಿಕರ್ತನ ಮನಸ್ಸೆಲ್ಲಾ ವೇದದಲ್ಲಿರುವಂತೆ.

ವೇದವನ್ನು ನೋಡುವ ದೃಷ್ಟಿ ಇದು. ಇದೇಕೆ ಧರ್ಮ? ವೇದ ಹಾಗೆ ಹೇಳುವುದು. ಅದೇಕೆ ಅಧರ್ಮ? ವೇದ ಹಾಗೆ ಹೇಳುವುದು. ಆದರೂ ವೇದಾಧ್ಯಯನದಿಂದ ಸತ್ಯ ದೊರಕದು. "ಆತ್ಮನಿಗೆ ಯಾರು ಪ್ರೀತಿ ಪಾತ್ರರೋ ಅವರಿಗೆ ಇದು ವ್ಯಕ್ತವಾಗುವುದು" ಎಂಬ ಧೀರನುಡಿಗಳನ್ನು ಗಮನಿಸಿ. ಇದನ್ನು ಪಕ್ಷಪಾತವೆಂದು ಬೇಕಾದರೆ ಆಕ್ಷೇಪಣೆ ಮಾಡ ಬಹುದು. ಆದರೆ ಯಮ ಯಾರು ದುಷ್ಕರ್ಮಿಗಳೋ ಅಶಾಂತರೊ ಅವರೆಂದಿಗೂ ಜ್ಞಾನವನ್ನು ಪಡೆಯಲಾರರು. ಯಾರು ಪರಿಶುದ್ಧರೋ ಸತ್ಕರ್ಮಿಗಳೋ, ಜಿತೇಂದ್ರಿಯರೋ ಅವರಲ್ಲಿ ಮಾತ್ರ ಆತ್ಮ ವ್ಯಕ್ತ ವಾಗುವುದು ಎನ್ನುವನು.

ಇಲ್ಲೊಂದು ಸುಂದರ ಚಿತ್ರ ಬರುವುದು. ಆತ್ಮನೇ ರಥಿ ದೇಹ ರಥ, ಬುದ್ಧಿಯೇಸಾರಥಿ, ಮನಸ್ಸೆ ಲಗಾಮು. ಇಂದ್ರಿಯಗಳೇ ಕುದುರೆ. ಯಾರಕುದುರೆಗಳು ಪಳಗಿವೆಯೋ ಲಗಾಮು ಬಿಗಿಯಾಗಿ ಸಾರಥಿ ಕೈಯಲ್ಲಿರುವುದೋ ಅವರು ಸರ್ವವ್ಯಾಪಿಯ ಗುರಿಯನ್ನು ಸೇರುವರು. ಯಾರ ಕುದುರೆ ಪಳಗಿಲ್ಲವೊ, ಲಗಾಮು ನಿಗ್ರಹದಲ್ಲಿ ಇಲ್ಲವೊ ಅವರು ನಾಶವಾಗುವರು. ಎಲ್ಲರಲ್ಲಿಯೂ ಇರುವ ಆತ್ಮ ಇಂದ್ರಿಯಗಳಿಗೆ ಗೋಚರಿಸುವುದಿಲ್ಲ. ಯಾರ ಮನಸ್ಸು ಶುದ್ಧವಾಗಿದೆಯೊ ಸೂಕ್ಷ್ಮ ವಾಗಿದೆಯೊ ಅವರು ಸಾಕ್ಷಾತ್ಕಾರ ಮಾಡಿಕೊಳ್ಳುವರು. ಯಾರು ಎಲ್ಲ ಶಬ್ದದಾಚೆ, ರೂಪದಾಚೆ, ಆಕಾರದಾಚೆ, ನಿರಪೇಕ್ಷನಾಗಿರುವನೊ, ರುಚಿ ಸ್ಪರ್ಶಗಳನ್ನು ಮೀರಿ ಅನಂತನಾಗಿರುವನೊ, ಅಂತಹವನನ್ನು ಯಾರು ಸಾಕ್ಷಾತ್ಕಾರಮಾಡಿಕೊಳ್ಳಬಲ್ಲರೊ, ಅವರು ಮೃತ್ಯುದಾಡೆಯಿಂದ ಪಾರಾ ಗುವರು. ಆದರೆ ಇದು ಬಹಳಕಷ್ಟ. ಹರಿದ ಅಲಗಿನಮೇಲೆ ನಡೆದಂತೆ ಇದು. ಮಾರ್ಗ ಬಹುದೂರ, ಕಷ್ಟ. ಆದರೆ ಹೋರಾಡಿ ನಿರಾಶರಾಗ ಬೇಡಿ. ಏಳಿ, ಜಾಗ್ರತರಾಗಿ, ಗುರಿ ಸೇರುವವರೆಗೂ ನಿಲ್ಲಬೇಡಿ.

ಉಪನಿಷತ್ತಿನಲ್ಲೆಲ್ಲಾ ಒಂದು ಮುಖ್ಯಭಾವನೆ ಆತ್ಮಸಾಕ್ಷಾತ್ಕಾರ. ಹಲವು ಪ್ರಶ್ನೆಗಳು ಪುನಃ ಪುನಃ ಏಳುವುವು. ಅದರಲ್ಲಿಯೂ ಆಧುನಿಕ ಮಾನವರಿಗೆ ಇದು ಹೆಚ್ಚು. ಪ್ರಯೋಜನ ಮತ್ತು ಇನ್ನೂ ಇತರ ಪ್ರಶ್ನೆಗಳೇಳುತ್ತವೆ. ಆದರೆ ಎಲ್ಲದರಲ್ಲಿಯೂ ನಾವು ಹಿಂದಿನ ಸಂಸ್ಕಾರ ಗಳಿಂದ ಪ್ರೇರಿತರಾಗುತ್ತೇವೆ. ಭಾವನೆಯ ಪರಸ್ಪರ ಸಂಬಂಧಕ್ಕೆ ನಮ್ಮ ಮನಸ್ಸಿನಮೇಲೆ ಅದ್ಭುತ ಶಕ್ತಿ ಇದೆ. ಯಾರು ಬಾಲ್ಯಾರಭ್ಯ ಸಾಕಾರ ದೇವರನ್ನು ಕೇಳಿರುವರೋ ಜೀವಿಯ ಒಂದು ವ್ಯಕ್ತಿತ್ವದಲ್ಲಿ ನಂಬುವರೊ

ಅವರಿಗೆ ಈ ಭಾವನೆ ಬಹಳ ಕಠೋರವಾಗಿ ಕಾಣುವುದು. ಆದರೆ ಅವರು ಈ ಭಾವನೆ ಕೇಳಿ ಅದನ್ನು ಕುರಿತು ಆಲೋಚಿಸಿದರೆ ಅದು ಅವರ ಬಾಳಿನ ಒಂದು ಭಾಗವಾಗುವುದು, ಅವರಿನ್ನು ಅಂಜುವುದಿಲ್ಲ. ಸಾಧಾರಣವಾಗಿ ಏಳುವ ಒಂದು ಪ್ರಶ್ನೆಯೇ ಇಂತಹ ತತ್ತ್ವದಿಂದ ಏನು ಪ್ರಯೋಜನ ಎನ್ನುವುದು. ಅದಕ್ಕೆ ಒಂದೇ ಒಂದು ಉತ್ತರ ಮಾತ್ರ ಸಾಧ್ಯ. ಪ್ರಯೋಜನ ದೃಷ್ಟಿಯಿಂದ ಸುಖವನ್ನು ಅರಸುವುದು ಮನುಷ್ಯನಿಗೆ ಒಳ್ಳೆಯದಾದರೆ, ಯಾರಸುಖ ಆಧ್ಯಾತ್ಮ ಆವಿಶ್ಕಾರದಲ್ಲಿದೆಯೊ ಅವರು ಏತಕ್ಕೆ ಅದನ್ನು ಮಾಡಬಾರದು. ಇಂದ್ರಿಯಸುಖ ಹಲವರಿಗೆ ತೃಪ್ತಿ ತರುವುದು. ಅದಕ್ಕೆ ಅದನ್ನು ಎಲ್ಲರೂ ಅರಸುವರು. ಆದರೆ ಕೆಲವರಿಗೆ ಇದರಿಂದ ತೃಪ್ತಿ ಇಲ್ಲ. ಅವರಿಗೆ ಉತ್ತಮ ಆನಂದ ಬೇಕು. ನಾಯಿಯ ಆನಂದವೆಲ್ಲಾ ತಿನ್ನುವುದು ಕುಡಿಯುವುದರಲ್ಲಿದೆ. ಎಲ್ಲವನ್ನೂ ತ್ಯಜಿಸಿ ವಿಜ್ಞಾನಿ ಎಲ್ಲೋ ಒಂದು ಬೆಟ್ಟದ ಮೇಲೆ ಕುಳಿತು ನಕ್ಷತ್ರಗಳ ಗತಿಯನ್ನು ನೋಡುತ್ತಿರುವವನ ಆನಂದ ನಾಯಿಗೆ ತಿಳಿಯದು. ನಾಯಿ ಅವನನ್ನು ನೋಡಿ ಹುಚ್ಚನೆಂದು ಭಾವಿಸಬಹುದು. ಬಹುಶಃ ಈ ವಿಜ್ಞಾನಿಗೆ ಮದುವೆಮಾಡಿಕೊಳ್ಳುವುದಕ್ಕೂ ಸಾಕಾದಷ್ಟು ಹಣವಿರಲಿಲ್ಲವೆಂದು ತೋರುವುದು. ಅತಿಸರಳವಾಗಿ ಅವನು ಜೀವಿಸುತ್ತಿರುವನು. ನಾಯಿ ಅವನನ್ನು ಅಣಕಿಸಬಹುದು. ಆದರೆ ವಿಜ್ಞಾನಿ "ನನ್ನ ಪ್ರಿಯ ನಾಯಿ, ನಿನ್ನ ಸುಖವೆಲ್ಲ ಇಂದ್ರಿಯದಲ್ಲಿದೆ. ಅದನ್ನು ನೀನು ಆನಂದಿಸುವೆ. ಅದಕ್ಕೆ ಮೀರಿದುದು ನಿನಗೇನೂಗೊತ್ತಿಲ್ಲ. ಆದರೆ ನನಗೆ ಇದು ಅತಿ ಸಂತೋಷದಾಯಕ. ನಿನ್ನದೃಷ್ಟಿಯಿಂದ ಸಂತೋಷ ಹುಡುಕುವುದಕ್ಕೆ ನಿನಗೆ ಅಧಿಕಾರವಿದ್ದರೆ, ನನಗೂ ಹಾಗೆಯೇ ಇರುವುದು" ಎನ್ನುವನು. ನಾವು ಮಾಡುವ ತಪ್ಪೆ ಎಲ್ಲರನ್ನೂ ನಮ್ಮ ದೃಷ್ಟಿಗೆ ಎಳೆಯಲೆತ್ನಿಸುವುದು. ನಾವು ಪ್ರಪಂಚವನ್ನೆಲ್ಲ ನಮ್ಮ ದೃಷ್ಟಿಯಿಂದ ಪರೀಕ್ಷಿಸುವೆವು. ನಿಮಗೆ ಹಳೆಯ ಇಂದ್ರಿಯ ವಿಷಯಗಳು ಪರಮ ಸುಖವನ್ನು ಕೊಡಬಹುದು. ಆದರೆ ನನ್ನ ಸುಖ ನಿಮ್ಮದರಂತೆಯೇ ಇರಬೇಕಾಗಿಲ್ಲ. ನೀವು ನಿಮ್ಮದೇ ಸರಿ ಎಂದರೆ ನಾನು ಒಪ್ಪುವುದಿಲ್ಲ. ಅದೇ ಪ್ರಾಪಂಚಿಕ ಉಪಯೋಗ ದೃಷ್ಟಿಗೂ ಧಾರ್ಮಿಕನಿಗೂ ಇರುವ ವ್ಯತ್ಯಾಸ. ಮೊದಲನೆಯವನು "ನೋಡಿ ನಾನೆಷ್ಟು ಸುಖಿಯಾಗಿರುವೆನು. ನನಗೆ ಹಣ ಸಿಕ್ಕುವುದು. ಧರ್ಮದಿಂದ ತಲೆಕೆಡಿಸಿಕೊಳ್ಳುವುದಿಲ್ಲ. ಅದು ನಮಗೆ ದುಸ್ಸಾಧ್ಯ. ಅದಿಲ್ಲದೆ ನಾನು ಸುಖಿಯಾಗಿರುವೆನು" ಎನ್ನುವನು. ಎಷ್ಟೋ ಅಷ್ಟು

ಒಳ್ಳೆಯದು. ಪ್ರಯೋಜನದೃಷ್ಟಿಯವರಿಗೆಲ್ಲಾ ಒಳ್ಳೆಯದು. ಆದರೆ ಈ ಪ್ರಪಂಚ ಭಯಾನಕ. ತನ್ನ ಸಹೋದ್ಯೋಗಿಗಳಿಗೆ ತೊಂದರೆಕೊಡದೆ ಯಾವುದಾದರೂ ರೀತಿಯಲ್ಲಿ ಸುಖವನ್ನು ಪಡೆಯಲು ಸಾಧ್ಯವಾದರೆ ದೇವರು ಅವನನ್ನು ಆಶೀರ್ವದಿಸಲಿ. ಆದರೆ ಅವನು ನನ್ನ ಹತ್ತಿರ ಬಂದು "ನೀನೂ ಹೀಗೆಯೇಮಾಡಬೇಕು ಇಲ್ಲದಿದ್ದರೆ ಹುಚ್ಚ" ಎಂದರೆ ನಾನು "ಇಲ್ಲ ನೀನು ತಪ್ಪುತಿಳಿದುಕೋಡಿರುವೆ. ಯಾವುದು ನಿನಗೆ ಸುಖದಾಯಕವೊ ಅದರ ಮೇಲೆ ನನಗೆ ಸ್ವಲ್ಪವೂ ಇಷ್ಟವಿಲ್ಲ. ಸ್ವಲ್ಪಹಣಕ್ಕಾಗಿ ಜೀವನ ವ್ಯರ್ಥಮಾಡಿದರೆ ಅದರಿಂದ ಏನೂ ಪ್ರಯೋಜನವಿಲ್ಲ. ನಾನು, ಸಾಯಲಿಚ್ಛಿಸುವೆನು" ಎನ್ನುವೆನು. ಆಧ್ಯಾತ್ಮಿಕ ವ್ಯಕ್ತಿ ಕೊಡುವ ಉತ್ತರ ಇದು. ಯಾರು ಕೆಳಗಿರುವ ವಿಷಯಗಳನ್ನು ಪೂರೈಸಿರುವರೋ ಅವರಿಗೆ ಮಾತ್ರ ಧರ್ಮಸಾಧ್ಯ. ನಮಗೇ ಸ್ವಂತ ಅನುಭವ ಬೇಕು, ನಾವು ಅದನ್ನು ಪೂರ್ತಿ ಅನುಭವಿಸಲೇ ಬೇಕು. ನಾವು ಇದನ್ನು ಪೂರೈಸಿದ ಮೇಲೆ ಮಾತ್ರ ನಮಗೆ ಬೇರೊಂದು ಪ್ರಪಂಚ ತೆರೆಯುವುದು.

ಇಂದ್ರಿಯಸುಖಭೋಗ ಕೆಲವುವೇಳೆ ಬೇರೆ ರೂಪನ್ನು ತಾಳುವುದು. ಅದು ಬಹಳ ಅಪಾಯಕರ, ಪ್ರಲೋಭನಕಾರಿ. ಪ್ರತಿಯೊಂದು ಧರ್ಮದಲ್ಲಿಯೂ ಪುರಾತನಕಾಲದಿಂದಲೂ ನೀವು ಈ ವಿಷಯವನ್ನು ಕೇಳುತ್ತಿರುವಿರಿ. ಅದೇ ಪ್ರಪಂಚದಲ್ಲಿ ಒಂದು ಸಮಯ ಬರುವುದು. ಆಗ ಪ್ರಪಂಚದ ದುಃಖವೆಲ್ಲಾ ಹೋಗಿ ಕೇವಲ ಸುಖ ಮತ್ತು ಒಳ್ಳೆಯದು ಮಾತ್ರ ನಿಲ್ಲುವುದು. ಈ ಪ್ರಪಂಚವೇ ಆಗ ಸ್ವರ್ಗವಾಗುವುದೆನ್ನುವರು. ಇದನ್ನು ನಾನು ನಂಬುವುದಿಲ್ಲ. ಪ್ರಪಂಚ ಯಾವಾಗಲೂ ಹೀಗೆಯೇ ಇರುವುದು. ಇದನ್ನು ಹೇಳುವುದು ಬಹಳ ಕ್ರೂರವೇ ಸರಿ. ಆದರೂ ಬೇರೆ ಮಾರ್ಗವೇ ಇಲ್ಲ. ದುಃಖ ದೇಹದಲ್ಲಿರುವ ನಿತ್ಯವಾತರೋಗದಂತೆ. ಒಂದು ಕಡೆಯಿಂದ ಓಡಿಸಿದರೆ ಮತ್ತೊಂದು ಕಡೆಗೆ ಹೋಗುವುದು. ನೀವು ಏನು ಮಾಡಿದರೂ ಅದು ಅಲ್ಲೆ ಇರುವುದು. ಹಿಂದಿನಕಾಲದಲ್ಲಿ ಜನ ಕಾಡಿನಲ್ಲಿ ವಾಸಿಸುತ್ತಿದ್ದರು. ಒಬ್ಬರು ಇನ್ನೊಬ್ಬರನ್ನು ತಿನ್ನುತ್ತಿದ್ದರು. ಈಗಿನಕಾಲದಲ್ಲಿ, ತಿನ್ನುವುದಿಲ್ಲ. ಆದರೆ ಅವರಿಗೆ ಮೋಸಮಾಡುವರು. ದೇಶ ನಗರಗಳೆಲ್ಲ ಮೋಸದಿಂದ ನಾಶವಾಗುತ್ತಿವೆ. ಇದು ನಾವು ಮುಂದುವರಿದ ಚಿಹ್ನೆಯಲ್ಲ. ನೀವು ಯಾವುದನ್ನು ಪ್ರಗತಿ ಎನ್ನುವಿರೊ ಅದು ಆಸೆಯ ಅತಿ ಅಲ್ಲದೆ ಮತ್ತೇನೂ ಇಲ್ಲವೆಂದು ಕಾಣುವುದು. ಒಂದು ಅತಿ ಸ್ಪಷ್ಟವಾಗಿ ಕಾಣುವುದೇ ಇದು: ಆಸೆಯು ದುಃಖಕ್ಕೆಲ್ಲಾ ಕಾರಣ. ಇದು

ಭಿಕ್ಷುಕನ ಸ್ಥಿತಿ, ಅವನು ಯಾವಾಗಲೂ ಏನಾದರೂ ಬೇಡುತ್ತಿರುವನು. ವಸ್ತುವನ್ನು ಹೊಂದದೆ ಯಾವುದನ್ನೂ ನೋಡಲಾರ. ಯಾವಾಗಲೂ ಹೆಚ್ಚು ಹೆಚ್ಚಾಗಿ ಆಶಿಸುತ್ತಿರುವನು. ನಮ್ಮ ಆಸೆಯನ್ನು ತೃಪ್ತಿಪಡಿಸುವ ಶಕ್ತಿ ಒಂದು ಪ್ರಮಾಣದಲ್ಲಿ ವೃದ್ಧಿಯಾದರೆ ಆಸೆಯ ಶಕ್ತಿ ಎರಡು ಪ್ರಮಾಣದಲ್ಲಿ ವೃದ್ಧಿಯಾಗುವುದು. ಈ ಪ್ರಪಂಚದಲ್ಲಿ ಇರುವ ಸುಖ ದುಃಖಗಳ ಮೊತ್ತ ಯಾವಾಗಲೂ ಸಮಾರು ಒಂದೇ ಸಮನಾಗಿರುವುದು. ಸಾಗರದಲ್ಲಿ ಒಂದು ಅಲೆ ಎದ್ದರೆ ಮತ್ತೆಲ್ಲಿಯೋ ಇಳಿಯುವುದು. ಒಬ್ಬನಿಗೆ ಸುಖ ಬಂದರೆ ಮತ್ತೊಬ್ಬನಿಗೆ ದುಃಖ, ಅಥವಾ ಮತ್ತೊಂದು ಪ್ರಾಣಿಗೆ ಹಾನಿ. ಮನುಷ್ಯರ ಸಂಖ್ಯೆ ಹೆಚ್ಚುತ್ತಿದೆ. ಪ್ರಾಣಿಗಳ ಸಂಖ್ಯೆ ಕುಗ್ಗುತ್ತಿದೆ. ನಾವು ಅವುಗಳನ್ನು ಕೊಂದು ಅವುಗಳ ಸ್ಥಳವನ್ನು ಅಪಹರಿಸುತ್ತಿರುವೆವು. ಎಲ್ಲ ವಿಧದಿಂದಲೂ ಅವುಗಳ ಆಹಾರವನ್ನು ದೋಚುತ್ತಿರುವೆವು. ಸು ಖ ಹೆ ಚ್ಚಾ ಗು ತ್ತಿ ದೆ ಎಂದು ನಾವು ಹೇಗೆ ಹೇಳುವುದು ? ಬಲಾಢ್ಯ ಜನಾಂಗ ದುರ್ಬಲ ಜನಾಂಗವನ್ನು ಆಹುತಿ ತೆಗೆದುಕೊಳ್ಳುವುದು. ಆದರೆ ಆ ಬಲಾಢ್ಯಜನಾಂಗ ಬಹಳ ಸುಖವಾಗಿ ರುವುದೆಂದು ಭಾವಿಸುವಿರೇನು? ಇಲ್ಲ, ಒಬ್ಬರು ಮತ್ತೊಬ್ಬರನ್ನು ಕೊಲ್ಲುವರು. ವ್ಯವಹಾರ ದೃಷ್ಟಿಯಲ್ಲಿ ಈ ಪ್ರಪಂಚ ಹೇಗೆ ಸ್ವರ್ಗವಾಗಬಲ್ಲದೊ ನನಗೆ ತಿಳಿಯದು. ಸತ್ಯಾಂಶ ಇದಕ್ಕೆ ವಿರೋಧವಾಗಿದೆ. ಊಹೆಯ ದೃಷ್ಟಿಯಿಂದಲೂ ಇದು ಸಾಧ್ಯವಿಲ್ಲವೆಂದು ತೋರುವುದು.

ಪೂರ್ಣತೆ ಯಾವಾಗಲೂ ಅನಂತವಾದುದು. ನಾವಾಗಲೇ ಈ ಅನಂತ, ನಾವು ಇದನ್ನು ವ್ಯಕ್ತಗೊಳಿಸಲು ಯತ್ನಿಸುತ್ತಿರುವೆವು. ನೀನು ನಾನು ಮತ್ತೆಲ್ಲರೂ ಇದನ್ನು ವ್ಯಕ್ತಗೊಳಿಸಲು ಪ್ರಯತ್ನಿಸುತ್ತಿರುವೆವು. ಇಲ್ಲಿಯವರೆಗೆ ಇದೇನೊ ಸರಿ. ಇದರ ಆಧಾರದ ಮೇಲೆ ಕೆಲವು ಜರ್ಮನಿಯ ತಾತ್ತ್ವಿಕರು ಒಂದು ವಿಚಿತ್ರ ಸಿದ್ಧಾಂತವನ್ನು ತಂದಿರುವರು. ಅದೇ ಈ ಆವಿರ್ಭಾವನೆ ಕ್ರಮೇಣ ಉತ್ತಮವಾಗುತ್ತ ಬರುವುದು. ನಾವು ಪರಿಪೂರ್ಣರಾಗಿ ಪರಿಶುದ್ಧಾತ್ಮರಾಗುವವರೆಗೆ ಇದೂ ಪೂರ್ಣವಾಗುತ್ತ ಬರುವುದು. ಪೂರ್ಣ ಆವಿರ್ಭಾವನೆ ಎಂದರೆ ಅರ್ಥವೇನು ? ಪರಿಪೂರ್ಣ ಎಂದರೆ ಅನಂತ. ಆವಿರ್ಭಾವನೆ ಎಂದರೆ ಅಂತವುಳ್ಳದ್ದು. ಅಂದರೆ ನಾವು ಅನಂತ, ಸಾಂತವಾಗುವೆವು ಎಂದಾಗುವುದು. ಇದು ಪರಸ್ಪರ ವಿರೋಧ. ಮಕ್ಕಳಿಗೆ ಇಂತಹ ಸಿದ್ಧಾಂತ ಸಂತೋಷವಾಗಬಹುದು. ಆದರೆ ಅವರ ಮನಸ್ಸನ್ನು ಸುಳ್ಳಿನ ವಿಷದಿಂದ ಹಾಳುಮಾಡುತ್ತಿರುವೆವು. ಇದು

ಧರ್ಮಕ್ಕೆ ಹಾನಿಕರ. ಈ ಪ್ರಪಂಚ ಒಂದು ಅಧೋಗತಿಗೆ ಬಂದಿದೆ. ಮಾನವ ದೇವರ ಒಂದು ಪತನ ಸ್ಥಿತಿ. ಆದಿಮಾನವ ಪತಿತನಾದನು. ಮನುಷ್ಯ ತನ್ನ ಹಿಂದಿನ ಸ್ಥಿತಿಯ ಒಂದು ಪತಿತಾವಸ್ಥೆ ಎಂದು ಸಾರದ ಧರ್ಮವಿಲ್ಲ. ನಾವು ಪ್ರಾಣಿಗಳ ಅಧೋಸ್ಥಿತಿಗೆ ಇಳಿದಿರುವೆವು. ಈ ಬಂಧನದಿಂದ ಪಾರಾಗಲು ನಾವೀಗ ಮೇಲಕ್ಕೆ ಏಳುತ್ತಿರುವೆವು. ಆದರೆ ಇಲ್ಲಿ ಪರಿಪೂರ್ಣತೆಯನ್ನು ಸಂಪೂರ್ಣ ವ್ಯಕ್ತಗೊಳಿಸಲಾರೆವು. ನಾವು ಬೇಕಾದಷ್ಟು ಪ್ರಯತ್ನ ಪಡುವೆವು, ಆದರೆ ಎಲ್ಲಿಯವರೆಗೂ ನಾವು ಇಂದ್ರಿಯಗಳ ಪರಿಮಿತಿಯಲ್ಲಿರುವೆವೊ ಅಲ್ಲಿಯವರೆಗೆ ಪರಿಪೂರ್ಣರಾಗಲು ಸಾಧ್ಯವಿಲ್ಲವೆಂಬುದು ಗೊತ್ತಾಗುವುದು. ಆಗ ನಮ್ಮ ಹಿಂದಿನ ಅನಂತ ಸ್ಥಿತಿಗೆ ಹಿಂತಿರುಗಬೇಕಾಗುವುದು.

ಇದೇ ತ್ಯಾಗ. ನಾವು ಬಂದದಾರಿಯಲ್ಲೆ ಹಿಂತಿರುಗಿ ಹೋಗಿ ಕಷ್ಟದಿಂದ ಪಾರಾಗಬೇಕಾಗಿದೆ. ಆಗ ನೀತಿ ದಯೆ ಮುಂತಾದುವು ಪ್ರಾರಂಭವಾಗುವುದು. ಎಲ್ಲ ನೀತಿ ನಿಯಮಗಳ ಪಲ್ಲವಿ ಏನು? "ನಾನಲ್ಲ, ನೀನು." ನಾನೆಂಬುದು ಹಿಂದಿರುವ ಅನಂತತೆಯಿಂದ ಜನಿಸಿದೆ. ಅದು ಬಾಹ್ಯ ಜಗತ್ತಿನಲ್ಲಿ ವ್ಯಕ್ತವಾಗಲು ಯತ್ನಿಸುತ್ತಿದೆ. ಈ ಅಲ್ಪ ಅಹಂಕಾರವೇ ಆ ಪ್ರಯತ್ನ ಫಲ. ಇದು ಹಿಂತಿರುಗಿಹೋಗಿ ತನ್ನ ಸ್ವಭಾವವಾದ ಅನಂತದಲ್ಲಿ ಲೀನವಾಗಬೇಕು. ಪ್ರತಿಸಲಿ "ನಾನಲ್ಲ ಸಹೋದರನೆ ನೀನು" ಎಂದು ಹೇಳುವಾಗಲೂ ನೀನು ಹಿಂತಿರುಗಿ ಹೋಗಲು ಯತ್ನಿಸುತ್ತಿರುವೆ. "ನೀನಲ್ಲ, ನಾನು" ಎಂದು ಪ್ರತಿಸಲಿ ಹೇಳಿದಾಗಲೂ ಪಂಚೇಂದ್ರಿಯಗಳ ಮೂಲಕ ಅನಂತವನ್ನು ವ್ಯಕ್ತಪಡಿಸುವ ತಪ್ಪುಹಾದಿಯನ್ನು ಹಿಡಿದಿರುವೆ. ಇದರಿಂದಲೇ ಪ್ರಪಂಚದಲ್ಲಿ ಹೋರಾಟ, ದ್ವೇಷಗಳು. ಸ್ವಲ್ಪಕಾಲದ ಮೇಲೆ ತ್ಯಾಗ, ನಿತ್ಯವೈರಾಗ್ಯ ಬಂದೇ ಬರಬೇಕು. ಈ ಅಲ್ಪ ನಾನೆಂಬುದು ಸತ್ತು ನಾಶವಾಯಿತು. ಈ ಕ್ಷುದ್ರಬಾಳುವೆಗಾಗಿ ಏಕಿಷ್ಟು ಉತ್ಸಾಹ? ಇಲ್ಲೊ ಅಥವಾ ಬೇರೆ ಲೋಕದಲ್ಲೊ ಬಾಳಿ ಭೋಗಿಸಬೇಕೆಂಬ ಭ್ರಾಂತಿ ಆಸೆಯೆಲ್ಲ ಮೃತ್ಯುವನ್ನು ತರುವುದು. ನಾವು ಪ್ರಾಣಿಗಳಿಂದ ವಿಕಾಸವಾಗಿದ್ದರೆ ಪ್ರಾಣಿಗಳು ಕೂಡ ಅಧೋಗತಿಗೆ ಇಳಿದ ಮನುಷ್ಯರಾಗಬೇಕು. ಇದು ಹೀಗಲ್ಲ ಎಂದು ನಿಮಗೆ ಹೇಗೆ ಗೊತ್ತು? ನಿಮ್ಮ ವಿಕಾಸವಾದಕ್ಕೆ ಆಧಾರ ಇದು: ಅತಿ ಕೀಳು ಮೃಗದಿಂದ ಶ್ರೇಷ್ಠತಮಮನುಷ್ಯನವರೆಗೆ ನೀವು ಕ್ರಮೇಣ ವಿಕಾಸ ವಾಗುತ್ತಿರುವ ದೇಹವನ್ನು ನೋಡುವಿರಿ. ಇದರಿಂದ ನೀವು ಯಾವಾಗಲೂ

ಕೀಳು ಮೇಲಾಗುತ್ತಿದೆ ಮೇಲು ಕೀಳಾಗುತ್ತಿಲ್ಲ ಎಂದು ಹೇಗೆ ಊಹಿಸುತ್ತೀರಿ? ಈ ವಾದ ಸರಣಿ ಎರಡಕ್ಕೂ ಅನ್ವಯಿಸುವುದು. ಅದರಲ್ಲಿ ಏನಾದರೂ ಸತ್ಯವಿದ್ದರೆ ಅದೇ ಈ ಕ್ರಮ ಕೆಲವುವೇಳೆ ಮೇಲೆ ಹೋಗುತ್ತಲೂ ಕೆಲವು ವೇಳೆ ಕೆಳಗೆ ಬರುತ್ತಲೂ ಇದೆ ಎನ್ನುವುದು. ನಿಮಗೆ ಒಳಮುಖವಾಗಿ ಯಾವುದೂ ಇಲ್ಲದಿದ್ದರೆ ಹೊರಮುಖವಾಗಿ ಹೇಗೆ ವಿಕಾಸವಾಗುವುದು? ಉತ್ತಮ ಜೀವನಕ್ಕೆ ನಾವು ನಡೆಸುವ ಹೋರಾಟವೇ ನಾವು ಹಿಂದೆ ಉಚ್ಚಸ್ಥಿತಿಯಲ್ಲಿದ್ದೆವೆಂಬುದನ್ನು ತೋರುವುದು. ಅದು ಹೀಗೆಯೇ ಇದ್ದಿರಬೇಕು. ವಿವರಗಳು ಸ್ವಲ್ಪ ಬದಲಾಯಿಸ ಬಹುದು. ಕ್ರೈಸ್ತ ಬುದ್ಧ ವೇದಾಂತಿಗಳೆಲ್ಲಾ ಸಾರುವ "ನಾವೆಲ್ಲ ಒಂದಲ್ಲ ಒಂದು ದಿನ ಪರಿಪೂರ್ಣರಾಗಬೇಕು" ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ನಮ್ಮ ಇಂದಿನ ಅಪೂರ್ಣತೆಯನ್ನು ತೊರೆಯಬೇಕು. ಈ ಪ್ರಪಂಚದಲ್ಲಿ ಸತ್ಯವಿಲ್ಲ, ಹೆಚ್ಚು ಎಂದರೆ ಇದು ಸತ್ಯಛಾಯೆ, ಭಯಾನಕ ವಿಕೃತಿ ದೇಹ. ನಾವು ಸತ್ಯಕ್ಕೆ ಹೋಗಬೇಕಾಗಿದೆ. ತ್ಯಾಗ ಅಲ್ಲಿಗೆ ನಮ್ಮನ್ನು ಒಯ್ಯುವುದು. ತ್ಯಾಗವೇ ನಮ್ಮ ಸತ್ಯ ಜೀವನದ ಆಧಾರ. ನಮ್ಮ ಅಲ್ಪ ಅಹಂಕಾರವನ್ನು ಯೋಚಿಸಿದಾಗ ಮಾತ್ರ ನಾವು ಸುಖ ಸಂತೋಷವನ್ನು ನಿಜವಾಗಿ ಅನುಭವಿಸುವೆವು. ಬೇರೆಯಾದ ಅಲ್ಪಜೀವನ ನಾಶವಾಗಬೇಕು. ಆಗ ಮಾತ್ರ ನಾವು ಸತ್ಯದಲ್ಲಿರುವೆವು, ಸತ್ಯವೇ ದೇವರು, ಅವನೇ ನಮ್ಮ ನಿಜವಾದ ಸ್ವಭಾವ, ಅವನಾವಾಗಲೂ ನಮ್ಮಲ್ಲಿ ನಮ್ಮ ಮೂಲಕ ಇರುವನೆಂಬುದು ಗೊತ್ತಾಗುವುದು. ನಾವು ಅವನಲ್ಲಿ ಬಾಳುವ, ಅವನಲ್ಲಿ ನಿಲ್ಲುವ. ನಮ್ಮ ಬಾಳುವೆಯ ಆನಂದ ಸ್ಥಿತಿ ಇದೊಂದೆ: ಆಧ್ಯಾತ್ಮಿಕ ತಳಹದಿಯ ಮೇಲೆ ನಿಂತ ಜೀವನವೇ ನಿಜವಾದ ಜೀವನ. ನಾವೆಲ್ಲ ಈ ಸಾಕ್ಷಾತ್ಕಾರವನ್ನು ಪಡೆಯಲು ಯತ್ನಿಸುವ.

---

# ವೈವಿಧ್ಯತೆಯಲ್ಲಿ ಐಕ್ಯತೆ

"ಸ್ವಯಂಭೂ ಇಂದ್ರಿಯಗಳನ್ನು ಬಹಿರ್ಮುಖ ಮಾಡಿರುವುದರಿಂದ ಮನುಷ್ಯ ಹೊರಗೆ ನೋಡುವನು. ಅಂತರ್ಮುಖನಾಗುವುದಿಲ್ಲ. ಅಮೃತತ್ವವನ್ನು ಇಚ್ಛಿಸಿದ ಧೀರನೊಬ್ಬನು ಅಂತರ್ಮುಖನಾಗಿ ತನ್ನಲ್ಲಿ ಆತ್ಮವನ್ನು ದರ್ಶಿಸಿದನು." ನಾನು ಆಗಲೆ ಹೇಳಿದಂತೆ ವೇದಗಳಲ್ಲಿ ಬರುವ ಪ್ರಥಮ ಪ್ರಶ್ನೆಯೇ ಬಾಹ್ಯ ಜಗತ್ತನ್ನು ಕುರಿತದ್ದು. ಅನಂತರ ವಸ್ತುವಿನ ಸತ್ಯ ಬಾಹ್ಯಜಗತ್ತಿನಲ್ಲಿ ದೊರೆಯುವುದಿಲ್ಲ ಎಂಬ ಭಾವನೆ ಬರುವುದು. ಹೊರಗೆ ನೋಡುವುದರಿಂದ ಅಲ್ಲ. ಅಕ್ಷರಶಃ ವಿವರಿಸಿರುವಂತೆ ಅಂತರ್ಮುಖದಿಂದ ಮಾತ್ರ ಸಾಧ್ಯ. ಆತ್ಮನಿಗೆ ಇಲ್ಲಿ ಉಪಯೋಗಿಸಿರುವ ಪದ ಬಹಳ ಮುಖ್ಯವಾಗಿದೆ. ಅವನೇ ಗುಹೆಯ ಅಂತರಾಳಕ್ಕೆ ಹೋಗಿರುವನು. ನಮ್ಮ ಅಂತರತಮ ಸತ್ಯ, ಹೃದಯ ಕೇಂದ್ರ, ಅಲ್ಲಿಂದ ಸರ್ವವೂ ಹೊರ ಬರುವಂತೆ ಇರುವುದು. ಕೇಂದ್ರದಲ್ಲಿರುವನೆ ಭಾನು; ನಮಗಿರುವ ದೇಹ ಮನಸ್ಸು ಇಂದ್ರಿಯಗಳೆಲ್ಲ ಹೊರಗೆ ಹೋಗುತ್ತಿರುವ ಕಿರಣಗಳಿಗೆ ದ್ವಾರದಂತಿದೆ.

ಪರಾಚಃ ಕಾಮಾನನುಯಂತಿ ಬಾಲಾಸ್ತೇ ಮೃತ್ಯೋರ್ಯಾಂತಿ
ವಿತತಸ್ಯ ಪಾಶಮ್ ।
ಅಥ ಧೀರಾಃ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇ
ಷ್ವಿಹ ನ ಪ್ರಾರ್ಥಯನ್ತೇ ॥

ಬಾಲಬುದ್ಧಿಯುಳ್ಳವರು, ಮಂದರು ಹೊರಗಿರುವ ಆಸೆಯನ್ನು ಅನುಸರಿಸಿ ಹೋಗುವರು. ಮೃತ್ಯುಬಲೆಗೆ ಬೀಳುವರು. ಧೀರರು ಅಮೃತತ್ವವನ್ನು ತಿಳಿದವರು ನಶ್ವರದಲ್ಲಿ ಶಾಶ್ವತನ್ನು ಎಂದಿಗೂ ತಿಳಿಯರು. ಸಾಂತ ವಸ್ತುಗಳಿಂದ ಕೂಡಿದ ಬಾಹ್ಯ ಜಗತ್ತಿನಲ್ಲಿ ಅನಂತವನ್ನು ಅರಸುವುದಕ್ಕೆ ಸಾಧ್ಯವಿಲ್ಲ ಎಂಬ ಭಾವವನ್ನು ಇನ್ನೂ ಸ್ಪಷ್ಟಮಾಡಿರುವರು. ಅನಂತದಲ್ಲಿ ಮಾತ್ರ ಅನಂತವನ್ನು ಹುಡುಕಬೇಕು. ನಮ್ಮ ಅಂತರಾಳದಲ್ಲಿರುವುದು ಮಾತ್ರ ಅನಂತ. ಅದೇ ನಮ್ಮ ಆತ್ಮ. ದೇಹವಾಗಲಿ, ಮನಸ್ಸಾಗಲಿ, ಆಲೋಚನೆಯಾಗಲಿ, ಅಥವಾ ನಮ್ಮ ಸುತ್ತಲೂ ಇರುವ ಜಗತ್ತಾಗಲಿ ಅನಂತವಲ್ಲ. ಇವೆಲ್ಲವೂ ಸೇರಿರುವ ಆತ್ಮನೆ ನಿತ್ಯಸಾಕ್ಷಿ. ಯಾರು ಅಂತರಾಳದಲ್ಲಿ ಜಾಗ್ರತನಾಗಿರುವನೊ ಅಂತಹವನೊಬ್ಬನೇ ಅನಂತ. ಈ ವಿಶ್ವಕ್ಕೆ ಅನಂತ ಕಾರಣವನ್ನು ಅರಸಲು ನಾವು ಅಲ್ಲಿಗೆ ಹೋಗಬೇಕು.

ಅನಂತಾತ್ಮನಾಗಿ ಮಾತ್ರ ನಮಗೆ ಇದು ದೊರೆಯಬಹುದು." ಯಾವುದು ಇಲ್ಲಿದೆ ಅದು ಅಲ್ಲಿಯೂ ಇದೆ. ಅಲ್ಲಿರುವುದೂ ಇಲ್ಲಿದೆ, ಹಲವನ್ನು ಯಾರು ಇಲ್ಲಿ ನೋಡಿರುವರೊ ಅವರು ಪುನಃ ಪುನಃ ಮೃತ್ಯುವಶರಾಗುವರು." ಮೊದಲು ಅವರು ಸ್ವರ್ಗವನ್ನು ಇಚ್ಛಿಸುತ್ತಿದ್ದರೆಂಬುದನ್ನು ನೋಡಿದೆವು. ಹಿಂದಿನ ಆರ್ಯರಿಗೆ ಸುತ್ತಲೂ ಇರುವ ಪ್ರಪಂಚದಿಂದ ಅತೃಪ್ತಿಯಾದಾಗ, ಸತ್ತಮೇಲೆ ಎಲ್ಲ ಸುಖಮಯವಾದ ದುಃಖವೇ ಇಲ್ಲದ ಒಂದು ಲೋಕಕ್ಕೆ ಹೋಗುತ್ತೇವೆ ಎಂದು ಭಾವಿಸಿದರು. ಇದನ್ನೇ ತೀವ್ರಮಾಡಿ ಸ್ವರ್ಗವೆಂದು ಕರೆದರು. ಅಲ್ಲಿ ಯಾವಾಗಲೂ ಅವರಿಗೆ ಸಂತೋಷವೆ; ದೇಹ ಮನಸ್ಸು ದೃಢವಾಗಿ ಅಲ್ಲಿ ತಮ್ಮ ಪಿತೃಗಳೊಡನೆ ಜೀವಿಸುವರು. ಆದರೆ ತತ್ತ್ವ ಉದಿಸಿದಾಗ ಇದು ಅಸಾಧ್ಯ, ಅಸಂಬದ್ಧ ಎಂದು ಭಾವಿಸಿದರು. ದೇಶದಲ್ಲಿ (in space) ಅನಂತವೆಂಬ ಭಾವನೆಯ ಅಸಂಬದ್ಧ. ಒಂದು ಸ್ಥಳ, ಕಾಲದಲ್ಲಿ ಮೊದಲಾಗಿ ಕಾಲದಲ್ಲಿ ಇರಬೇಕಾಗುವುದು. ಆದ ಕಾರಣವೆ ಅವರು ಸ್ವರ್ಗ ಭಾವನೆಯನ್ನು ತ್ಯಜಿಸಬೇಕಾಯಿತು. ಸ್ವರ್ಗ ದೇವತೆಗಳು ಒಂದು ಕಾಲದಲ್ಲಿ ಮಾನವರಾಗಿದ್ದು ಸತ್ಕರ್ಮಗಳಿಂದ ದೇವತೆಗಳಾದರೆಂಬುದನ್ನು ಕಂಡುಹಿಡಿದರು. ದೇವತೆಗಳೆಂದರೆ ಬೇರೆ ಬೇರೆ ಅಧಿಕಾರ ಅಂತಸ್ತು. ವೇದಗಳಲ್ಲಿ ಬರುವ ಯಾವ ದೇವತೆಗಳೂ ಶಾಶ್ವತವಲ್ಲ.

ಇಂದ್ರ ವರುಣ ಎಂಬುದು ಕೆಲವು ವ್ಯಕ್ತಿ ಹೆಸರಲ್ಲ. ಇವೆಲ್ಲ ಆಳುವ ಒಂದು ಅಧಿಕಾರದ ಹೆಸರು. ಹಿಂದೆ ಇದ್ದ ಇಂದ್ರ ಈಗ ಇರುವ ಇಂದ್ರನಲ್ಲ. ಅಂದಿನ ಇಂದ್ರ ಮಾಯವಾದ. ಭೂಮಿಯಿಂದ ಮತ್ತೊಬ್ಬ ಹೋಗಿ ಆ ಸ್ಥಳವನ್ನು ಆಕ್ರಮಿಸಿರುವನು. ಇದರಂತೆಯೇ ಎಲ್ಲಾ ದೇವತೆಗಳೂಕೂಡ. ಮಾನವ ಜೀವಿಗಳು ದೇವತೆಗಳಾಗಿ ಕ್ರಮೇಣ ಆಕ್ರಮಿಸುವ ಕೆಲವು ಅಧಿಕಾರಗಳು ಅವು. ಅವರು ಕೂಡ ಕಾಲವಾಗುವರು. ಹಳೆಯ ಋಗ್ವೇದದಲ್ಲಿ ಈ ದೇವತೆಗಳನ್ನು ಅಮೃತರು ಎಂದು ಕರೆಯುವರು. ಆದರೆ ಕ್ರಮೇಣ ಇದನ್ನು ಸಂಪೂರ್ಣ ತೊರೆಯುವರು. ಏಕೆಂದರೆ ಕಾಲದೇಶಗಳಾಚೆ ಇರುವ ಅಮೃತತತ್ತ್ವವನ್ನು ಕಾಯಕ ರೂಪು ಎಷ್ಟೇ ಸೂಕ್ಷ್ಮವಾಗಿದ್ದರೂ ಅದಕ್ಕೆ ಅನ್ವಯಿಸುವುದಕ್ಕೆ ಆಗುವುದಿಲ್ಲ. ಅದು ಎಷ್ಟೇ ಸೂಕ್ಷ್ಮವಾಗಿದ್ದರೂ, ಅದಕ್ಕೆ ಕಾಲದೇಶದಲ್ಲಿ ಒಂದು ಆದಿ ಇರಬೇಕು. ಏಕೆಂದರೆ ರೂಪವಾಗುವುದು ದೇಶದ ಎಲ್ಲೆಯೊಳಗೆ ಇದೆ. ಅಂತರವಿಲ್ಲದೆ ಆಕಾರವನ್ನು ಯೋಚಿಸಲು

ಯತ್ನಿಸಿ. ಇದು ಅಸಾಧ್ಯ. ರೂಪವಾಗುವುದಕ್ಕೆ ಆಕಾಶವೂ ಬಂದು ಸೇರಿದೆ. ಇದು ಅನವರತ ಬದಲಾಯಿಸುತ್ತಿದೆ. ಕಾಲದೇಶಗಳು ಮಾಯೆಯಲ್ಲಿವೆ. ಇಲ್ಲಿರುವುದೇ ಅಲ್ಲಿರುವುದು ಎಂಬ ಭಾವನೆಯಲ್ಲಿ ಇದನ್ನು ವ್ಯಕ್ತಗೊಳಿಸಿರುವರು. ಅಲ್ಲಿ ದೇವತೆಗಳಿದ್ದರೆ, ಇಲ್ಲಿ ಜಾರಿಯಲ್ಲಿರುವ ನಿಯಮಗಳಿಗೆ ಅವರೂ ಬದ್ಧರಾಗಲೆ ಬೇಕು. ಪುನಃ ಪುನಃ ಸೃಷ್ಟಿಪ್ರಳಯಗಳು ಎಲ್ಲ ನಿಯಮಗಳಲ್ಲಿಯೂ ಇವೆ. ಈ ನಿಯಮಗಳು ವಸ್ತುವಿಗೆ ಹಲವು ಆಕಾರಗಳನ್ನಿತ್ತು ಅನಂತರ ಧ್ವಂಸ ಮಾಡುತ್ತಿವೆ. ಹುಟ್ಟಿರುವುದೆಲ್ಲ ನಾಶವಾಗಲೆ ಬೇಕು. ಸ್ವರ್ಗವಿದ್ದರೆ ಇದೆ ನಿಯಮ ಅಲ್ಲಿಯೂ ಜಾರಿಯಲ್ಲಿರಬೇಕು.

ಈ ಪ್ರಪಂಚದಲ್ಲಿ ಎಲ್ಲಾ ಸುಖವನ್ನೂ ಛಾಯೆಯಂತೆ ದುಃಖ ಅನುಸರಿಸುತ್ತಿರುವುದನ್ನು ನೋಡುವೆವು. ಜೀವನಕ್ಕೆ ಮರಣ ಛಾಯೆ. ಅವೆರಡೂ ಒಟ್ಟಿಗೆಹೋಗಬೇಕು. ಅವು ಪರಸ್ಪರ ವಿರೋಧವಲ್ಲ, ಅವೆರಡೂ ಬೇರೆ ಸ್ಥಿತಿಯಲ್ಲ, ಅವೆರಡೂ ಎಂದರೆ ಜನನ ಮರಣ, ಸುಖ ದುಃಖ, ಒಳ್ಳೆಯದು ಕೆಟ್ಟದ್ದು ಎಲ್ಲಾ ಒಂದೇ ವಸ್ತುವಿನ ಬೇರೆ ಬೇರೆ ಸ್ಥಿತಿ. ಒಳ್ಳೆಯದು ಕೆಟ್ಟದ್ದು ಇವೆರಡೂ ಬೇರೆ ಬೇರೆ ಅವೆರಡೂ ನಿತ್ಯವಾಗಿರುವುವು ಎಂಬ ಭಾವನೆಯೇ ಅಸಂಬದ್ಧ. ಇವೆರಡೂ ಒಂದೇ ವಸ್ತುವಿನ ವಿಭಿನ್ನ ಆವಿರ್ಭಾವನೆ. ಒಮ್ಮೆ ಕೆಟ್ಟದರಂತೆ ತೋರುವುದು, ಒಮ್ಮೆ ಒಳ್ಳೆಯದರಂತೆ ತೋರುವುದು. ವಸ್ತುತಃ ವ್ಯತ್ಯಾಸವಿಲ್ಲ. ತರತಮದಲ್ಲಿ ಮಾತ್ರ ವ್ಯತ್ಯಾಸ, ತೀವ್ರತೆಯಲ್ಲಿ ಮಾತ್ರ ಒಂದಕ್ಕೂ ಮತ್ತೊಂದಕ್ಕೂ ವ್ಯತ್ಯಾಸ. ಒಂದೇ ಸ್ನಾಯುಜಾಲ ಒಳ್ಳೆ ಕೆಟ್ಟ ಸಂವೇದನೆಯನ್ನು ಒಯ್ಯುವುದು. ಸ್ನಾಯುಜಾಲಕ್ಕೆ ಅಪಾಯತಟ್ಟಿದರೆ ನಮಗೆ ಯಾವುದೂ ಬರುವುದಿಲ್ಲ. ನಮಗೆ ಒಂದು ನರ ನಿರ್ಜೀವವಾದರೆ ಅದರ ಮೂಲಕ ಬರುತ್ತಿದ್ದ ಸುಖವಾಗಲೀ, ಯಾತನೆಯಾಗಲಿ ಬರುವುದಿಲ್ಲ. ಅದೆಂದಿಗೂ ಎರಡಲ್ಲ ಒಂದು. ಪುನಃ ಒಂದೇ ವಸ್ತು ಕೆಲವು ಸಮಯದಲ್ಲಿ ಸುಖ ಕೆಲವು ಸಮಯದಲ್ಲಿ ದುಃಖವನ್ನು ಕೊಡುವುದು. ಒಂದೇದೃಶ್ಯ ಕೆಲವರಿಗೆ ಸುಖವನ್ನು ಕೆಲವರಿಗೆ ದುಃಖವನ್ನೂ ತರುವುದು. ಮಾಂಸಾಹಾರ ಮನುಷ್ಯನಿಗೆ ಸುಖದಾಯಕ. ಆದರೆ ಕೊಂದ ಪ್ರಾಣಿಗೆ ಯಾತನೆ. ಎಲ್ಲರಿಗೂ ಒಂದೇ ಸಮನಾಗಿ ಸುಖ ಕೊಡುವ ಯಾವುದೊಂದೂ ಪ್ರಪಂಚದಲ್ಲಿ ಇಲ್ಲ. ಕೆಲವರಿಗೆ ತೃಪ್ತಿ ಕೆಲವರಿಗೆ ಅತೃಪ್ತಿ. ಇದು ಹೀಗೆಯೇ ಎಂದೆಂದಿಗೂ ಇರುವುದು.

ಆದಕಾರಣವೆ ದ್ವಂದ್ವ ಅಸ್ತಿತ್ವವನ್ನು ಅಲ್ಲಗಳೆಯುವರು. ಇದರಿಂದ ಏನು ಬರುವುದು ? ಈ ಪ್ರಪಂಚದಲ್ಲಿ ಕೊನಗೆ ಎಲ್ಲಾ ಸುಖವೇ ಉಳಿಯುವುದು, ದುಃಖವೇ ಇರುವುದಿಲ್ಲ ಎಂಬುದು ಸಾಧ್ಯವಿಲ್ಲ ವೆಂಬುದನ್ನು ಕಳೆದ ಉಪನ್ಯಾಸದಲ್ಲಿ ಹೇಳಿದೆ. ನಿಮ್ಮಲ್ಲಿ ಕೆಲವರಿಗೆ ಇದರಿಂದ ನಿರಾಶೆಯಾಗಿರ ಬಹುದು, ಅಂಜಿಕೆಯಾಗಿರಬಹುದು. ಆದರೆ ವಿಧಿಯಿಲ್ಲ. ಸತ್ಯ ಬೇರೆ ಎಂದು ತೋರಿದರೆ ನನ್ನ ಅಭಿಪ್ರಾಯವನ್ನು ಬದಲಾಯಿಸಲು ನಾನು ಸಿದ್ಧನಾಗಿರುವೆನು. ಆದರೆ ಇದೇ ಸತ್ಯವೆಂದು ನಾನು ತಿಳಿಯುವೆನು. ಇದಕ್ಕೆ ವಿರೋಧವಾಗಿರುವುದೇ ಸತ್ಯವೆಂದು ಸಿದ್ಧಾಂತಮಾಡಿ ತೋರುವ ತನಕ ನಾನು ಹಾಗೆ ಹೇಳಲಾರೆ.

ನನ್ನ ಹೇಳಿಕೆಗೆ ವಿರೋಧವಾದ ವಾದವೇ, ತೋರಿಕೆಗೆ ತೃಪ್ತಿಕರವಾಗಿ ಕಾಣುವುದು. ಅದೇ ವಿಕಾಸವಾಗುತ್ತ ಹೋದರೆ ನಮ್ಮ ಸುತ್ತಲೂ ಇರುವ ದೋಷವೆಲ್ಲ ಕ್ರಮೇಣ ಕಡಿಮೆಯಾಗುತ್ತ ಹೋಗುವುದು. ಹೀಗೆಯೇ ಕೋಟ್ಯಂತರ ವರ್ಷಗಳು ನಡೆಯುತ್ತ ಇದ್ದರೆ ದೋಷವೆಲ್ಲ ಮಾಯವಾಗಿ ಒಳ್ಳೆಯದು ಮಾತ್ರ ಉಳಿಯುವ ಒಂದು ದಿನ ಬರುವುದೆಂಬುದು. ಇದು ತೋರಿಕೆಗೆ ಯುಕ್ತಿಬದ್ಧವಾಗಿರುವಂತಿದೆ. ಇದು ಸತ್ಯವಾದರೆ ದೇವರಿಗೆ ಧನ್ಯವಾದ! ಆದರೆ ಈ ವಾದದಲ್ಲಿ ಒಂದು ದೋಷವಿದೆ. ಅದೇ ಇದು: ಒಳ್ಳೆಯದು ಕೆಟ್ಟದ್ದು ಎಂಬ ಎರಡೂ ಕೂಡ ಬೇರೆ ಬೇರೆ ಎಂದು ಭಾವಿಸುವೆವು. ನಿರ್ದಿಷ್ಟವಾದ ದೋಷರಾಶಿ ಸುಮಾರು ನೂರರಷ್ಟು ಇದೆ, ಅಷ್ಟೆ ಒಳ್ಳೆಯದೂ ಇದೆ ಎಂದು ಇದು ಊಹಿಸುವುದು. ಈ ದೋಷರಾಶಿ ಕ್ರಮೇಣ ಕಡಿಮೆಯಾಗುತ್ತಿದೆಎಂದು ಭಾವಿಸುವರು. ಆದರೆ ಇದು ಹೀಗಿದೆಯೆ? ಪ್ರಪಂಚದ ಇತಿಹಾಸ ದೋಷ ಹೆಚ್ಚುತ್ತಿದೆ, ಒಳ್ಳೆಯದೂ ಹೆಚ್ಚುತ್ತಿದೆ ಎಂಬುದನ್ನು ತೋರುವುದು. ಅತಿಕೀಳು ಮನುಷ್ಯನನ್ನು ತೆಗೆದುಕೊಳ್ಳಿ. ಅವನು ಅರಣ್ಯದಲ್ಲಿ ವಾಸಿಸುವನು. ಅವನ ಭೋಗವಲಯ ಅತಿ ಕಿರಿದು. ಅದರಂತೆಯೇ ಅವನು ದುಃಖಿಸುವುದು ಕೂಡ. ಅವನ ದುಃಖವೆಲ್ಲಾ ಇಂದ್ರಿಯದ ಮೇಲೆ ಇರುವುದು. ಸಾಕಾದಷ್ಟು ಆಹಾರ ಸಿಕ್ಕದೇ ಇದ್ದರೆ ದುಃಖಿಸುವನು. ಅವನಿಗೆ ಬೇಕಾದಷ್ಟು ಆಹಾರಕೊಟ್ಟು ಸಂಚಾರ ಬೇಟೆಗೆ ಅವಕಾಶಕೊಟ್ಟರೆ ಅವನು ಪೂರ್ಣತೃಪ್ತನಾಗುವನು. ಅವನ ಸುಖವೆಲ್ಲಾ ಇಂದ್ರಿಯಗಳ ಮೇಲೆ ನಿಂತಿದೆ. ಅದರಂತೆಯೇ ದುಃಖಕೂಡ. ಅವನ ಜ್ಞಾನವಿಶಾಲವಾದರೆ ಅವನ ಸುಖವೂ

ವಿಶಾಲವಾಗುವುದು. ಬುದ್ಧಿ ಕ್ಷೇತ್ರ ಅವನಿಗೆ ತೆರೆಯುವುದು. ಇಂದ್ರಿಯ ಸುಖ ಬೌದ್ಧಿಕ ಸುಖವಾಗಿ ಪರಿವರ್ತನವಾಗುವುದು. ಒಂದು ಸುಂದರ ಕವನವನ್ನು ಓದಲು ಅವನಿಗೆ ಅತ್ಯಾನಂದ. ಒಂದು ಗಣಿತದ ಸಮಸ್ಯೆ ಬಗೆಹರಿಸಲು ಉತ್ಸಾಹಭರಿತ ಆಸಕ್ತಿ ತೋರುವನು. ಇದರ ಜೊತೆಗೆ ಸೂಕ್ಷ್ಮನರಗಳು ಮಾನಸಿಕ ದುಃಖಕ್ಕೆ ಹೆಚ್ಚು ಹೆಚ್ಚು ಆಸ್ಪದವಾಗುತ್ತ ಬರುವುವು. ಇದನ್ನು ಕಾಡು ಮನುಷ್ಯ ಆಲೋಚಿಸುವುದೇ ಇಲ್ಲ. ಒಂದು ಸರಳ ಉದಾಹರಣೆ ತೆಗೆದು ಕೊಳ್ಳಿ- ಟಿಬೆಟ್ಟಿನಲ್ಲಿ ಮದುವೆಯಿಲ್ಲ. ಅಲ್ಲಿ ಅಸೂಯೆಯೂ ಇಲ್ಲ. ಆದರೂ ಮದುವೆ ಎಂಬುದು ಉತ್ತಮಸ್ಥಿತಿ ಎಂಬುದು ಗೊತ್ತಿದೆ. ಟಿಬೆಟ್ಟನವರಿಗೆ ಪಾತಿವ್ರತ್ಯದ ಆನಂದ ತಿಳಿಯದು. ಪರಿಶುದ್ಧಳಾದ ಸತಿಯನ್ನು ಹೊಂದುವುದಾಗಲೀ, ಗುಣವಂತನಾದ ಗಂಡನನ್ನು ಪಡೆಯುವ ಅಧ್ಯಾತ್ಮ ಆನಂದವಾಗಲಿ ಅವರಪಾಲಿಗೆ ಇಲ್ಲ. ಈ ಜನ ಇದನ್ನು ಯೋಚಿಸುವುದೇ ಇಲ್ಲ. ಅದರಂತೆಯೇ ಪರಿಶುದ್ಧ ಸತಿ ಅಥವಾ ಪತಿಯ ತೀವ್ರ ಅಸೂಯೆಯನ್ನೂ ಅನುಭವಿಸುವುದಿಲ್ಲ. ಪಾತಿವ್ರತ್ಯದಲ್ಲಿ ನಂಬುವರು ಪರಸ್ಪರ ವಂಚನೆಯಿಂದ ಅನುಭವಿಸುವ ದುಃಖ ಹೊಟ್ಟೆಕಿಚ್ಚನ್ನು ಇವರು ಅನುಭವಿಸುವುದಿಲ್ಲ. ಒಂದುಕಡೆ ಆದರ್ಶಪ್ರಾಪ್ತಿಗೆ ಸುಖಪ್ರಾಪ್ತಿ, ಜೊತೆಗೆ ದುಃಖವನ್ನೂ ಅನುಭವಿಸುವರು.

ಪ್ರಪಂಚದಲ್ಲಿ ಐಶ್ವರ್ಯ ಭೋಗಗಳಲ್ಲಿ ಎಲ್ಲ ದೇಶಕ್ಕಿಂತ ಮಿಗಿಲಾದ ನಿಮ್ಮದೇಶ ತೆಗೆದುಕೊಳ್ಳಿ. ಇತರ ದೇಶಗಳೊಂದಿಗೆ ಹೋಲಿಸಿ ನೋಡಿದರೆ ನಿಮ್ಮ ದುಃಖ ಎಷ್ಟು ತೀವ್ರವಾಗಿದೆ. ನಿಮ್ಮಲ್ಲಿ ಹುಚ್ಚರ ಸಂಖ್ಯೆ ಅಷ್ಟೊಂದು ಹೆಚ್ಚಿರುವುದು. ಕಾರಣ ಆಸೆ ಅಷ್ಟು ಉತ್ಕಟವಾಗಿದೆ. ಮನುಷ್ಯ ಉತ್ತಮ ದರ್ಜೆಯಲ್ಲಿ ಬಾಳಬೇಕಾಗುವುದು. ಒಂದು ವರ್ಷ ಅವನು ಮಾಡುವ ಖರ್ಚು ಭಾರತದಲ್ಲಿ ಒಬ್ಬನ ಮಹದೈಶ್ವರ್ಯವಾಗುವುದು. ಸರಳ ಜೀವನವನ್ನು ನೀವು ಅವನಿಗೆ ಬೋಧಿಸಲಾರಿರಿ. ಸಮಾಜ ಅವನಿಂದ ಹೆಚ್ಚು ನಿರೀಕ್ಷಿಸುವುದು. ಸಮಾಜ ಚಕ್ರ ಉರುಳುತ್ತಿದೆ. ಅದು ವಿಧವೆಯ ಕಣ್ಣೀರಾಗಲಿ ತಬ್ಬಲಿಯ ಕ್ರಂದನಕ್ಕಾಗಲಿ ನಿಲ್ಲುವುದಿಲ್ಲ. ಎಲ್ಲಾ ದೇಶದಲ್ಲಿಯೂ ಹೀಗೆಯೆ. ನಿಮ್ಮ ಸಂತೋಷದ ರೀತಿ ಉತ್ತಮಗೊಂಡಿದೆ. ನಿಮ್ಮ ಸಮಾಜ ಇತರ ಸಮಾಜಕ್ಕಿಂತ ಮೇಲಾಗಿದೆ. ಅನುಭವಿಸುವುದಕ್ಕೆ ನಿಮ್ಮಲ್ಲಿ ಎಷ್ಟೊ ವಸ್ತುಗಳಿವೆ. ಆದರೆ ಯಾರಿಗೆ ಕಡಿಮೆ ಇದೆಯೊ ಅವರಿಗೆ ದುಃಖವೂ ಕಡಿಮೆ. ಉತ್ತಮ ಆದರ್ಶವಿದ್ದಷ್ಟೂ

ಹೆಚ್ಚು ಆನಂದಿಸಬಹುದು, ಅಷ್ಟೆ ಹೆಚ್ಚು ದುಃಖಪಡಬೇಕಾಗುವುದೆಂದು ನೀವು ಕೊನೆಯವರೆಗೂ ವಾದಿಸಬಹುದು. ಒಂದು ಮತ್ತೊಂದರ ಛಾಯೆಯಂತೆ. ದೋಷ ಕಡಿಮೆಯಾಗುತ್ತಿದೆ, ಎಂಬುದು ನಿಜವಿರಬಹುದು. ಆದರೆ ಒಡನೆ ಒಳ್ಳೆಯದೂ ಕಡಿಮೆಯಾಗುತ್ತಿದೆ. ಕೆಟ್ಟದ್ದು ಬೇಗ ವೃದ್ಧಿಯಾಗುತ್ತಿದೆ, ಒಳ್ಳೆಯದು ಕಡಿಮೆಯಾಗುತ್ತಿದೆ ಎಂದು ನಾನೇಕೆ ಹೇಳಬಾರದು? ಒಳ್ಳೆಯದು ಒಂದರಷ್ಟು ಹೆಚ್ಚುತ್ತಾ ಹೋದರೆ ಕೆಟ್ಟದ್ದು ಎರಡರಷ್ಟು ವೃದ್ಧಿಯಾಗುತ್ತಾ ಹೋಗುವುದು. ಇದೇ ಮಾಯೆ. ಇದು ಆಶಾವಾದವೂ ಅಲ್ಲ ನಿರಾಶಾವಾದವೂ ಅಲ್ಲ. ಈ ಪ್ರಪಂಚವೆಲ್ಲಾ ದುಃಖಮಯ ಎಂದು ವೇದಾಂತ ಸಾರುವುದಿಲ್ಲ. ಇದು ಅಸತ್ಯ. ಆದರೆ ಪ್ರಪಂಚವೆಲ್ಲ ಶಾಂತಿ ಸಮಾಧಾನದಿಂದ ತುಂಬಿ ತುಳುಕಾಡುತ್ತಿದೆ ಎಂಬುದು ಕೂಡ ತಪ್ಪು. ಈ ಪ್ರಪಂಚವೆಲ್ಲ ಒಳ್ಳೆಯದೆ, ಇದರಲ್ಲೆಲ್ಲ ಹೂವು, ಹಾಲು, ಜೇನು ಮಾತ್ರ ಇದೆ ಎಂದು ಮಕ್ಕಳಿಗೆ ಹೇಳುವುದು ಭ್ರಾಂತಿ. ಇದೆಲ್ಲ ನಮ್ಮ ಕನಸು. ಆದರೆ ಒಬ್ಬ ಮತ್ತೊಬ್ಬನಿಗಿಂತ ಹೆಚ್ಚು ಕಷ್ಟ ಅನುಭವಿಸಿರುವುದರಿಂದ ಎಲ್ಲಾ ದುಃಖಮಯ ಎಂದು ಹೇಳುವುದು ತಪ್ಪು. ಈ ದ್ವಂದ್ವವೇ ಒಳ್ಳೆಯದು ಕೆಟ್ಟದ್ದೇ ನಾವು ಅನುಭವಿಸುವ ಪ್ರಪಂಚವಾಗುವುದು. ಏಕಕಾಲದಲ್ಲೆ ವೇದಾಂತ "ಒಳ್ಳೆಯದು ಕೆಟ್ಟದ್ದು ಪ್ರತ್ಯೇಕ ಎಂದು ಭಾವಿಸಬೇಡಿ. ಇವೆರಡೂ ಹೆಚ್ಚುಕಡಿಮೆಯಂತೆ ವ್ಯಕ್ತವಾಗುತ್ತ ಒಂದೇ ಮನಸ್ಸಿನಲ್ಲಿ ಭಿನ್ನ ಅನುಭವಗಳನ್ನು ಕೊಡುತ್ತಿದೆ" ಎನ್ನುವುದು. ಬಾಹ್ಯಜಗತ್ತಿನಲ್ಲಿ ಐಕ್ಯತೆಯನ್ನು ಅರಸುವುದೇ ವೇದಾಂತದ ಪ್ರಥಮ ಉದ್ದೇಶ. ಆವಿರ್ಭಾವನೆಯಲ್ಲಿ ಎಷ್ಟೇ ವ್ಯತ್ಯಾಸವಾದರೂ ಒಂದೇ ಹಲವು ವಿಧದಲ್ಲಿ ವ್ಯಕ್ತವಾಗುತ್ತಿದೆ. ಪಾರ್ಸಿಕರ ಹಳೆಯ ಅನಾಗರಿಕ ಭಾವನೆ ತೆಗೆದುಕೊಳ್ಳಿ. ಇಬ್ಬರು ದೇವರು ಸೃಷ್ಟಿಸುತ್ತಿರುವುದು. ಒಳ್ಳೆಯ ದೇವರು ಒಳ್ಳೆಯದನ್ನು ಸೃಷ್ಟಿಸುತ್ತಿರುವನು. ಕೆಟ್ಟ ದೇವರು ಕೆಟ್ಟದ್ದನ್ನೆಲ್ಲ ಸೃಷ್ಟಿಸುತ್ತಿರುವನು. ಇದನ್ನು ನೋಡಿದೊಡನೆ ಇದರ ಅಸಂಬದ್ಧತೆ ಗೊತ್ತಾಗುವುದು. ಏಕೆಂದರೆ ಇದು ಜಾರಿಗೆ ಬಂದರೆ ಪ್ರತಿಯೊಂದು ಪ್ರಕೃತಿನಿಯಮಕ್ಕೂ ಎರಡು ಭಾಗಗಳಿರಬೇಕು. ಒಂದು ಭಾಗವನ್ನು ಒಂದು ದೇವರು ಮಾಡುವನು. ಮತ್ತೊಂದನ್ನು ಮತ್ತೊಂದು ದೇವರು ಮಾಡುವನು. ಇಲ್ಲಿ ತೊಂದರೆ ಬರುವುದು. ಇಬ್ಬರೂ ಒಂದೇ ಪ್ರಪಂಚದಲ್ಲಿ ಕೆಲಸಮಾಡುತ್ತಿರುವರು. ಒಂದಕ್ಕೆ ತೊಂದರೆ ಕೊಟ್ಟು ಮತ್ತೊಂದಕ್ಕೆ ಒಳ್ಳೆಯದನ್ನು ಮಾಡುತಾ

ಇಬ್ಬರು ದೇವರೂ ಹೊಂದಿಕೊಂಡು ಹೋಗುವರು. ಇದೇನೋ ಬಹಳ ಅನಾಗರಿಕ ಭಾವನೆ. ಸೃಷ್ಟಿಯಲ್ಲಿರುವ ದ್ವಂದ್ವವನ್ನು ವಿವರಿಸುವ ಅಸಂಸ್ಕೃತರೀತಿ. ಇದಕ್ಕಿಂತ ಮುಂದುವರಿದ ಸೂಕ್ಷ್ಮತತ್ತ್ವವಾದ ಪ್ರಪಂಚದಲ್ಲಿ ಸ್ವಲ್ಪ ಒಳ್ಳೆಯದು ಸ್ವಲ್ಪ ಕೆಟ್ಟದ್ದು ಇದೆ ಎಂಬ ಭಾವನೆ ತೆಗೆದುಕೊಳ್ಳಿ. ಇದೇ ದೃಷ್ಟಿಯಿಂದ ವಾದಿಸುವುದಾದರೆ ಇದೂ ಅಸಮಂಜಸ. ನಮಗೆ ಆಹಾರ ಕೊಡುವುದು ಐಕ್ಯತೆಯ ನಿಯಮ. ಈ ನಿಯಮವೇ ಆಕಸ್ಮಿಕ ಮತ್ತು ಅನರ್ಥಗಳಿಂದ ಹಲವರನ್ನು ಕೊಲ್ಲುವುದು.

ಈ ಪ್ರಪಂಚ ಸುಖವೂ ಅಲ್ಲ ದುಃಖವೂ ಅಲ್ಲ ಎರಡರ ಮಿಶ್ರ ಎಂದು ತೋರುವುದು. ನಾವು ಮುಂದುವರಿದು ಹೋದಂತೆ ಪ್ರಕೃತಿಯನ್ನು ನಿಂದಿಸುವ ಬದಲು ನಾವೇ ಅದಕ್ಕೆ ಹೊಣೆಗಾರರಾಗುವೆವು. ಜೊತೆಗೆ ವೇದಾಂತ ಪರಿಹಾರದ ಒಂದು ಮಾರ್ಗ ತೋರುವುದು. ದೋಷವನ್ನು ಅಲ್ಲಗೆಳೆಯುವುದರಿಂದ ಅಲ್ಲ. ಏಕೆಂದರೆ ಪ್ರಪಂಚದಲ್ಲಿ ಕಂಡದ್ದನ್ನು ಕಂಡಂತೆಯೇ ಧೈರ್ಯವಾಗಿ ಪರೀಕ್ಷಿಸುವುದು. ಯಾವುದನ್ನೂ ಬಚ್ಚಿಡಲು ಯತ್ನಿಸುವುದಿಲ್ಲ. ಇದು ನಿರಾಶದಾಯಕವಲ್ಲ. ಅಜ್ಞೇಯವಾದವಲ್ಲ. ಇದು ಒಂದು ಪರಿಹಾರವನ್ನು ಕಂಡು ಹಿಡಿಯುವುದು. ಆ ಪರಿಹಾರವನ್ನು ವಜ್ರೋಪಮ ತಳಹದಿಯ ಮೇಲೆ ಇಡಲು ಯತ್ನಿಸುವುದು. ಮಗುವಿನ ಬಾಯಿಗೆ ಬಟ್ಟೆಕಟ್ಟಿ ಸುಮ್ಮನಿರಿಸುವುದಲ್ಲ. ಕಣ್ಣಿಗೆ ಸುಳ್ಳಿನ ಬಟ್ಟೆಕಟ್ಟಿ ಕಾಣದಂತೆ ಮಾಡುವುದಲ್ಲ. ಮಗು ಸ್ವಲ್ಪದಿನದಲ್ಲಿ ಅದನ್ನು ತಿಳಿದುಕೊಳ್ಳುವುದು. ನಾನು ಸಣ್ಣ ಹುಡುಗನಾಗಿದ್ದಾಗ ನಡೆದ ಒಂದು ಪ್ರಸಂಗ ಜ್ಞಾಪಕಕ್ಕೆ ಬರುವುದು. ಒಬ್ಬ ಯುವಕನ ತಂದೆ ಕಾಲವಾದ. ಬಹಳ ಬಡವ, ದೊಡ್ಡ ಸಂಸಾರವನ್ನು ಅವನು ನೋಡಿಕೊಳ್ಳಬೇಕಾಗಿತ್ತು. ತಂದೆಯ ಸ್ನೇಹಿತರು ಸಹಾಯಮಾಡಲು ಮುಂದೆ ಬರಲಿಲ್ಲ. ಒಬ್ಬ ಪಾದ್ರಿಯೊಂದಿಗೆ ಮಾತನಾಡಿದಾಗ ಅವನು ಈ ಸಮಾಧಾನವನ್ನು ಇವನಿಗೆ ಕೊಟ್ಟನು: "ಓ, ಇದೆಲ್ಲ ಒಳ್ಳೆಯದು, ಒಳ್ಳೆಯದಕ್ಕೆ ದೇವರು ನಮಗೆ ಇದನ್ನೆಲ್ಲಾ ಕೊಡುವುದು" ಎಂದನು. ಗಾಯದ ಮೇಲೆ ಚಿನ್ನದ ರೇಖನ್ನು ಇಟ್ಟು ಮುಚ್ಚುವ ಹಳೆಯ ಪದ್ಧತಿ ಇದು. ನಮ್ಮ ದುರ್ಬಲತೆಯನ್ನು ಅಸಮಂಜಸವನ್ನು ಒಪ್ಪಿಕೊಳ್ಳುವೆವು. ಯುವಕ ಹೊರಟು ಹೋದ. ಆರುತಿಂಗಳಾದ ಮೇಲೆ ಪಾದ್ರಿಗೆ ಒಬ್ಬ ಮಗ ಹುಟ್ಟಿದ. ಇದಕ್ಕಾಗಿ ಧನ್ಯವಾದವನ್ನು ಅರ್ಪಿಸುವ ಕೂಟಕ್ಕೆ ಆ ಯುವಕನನ್ನು ಪಾದ್ರಿ ಕರೆದನು. ಪಾದ್ರಿ ದೇವರು

ತನಗೆ ತೋರಿದ ಕರುಣೆಗೆ ಧನ್ಯವಾದ ಅರ್ಪಿಸಿದನು. ಯುವಕ ಎದ್ದು ನಿಂತು, "ಸಾಕು ನಿಲ್ಲಿಸು ಇದೆಲ್ಲ ದುಃಖ" ಎಂದನು. ಪಾದ್ರಿ ಏತಕ್ಕೆ? ಎಂದನು. "ಏಕೆಂದರೆ ನನ್ನ ತಂದೆ ಸತ್ತಾಗ ತೋರಿಕೆಗೆ ದುಃಖವಾಗಿದ್ದರೂ ಅದು ಒಳ್ಳೆಯದಕ್ಕೆ ಆಯಿತು ಎಂದೆ. ಈಗ ತೋರಿಕೆಗೆ ಇದು ಒಳ್ಳೆಯದು ಆದರೆ ಸತ್ಯವಾಗಿ ದುಃಖ" ಎಂದನು. ಪ್ರಪಂಚದ ದುಃಖಪರಿಹಾರಕ್ಕೆ ಇದೇ ಮಾರ್ಗ. ಒಳ್ಳೆಯವರಾಗಿ. ದುಃಖಿಸುವವರಮೇಲೆ ದಯೆತಾಳಿ. ಅದನ್ನು ಹೇಗೊ ಮುಚ್ಚಲು ಯತ್ನಿಸಬೇಡಿ. ಯಾವುದೂ ಪ್ರಪಂಚವನ್ನು ನೇರಮಾಡಲಾರದು. ಅದನ್ನು ಮೀರಿ ಹೋಗಬೇಕು.

ಈ ಜಗತ್ತು ಒಳ್ಳೆಯದು ಕೆಟ್ಟುದ್ದರ ಮಿಶ್ರ. ಎಲ್ಲಿ ಒಳ್ಳೆಯದಿದ್ದರೆ ಇಲ್ಲಿ ಕೆಟ್ಟದ್ದೂ ಅನುಸರಿಸುವುದು. ಆದರೆ ಈ ವೈವಿಧ್ಯತೆಗೆ ಅತೀತವಾಗಿ ಮತ್ತು ಅದರ ಹಿಂದೆಲ್ಲಾ ಐಕ್ಯತೆಯನ್ನು ವೇದಾಂತ ಕಂಡುಹಿಡಿಯುವುದು. "ಒಳ್ಳೆಯದು ಕೆಟ್ಟದ್ದನ್ನು ತ್ಯಜಿಸಿ" ಎನ್ನುವುದು. ಕೊನೆಗೆ ಉಳಿಯುವುದೇನು? ಒಳ್ಳೆಯದು ಕೆಟ್ಟದ್ದರ ಹಿಂದೆ ಸ್ವಂತ ನಿಮ್ಮದೇ ಆದುದೊಂದು ಇದೆ. ಅದೇ ಸತ್ಯ. ಅದು ಒಳ್ಳೆಯದು ಕೆಟ್ಟುದರ ಆಚೆ ಇದೆ. ಅದೇ ಒಳ್ಳೆಯದು ಕೆಟ್ಟುದರಂತೆ ಕಾಣುತ್ತಿರುವುದು. ಮೊದಲು ಅದನ್ನು ತಿಳಿಯಿರಿ, ಆಗಮಾತ್ರ ನೀವು ನಿಜವಾದ ಆಶಾವಾದಿಗಳು. ಅದಕ್ಕೆ ಮುಂಚೆ ಅಲ್ಲ. ಆಗ ನೀವು ಎಲ್ಲವನ್ನೂ ನಿಗ್ರಹಿಸಬಹುದು. ಈ ಆವಿರ್ಭಾವನೆಗಳನ್ನು ನೀವು ನಿಗ್ರಹಿಸಿದರೆ ನಿಮ್ಮ ನಿಜವಾದ ಸತ್ಯವನ್ನು ವ್ಯಕ್ತಗೊಳಿಸಲು ಸಾಧ್ಯವಾಗುವುದು. ಮೊದಲು ನಿಮಗೆ ನೀವು ಒಡೆಯರಾಗಿ. ಈ ನಿಯಮಗಳಾಚೆ ಹೋಗಿ. ಈ ನಿಯಮ ನಿಮ್ಮನ್ನು ಆಳುವುದಿಲ್ಲ. ಇವು ನಿಮ್ಮ ಒಂದು ಅಂಶ. ಮೊದಲು ನೀವು ಪ್ರಕೃತಿದಾಸರಲ್ಲ ಎಂಬುದನ್ನು ಅರಿತುಕೊಳ್ಳಿ. ನೀವೆಂದಿಗೂ ಬದ್ಧರಾಗಿಲ್ಲ, ಆಗುವುದಿಲ್ಲ. ಈ ಪ್ರಕೃತಿಯನ್ನು ಅನಂತವೆಂದು ನೀವು ಭಾವಿಸಿದರೂ ಇದು ಸಾಂತವಾದುದು, ಸಿಂಧುವಿನಲ್ಲಿ ಒಂದು ಬಿಂದು. ನಿನ್ನ ಆತ್ಮವೇ ಆ ಸಿಂಧು. ನೀನು ನಕ್ಷತ್ರ ಸೂರ್ಯಚಂದ್ರರನ್ನು ಮೀರಿರುವೆ. ಅನಂತದೊಂದಿಗೆ ಇವನ್ನು ಹೋಲಿಸಿದಾಗ ಇವೆಲ್ಲ ಗುಳ್ಳೆಗಳಂತೆ. ಇದನ್ನು ತಿಳಿಯಿರಿ. ಒಳ್ಳೆಯದು ಕೆಟ್ಟುದನ್ನು ಆಗ ನಿಗ್ರಹಿಸುವಿರಿ. ಆಗಮಾತ್ರ ದೃಶ್ಯವೆಲ್ಲ ಬದಲಾಯಿಸುವುದು. ಆಗಮಾತ್ರ ಎದ್ದುನಿಂತು "ಒಳ್ಳೆಯದು ಎಷ್ಟು ಸಂದರವಾಗಿದೆ. ಕೆಟ್ಟದ್ದು ಎಷ್ಟು ಅದ್ಭುತವಾಗಿದೆ" ಎನ್ನುವಿರಿ.

ವೇದಾಂತ ಬೋಧಿವುದೇ ಇದನ್ನು. ಗಾಯದಮೇಲೆ ಚಿನ್ನದ ರೇಖನ್ನು ಮುಚ್ಚುವ ಅನರ್ಥ ಕೆಲಸ ಮಾಡುವುದಿಲ್ಲ. ಈ ಜೀವನ ಕಷ್ಟ. ಧೀರರಾಗಿ ಇದರ ಮೂಲಕ ಒಂದು ಮಾರ್ಗವನ್ನು ಮಾಡಿಕೊಳ್ಳ ಬೇಕಾಗಿದೆ. ಇದು ಎಷ್ಟೇ ಅಭೇದ್ಯವಾದರೂ ಚಿಂತೆಯಿಲ್ಲ. ಆತ್ಮ ಇದ ಕ್ಕಿಂತ ಪ್ರಬಲವಾದುದು. ವೇದಾಂತ ಅಲ್ಪದೇವತೆಗಳನ್ನು ಹೊಣೆಗಾರ ರನ್ನಾಗಿ ಮಾಡುವುದಿಲ್ಲ. ನೀವೆ ನಿಮ್ಮ ಅದೃಷ್ಟಕ್ಕೆ ಜವಾಬ್ದಾರರು. ನೀವೇ ನಿಮ್ಮ ಕಷ್ಟಕ್ಕೆ ಕಾರಣ. ನೀವೆ ಒಳ್ಳೆಯದು ಕೆಟ್ಟದ್ದನ್ನು ಮಾಡು ವವರು. ನೀವೆ ಕಣ್ಣನ್ನು ಮುಚ್ಚಿಕೊಂಡು ಕತ್ತಲೆ ಎಂದು ಕೂಗಿಕೊಳ್ಳು ವುದು. ಕೈ ತೆಗೆಯಿರಿ, ಬೆಳಕನ್ನು ನೋಡಿ. ನೀನು ಸ್ವಯಂ ಪ್ರಕಾಶನು. ನೀನಾಗಲೆ ಆದಿಯಿಂದ ಪರಿಪೂರ್ಣ. “ ಅನೇಕವನ್ನು ಯಾರಿಲ್ಲಿ ನೋಡು ವರೊ ಅವರು ಮೃತ್ಯುವಿನಿಂದ ಮೃತ್ಯುಗೆ ಹೋಗುವವರು ” ಎಂಬ ಶ್ಲೋಕ ಈಗ ಗೊತ್ತಾಗುವುದು. ಆ ಒಂದನ್ನು ನೋಡಿ ಮುಕ್ತರಾಗಿ.

ನಾವು ಅದನ್ನು ನೋಡುವುದು ಹೇಗೆ? ಇಷ್ಟು ಭ್ರಾಂತಿಗೊಳಗಾದ ದುರ್ಬಲವಾದ ಸುಲಭವಾಗಿ ಬಲೆಗೆ ಬೀಳುವ ಮನಸ್ಸುಕೂಡ ದೃಢವಾಗ ಬಲ್ಲದು. ಪುನಃ ಪುನಃ ಮರಣದಿಂದ ತಪ್ಪಿಸುವ ಆ ಏಕದ ಜ್ಞಾನವನ್ನು ಕ್ಷಣಕಾಲವಾದರೂ ಪಡೆಯಬಹುದು. ಬೆಟ್ಟದಮೇಲೆ ಬೀಳುವ ಮಳೆ ಕೆಳಗೆ ಹಲವು ಪ್ರವಾಹಗಳಂತೆ ಹರಿದು ಹೋಗುವಂತೆ, ನೀವು ಇಲ್ಲಿ ನೋಡುವ ಶಕ್ತಿಗಳೆಲ್ಲಾ ಆ ಒಂದರ ಆವಿರ್ಭಾವನೆ. ಮಾಯೆಯ ಮೇಲೆ ಬಿದ್ದು ಇದು ವಿವಿಧವಾಗಿರುವುದು. ವೈವಿಧ್ಯತೆಯನ್ನು ಅನುಸರಿಸಬೇಡಿ ಏಕದೆಡೆಗೆ ಹೋಗಿ. “ ಅವನು ಚಲಿಸುವುದರಲ್ಲೆಲ್ಲಾ ಇರುವನು. ಅವನು ಪರಿಶುದ್ಧವಾಗಿರುವುದರಲ್ಲೆಲ್ಲ ಇರುವುನು. ಅವನು ವಿಶ್ವವನ್ನೆಲ್ಲಾ ವ್ಯಾಪಿ ಸಿರುವನು. ಅವನು ಯಜ್ಞದಲ್ಲಿರುವನು. ಮನೆಯಲ್ಲಿರುವ ಅತಿಥಿಯವನು. ಅವನು ಮನುಷ್ಯ ಪ್ರಾಣಿ ಸಸ್ಯ ಜಲ ಎಲ್ಲದರಲ್ಲಿಯೂ ಇರುವನು. ಅವನೇ ವಿಭು. ಬೆಂಕಿ ಪ್ರಪಂಚಕ್ಕೆ ಬಂದು ಹಲವು ರೀತಿಯಲ್ಲಿ ವ್ಯಕ್ತ ವಾಗುತ್ತಿರುವಂತೆ, ಇದರಂತೆಯೆ ಆ ಪರಮಾತ್ಮ ಹಲವು ರೂಪಿನಲ್ಲಿ ಕಂಗೊಳಿಸುತ್ತಿರುವನು. ಗಾಳಿ ಪ್ರಪಂಚಕ್ಕೆ ಬಂದು ಹಲವು ವಿಧದಲ್ಲಿ ಕಾಣಿಸುತ್ತಿರುವಂತೆ.” ಈ ಐಕ್ಯತೆಯನ್ನು ನೀವು ತಿಳಿದಾಗ ಮಾತ್ರ ಎಲ್ಲಾ ಆಶಾವಾದ. ಏಕೆಂದರೆ ಅವನೆಲ್ಲೆಲ್ಲಿಯೂ ಕಾಣುವನು. ಇದೆಲ್ಲ ಸತ್ಯ ವಾದರೆ ಆ ಪರಿಶುದ್ಧನಾದ ಅನಂತವಾದ ಆತ್ಮ ಇದೆಲ್ಲವನ್ನೂ ಪ್ರವೇಶಿಸಿ ದ್ದರೆ, ಅವನೇಕೆ ವ್ಯಥೆಪಡುವುದು? ದುಃಖಿಸುವುದು? ಅಶುದ್ಧನಾಗಿರುವುದು?

ಇಲ್ಲ ಅವನಾಗುವುದಿಲ್ಲವೆನ್ನುವುದು ಉಪನಿಷತ್ತು. "ಸೂರ್ಯನ ಕಾಂತಿ ಎಲ್ಲರಿಗೂ ನೋಡುವುದಕ್ಕೆ ಕಾರಣವಾದರೂ ನಮ್ಮ ಕಣ್ಣಿನಲ್ಲಿರುವ ದೋಷ ಗಳಿಂದ ಅವನು ದೂಷಿತನಾಗುವುದಿಲ್ಲ. ಇದರಂತೆಯೇ ಎಲ್ಲರ ಆತ್ಮವೂ ದೇಹದ ಅಥವಾ ಮತ್ತಾವುದರ ದುಃಖದಿಂದಲೂ ಬಾಧಿತನಾಗುವುದಿಲ್ಲ." ನನಗೆ ಯಾವುದಾದರೂ ಬಾಯಿಲೆ ಬಂದು ಎಲ್ಲವನ್ನು ಹಳದಿಯಂತೆ ನೋಡಬಹುದು. "ಆದರೆ ಇದರಿಂದ ಸೂರ್ಯನಿಗೆ ಯಾವ ಕುಂದೂ ಇಲ್ಲ. ಅವನು ಏಕ, ಸೃಷ್ಟಿಕರ್ತ ಎಲ್ಲರನ್ನೂ ಆಳುವನು. ಪ್ರತಿಯೊಬ್ಬರ ಹೃದ ಯಾಂತರಾಳದಲ್ಲಿರುವವನು. ಅವನು ತನ್ನ ಏಕವನ್ನು ಬಹುವಾಗಿ ಮಾಡು ವನು. ತಮ್ಮ ಆತ್ಮದ ಆತ್ಮ ಇದು ಎಂದು ಯಾವ ಋಷಿಗಳು ಕಂಡು ಕೊಳ್ಳುವರೊ ಅವರಿಗೆ ಮಾತ್ರ ಶಾಶ್ವತ ಶಾಂತಿ. ಇತರರಿಗೆ ಅಲ್ಲ. ಅನಿತ್ಯ ದಲ್ಲಿ ಯಾರು ನಿತ್ಯವನ್ನು ನೋಡುವರೊ, ಅಚೇತನದಲ್ಲಿ ಯಾರು ಚೇತನವನ್ನು ನೋಡುವರೊ, ವೈವಿಧ್ಯತೆಯಲ್ಲಿ ಯಾರು ಏಕವನ್ನು ನೋಡು ವರೊ, ಯಾರು ಅದನ್ನು ತಮ್ಮ ಅಂತರಾತ್ಮ ಎಂದು ಭಾವಿಸುವರೊ ಅವರಿಗೆ ಮಾತ್ರ ಶಾಶ್ವತ ಶಾಂತಿ, ಇತರರಿಗೆ ಇಲ್ಲ. ಹೊರಗೆಲ್ಲಿ ಅವನನ್ನು ಕಾಣುವುದು? ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಎಲ್ಲಿ ಅವನನ್ನು ಕಾಣುವುದು? ಅಲ್ಲಿ ಸೂರ್ಯ ಬೆಳಗಲಾರ ಚಂದ್ರ ಬೆಳಗಲಾರ, ನಕ್ಷತ್ರ ಬೆಳಗದು, ಮಿಂಚು ಪ್ರಕಾಶಿಸದು. ಈ ಬೆಂಕಿಯ ವಿಷಯವನ್ನು ಇನ್ನು ಏನು ಹೇಳುವುದು. ಅವನು ಪ್ರಕಾಶಿಸುವುದರಿಂದ ಪ್ರತಿಯೊಂದೂ ಪ್ರಕಾಶಿಸುವುದು. ಅವನ ಕಾಂತಿಯನ್ನು ಉಳಿದವರೆಲ್ಲಾ ಎರವಲಾಗಿ ತೆಗೆದುಕೊಂಡಿರುವರು. ಅವನು ಇವುಗಳೆಲ್ಲದರ ಮೂಲಕ ಬೆಳಗುತ್ತಿರುವನು." ಇಲ್ಲಿ ಮತ್ತೊಂದು ಸುಂದರ ಉಪಮಾನವಿದೆ. ಯಾರು ಇಂಡಿಯಾದೇಶದಲ್ಲಿದ್ದು, ಆಲದ ಮರ ಒಂದು ಬಿಳಲಿನಿಂದ ಹುಟ್ಟಿ ಹೇಗೆ ಹಬ್ಬುತ್ತಾ ಹೋಗುವುದನ್ನು ನೋಡಿರುವರೊ ಅವರು ಇದನ್ನು ತಿಳಿದುಕೊಳ್ಳಬಲ್ಲರು. (ಅವನೇ ಈ ಆಲದಮರ.) ಅವನೇ ಎಲ್ಲಕ್ಕೂ ಮೂಲ. ಅವನೇ ವಿಶ್ವದಂತೆ ಹರಡಿರು ವನು. ಅದು ಎಷ್ಟೇ ದೂರ ಹರಡಿದ್ದರೂ ರೆಂಬೆ ಕೊಂಬೆಗಳೆಲ್ಲಕ್ಕೂ ಸಂಬಂಧವಿದೆ.

ವೇದಗಳ ಬ್ರಾಹ್ಮಣಭಾಗದಲ್ಲಿ ಹಲವು ಲೋಕಗಳನ್ನು ಹೇಳುವರು. ಆದರೆ ಉಪನಿಷತ್ತಿನ ತಾತ್ತ್ವಿಕ ಭಾಗ ಸ್ವರ್ಗಕ್ಕೆ ಹೋಗುವುದನ್ನೂ ತ್ಯಜಿಸು ವುದು. ಸುಖ ಈ ಸ್ವರ್ಗದಲ್ಲಿಯೂ ಇಲ್ಲ, ಆ ಸ್ವರ್ಗದಲ್ಲಿಯೂ ಇಲ್ಲ. ಅದು ಆತ್ಮನಲ್ಲಿರುವುದು. ಕೇವಲ ಸ್ಥಳ ಏನನ್ನೂ ತೋರುವುದಿಲ್ಲ.

ಬೇರೊಂದು ಆತ್ಮಸಾಕ್ಷಾತ್ಕಾರದ ಸ್ಥಿತಿಯನ್ನು ತೋರುವ ಮತ್ತೊಂದು ಶ್ಲೋಕವಿದೆ. "ಪಿತೃಲೋಕದಲ್ಲಿ ಒಬ್ಬ ಸ್ವಪ್ನದಲ್ಲಿ ನೋಡುವಂತೆ ಸತ್ಯವನ್ನು ನೋಡುವನು." ನಾವು ಸ್ವಪ್ನದಲ್ಲಿ ಮಂಕಾಗಿ ಅಸ್ಪಷ್ಟವಾಗಿ ನೋಡುವಂತೆ ಸತ್ಯವನ್ನೂ ನೋಡುವೆವು. ಗಂಧರ್ವಲೋಕವೆಂಬ ಮತ್ತೊಂದು ಸ್ವರ್ಗವಿದೆ. ಅಲ್ಲಿ ಮತ್ತೂ ಸ್ಪಷ್ಟ. ಒಬ್ಬ ನೀರಿನಲ್ಲಿ ತನ್ನ ನೆರಳನ್ನು ನೋಡುವಂತೆ ಸತ್ಯವನ್ನು ನೋಡುವನು. ಹಿಂದೂಗಳು ಕಲ್ಪಿಸಿಕೊಳ್ಳುವ ಶ್ರೇಷ್ಠಸ್ವರ್ಗವೇ ಬ್ರಹ್ಮಲೋಕ. ಇಲ್ಲಿ ಸತ್ಯವನ್ನು ಬಹಳ ಸ್ಪಷ್ಟವಾಗಿ ನೋಡುವೆವು. ನೆರಳು ಬೆಳಕಿನಂತೆ ನೋಡುವೆವು. ಆದರೂ ಪೂರ್ಣ ಸ್ಪಷ್ಟವಾಗಿಲ್ಲ. ಒಬ್ಬ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ವನ್ನು ನೋಡಿಕೊಂಡಾಗ ಸ್ಪಷ್ಟವಾಗಿ ಶುದ್ಧವಾಗಿ ಕಾಣುವಂತೆ ಸತ್ಯವನ್ನು ತನ್ನ ಆತ್ಮನಲ್ಲಿ ಕಾಣುವನು. ಶ್ರೇಷ್ಠಸ್ವರ್ಗ ನಮ್ಮ ಆತ್ಮನಲ್ಲಿರುವುದು. ಪೂಜಿಸುವುದಕ್ಕೆ ಶ್ರೇಷ್ಠದೇಗುಲವೇ ಮಾನವನ ಆತ್ಮ. ಇದೇ ಎಲ್ಲಾ ಸ್ವರ್ಗಕ್ಕಿಂತ ಶ್ರೇಷ್ಠ. ಯಾವ ಬೇರೆ ಸ್ವರ್ಗದಲ್ಲಿಯೂ ಜೀವನದಲ್ಲಿ ನಮ್ಮ ಆತ್ಮನಲ್ಲಿ ಕಾಣುವಂತೆ ಸತ್ಯಸ್ಪಷ್ಟವಾಗಿ ಕಾಣುವುದಿಲ್ಲ. ಬದ ಲಾಯಿಸುವ ಸ್ಥಳದಿಂದ ಏನೂ ಅಷ್ಟು ಪ್ರಯೋಜನವಾಗುವುದಿಲ್ಲ. ನಾನು ಇಂಡಿಯಾದೇಶದಲ್ಲಿದ್ದಾಗ ಗವಿ ನನಗೆ ಒಳ್ಳೆಯ ದರ್ಶನವನ್ನು ಕೊಡುವುದೆಂದು ಭಾವಿಸಿದ್ದೆ. ಇದು ಸಾಧ್ಯವಿಲ್ಲವೆಂದು ಗೊತ್ತಾಯಿತು. ಕಾಡಿನಲ್ಲಿ ದೊರಕಬಹುದೆಂದು ಯೋಚಿಸಿದೆ. ಅನಂತರ ಕಾಶಿ ಕೊಡುವು ದೆಂದು ಭಾವಿಸಿದ್ದೆ. ಇದು ಸಾಧ್ಯವಿಲ್ಲವೆಂದು ಗೊತ್ತಾಯಿತು. ಎಲ್ಲಾ ಕಡೆ ಯಲ್ಲಿಯೂ ಒಂದೇ ಕಷ್ಟ. ಏಕೆಂದರೆ ನಾವೇ ನಮ್ಮ ಪ್ರಪಂಚವನ್ನು ಸೃಷ್ಟಿಸಿಕೊಳ್ಳುವೆವು. ನಾನು ಕೆಟ್ಟವನಾದರೆ ಇಡೀ ಪ್ರಪಂಚ ಕೆಟ್ಟದ್ದು. ಇದನ್ನೇ ಪ್ರಪಂಚ ಹೇಳುವುದು. ಎಲ್ಲಾ ಪ್ರಪಂಚಕ್ಕೂ ಇದೇ ಅನ್ವ ಯಿಸುವುದು. ನಾನು ಸತ್ತು ಸ್ವರ್ಗಕ್ಕೆ ಹೋದರೆ ಅಲ್ಲಿಯೂ ಇದನ್ನೇ ನೋಡುತ್ತೇನೆ. ಪರಿಶುದ್ಧನಾಗುವ ವರೆಗೆ ಗುಹೆ ಅರಣ್ಯ ಕಾಶಿ ಅಥವಾ ಸ್ವರ್ಗಕ್ಕೆ ಹೋಗಿ ಪ್ರಯೋಜನವಿಲ್ಲ. ನಾನು ಕನ್ನಡಿಯನ್ನು ಶುದ್ಧ ಮಾಡಿದ್ದರೆ ಎಲ್ಲಿದ್ದರೂ ಚಿಂತೆಯಿಲ್ಲ. ಸತ್ಯ ಹೇಗಿದೆಯೋ ಹಾಗೆ ಕಾಣು ವುದು. ಸುಮ್ಮನೆ ಅಲ್ಲಿಗೆ ಇಲ್ಲಿಗೆ ಓಡಿ ಶಕ್ತಿಯನ್ನು ವ್ಯಯಮಾಡಿಕೊಳ್ಳು ವುದು ವ್ಯರ್ಥ. ಅದೇ ಶಕ್ತಿಯನ್ನು ಕನ್ನಡಿ ಶುಭ್ರಮಾಡುವುದಕ್ಕೆ ಉಪ ಯೋಗಿಸಬೇಕು. ಇದೇ ಭಾವವನ್ನು ಪುನಃ ವಿವರಿಸುವರು. "ಕಣ್ಣಿ ನಿಂದ ಯಾರೂ ಅವನ ಆಕಾರವನ್ನು ನೋಡಲಾರರು. ಪರಿಶುದ್ಧ

ಹೃದಯದಲ್ಲಿ ಮಾತ್ರ ಅವನು ಗೋಚರಿಸುವನು. ಅಮೃತತ್ವವನ್ನು ಪಡೆಯುವುದು ಹೀಗೆ."

ಯಾರು ರಾಜಯೋಗದಮೇಲೆ ಬೇಸಿಗೆಯಲ್ಲಿ ಕೊಟ್ಟ ಉಪನ್ಯಾಸ ವನ್ನು ಕೇಳಿರುವರೊ ಅವರು ಕುತೋಹಲಿಗಳಾಗಿರಬಹುದು. ಅದು ಬೇರೆ ಯೋಗ. ನಾವು ಈಗ ಪ್ರಸ್ತಾಪಿಸುತ್ತಿರುವ ಯೋಗಕ್ಕೆ ಕೇವಲ ಇಂದ್ರಿಯ ನಿಗ್ರಹವೇ ಮುಖ್ಯ. ಮನುಷ್ಯ ಇಂದ್ರಿಯವನ್ನು ತನ್ನ ಸ್ವಾಧೀನಕ್ಕೆ ತಂದಮೇಲೆ ಅವು ಮನಸ್ಸನ್ನು ಇನ್ನುಮೇಲೆ ಅಶಾಂತಿ ಗೊಳಿಸದಮೇಲೆ ಯೋಗಿ ಗುರಿಯನ್ನು ಸೇರುವನು. "ಮನಸ್ಸಿನ ಕ್ಷುದ್ರ ಆಸೆಗಳನ್ನೆಲ್ಲಾ ತ್ಯಜಿಸಿದ ಮೇಲೆ ಈ ಮರ್ತ್ಯನೇ ಅಮೃತನಾಗುವನು. ಇಲ್ಲೆ ಅವನು ದೇವರಲ್ಲಿ ಐಕ್ಯನಾಗುವನು. ಹೃದಯ ಗ್ರಂಥಿಗಳನ್ನೆಲ್ಲಾ ಭೇದಿಸಿದ ಮೇಲೆ ಆಗ ಮರ್ತ್ಯ ಅಮೃತನಾಗುವನು. ಅವನು ಬ್ರಹ್ಮನನ್ನು ಅನುಭವಿಸುವನು" ಇಲ್ಲಿ ಈ ಪ್ರಪಂಚದಲ್ಲಿ ಮತ್ತೆಲ್ಲಿಯೂ ಅಲ್ಲ.

ಇಲ್ಲಿ ಕೆಲವು ಮಾತುಗಳನ್ನು ಆಡಬೇಕಾಗಿದೆ. ಈ ವೇದಾಂತ ಮತ್ತು ಇತರ ಪೌರಾತ್ಯ ದರ್ಶನಗಳು, ಈ ಪ್ರಪಂಚದ ಸುಖ ಭೋಗ ಗಳನ್ನು ತ್ಯಜಿಸಿ, ಹೋರಾಟವನ್ನು ತ್ಯಜಿಸಿ, ಅತೀತವಾಗಿರುವ ಬೇರಾವು ದನ್ನು ನಿರೀಕ್ಷಿಸುತ್ತವೆ ಎಂದು ನೀವು ಸಾಧಾರಣಕೇಳುವಿರಿ. ಈ ಭಾವನೆ ಸಂಪೂರ್ಣ ತಪ್ಪು. ಪೌರಾತ್ಯಭಾವನೆ ಸಂಪೂರ್ಣತಿಳಿಯದ ಮೂಢರು, ಅದರ ಸತ್ಯ ಸಾರವನ್ನು ತಿಳಿದುಕೊಳ್ಳಲಾರದವರು ಹೀಗೆ ಹೇಳುವರು. ಇದಕ್ಕೆ ವಿರೋಧವಾಗಿ ನಮ್ಮ ಶಾಸ್ತ್ರದಲ್ಲಿ ಅವರು ಬೇರೆ ಲೋಕಕ್ಕೆ ಹೋಗಲು ಇಚ್ಛಿಸುವುದಿಲ್ಲ. ಕೆಲವುಕಾಲ ನಕ್ಕು ಅತ್ತು ಕೊನೆಗೆ ಸಾಯುವ ಒಂದು ಸ್ಥಳ ಎಂದು ಅಲ್ಲಗಳೆಯುವರು. ನಾವು ಎಲ್ಲಿಯ ವರೆಗೂ ದುರ್ಬಲರೊ ಅಲ್ಲಿಯವರಿಗೆ ಈ ಅನುಭವದ ಮೂಲಕ ಸಾಗಿ ಹೋಗಬೇಕಾಗಿದೆ. ಆದರೆ ಏನು ಸತ್ಯವಾಗಿದೆಯೋ ಅದು ಇಲ್ಲೇ ಇರುವುದು. ಅದೇ ಮಾನವನ ಆತ್ಮ. ಕೇವಲ ಆತ್ಮಹತ್ಯದಿಂದ ಅನಿವಾರ್ಯ ವಾಗಿರುವ ಸ್ಥಿತಿಯಿಂದ ಪಾರಾಗುವುದಿಲ್ಲ ಎಂದುಹೇಳುವುದು. ಆದರೆ ಸರಿಯಾದ ಮಾರ್ಗವನ್ನು ಕಂಡುಹಿಡಿಯುವುದು ಕಷ್ಟ. ಪಾಶ್ಚಾತ್ಯ ನಷ್ಟೇ ಹಿಂದೂಕೂಡ ಕಾರ್ಯ ಚತುರ. ಆದರೆ ವ್ಯತ್ಯಾಸವಿರುವುದು ನಮ್ಮ ಜೀವನ ದೃಷ್ಟಿಯಲ್ಲಿ ಮಾತ್ರ. ಒಬ್ಬನು ಒಳ್ಳೆಮನೆ ಕಟ್ಟಿ, ಚೆನ್ನಾದ ಆಹಾರ ಬಟ್ಟೆ ಇರಲಿ, ಬುದ್ಧಿ ಸಂಸ್ಕೃತಿ ಮುಂತಾದವು ಇರಲಿ, ಏಕೆಂದರೆ

ಇದೇ ಜೀವನದ ಸರ್ವಸ್ವ ಎನ್ನುವನು. ಆವನು ಇದರಲ್ಲಿ ವ್ಯವಹಾರ ಚತುರ. ಆದರೆ ಹಿಂದುಗೆ ನಿಜವಾದ ಪ್ರಪಂಚಜ್ಞಾನ ಎಂದರೆ ಆತ್ಮಜ್ಞಾನ. ಆಧ್ಯಾತ್ಮವಿದ್ಯೆ. ಅವನು ಅಂತಹ ಜೀವನವನ್ನು ಅನುಭವಿಸಲಿಚ್ಛಿಸುವನು. ಅಮೇರಿಕಾದಲ್ಲಿ ಒಬ್ಬ ಪ್ರಖ್ಯಾತ ಅಜ್ಞೇಯವಾದಿ ಇದ್ದ. ಬಹಳ ಉದಾರ ಹೃದಯ, ಒಳ್ಳೆಯವನು, ದೊಡ್ಡವಾಗ್ಮಿ. ಧರ್ಮದಿಂದ ಏನೂ ಪ್ರಯೋಜನ ವಿಲ್ಲ ಎಂದು ಉಪನ್ಯಾಸ ಮಾಡಿದನು. ಬೇರೆ ಪ್ರಪಂಚದಿಂದ ಏತಕ್ಕೆ ನಿಮ್ಮ ತಲೆ ಕೆಡಿಸಿಕೊಳ್ಳುವಿರಿ. ಅವನು ಈ ಉಪಮಾವನ್ನು ಉಪಯೋಗಿಸುತ್ತಿದ್ದನು: "ಇಲ್ಲೊಂದು ಕಿತ್ತಲೇಹಣ್ಣು ನಮ್ಮ ಹತ್ತಿರ ಇದೆ. ಅದರ ರಸವನ್ನೆಲ್ಲಾ ಹಿಂಡಬೇಕಾಗಿದೆ." ನಾನು ಅವನನ್ನು ಒಂದು ದಿನ ಸಂಧಿಸಿದೆ. ನಾನೂ ಕೂಡ ಇದನ್ನು ಒಪ್ಪುತ್ತೇನೆ. ನನ್ನ ಹತ್ತಿರಲೂ ಹಣ್ಣು ಇದೆ. ನಾನೂ ಅದರ ರಸವನ್ನು ಹಿಂಡಬೇಕಾಗಿದೆ. ಯಾವ ಹಣ್ಣು ಬೇಕೊ ಅದರಲ್ಲಿ ನಮ್ಮ ವ್ಯತ್ಯಾಸ. ನಿನಗೆ ಒಂದು ಕಿತ್ತಲೆ ಬೇಕು. ನನಗೆ ಒಂದು ಮಾವು ಬೇಕು. ಇಲ್ಲಿ ಸುಮ್ಮನೆ ಹೇಗೊ ಬಾಳಿ ತಿಂದು, ಕುಡಿದು ಸ್ವಲ್ಪ ವೈಜ್ಞಾನಿಕ ವಿಷಯ ತಿಳಿದುಕೊಂಡರೆ ಸಾಕು ಎಂದು ನೀನು ತಿಳಿವೆ. ಆದರೆ ಇದೇ ಎಲ್ಲರಿಗೂ ಹಿಡಿಸುವುದು ಎನ್ನುವುದಕ್ಕೆ ನಿನಗೆ ಅಧಿಕಾರವಿಲ್ಲ. ನನಗೆ ಅಂತಹ ಜೀವನದೃಷ್ಟಿಯಿಂದ ಪ್ರಯೋಜನವೇ ಇಲ್ಲ. ಸೇಬು ಹೇಗೆ ಬೀಳುತ್ತದೆ, ವಿದ್ಯುತ್ ಪ್ರವಾಹ ಹೇಗೆ ನನ್ನ ನರವನ್ನು ಅಲ್ಲಾಡಿಸುವುದು ಎಂಬುವಷ್ಟನ್ನೇ ನಾನು ಕಲಿಯಬೇಕಾದರೆ, ನಾನು ಆತ್ಮಹತ್ಯ ಮಾಡಿಕೊಳ್ಳುವೆನು. ನನಗೆ ವಸ್ತುರಹಸ್ಯ ಗೊತ್ತಾಗಬೇಕು. ಅದರ ಸಾರ ಗೊತ್ತಾಗಬೇಕು. ಜೀವನದ ಆವಿರ್ಭಾವನೆ ನಿಮ್ಮ ಅಧ್ಯಯನದ ಗುರಿ. ನನ್ನದು ಪ್ರತ್ಯಕ್ಷಜೀವನ. ನೀವು ಜೀವನದ ರಹಸ್ಯವನ್ನು ತಿಳಿದುಕೊಳ್ಳಬೇಕು. ನಿಮ್ಮ ಮನಸ್ಸಿನಿಂದ ನಾಕ ನರಕ ಮತ್ತು ಇತರ ಮೂಢನಂಬಿಕೆಗಳನ್ನು ದೂರಮಾಡಬೇಕು. ಅವು ಹೊರಗಿರುವ ಬಾಹ್ಯ ಜಗತ್ತಿನಷ್ಟೇ ಸತ್ಯವಾಗಿದ್ದರೂ ಅವನ್ನು ತ್ಯಜಿಸಬೇಕೆನ್ನುವುದು ನನ್ನ ತತ್ತ್ವಶಾಸ್ತ್ರ. ನನಗೆ ಈ ಜೀವನದ ರಹಸ್ಯ, ಸಾರ ತಿಳಿಯಬೇಕು. ಅದು ಹೇಗೆ ಕೆಲಸಮಾಡುವುದು, ಅದರ ಆವಿರ್ಭಾವನೆಗಳೇನೇನು ಮಾತ್ರವಲ್ಲ. ಜೀವನವೇನು ಎನ್ನುವುದನ್ನು ತಿಳಿಯಬೇಕು. ಪ್ರತಿಯೊಂದು ವಸ್ತುವಿನ "ಏತಕ್ಕೆ" ನನಗೆಬೇಕು. "ಹೇಗೆ" ಎಂಬುದನ್ನು ಮಕ್ಕಳಿಗೆ ಬಿಡುವೆನು. ನಿಮ್ಮ ದೇಶದವನೊಬ್ಬ "ನಾನು ಸಿಗರೇಟು ಸೇದುವಾಗ ಯಾವುದಾದರೂ ಪುಸ್ತಕ ಬರೆಯಬೇಕಾದರೆ ಅದು ಸಿಗರೇಟಿನ ವಿಜ್ಞಾನ"

ಎಂದನು. ವಿಜ್ಞಾನಿಯಾಗುವುದೊಳ್ಳೆಯದು, ದೊಡ್ಡದು. ದೇವರು ಅವರ ಅನ್ವೇಷಣೆಯ ಮಹಾಕಾರ್ಯಕ್ಕೆ ಆಶೀರ್ವದಿಸಲಿ. ಆದರೆ ಏಕೆ ಬಾಳಬೇಕು, ಜೀವನ ಎಂದರೇನು ಎಂಬುದನ್ನು ತಿಳಿಯದೆ ಇದೇ ಸಾರ ಸರ್ವಸ್ವ ಎಂದರೆ ಹಾಸ್ಯಾಸ್ಪದವಾಗುವುದು. ನಿನ್ನ ಜ್ಞಾನಕ್ಕೆ ಒಂದು ಆಧಾರವಿಲ್ಲ. ಇದು ನಿಷ್ಪ್ರಯೋಜನ ಎಂದು ವಾದಿಸಬಹುದು. ಜೀವನದ ಗುರಿ ಏನು ಎಂದು ನಾನು ನಿಮ್ಮನ್ನು ಕೇಳಿದರೆ ನನಗೆ ಗೊತ್ತಿಲ್ಲ ಎನ್ನುವಿರಿ. ನಿಮ್ಮ ಅಧ್ಯಯನಕ್ಕೆ ನಿಮಗೆ ಸ್ವಾಗತ. ನನ್ನ ಅಧ್ಯಯನಕ್ಕೆ ನನಗೆ ಅವಕಾಶ ಕೊಡಿ.

ನಾನು ನನ್ನ ದೃಷ್ಟಿಯಲ್ಲಿ ವ್ಯವಹಾರ ಪರ, ಅತಿ ವ್ಯವಹಾರ ಪರ. ಪಾಶ್ಚಾತ್ಯರೊಬ್ಬರೇ ವ್ಯವಹಾರ ಚತುರರೆಂಬ ನಿಮ್ಮ ಭಾವನೆಗೆ ಬುಡವಿಲ್ಲ. ನೀವು ಒಂದು ವಿಧದಲ್ಲಿ ವ್ಯವಹಾರ ಪರರು, ನಾನು ಬೇರೊಂದು ವಿಧದಲ್ಲಿ ವ್ಯವಹಾರ ಪರ. ವಿವಿಧ ಜನ ವಿವಿಧ ಮನಗಳಿರುವುವು. ಪೌರಾತ್ಯ ದೇಶದಲ್ಲಿ ಯಾರಿಗಾದರೂ ಬದುಕಿರುವ ತನಕ ಒಂದು ಕಾಲುಮೇಲೆ ನಿಂತರೆ ನೀನು ದೇವರನ್ನು ನೋಡುವೆ ಎಂದರೆ ಅವನು ಅದನ್ನು ಅನುಸರಿಸುವನು, ಪಾಶ್ಚಾತ್ಯರು ಎಲ್ಲೋ ಅನಾಗರಿಕ ಪ್ರದೇಶ ಒಂದರಲ್ಲಿ ಚಿನ್ನವಿದೆ ಎಂದು ಕೇಳಿದರೆ ಚಿನ್ನಕ್ಕಾಗಿ ಪ್ರಾಣಾಪಾಯವನ್ನೂ ಇದಿರಿಸುವರು. ಬಹುಶಃ ಅವರಲ್ಲಿ ಒಬ್ಬ ಜಯಶಾಲಿಯಾಗಬಹುದು. ಅದೇ ಜನ ತಮಗೆ ಒಂದು ಆತ್ಮವಿದೆ ಎಂಬುದನ್ನು ಕೇಳಿರುವರು. ಆದರೆ ಅದನ್ನು ಚರ್ಚಿನ ವಶಕ್ಕೆ ಕೊಡುವುದರಲ್ಲೇ ತೃಪ್ತರಾಗಿರುವರು. ಮೊದಲನೆಯವನು ಕಾಡು ಮನುಷ್ಯನ ಹತ್ತಿರ ಹೋಗುವುದಿಲ್ಲ. ಅದು ಬಹಳ ಅಪಾಯ ಕರವೆಂದು ಭಾವಿಸುವನು. ಅವನಿಗೆ ಬೆಟ್ಟದ ಶಿಖರದಮೇಲೆ ಒಬ್ಬ ಮಹಾಜ್ಞಾನಿ ಇರುವನು, ಆತ್ಮಜ್ಞಾನವನ್ನು ತನಗೆ ಕೊಡಬಲ್ಲ ಎಂದು ಕೇಳಿದರೆ, ಅವನ ಸಮೀಪಕ್ಕೆ ಹತ್ತಿ ಹೋಗಲುಯತ್ನಿಸುವನು. ಆ ಪ್ರಯತ್ನದಲ್ಲಿ ಪ್ರಾಣಹೋದರೂ ಲೆಕ್ಕಿಸುವುದಿಲ್ಲ. ಇಬ್ಬರೂ ವ್ಯವಹಾರಿಕರೆ. ಆದರೆ ಈ ಪ್ರಪಂಚವೇ ಸರ್ವಸ್ವ ಎಂದು ಭಾವಿಸುವುದೇ ನಮ್ಮ ತಪ್ಪು. ನಿಮ್ಮದು ಮಾಯವಾಗುವ ಇಂದ್ರಿಯಭೋಗ. ಅಲ್ಲಿ ಶಾಶ್ವತವಾದುದಾವುದೂ ಇಲ್ಲ. ಅದು ಇನ್ನೂ ಹೆಚ್ಚು ಹೆಚ್ಚು ದುಃಖವನ್ನು ಮಾತ್ರ ತರುವುದು. ಆದರೆ ನನ್ನದು ಶಾಶ್ವತ ಶಾಂತಿಯನ್ನು ನೀಡುವುದು.

ನಿಮ್ಮ ದೃಷ್ಟಿ ತಪ್ಪು ಎನ್ನುವುದಿಲ್ಲ. ನಿಮ್ಮ ದೃಷ್ಟಿಯನ್ನು ಇಟು

ಕೊಂಡಿರಬಹುದು. ಅದರಿಂದ ಎಷ್ಟೋ ಒಳ್ಳೆಯದಾಗುವುದು. ಆದರೆ ನನ್ನ ದೃಷ್ಟಿಯನ್ನು ದೂರಬೇಡಿ. ನನ್ನದೂ ಒಂದು ದೃಷ್ಟಿಯಲ್ಲಿ ವ್ಯವಹಾರ ಸಾಧ್ಯವೆ. ನಾವೆಲ್ಲ ನಮ್ಮ ನಮ್ಮ ಕಾರ್ಯಕ್ಷೇತ್ರದಲ್ಲಿ ಕೆಲಸ ಮಾಡುವ. ದೇವರ ದಯೆಯಿಂದ ಎರಡು ಕಾರ್ಯಕ್ಷೇತ್ರದಲ್ಲಿಯೂ ನಾವು ಅನುಷ್ಠಾನನಿಪುಣರಾದರೆ! ನಾನು ಕೆಲವು ವಿಜ್ಞಾನಿಗಳನ್ನು ನೋಡಿರುವೆನು. ವಿಜ್ಞಾನ ಮತ್ತು ಆಧ್ಯಾತ್ಮವಿದ್ಯೆ ಎರಡರಲ್ಲಿಯೂ ಚತುರರಾಗಿದ್ದರು. ಕಾಲಕ್ರಮೇಣ ಇಡೀ ಮಾನವಕೋಟಿ ಹೀಗೆಯೇ ನಿಪುಣರಾಗುವರೆಂದು ನಾನು ಆಶಿಸುತ್ತೇನೆ. ಒಂದು ಪಾತ್ರೆಯಲ್ಲಿರುವ ನೀರು ಕುದಿಯುವುದಕ್ಕೆ ಬರುವುದನ್ನು ನೀವು ನೋಡುವಾಗ, ಮೊದಲು ಒಂದು ಗುಳ್ಳೆ ಏಳುವುದು. ನಂತರ ಮತ್ತೊಂದು ಅನಂತರ ಮತ್ತೊಂದು ಕೊನೆಗೆ ಎಲ್ಲಾ ಸೇರಿ ಒಟ್ಟಿಗೆ ಕುದಿಯಲು ಆರಂಭವಾಗುವುದು. ಈ ಪ್ರಪಂಚವೂ ಹಾಗೆಯೆ. ಪ್ರತಿಯೊಬ್ಬನೂ ಒಂದು ಗುಳ್ಳೆಯಂತೆ. ದೇಶ ಹಲವು ಗುಳ್ಳೆಗಳಂತೆ. ಕ್ರಮೇಣ ಈ ದೇಶಗಳೆಲ್ಲ ಸೇರುತ್ತಿರುವುವು. ಬೇರೆ ಬೇರೆ ದೇಶವೆಲ್ಲ ಮಾಯವಾಗಿ ನಾವೆಲ್ಲ ಸೇರುವುದಕ್ಕೆ ಹೋಗುತ್ತಿರುವ ಏಕತ್ವ ವ್ಯಕ್ತವಾಗುವ ಕಾಲ ಒಂದು ಬರುವುದೆಂದು ನಾನು ಹಾರೈಸುವೆನು. ಪ್ರತಿಯೊಬ್ಬರು ವೈಜ್ಞಾನಿಕ ಪ್ರಪಂಚದಲ್ಲಿ ಹೇಗೆ ನಿಪುಣರೊ ಹಾಗೆಯೇ ಆಧ್ಯಾತ್ಮಿಕ ಪ್ರಪಂಚದಲ್ಲಿಯೂ ನಿಪುಣರಾಗುವಂತಹ ಒಂದು ಕಾಲ ಬಂದೇ ಬರುವುದು. ಆಗ ಐಕ್ಯತೆ, ಐಕ್ಯತೆಯ ಸಮನ್ವಯ, ವಿಶ್ವದಲ್ಲೆಲ್ಲಾ ತಾಂಡವಾಡುವುದು. ಮಾನವರೆಲ್ಲ ಜೀವನ್ಮುಕ್ತರಾಗುವರು. ಆಗುರಿಯೆಡೆಗೆ ನಾವೆಲ್ಲ ಅಸೂಯೆ ದ್ವೇಷಗಳ ಮೂಲಕ, ಸಹಕಾರ ಮತ್ತು ಪ್ರೇಮದ ಮೂಲಕ ಸೇರಲು ಸಾಧನೆ ಮಾಡುತ್ತಿರುವೆವು. ಒಂದು ಮಹಾ ಪ್ರವಾಹ ನಮ್ಮನ್ನೆಲ್ಲಾ ಹೊತ್ತುಕೊಂಡು ಸಾಗರದೆಡೆಗೆ ಧಾವಿಸುತ್ತಿದೆ. ನಾವು ಕೆಲವುವೇಳೆ ಹುಲ್ಲು ಕಾಗದದ ಚೂರಿನಂತೆ ಗೊತ್ತುಗುರಿಯಿಲ್ಲದೆ ಅದರಮೇಲೆ ತೇಲುತ್ತಿದ್ದರೂ ನಾವೆಲ್ಲಾ ಕೊನೆಗೆ ಚಿದಾನಂದ ಸಾಗರವನ್ನು ಸೇರುವುದರಲ್ಲಿ ಸಂದೇಹವಿಲ್ಲ.

---

# ಆತ್ಮಸ್ವಾತಂತ್ರ್ಯ

ನಾವು ಹಿಂದೆ ಓದುತ್ತಿದ್ದ ಕಠೋಪನಿಷತ್ತು ನಾವು ಈಗ ಓದ ಬೇಕೆಂದಿರುವ ಛಾಂದೋಗ್ಯುಪನಿಷತ್ತಿಗಿಂತ ಬಹಳ ಈಚಿನದು. ಕಠೋಪನಿಷತ್ತಿನಲ್ಲಿ ಭಾಷೆ ಈಚಿನದು, ಬಹಳ ಹೆಚ್ಚು ಸುವ್ಯವಸ್ಥಿತವಾಗಿದೆ. ಹಳೆಯ ಉಪನಿಷತ್ತಿನಲ್ಲಿ ಭಾಷೆ ಅತಿ ಪ್ರಾಚೀನ. ವೇದಗಳಮಂತ್ರ ಭಾಷೆಯಂತಿದೆ. ಸಾರ ಸಿದ್ಧಾಂತಗಳನ್ನು ಪಡೆಯುವುದಕ್ಕೆ ಮುಂಚೆ ಎಷ್ಟೋ ಅನಾವಶ್ಯಕವಾದುದರ ಮೂಲಕ ಹೋಗಬೇಕಾಗುವುದು. ನಾನು ನಿಮಗೆ ಹೇಳಿದ ವೇದದ ಎರಡನೆ ಭಾಗವಾದ ಕ್ರಿಯಾಕಾಂಡ ಈ ಉಪನಿಷತ್ತಿನಲ್ಲಿ ಬಹಳವಾಗಿದೆ. ಅರ್ಧಕ್ಕಿಂತ ಹೆಚ್ಚು ಭಾಗ ಈಗಲೂ ಕ್ರಿಯಾ ಕಾಂಡದಲ್ಲೆ ಇದೆ. ಬಹಳ ಪುರಾತನ ಉಪನಿಷತ್ತನ್ನು ಓದುವುದರಿಂದ ಒಂದು ಪ್ರಯೋಜನವಿದೆ. ಆಧ್ಯಾತ್ಮಿಕ ಭಾವನೆಗಳನ್ನು ಚಾರಿತ್ರಿಕ ರೀತಿ ನೋಡಬಹುದು. ಇತ್ತೀಚಿನ ಉಪನಿಷತ್ತುಗಳಲ್ಲಿ ಆಧ್ಯಾತ್ಮಿಕ ಭಾವನೆ ಗಳನ್ನೆಲ್ಲಾ ಸಂಗ್ರಹಿಸಿ ಒಂದುಕಡೆ ತಂದಿರುವರು. ಭಗವದ್ಗೀತೆ ಇದಕ್ಕೆ ಉದಾಹರಣೆ. ಇದೇ ಬಹುಶಃ ಕಡೆಯ ಉಪನಿಷತ್ತೆಂದು ಪರಿಗಣಿಸ ಬಹುದು. ಅಲ್ಲಿ ಕರ್ಮಕಾಂಡದ ಚಿಹ್ನೆಯೇ ಇಲ್ಲ. ಉಪನಿಷತ್ತಿನಿಂದ ಸಂಗ್ರಹಿಸಿದ ಹಲವು ಆಧ್ಯಾತ್ಮಿಕ ಭಾವನೆಯ ಅಲರಿನ ಒಂದು ತುರಾಯಿ ಯಂತೆ ಇರುವುದು. ಆದರೆ ಗೀತೆಯಲ್ಲಿ ಆಧ್ಯಾತ್ಮಿಕ ಭಾವನೆಯ ವಿಕಾಸ ವನ್ನು ನೀವು ನೋಡಲಾರಿರಿ, ನೀವು ಅವುಗಳ ಆದಿಯನ್ನು ಕಂಡುಹಿಡಿಯ ಲಾರಿರಿ. ನೀವು ಅದನ್ನು ಮಾಡಬೇಕಾದರೆ, ಅನೇಕರು ಹೇಳುವಂತೆ ವೇದಗಳನ್ನು ಓದಬೇಕು. ಈ ಗ್ರಂಥವನ್ನು ಅತಿ ಪವಿತ್ರ ದೃಷ್ಟಿಯಿಂದ ನೋಡುವ ಕಾರಣ ಪ್ರಪಂಚದ ಉಳಿದೆಲ್ಲ ಗ್ರಂಥಗಳಿಗಿಂತಲೂ ಅತ್ಯಲ್ಪ ಪ್ರಕ್ಷಿಪ್ತ ಭಾಗಗಳು ಇರಲು ಸಾಧ್ಯವಾಯಿತು. ಅಲ್ಲಿ ಭಾವನೆಯ ಶ್ರೇಷ್ಠತಮ ಶಿಖರವನ್ನು ಕಾಣುವಂತೆ, ಅದರ ಭೂಭಾಗವೂ ಕಾಣುವುದು. ಮುಖ್ಯ ವಾದುದು ಅಲ್ಲದುದು ಎರಡೂ ಇವೆ. ಅತಿಉದಾತ್ತ ಬೋಧನೆಗಳು ಜೊತೆಗೆ ಪ್ರಮುಖವಲ್ಲದ ವಿವರಗಳು ಜೊತೆ ಜೊತೆಯಲ್ಲಿಯೇ ಇವೆ. ಯಾರಿಗೂ ಅದನ್ನು ಮುಟ್ಟಲು ಧೈರ್ಯವಿರಲಿಲ್ಲ. ಭಾಷ್ಯಕಾರರು ಬಂದು ಅದರಲ್ಲಿ ಸಾಮರಸ್ಯ ಬರುವಂತೆ ಪ್ರಯತ್ನಿಸಿ ಹಳೆಯದರಿಂದ ಅತ್ಯದ್ಭುತ ಹೊಸ ಭಾವನೆಗಳು ಬರುವಂತೆ ಮಾಡಿದರು. ಅತಿಸಾಧಾರಣ ಮಾತುಗಳಲ್ಲಿಯೂ ಅತಿಅದ್ಭುತ ಆಧ್ಯಾತ್ಮಿಕ ಸತ್ಯಗಳಿವೆಯೇನೊ ಎಂದು

ಹುಡುಕಲೆತ್ನಿಸಿದರು. ಆದರೆ ಪಠ್ಯಗ್ರಂಥಹಾಗೆಯೇ ಉಳಿಯಿತು. ಆದಕಾರಣವೇ ಇದು ಅದ್ಭುತ ಐತಿಹಾಸಿಕ ಅಧ್ಯಯನ. ಪ್ರತಿಯೊಂದು ಧರ್ಮದ ಗ್ರಂಥಗಳಲ್ಲಿಯೂ, ಅನಂತರ ಬೆಳೆದ ಆಧ್ಯಾತ್ಮಿಕಭಾವನಾ ವಿಕಾಸಕ್ಕೆ ತಕ್ಕಂತೆ ಮಾರ್ಪಾಡುಗಳನ್ನು ಮಾಡಿದರೆಂಬುದು ನಮಗೆಲ್ಲಾ ಗೊತ್ತಿದೆ. ಒಂದು ಪದ ಇಲ್ಲಿ ಬದಲಾಯಿಸಿದರು, ಮತ್ತೊಂದು ಕಡೆ ಹೊಸದೊಂದನ್ನು ಸೇರಿಸಿದರು, ಹೀಗೆ ಹಲವು ಬದಲಾವಣೆಗಳಾಗಿವೆ. ವೇದಸಾಹಿತ್ಯಕ್ಕೆ ಬಹುಶಃ ಹೀಗೆ ಮಾಡಿರಲಾರರು, ಒಂದು ವೇಳೆ ಮಾಡಿದ್ದರೂ ಅದು ಅತ್ಯಲ್ಪ. ಆದಕಾರಣ ನಮಗೊಂದು ಅನುಕೂಲವಿದೆ. ನಾವು ಭಾವನೆಗಳನ್ನು ಆಯಾಕಾಲದ ಪ್ರಾಮುಖ್ಯತೆಯ ದೃಷ್ಟಿಯಲ್ಲಿ ನೋಡಬಹುದು. ಅವುಹೇಗೆ ವೃದ್ಧಿಯಾದವು ಜಡ ವಾಸ್ತವಿಕ ಭಾವನೆ ಗಳಿಂದ, ಸೂಕ್ಷ್ಮ, ಸೂಕ್ಷ್ಮತರವಾದ ಆಧ್ಯಾತ್ಮಿಕ ಭಾವನೆಗಳು ಬೆಳೆಯುತ್ತಾ ಬಂದು ವೇದಾಂತದಲ್ಲಿ ಅತ್ಯುಚ್ಚ ಶಿಖರಕ್ಕೆ ಮುಟ್ಟಿದವು ಎಂಬುದನ್ನು ನೋಡಬಹುದು. ಹಿಂದಿನಕಾಲದ ರೀತಿ ನೀತಿಗಳೂ ಅಲ್ಲಿವೆ ಆದರೆ ಅವು ಉಪನಿಷತ್ತಿನಲ್ಲಿ ಅಷ್ಟುಹೆಚ್ಚು ಕಾಣುವುದಿಲ್ಲ. ಇಲ್ಲಿ ಉಪಯೋಗಿ ಸಿರುವ ಭಾಷೆ ಕಷ್ಟವಾದ ಸೂತ್ರಭಾಷೆ.

ಈ ಗ್ರಂಥಕರ್ತರು ಆಗಲೆ ಎಲ್ಲರಿಗೂ ತಿಳಿದಿದೆ ಎಂದು ಊಹಿಸಿದ ಕೆಲವು ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕಾಗಿ ಅಲ್ಲೊಂದು ಇಲ್ಲೊಂದು ಬರೆದಿಟ್ಟರು. ಅವರು ಹೇಳುವ ಘಟನೆ ಆಗಲೆ ಬಹುಶಃ ಎಲ್ಲರಿಗೂ ಗೊತ್ತಿದೆ ಎಂದು ಅವರು ಭಾವಿಸುವರು. ಇಲ್ಲೊಂದು ದೊಡ್ಡ ಕಷ್ಟ ಬರುವುದು. ಈ ಕಥೆಯ ಯಾವುದೊಂದರ ಅರ್ಥವೂ ನಮಗೆ ಸರಿಯಾಗಿ ಗೊತ್ತಾಗುವುದಿಲ್ಲ. ಪೂರ್ವ ಸಂಪ್ರದಾಯ ಮಕ್ಕಾಲುಪಾಲು ನಾಶವಾಗಿದೆ. ಇದ್ದಸ್ವಲ್ಪವೂ ಉತ್ಪ್ರೇಕ್ಷೆಯಿಂದ ಬೇರೆ ರೂಪಶಾಳಿದೆ. ಅದಕ್ಕೆ ಹೊಸಹೊಸ ವ್ಯಾಖ್ಯಾನಗಳನ್ನು ಮಾಡಿರುವರು. ಅವು ಪುರಾಣ ದಿಂದ ಬಂದಾಗ ಆಗಲೆ ಭಾವಗೀತೆಯ ರೂಪುತಾಳಿವೆ. ಪಾಶ್ಚಾತ್ಯ ಜನಾಂಗದ ರಾಜಕೀಯ ಬೆಳವಣಿಗೆಯಲ್ಲಿ ನಮಗೆ ಒಂದು ಮುಖ್ಯಭಾವನೆ ತೋರುವುದು. ಅವರು ನಿರಂಕುಶಪ್ರಭುತ್ವವನ್ನು ಸಹಿಸಲಾರರು, ಒಬ್ಬ ಮನುಷ್ಯ ಎಲ್ಲರನ್ನೂ ಆಳುವುದನ್ನು ಅವರು ಸಾಧ್ಯವಾದಷ್ಟು ತಪ್ಪಿಸಲು ಯತ್ನಿಸಿರುವರು. ಕ್ರಮೇಣ ಪ್ರಜಾಪ್ರಭುತ್ವದ ಗಹನಭಾವನೆಗೆ ಬರುತ್ತಿರು ವರು. ಬಾಹ್ಯ ಸ್ವಾತಂತ್ರ್ಯದ ಶ್ರೇಷ್ಠತರಭಾವನೆಗೆ ಬರುತ್ತಿರುವರು. ಇದರಂತೆಯೇ ಹಿಂದೂದರ್ಶನಗಳಲ್ಲಿಯೂ ಆಧ್ಯಾತ್ಮಿಕಭಾವನೆಯ

ಬೆಳವಣಿಗೆಯನ್ನು ನೋಡುವೆವು. ಹಲವು ದೇವರು ಒಂದು ದೇವರಿಗೆ ಎಡೆಕೊಟ್ಟವು. ಉಪನಿಷತ್ತಿನಲ್ಲಿ ಆ ಒಂದು ದೇವರ ಮೇಲೆಯೂ ದಂಗೆ ಏಳುವರು. ಹಲವುದೇವತೆಗಳು ತಮ್ಮ ಅದೃಷ್ಟಕ್ಕೆ ಹೊಣೆಗಾರರಾಗಿದ್ದುದನ್ನು ಸಹಿಸದೆ ಇರುವುದು ಮಾತ್ರವಲ್ಲ ಒಬ್ಬ ಇಡೀ ವಿಶ್ವವನ್ನು ಆಳುತ್ತಿರುವನೆಂಬ ಭಾವನೆಕೂಡ ಸಹಿಸಲಸದಳವಾಯಿತು. ನಮಗೆ ಮೊದಲು ತೋರುವ ಭಾವನೆಯೇ ಇದು. ಈ ಭಾವನೆ ಬೆಳೆದು ಬೆಳೆದು ತನ್ನ ಪರಾಕಾಷ್ಠತೆಯನ್ನು ಮುಟ್ಟುವುದು. ಮುಕ್ಕಾಲುಪಾಲು ಎಲ್ಲಾ ಉಪನಿಷತ್ತಿನಲ್ಲಿಯೂ ಪರಾಕಾಷ್ಠತೆಗೆ ಏರಿದಾಗ ದೇವರನ್ನು ಪದಚ್ಯುತನನ್ನಾಗಿ ಮಾಡುವರು. ದೇವರ ಸಾಕಾರ ಮಾಯವಾಗುವುದು. ನಿರಾಕಾರ ಬರುವುದು. ದೇವರೊಂದು ವ್ಯಕ್ತಿಯಲ್ಲ. ಈ ವಿಶ್ವವನ್ನಾಳುವ ಎಷ್ಟೇ ಮಹಾಮಹಿಮನಾದರೂ ಅವನೊಬ್ಬ ಮನುಷ್ಯನಲ್ಲ. ಪ್ರತಿಜೀವರಲ್ಲಿರುವ ಒಂದು ತತ್ತ್ವವಾಗಿರುವನು, ವಿಶ್ವದಲ್ಲೆಲ್ಲ ಪರಿವ್ಯಾಪ್ತನಾಗಿರುವನು. ಸಾಕಾರದಿಂದ ನಿರಾಕಾರ ದೇವರೆಡೆಗೆ ಹೋಗಿ ಮಾನವನನ್ನು ಒಂದು ವ್ಯಕ್ತಿಯಂತೆ ಬಿಡುವುದು ಅಯುಕ್ತವಾಗುವುದು. ಸಾಕಾರ ಮನುಷ್ಯ ಮಾಯವಾಗಿ ಅವನೊಂದು ನಿರಾಕಾರ ತತ್ತ್ವವಾಗುವನು. ವ್ಯಕ್ತಿ ಕೇವಲ ಒಂದು ದೃಶ್ಯ, ತತ್ತ್ವ ಅದರಹಿಂದೆ ಇದೆ. ಎರಡುಕಡೆಯಿಂದಲೂ ವ್ಯಕ್ತಿ ಏಕಕಾಲದಲ್ಲಿ ನಾಶವಾಗಿ ತತ್ತ್ವವಾಗುವುದನ್ನು ನೋಡುವೆವು. ಸಾಕಾರದೇವರು ನಿರಾಕಾರನಾಗುವನು, ಸಾಕಾರ ಮನುಷ್ಯ ನಿರಾಕಾರವಾಗುವನು, ಅನಂತರ ನಿರಾಕಾರ ದೇವರು ಮತ್ತು ನಿರಾಕಾರ ಮನುಷ್ಯ ಕ್ರಮೇಣ ಮತ್ತೊಂದರಲ್ಲಿ ಲೀನವಾಗುವುದನ್ನು ನೋಡುವೆವು. ಈ ಎರಡು ಒಂದಾಗುವ ಸ್ಥಿತಿಯೇ ಉಪನಿಷತ್ತಿನಲ್ಲಿರುವುದು. ಪ್ರತಿಯೊಂದು ಉಪನಿಷತ್ತಿನ ಕೊನೆಯ ಬೋಧನೆಯೇ "ತತ್ತ್ವಮಸಿ". ಸನಾತನ ಆನಂದಮಯ ತತ್ತ್ವಒಂದಿದೆ ಅದೇ ಅನೇಕದಂತೆ ಕಾಣುತ್ತಿದೆ.

ದಾರ್ಶನಿಕರು ಅನಂತರ ಬಂದರು. ಇಲ್ಲಿಗೆ ಉಪನಿಷತ್ತಿನ ಕೆಲಸ ಪೂರೈಸಿದಂತೆ ತೋರುವುದು. ಉಳಿದುದನ್ನು ದಾರ್ಶನಿಕರು ತೆಗೆದುಕೊಳ್ಳುವರು. ಉಪನಿಷತ್ತು ಅವರಿಗೆ ಚೌಕಟ್ಟನ್ನು ಕೊಟ್ಟಿತು. ಅವರು ವಿವರಗಳನ್ನು ಭರ್ತಿಮಾಡಬೇಕಾಯಿತು. ಹಲವು ಪ್ರಶ್ನೆಗಳು ಈಗ ಸ್ವಾಭಾವಿಕವಾಗಿ ಏಳುವುವು. ಒಂದು ಸನಾತನ ತತ್ತ್ವ ಹಲವದರಂತೆ ಕಾಣಿಸುತ್ತಿದೆ ಎಂಬುದು ಸತ್ಯವಾದರೆ ಒಂದು ಹೇಗೆ ಅನೇಕ

ವಾಗುವುದು? ಇದು ಪುನಃ ಹಳೇ ಪ್ರಶ್ನೆಯನ್ನೇ ಹಾಕಿದಂತೆ. ಅಸಂಸ್ಕೃತ ರೀತಿಯಲ್ಲಿ ದೋಷ ಮುಂತಾದುವುಗಳಿಗೆ ಕಾರಣವೇನು ಎಂಬ ಪ್ರಶ್ನೆಯಂತೆ ತೋರುವುದು. ಪ್ರಪಂಚದಲ್ಲಿ ಏತಕ್ಕೆ ದೋಷವಿರುವುದು ? ಅದಕ್ಕೆ ಕಾರಣವೇನು? ಅದೇಪ್ರಶ್ನೆ ಈಗ ಸುಸಂಸ್ಕೃತವಾಗಿದೆ., ಸೂಕ್ಷ್ಮವಾಗಿದೆ. ಇಂದ್ರಿಯಗಳಹಂತದಿಂದ ನಾವೇಕೆ ಅಸುಖಿಯಾಗಿರುವೆವು ಎಂದು ಪ್ರಶ್ನಿಸುವುದಿಲ್ಲ. ತಾತ್ತ್ವಿಕ ದೃಷ್ಟಿಯಿಂದ ಕೇಳುವೆವು ಏಕ ಹೇಗೆ ಅನೇಕವಾಗುವುದು? ನಾವುನೋಡಿದಂತೆ ಇದಕ್ಕೆ ಕೊಡಬಹುದಾದ ಬಹಳ ಶ್ರೇಷ್ಠ ಉತ್ತರವೇ ಮಾಯಾಸಿದ್ಧಾಂತ. ನಿಜವಾಗಿಯೂ ಏಕ ಅನೇಕವಾಗಿಲ್ಲ, ಅದು ತನ್ನ ಯಾವ ಸ್ವಭಾವವನ್ನೂ ಕಳೆದುಕೊಂಡಿಲ್ಲ ವೈವಿಧ್ಯತೆ ಕೇವಲ ತೋರಿಕೆಗೆ. ಮಾನವ ಕೇವಲ ತೋರಿಕೆಗೆ ಒಂದು ವ್ಯಕ್ತಿ. ಆದರೆ ನಿಜವಾಗಿ ಅವನು ನಿರ್ಗುಣ. ದೇವರು ಕೇವಲ ತೋರಿಕೆಗೆ ಸಾಕಾರ ಆದರೆ ನಿಜವಾಗಿ ಅವನು ನಿರಾಕಾರ.

ಈ ಉತ್ತರದಲ್ಲಿಯೂ ಹಲವು ಹಂತಗಳಿವೆ. ತಾತ್ತ್ವಿಕರಲ್ಲಿ ಎಷ್ಟೋ ಭಿನ್ನಮತಗಳಿವೆ. ಭಾರತೀಯ ತಾತ್ತ್ವಿಕರೆಲ್ಲಾ ಈ ಮಾಯಾಸಿದ್ಧಾಂತವನ್ನು ಒಪ್ಪುವುದಿಲ್ಲ. ಬಹುಶಃ ಹಲವರು ಇದನ್ನು ಒಪ್ಪುತ್ತಲೇ ಇರಲಿಲ್ಲ. ಒಂದು ಬಗೆಯ ಇನ್ನೂ ಪ್ರವೃದ್ಧಮಾನಕ್ಕೆ ಬರದ ದ್ವೈತಿಗಳಿರುವರು. ಅವರು ಈ ಪ್ರಶ್ನೆಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಅಂಕುರಾವಸ್ಥೆಯಲ್ಲೇ ಅವರು ಅದನ್ನು ನಾಶಮಾಡಿದರು. ಅವರುಹೀಗೆಹೇಳುವರು "ಇಂತಹಪ್ರಶ್ನೆ ಕೇಳಲು ನಿನಗೆ ಅಧಿಕಾರವಿಲ್ಲ, ಇದಕ್ಕೆ ವಿವರಣೆ ಕೇಳಲು ನಿಮಗೆ ಅಧಿಕಾರವಿಲ್ಲ. ಇದು ದೈವೇಚ್ಛೆ. ನಾವು ಅದಕ್ಕೆ ಬಾಗಬೇಕು. ಮಾನವನಿಗೆ ಸ್ವಾತಂತ್ರ್ಯವಿಲ್ಲ. ಎಲ್ಲ ಮುಂಚೆಯೇ ನಿಶ್ಚಿತವಾಗಿದೆ. ನಾವೇನುಮಾಡಬೇಕು, ನಮಗೆ ಏನು ಇರಬೇಕು, ಯಾವುದನ್ನು ಆನಂದಿಸಬೇಕು, ಯಾವುದನ್ನು ಅನುಭವಿಸಬೇಕು ಎನ್ನುವುದೆಲ್ಲಾ ಆಗಲೆ ನಿರ್ಧರಿಸಿದೆ. ದುಃಖಬಂದರೆ ಸಾವಧಾನದಿಂದ ಅನುಭವಿಸಬೇಕು. ಇಲ್ಲದೆ ಇದ್ದರೆ ಹೆಚ್ಚುಶಿಕ್ಷೆಗೆ ಒಳಗಾಗಬೇಕು. ಅದುನಮಗೆ ಹೇಗೆಗೊತ್ತು? "ವೇದಹೇಳುವುದು." ಈ ಭಾವವನ್ನು ಕೊಡುವ ಶಾಸ್ತ್ರಗಳಿವೆ ಭಾಷ್ಯಗಳಿವೆ. ಅವರು ಇದನ್ನು ಬಲಾತ್ಕರಿಸುವರು.

ಮತ್ತೆಕೆಲವರು ಮಾಯಾಸಿದ್ಧಾಂತವನ್ನು ಒಪ್ಪದೇ ಇದ್ದರೂ ಮಧ್ಯದಲ್ಲಿ ನಿಲ್ಲುವರು. ಅವರು ಈ ಸೃಷ್ಟಿಯೆಲ್ಲಾ ಭಗವಂತನ ದೇಹದಂತೆ ಎನ್ನುವರು. ದೇವರೇ ಪರಮಾತ್ಮ ಇಡೀವಿಶ್ವಕ್ಕೆ ಒಡೆಯ.

ಪ್ರತ್ಯೇಕವಾಗಿರುವ ಜೀವಿಗಳು ಪಾಪಮಾಡುವುದರಿಂದ ಸಂಕೋಚವಾಗುವರು. ಒಬ್ಬ ಏನಾದರೊಂದು ಪಾಪಮಾಡಿದರೆ ಅವನಾತ್ಮ ಸಂಕುಚಿತವಾಗುವುದು. ಅವನಶಕ್ತಿ ಕೂಡ ಉಡುಗುವುದು, ಹಾಗೆಯೇ ಕಡಿಮೆಯಾಗುತ್ತಾ ಬರುವುದು. ಎಲ್ಲ ಹಿಂದೂ ದರ್ಶನಗಳಲ್ಲಿಯೂ ಸಾಮಾನ್ಯವಾಗಿರುವ ಒಂದು ಭಾವನೆ, ಪ್ರಪಂಚದ ಧರ್ಮಗಳಲ್ಲೆಲ್ಲ ಸಾಮಾನ್ಯ ಭಾವನೆ ಇದು ಎಂದು ಊಹಿಸುತ್ತೇನೆ. ಅದೇ ಮಾನವನ ಪವಿತ್ರತೆ. ಅದು ಅವರಿಗೆ ಅರಿವಾಗಿರಬಹುದು ಇಲ್ಲದೆ ಇರಬಹುದು. ಮಾನವನ ಆತ್ಮ ಏನಾದರೂ ಆಗಿರಲಿ, ದೇವರೊಂದಿಗೆ ಅದರ ಸಂಬಂಧ ಏನಾದರೂ ಇರಲಿ, ಅದು ಸ್ವಭಾವತಃ ಶುದ್ಧವಾದುದು, ಪೂರ್ಣವಾದುದು ಎಂದು ನಂಬುವರು. ಯಾವ ತತ್ತ್ವವಾಗಲಿ ಧರ್ಮವಾಗಲಿ ಇದನ್ನು ನಂಬದೆ ಇಲ್ಲ. ಈ ಭಾವನೆಯನ್ನು ಪುರಾಣ ಉಪಮಾನ ಅಥವಾ ತತ್ತ್ವದ ಮೂಲಕ ವಿವರಿಸಿರಬಹುದು. ಅದರ ಸಹಜ ಸ್ವರೂಪವೇ ಆನಂದ ಶಕ್ತಿ ದುಃಖದುರ್ಬಲತೆ ಅಲ್ಲ. ಹೇಗೆ ಈ ದುಃಖ ಬಂದಿದೆ? ಅಪ್ರಬುದ್ಧ ಧರ್ಮಗಳು ಇದನ್ನು ಪಾಪಪುರುಷ, ಶೈತಾನ್, ಅಹ್ರಿಮಾನ್ ಮುಂತಾದ ಹೆಸರಿನಿಂದ ಈ ದೋಷ ಹೇಗೆ ಬಂತು ಎಂಬುದನ್ನು ವಿವರಿಸಬಹುದು: ಇತರ ಧರ್ಮಗಳು, ದೇವರು ಮತ್ತು ಶೈತಾನ್ ಇಬ್ಬರನ್ನು ಮಿಶ್ರಮಾಡುವುವು. ಆ ದೇವರು ಯಾವ ಕಾರಣವೂ ಇಲ್ಲದೆ ಕೆಲವರನ್ನು ಸುಖಿಗಳನ್ನಾಗಿಯೂ ಮತ್ತೆ ಕೆಲವರನ್ನು ದುಃಖಿಗಳನ್ನಾಗಿಯೂ ಮಾಡುವನು. ಮತ್ತೆ ಕೆಲವರು ಆಲೋಚನಾಪರರು ಮಾಯಾ ಸಿದ್ಧಾಂತ ಮುಂತಾದುವನ್ನು ತರುವರು. ಆದರೆ ಒಂದು ಭಾವನೆ ಸ್ಪಷ್ಟವಾಗಿ ಎದ್ದು ನಿಲ್ಲುವುದು. ಇದನ್ನೇ ನಾವು ಈಗ ವಿವರಿಸಬೇಕಾಗಿದೆ. ಈ ತತ್ತ್ವಭಾವನೆ ಸಿದ್ಧಾಂತ ಎಲ್ಲಾ ಕೇವಲ ಯುಕ್ತಿಯ ಕಸರತ್ತು, ಬುದ್ಧಿಗೆ ಒಂದು ಅಂಗಸಾಧನೆ ಅಷ್ಟೆ, ನನಗೆ ಅತಿಸ್ಪಷ್ಟವಾಗಿ ಕಾಣುವ ಪ್ರತಿಯೊಂದು ದೇಶ ಮತ್ತು ಧರ್ಮದ ಮೂಢನಂಬಿಕೆಯ ರಾಶಿಯಿಂದ ಎದ್ದ ಜಾಜ್ವಲ್ಯಮಾನವಾದ ಒಂದು ಭಾವನೆ ಕಾಣುವುದು. ಅದೇ ಮಾನವ ಪವಿತ್ರಾತ್ಮ ಪವಿತ್ರತೆಯೆ ನಮ್ಮ ಸ್ವಭಾವ ಎಂಬುದು.

ಮತ್ತೇನು ಬಂದರೂ ಅದೆಲ್ಲ ಆರೋಪ ಎನ್ನುವುದು ವೇದಾಂತ. ಮತ್ತಾವುದನ್ನೋ ಆರೋಪ ಮಾಡಿರುವರು. ಆದರೆ ಆ ಪವಿತ್ರ ಸ್ವಭಾವ ಎಂದೂ ನಾಶವಾಗುವುದಿಲ್ಲ. ಅತಿ ನೀಚನಿಂದ ಅತ್ಯುತ್ತಮನವರಿಗೆ ಇದು ಯಾವಾಗಲೂ ಇದೆ. ಅದನ್ನು ನಾವು ಜಾಗ್ರತಗೊಳಿಸಬೇಕಾಗಿದೆ. ಅದು

ಅನಂತರ ತಾನೇ ಕೆಲಸಮಾಡುವುದು. ನಾವು ಅದನ್ನು ಕೋರಬೇಕು. ಅದು ತಾನೇ ವ್ಯಕ್ತವಾಗುವುದು. ಒಣಗಿದ ಸೌದೆ ಮತ್ತು ಚಕಮುಕಿ ಕಲ್ಲಿನಲ್ಲಿ ಬೆಂಕಿಯಿದೆ ಎಂದು ಹಿಂದಿನವರಿಗೆ ಗೊತ್ತಿತ್ತು. ಆದರೆ ಅದು ವ್ಯಕ್ತವಾಗಬೇಕಾದರೆ ಘರ್ಷಣೆ ಆವಶ್ಯಕ. ಸ್ವಾತಂತ್ರ್ಯ ಮತ್ತು ಪವಿತ್ರತೆ ಪ್ರತಿಯೊಂದು ಜೀವಿಯ ಸ್ವಭಾವ. ಇದು ಒಂದು ಗುಣವಲ್ಲ. ಏಕೆಂದರೆ ಗುಣವನ್ನು ಹೊಸದಾಗಿ ಪಡೆದುಕೊಳ್ಳಬಹುದು. ಹೊಸದಾಗಿ ಪಡೆದು ಕೊಂಡದ್ದು ನಾಶವಾಗಲೂಬಹುದು. ಆತ್ಮ ಸ್ವಾತಂತ್ರ್ಯದಲ್ಲಿ ಐಕ್ಯವಾಗಿದೆ, ಸತ್ಯದಲ್ಲಿ ಐಕ್ಯವಾಗಿದೆ, ಜ್ಞಾನದಲ್ಲಿ ಐಕ್ಯವಾಗಿದೆ. ಸಚ್ಚಿದಾನಂದ ಸ್ವರೂಪವೇ ಆತ್ಮನ ಸ್ವಭಾವ, ಆ ಜನ್ಮಸಿದ್ಧ ಹಕ್ಕು. ನಮ್ಮ ಕಣ್ಣೆದುರಿಗೆ ಮಂದವಾಗಿಯೋ ತೀವ್ರವಾಗಿಯೋ ಪ್ರಕಾಶಿಸುತ್ತಿರುವುದು ಅವೊಂದರ ಆವಿರ್ಭಾವನೆ. ಜನನ ಮರಣ ಬಾಳು ಅಳಿವು ಉನ್ನತಿ ಅವನತಿ ಇವೆಲ್ಲ ಆ ಒಂದು ವ್ಯಕ್ತಿಯ ಆವಿರ್ಭಾವನೆ. ಜ್ಞಾನ, ಅಜ್ಞಾನದಂತಾಗಲಿ, ಪಾಂಡಿತ್ಯದಂತಾಗಲಿ ಹೇಗೆ ವ್ಯಕ್ತವಾದರೂ ಅದೆಲ್ಲ ಜ್ಞಾನಸಾರವಾದ ಚಿತ್ತಿನ ಆವಿರ್ಭಾವನೆಮಾತ್ರ. ಭೇದ ವಸ್ತುತಃ ಅಲ್ಲ, ತರತಮದಲ್ಲಿ ಮಾತ್ರ. ನಮ್ಮ ಕಾಲ ಕೆಳಗೆಹರಿದಾಡುವ ಕ್ಷುದ್ರತಮಕೀಟದಿಂದ ಹಿಡಿದು ಪ್ರಪಂಚದ ಶ್ರೇಷ್ಠ ಪ್ರತಿಭಾವಂತನಿಗೂ ಜ್ಞಾನದಲ್ಲಿರುವ ವ್ಯತ್ಯಾಸ ತರತಮವಲ್ಲದೆ ವಸ್ತುತಃ ಅಲ್ಲ. ವೇದಾಂತ ತತ್ತ್ವಜ್ಞರು ಅತಿಧೈರ್ಯ ವಾಗಿ, ಅತಿ ಹೀನ ಆನಂದ ಕೂಡ ಆತ್ಮಸಾರವಾದ ಆ ಪರಮಾನಂದದ ಆವಿರ್ಭಾವನೆ ಎನ್ನುವರು.

ವೇದಾಂತದ ಅತಿಮುಖ್ಯಭಾವನೆಯೇ ಇದು, ಪ್ರತಿಯೊಂದು ಧರ್ಮವೂ ನಾನು ಹಿಂದೆ ಹೇಳಿದಂತೆ ಇದನ್ನೇ ಸಾರುವುದು ಎಂದು ತೋರುವುದು. ಇದಿಲ್ಲದ ಧರ್ಮವನ್ನು ನಾನಿನ್ನೂ ನೋಡಬೇಕಾಗಿದೆ. ಎಲ್ಲ ಧರ್ಮಗಳಲ್ಲಿಯೂ ವ್ಯಕ್ತವಾಗಿ ಕೆಲಸಮಾಡುತ್ತಿರುವುದೇ ಈ ಒಂದು ವಿಶ್ವಭಾವನೆ. ಉದಾಹರಣೆಗೆ ಬೈಬಲನ್ನು ತೆಗೆದುಕೊಳ್ಳಿ: ಅದರಲ್ಲಿ ಬರುವ ಆಡಮ್ಮನ ಅವನತಿಯ ರೂಪಕ ಕಥೆನೋಡಿ ಪ್ರಥಮ ಮನುಷ್ಯ ಆಡಮ್ ಪರಿಶುದ್ಧನಾಗಿದ್ದ. ಅವನ ಹೀನ ನಡತೆಗಳಿಂದ ಅವನ ಪವಿತ್ರತೆ ಅನಂತರ ಮಂಕಾಯಿತು. ಈ ರೂಪಕ ಕಥೆಯಿಂದ ಆದಿಮನುಷ್ಯ ಪರಿಶುದ್ಧನಾಗಿದ್ದ ಎಂದು ಅವರು ಭಾವಿಸುವುದು ಸ್ಪಷ್ಟವಾಗಿದೆ. ನಮಗೆ ಕಾಣುವ ಅಪೂರ್ಣತೆ ದುರ್ಬಲತೆ ಇವುಗಳೆಲ್ಲ ಆರೋಪಣೆ. ಆ ಪವಿತ್ರತೆ ಯನ್ನು ಹಿಂತಿರುಗಿ ಪಡೆಯಬಹುದು. ಇಲ್ಲ ಅದರಲ್ಲಿ ಸಂದೇಹವೇ ಇಲ್ಲ

ಎನ್ನುವುದನ್ನು ನಂತರ ಅವರ ಚರಿತ್ರೆಯೇ ತೋರುವುದು. ಹಳೆ ಮತ್ತು ಹೊಸ ಟೆಸ್ಟಮೆಂಟ್‌ನ ಚರಿತ್ರೆಯೆಲ್ಲ ಇದೆ. ಇದರಂತೆಯೇ ಮಹಮ್ಮದೀಯರು ಕೂಡ. ಅವರೂ ಕೂಡ ಆಡಮ್ ಮತ್ತು ಅವನ ಪರಿಶುದ್ಧತೆಯಲ್ಲಿ ನಂಬಿದ್ದರು. ಮಹಮ್ಮದನ ಮೂಲಕ ಕಳೆದುಕೊಂಡ ಸ್ಥಿತಿಯನ್ನು ಪುನಃ ಪಡೆಯಲು ಮಾರ್ಗವಾಯಿತು. ಇದರಂತೆಯೆ ಬೌದ್ಧರೂ ಕೂಡ. ಈ ಸಾಪೇಕ್ಷ ಪ್ರಪಂಚಕ್ಕೆ ಅತೀತವಾದ ನಿರ್ವಾಣದಲ್ಲಿ ಅವರು ನಂಬುವರು. ಇದು ವೇದಾಂತಿಗಳ ಬ್ರಹ್ಮನ ಸ್ಥಿತಿಯೆ. ಕಳೆದ ನಿರ್ವಾಣಸ್ಥಿತಿಯನ್ನು ಪಡೆಯುವ ತಳಹದಿಯಮೇಲೆ ಬೌದ್ಧಸಿದ್ಧಾಂತಗಳೆಲ್ಲಾ ನಿಂತಿವೆ. ಯಾವುದು ಆಗಲೇ ನಮ್ಮದಲ್ಲವೊ ಅದನ್ನು ಯಾರೂ ಪಡೆಯಲಾರರು ಎಂಬ ಸಿದ್ಧಾಂತ ಎಲ್ಲ ಧರ್ಮಗಳಲ್ಲಿಯೂ ಇದೆ. ಈ ಪ್ರಪಂಚದಲ್ಲಿ ನೀವಾರಿಗೂ ಋಣಿಗಳಲ್ಲ. ನೀವು ನಿಮ್ಮ ಆಜನ್ಮಸಿದ್ಧ ಹಕ್ಕನ್ನು ಮಾತ್ರ ಕೇಳುತ್ತೀರಿ. ಪ್ರಖ್ಯಾತವೇದಾಂತ ತಾತ್ತ್ವಿಕರೊಬ್ಬರು ಇದನ್ನೆ "ಸ್ವರಾಜ್ಯಸಿದ್ಧಿ" ಎಂಬ ಒಂದು ಗ್ರಂಥದಲ್ಲಿ ಅತಿ ಸುಂದರವಾಗಿ ಕಾವ್ಯರೂಪದಲ್ಲಿ ವಿವರಿಸಿರುವರು. ಆ ಸ್ವರಾಜ್ಯ ನಮ್ಮದು. ನಾವು ಅದನ್ನು ಕಳೆದುಕೊಂಡಿರುವೆವು. ನಾವು ಅದನ್ನು ಪುನಃ ಪಡೆಯಬೇಕಾಗಿದೆ. ಸ್ವರಾಜ್ಯವನ್ನು ಕಳೆದುಕೊಂಡೆ ಎಂಬುದು ಒಂದು ಭ್ರಾಂತಿ ಎಂದು ಮಾಯವಾದಿಯೇನೊ ಹೇಳುವನು. ನೀವು ಅದನ್ನು ಎಂದಿಗೂ ಕಳೆದುಕೊಂಡಿಲ್ಲ ಇದೆ ವ್ಯತ್ಯಾಸ.

ನಮಗೆ ಸ್ವರಾಜ್ಯವಿತ್ತು ನಾವು ಅದನ್ನು ಕಳೆದುಕೊಂಡಿರುವೆವು ಎಂದು ಎಲ್ಲಾ ಸಿದ್ಧಾಂತಗಳೂ ಒಪ್ಪಿಕೊಂಡಿವೆ. ಅದನ್ನು ನಾವು ಹೇಗೆ ಪುನಃ ಪಡೆಯಬಹುದು ಎಂಬುದಕ್ಕೆ ಹಲವು ಸಲಹೆಗಳನ್ನು ಕೊಡುವರು. ಹಲವರು ಅದನ್ನು ಪುನಃ ಪಡೆಯಬೇಕಾದರೆ ಕೆಲವು ವ್ರತಾದಿಗಳನ್ನು ಮಾಡಬೇಕು, ಕೆಲವು ವಿಗ್ರಹಕ್ಕೆ ಮುಡುಪು ಕೊಡಬೇಕು. ಕೆಲವು ಬಗೆಯ ಆಹಾರ ಸೇವಿಸಬೇಕು, ಒಂದುರೀತಿ ಆಚಾರ ವ್ಯವಹಾರ ರೂಢಿಗೆ ತರಬೇಕು ಎನ್ನುವರು. ಮತ್ತೊಬ್ಬರು ಪ್ರಕೃತಿಗೆ ಅತೀತನಾದವನೊಬ್ಬನಿಗೆ ನೀವು ಅತ್ತು ಪ್ರಾರ್ಥಿಸಿ. ಅವನ ಕ್ಷಮಾಪಣೆ ಬೇಡಿದರೆ ಪುನಃ ನೀವು ಅದನ್ನು ಪಡೆಯಬಹುದು ಎನ್ನುವರು. ನೀವು ಅಂತಹ ವ್ಯಕ್ತಿಯನ್ನು ಹೃತ್ಪೂರ್ವಕ ಪ್ರೀತಿಸಿದರೆ ನೀವು ಅದನ್ನು ಪಡೆಯಬಹುದು ಎಂದು ಮತ್ತೆ ಕೆಲವರು ಹೇಳುವರು. ಇಂತಹ ವಿವಿಧ ಸಲಹೆಗಳೆಲ್ಲ ಉಪನಿಷತ್ತಿನಲ್ಲಿವೆ. ನಾನು ಮುಂದುವರಿದಂತೆ ಇವೆಲ್ಲಾ ನಿಮಗೆ

ಗೊತ್ತಾಗುವುದು. ಕೊನೆಯ ಅತಿಶ್ರೇಷ್ಠ ಉಪದೇಶವೇ ನೀವು ಅಳಬೇಕಾಗಿಯೆ ಇಲ್ಲವೆನ್ನುವುದು. ನೀವುಯಾವ ವ್ರತ ನಿಯಮಾದಿಗಳನ್ನು ಅನುಸರಿಸಬೇಕಾಗಿಲ್ಲ. ಸ್ವರಾಜ್ಯವನ್ನು ಹೇಗೆ ಸಂಪಾದಿಸಬೇಕು ಎನ್ನುವುದನ್ನು ಸ್ವಲ್ಪವೂ ಗಮನಿಸಬೇಕಾಗಿಲ್ಲ. ಏತಕ್ಕೆಂದರೆ ನೀವು ಅದನ್ನು ಎಂದಿಗೂ ಕಳೆದುಕೊಂಡಿಲ್ಲವೆನ್ನುವುದು. ಯಾವುದನ್ನು ನೀವು ಕಳೆದುಕೊಂಡಿಲ್ಲವೊ ಅದನ್ನು ಏತಕ್ಕೆ ಹುಡುಕಲು ಹೋಗಬೇಕು. ನೀನಾಗಲೇ ಪರಿಶುದ್ಧ ಮುಕ್ತ. ಮುಕ್ತನೆಂದು ಭಾವಿಸಿದರೆ ನೀನು ಈ ಕ್ಷಣಮುಕ್ತನಾಗುವೆ, ಬದ್ಧನೆಂದು ಭಾವಿಸಿದರೆ ಬದ್ಧನಾಗಿಯೇ ಇರುವೆ. ಅತಿಧೀರ ನುಡಿಗಳಿವು. ನಾನು ನಿಮಗೆ ಮೊದಲೇ ಹೇಳಿದಂತೆ ಅತಿಧೀರವಾಗಿ ಮಾತನಾಡಬೇಕಾಗಿದೆ. ನಿಮಗೆ ಈಗ ಅಂಜಿಕೆಯಾಗಬಹುದು. ಆದರೆ ಇದನ್ನು ನೀವು ಮನನಮಾಡಿ, ನಿಮ್ಮ ಜೀವನದಲ್ಲಿ ಕಂಡುಕೊಂಡಾಗ, ನಾನೇನು ಹೇಳಿರುವೆನೊ ಅದು ಸತ್ಯವೆಂದು ಗೊತ್ತಾಗುವುದು. ಸ್ವಾತಂತ್ರ್ಯ ನಿಮ್ಮ ಸ್ವಭಾವವಲ್ಲದೆ ಇದ್ದರೆ, ನೀವು ಯಾವವಿಧದಲ್ಲಿಯೂ ಮುಕ್ತರಾಗಲಾರಿರಿ. ಮೊದಲು ನೀವು ಸ್ವತಂತ್ರರಾಗಿದ್ದು ಅನಂತರ ಅದನ್ನು ನೀವು ಹೇಗೊ ಕಳೆದು ಕೊಂಡೆ ಎಂದು ಭಾವಿಸಿದರೆ, ನೀವು ಮೊದಲೂ ಸ್ವತಂತ್ರರಾಗಿರಲಿಲ್ಲವೆಂದು ತೋರುವುದು. ನೀವು ಸ್ವತಂತ್ರರಾಗಿದ್ದರೆ ಯಾವುದು ನಿಮ್ಮನ್ನು ಕಳೆದು ಕೊಳ್ಳುವಂತೆ ಮಾಡುವುದು. ಸ್ವತಂತ್ರ ಎಂದಿಗೂ ಬದ್ಧವಾಗ ಲಾರದು. ಅದು ನಿಜವಾಗಿಯೂ ಬದ್ಧವಾಗಿದ್ದರೆ ಸ್ವತಂತ್ರವೆಂಬುದೊಂದು ಭ್ರಾಂತಿ.

ಎರಡರಲ್ಲಿ ನೀವು ಯಾವುದನ್ನು ಸ್ವೀಕರಿಸುವಿರಿ. ಸ್ವಭಾವತಃ ಶುದ್ಧ ಮುಕ್ತವಾಗಿದ್ದರೆ, ಪ್ರಕೃತಿಯಲ್ಲಿ ಯಾವುದೂ ಅದನ್ನು ಬಂಧಿಸಲು, ಸಾಂತದಲ್ಲಿಡಲು ಸಾಧ್ಯವಾಗಲಾರದು. ಆತ್ಮನನ್ನು ಬಂಧಿಸುವುದು ಯಾವುದಾದರೂ ಪ್ರಕೃತಿಯಲ್ಲಿ ಇದ್ದರೆ ಅದೆಂದಿಗೂ ಮುಕ್ತವಾಗಿರಲಿಲ್ಲವೆನ್ನುವುದು ಸ್ವಾಭಾವಿಕವಾಗಿ ಅನುಸರಿಸುವುದು. ಅದನ್ನು ಮುಕ್ತವೆಂದು ಹೇಳುವುದೊಂದು ಭ್ರಾಂತಿ. ನಾವು ಮುಕ್ತರಾಗಲು ಸಾಧ್ಯವಾದರೆ ಆತ್ಮ ಎಂದಿಗೂ ಬದ್ಧವಾಗಿರಲಿಲ್ಲವೆಂಬುದೆ ನಿರ್ಣಯವಾಗುವುದು. ಅದು ಅನ್ಯಥಾ ಇರಲಾರದು. ಸ್ವಾತಂತ್ರ್ಯವೆಂದರೆ ಯಾವ ಬಾಹ್ಯವಸ್ತುವಿನ ಅಧೀನದಲ್ಲಿಯೂ ಇಲ್ಲದೆ ಇರುವುದು. ಅಂದರೆ ಆತ್ಮಕ್ಕೆ ಹೊರಗಿರುವ ಯಾವುದೂ ಅದರ ಮೇಲೆ ಕಾರಣದಂತೆ ಪರಿಣಾಮಕಾರಿಯಾಗದು. ಆತ್ಮನಿಗೆ ಕಾರಣವಿಲ್ಲ. ಇದರಿಂದಲೇ ಮಹಾಭಾವನೆಗಳೆಲ್ಲ ಸಿದ್ಧಿಸುವುವು. ಆತ್ಮ ಸ್ವಭಾತಃ ನಿತ

ಮುಕ್ತ ಅಥವಾ ಬೇರೆ ಮಾತಿನಲ್ಲಿ ಹೇಳಬಹುದಾದರೆ ಅದು ಯಾವ ಹೊರಗಿನ ಪ್ರಭುಪಕ್ಕೂ ಒಳಗಾಗದು ಎಂದು ಒಪ್ಪುವವರೆಗೆ ಆತ್ಮನ ಅಮರತ್ವವನ್ನು ಸ್ಥಾಪಿಸಲಾರೆವು. ಸಾವು ಎಂಬುದು ಬಾಹ್ಯಕಾರಣದಿಂದ ಉಂಟಾದ ಒಂದು ಪರಿಣಾಮ. ನಾನು ವಿಷಕುಡಿದು ಸಾಯುತ್ತೇನೆ ಅಂದರೆ ನನ್ನ ದೇಹಕ್ಕೆ ಹೊರಗಿರುವ ವಿಷದ ಸಂಪರ್ಕದಿಂದ ನನ್ನ ದೇಹ ಅಳಿವುದೆಂಬುದನ್ನು ತೋರುವುದು. ಆತ್ಮ ನಿತ್ಯ ಮುಕ್ತವಾಗಿದ್ದರೆ, ಯಾವುದೂ ಅದರ ಮೇಲೆ ತನ್ನ ಪ್ರಭಾವವನ್ನು ಬೀರಲಾರದು, ಅದೆಂದಿಗೂ ನಾಶವಾಗದು ಎಂಬುದು ಸ್ವಾಭಾವಿಕವಾಗಿ ನಿರ್ಣಯವಾಗುವುದು. ಸ್ವಾತಂತ್ರ್ಯ ಅಮೃತತ್ವ ಆನಂದ ಇವೆಲ್ಲ ಆತ್ಮ ಕಾರ್ಯಕಾರಣ ಪ್ರಪಂಚ ಮೀರಿದ್ದರೆ, ಮಾಯೆಯನ್ನು ಮೀರಿಸಿದ್ದರೆ ಮಾತ್ರ ಸಾಧ್ಯ. ಇವೆರಡರಲ್ಲಿ ನೀವು ಯಾವುದನ್ನು ಸ್ವೀಕರಿಸುವಿರಿ? ಮೊದಲನೆಯ.ದು, ಮಿಥ್ಯ ಎನ್ನಿ, ಇಲ್ಲವೆ ಎರಡನೆಯದು ಮಿಥ್ಯ ಎನ್ನಿ. ನಿಜವಾಗಿ ನಾನು ಎರಡನೆಯದನ್ನು ಮಿಥ್ಯ ಎನ್ನುತ್ತೇನೆ. ಇದು ನನ್ನ ಭಾವನೆ. ಆದರ್ಶದೊಂದಿಗೆ ಹೊಂದಿಕೊಳ್ಳುವುದು. ನಾನು ಸ್ವಭಾವತಃ ನಿತ್ಯ ಮುಕ್ತನೆನ್ನುವುದಕ್ಕೆ ಸ್ವಲ್ಪವೂ ಅನುಮಾನವಿಲ್ಲ. ಬಂಧನ ನಿತ್ಯ, ಸ್ವಾತಂತ್ರ್ಯ ಭ್ರಾಂತಿ ಎಂದು ನಾನು ಒಪ್ಪುವುದಿಲ್ಲ.

ಈ ವಾದ ಎಲ್ಲ ಸಿದ್ಧಾಂತಗಳಲ್ಲಿಯೂ ಒಂದಲ್ಲ ಒಂದು ವಿಧದಲ್ಲಿ ನಡೆಯುವುದು. ಅತ್ಯಾಧುನಿಕ ಸಿದ್ಧಾಂತದಲ್ಲಿಯೂ ಇದೇ ವಾದವನ್ನು ಚರ್ಚಿಸುವರು. ಎರಡು ಪಕ್ಷಗಳಿವೆ. ಒಬ್ಬರು ಆತ್ಮವಿಲ್ಲ, ಆತ್ಮವೆನ್ನುವ ಭಾವನೆ ಒಂದು ಭ್ರಾಂತಿ. ಕಣಗಳ ನಿರಂತರ ಚಲನೆ ದೇಹ ಮತ್ತು ಮೆದುಳಿನ ಸಂಯೋಗವನ್ನು ಸೃಷ್ಟಿಸಿದೆ. ಈ ಕಣಗಳ ನಿರಂತರ ಚಲನೆ ಸ್ವತಂತ್ರ ಎಂಬ ಭ್ರಾಂತಿಯ ಭಾವನೆ ನೀಡುವುದು ಎನ್ನುವರು. ಇದೇ ಭಾವನೆಯನ್ನು ಹೊಂದಿದ್ದ ಬೌದ್ಧ ದಾರ್ಶನಿಕರಿದ್ದರು. ಅವರು ಇದನ್ನೇ ಒಂದು ಉದಾಹರಣೆ ಮೂಲಕ ವಿವರಿಸುತ್ತಿದ್ದರು. ನೀವು ಒಂದು ಉರಿಯುತ್ತಿರುವ ಪಂಜನ್ನು ಹಿಡಿದು ವೇಗವಾಗಿ ಚಲಿಸಿದರೆ, ಬೆಂಕಿಯ ವೃತ್ತವಾಗುವುದು. ಈ ಬೆಂಕಿಯ ವೃತ್ತ ನಿಜವಾಗಿಯೂ ಇಲ್ಲ. ಏಕೆಂದರೆ ಈ ಪಂಜು ಪ್ರತಿ ಕ್ಷಣವೂ ಚಲಿಸುತ್ತಿದೆ. ನಾವೆಲ್ಲ ಸಣ್ಣ ಕಣರಾಶಿ. ಅವು ವೇಗವಾಗಿ ಚಲಿಸುವಾಗ ಸ್ಥಿರಜೀವನದ ಒಂದು ಭಾವನೆ ನೀಡುವುದು, ಅಷ್ಟೆ. ಮತ್ತೊಂದು ಪಕ್ಷದವರು ಆಲೋಚನೆ ಅವಿರಳವಾಗಿ ಚಲಿಸುತ್ತಿರುವಾಗ ವಸ್ತುವಿದೆ ಎಂಬ ಭಾವನೆ ಒಂದು ಭ್ರಾಂತಿ ಅದು ನಿಜವಾಗಿಯೂ ಇಲ್ಲ

ಎನ್ನುವರು. ನೀವು ಯಾವ ಪಕ್ಷವನ್ನು ವಹಿಸುತ್ತೀರಿ? ನಾವೇನೊ ಆತ್ಮ ತತ್ತ್ವವನ್ನು ಸ್ವೀಕರಿಸಿ ವಸ್ತುವನ್ನು ಅಲ್ಲಗಳೆಯುವೆವು. ಇಬ್ಬರಿಗೂ ಒಂದೇ ಬಗೆಯ ವಾದವಿದೆ. ಆತ್ಮನ ಕಡೆ ಸ್ವಲ್ಪ ತೂಕವಾಗಿದೆ ಅಷ್ಟೆ. ಯಾರೂ ವಸ್ತುವೆಂದರೆ ಏನೆಂದು ಇದುವರೆಗೆ ನೋಡಿಲ್ಲ. ನಾವು ಕೇವಲ ಭಾವಿಸಬಹುದು ಅಷ್ಟೆ. ತನ್ನಿಂದ ಹೊರಗೆ ವಸ್ತುವನ್ನು ಅನುಭವಿಸ ಬಲ್ಲವನನ್ನು ನಾನು ಇದುವರೆಗೆ ನೋಡಿಲ್ಲ. ಯಾರೂ ತಮ್ಮಿಂದ ತಾವೇ ಹೊರಗೆ ನೆಗೆಯಲಾರರು. ಆದಕಾರಣವೆ ಆತ್ಮನಕಡೆ ವಾದ ಹೆಚ್ಚು ಬಲ ವಾಗಿದೆ. ಎರಡನೆಯದಾಗಿ ಆತ್ಮಸಿದ್ಧಾಂತ ಪ್ರಪಂಚವನ್ನು ವಿವರಿಸು ವುದು, ಜಡವಾದ ವಿವರಿಸಲಾರದು. ಆದಕಾರಣವೇ ಜಡವಾದಿಯ ವಿವ ರಣೆ ಅಯುಕ್ತವಾದುದು. ನೀವು ಎಲ್ಲಾ ಸಿದ್ಧಾಂತಗಳನ್ನೂ ಭಟ್ಟಿ ಇಳಿಸಿ ದರೆ ಅವು ಎರಡರಲ್ಲಿ ಯಾವುದಾದರೂ ಒಂದು ಪಕ್ಷಕ್ಕೆ ಬರುವುದು. ಇಲ್ಲಿಯೂಕೂಡ, ಜಟಿಲವಾಗಿ, ತಾತ್ತ್ವಿಕವಾಗಿ ಆತ್ಮನ ನಿತ್ಯ ಶುದ್ಧಮುಕ್ತ ಸ್ವಭಾವದ ಪ್ರಶ್ನೆಯೆ ಇರುವುದು. ಒಂದು ಪಕ್ಷದವರು ಎರಡನೆಯದು ಭ್ರಾಂತಿ ಎನ್ನುವರು. ನಾವೇನೊ ಎರಡನೆ ಪಕ್ಷ ವಹಿಸುತ್ತೇವೆ. ನಮ್ಮ ಬಂಧನ ಒಂದು ಭ್ರಾಂತಿ ಎಂದು ಭಾವಿಸುತ್ತೇವೆ.

ನಾವು ಬದ್ಧರಲ್ಲ ಆಗಲೆ ಮುಕ್ತರು ಎಂಬುದೇ ವೇದಾಂತದ ಪರಿಹಾರ. ಇದು ಮಾತ್ರವಲ್ಲ, ನಾವು ಬದ್ಧರೆಂದು ಭಾವಿಸುವುದು, ಹಾಗೆ ಹೇಳುವುದು ಕೂಡ ಅಪಾಯಕರ, ತಪ್ಪು, ಇದು ಮನೋಭ್ರಾಂತಿ. "ನಾನು ಬದ್ಧ" "ನಾನು ದುರ್ಬಲ" "ನನಗೆ ಗತಿಯಿಲ್ಲ" ಎಂದು ಹೇಳಿದೊಡನೆ ಅದೊಂದು ಗ್ರಹಚಾರ ನಿನಗೆ. ಮತ್ತೊಂದು ಬಂಧನ ನಿಮಗೆ ಬೀಳುವುದು. ಇದನ್ನು ಹೇಳಬೇಡಿ, ಹೀಗೆ ಆಲೋಚಿಸಬೇಡಿ. ಕಾಡಿನಲ್ಲಿ ಒಬ್ಬ ಹಗಲೂ ರಾತ್ರಿ "ಶಿವೋಹಂ" ಎಂದು ಉಚ್ಚರಿಸುತ್ತಿದ್ದನೆಂದು ಕೇಳಿದ್ದೆ. ಒಂದು ದಿನ ಹುಲಿ ಅವನ ಮೇಲೆ ಬಿದ್ದು ಕೊಲ್ಲಲು ಎಳೆದುಕೊಂಡು ಹೋಯಿತು. ನದಿಯ ಅತ್ತಕಡೆ ಇದ್ದ ಜನರು ಇದನ್ನು ನೋಡಿದರು. ಪ್ರಜ್ಞೆ ಇರುವ ತನಕ ಅವನು ಶಿವೋಹಂ ಎಂದು ಹುಲಿಯ ದಾಡೆಯಲ್ಲಿರುವಾಗಲೂ ಹೇಳುತ್ತಿದ್ದುದನ್ನು ಕೇಳಿದರು. ಇಂತಹ ಎಷ್ಟೊ ಜನರಿರುವರು. ಜನರನ್ನು ಚೂರು ಚೂರು ಕತ್ತರಿಸಿದಾಗಲೂ ವೈರಿಗಳನ್ನು ಆಶೀರ್ವದಿಸಿದವರು ಇರುವರು. "ನಾನು ಅವನೆ, ನಾನು ಅವನೆ, ನೀನು ಕೂಡ ಅವನೆ ನಾನು ಶುದ್ಧ ಮುಕ್ತ. ಹಾಗೆಯೆ ನನ್ನ ವೈರಿಗಳುಗಳುಕೂಡ. ನೀನು ಅವನೆ, ನಾನೂ ಅವನೆ" ಎಂದವರು ಇರುವರು. ಇದು ಧೀರನ ಸ್ಥಿತಿ. ಆದರೂ

ದ್ವೈತಿಗಳ ಧರ್ಮದಲ್ಲಿಯೂ ಅತಿ ಅಮೋಘ ಅದ್ಭುತ ಸತ್ಯಗಳಿವೆ. ಪ್ರಕೃತಿಯಿಂದ ಬೇರೆಯಾದ ನಾವು ಪ್ರಾರ್ಥಿಸಿ ಪ್ರೀತಿಸುವ ದೇವರ ಭಾವನೆ ಅದ್ಭುತವಾದುದು. ಕೆಲವು ವೇಳೆ ಮನಸ್ಸಿಗೆ ಈ ಭಾವನೆ ಎಷ್ಟೋ ಸಮಾಧಾನಕರ. ಆದರೆ ಅಂಥಹ ಸಮಾಧಾನ ಅಫೀಮು ಸೇವನೆಯಿಂದ ಬರುವುದು. ಇದು ಸ್ವಾಭಾವಿಕವಲ್ಲ ಎನ್ನುವುದು ವೇದಾಂತ. ಕೊನೆಗೆ ಇದರಿಂದ ದುರ್ಬಲತೆಯೆ ಗತಿ. ಈ ಪ್ರಪಂಚಕ್ಕೆ ಇಂದು ಎಂದಿಗಿಂತ ಹೆಚ್ಚು ಬೇಕಾಗಿರುವುದು ಶಕ್ತಿ. ದುರ್ಬಲತೆಯೇ ಎಲ್ಲಾ ದುಃಖಕ್ಕೂ ಕಾರಣ ಎನ್ನುವುದು ವೇದಾಂತ. ದುರ್ಬಲತೆಯೇ ದುಃಖಕ್ಕೆ ಏಕಮಾತ್ರ ಕಾರಣ. ನಾವು ದುರ್ಬಲರಾದುದರಿಂದ ದುಃಖಿಗಳಾಗುವೆವು. ನಾವು ದುರ್ಬಲರಾದುದರಿಂದ ಸುಳ್ಳು ಹೇಳುತ್ತೇವೆ, ಕದಿಯುತ್ತೇವೆ, ಕೊಲ್ಲುತ್ತೇವೆ, ಇನ್ನೂ ಹಲವು ಪಾಪಕೃತ್ಯಗಳನ್ನು ಮಾಡುತ್ತೇವೆ. ನಾವು ದುರ್ಬಲರಾದುದರಿಂದ ವ್ಯಥೆಗೀಡಾಗುತ್ತೇವೆ, ದುರ್ಬಲರಾದುದರಿಂದ ಸಾಯುತ್ತೇವೆ; ನಮ್ಮನ್ನು ದುರ್ಬಲಗೊಳಿಸುವುದಾವುದೂ ಇಲ್ಲದೆ ಇದ್ದರೆ ಸಾವಿಲ್ಲ ವ್ಯಸನವಿಲ್ಲ. ಭ್ರಾಂತಿಯಿಂದ ನಾವು ದುಃಖಿಗಳು. ಭ್ರಾಂತಿಯನ್ನು ಬಿಡಿ. ಇದೆಲ್ಲ ಮಾಯವಾಗುವುದು. ಇದು ಪ್ರತ್ಯಕ್ಷವಾಗಿದೆ, ಸರಳವಾಗಿದೆ. ಇಷ್ಟೊಂದು ತಾತ್ತ್ವಿಕ ಚರ್ಚೆಯಾದಮೇಲೆ, ಬೇಕಾದಷ್ಟು ಯುಕ್ತಿ ಶ್ರಮಪಟ್ಟಾದಮೇಲೆ ಇಡೀ ವಿಶ್ವದಲ್ಲಿ ಅತಿ ಸರಳವಾದ, ಧಾರ್ಮಿಕ ಭಾವನೆಗೆ ಬರುವೆವು.

ನೀವು ಸತ್ಯವನ್ನು ಜೋಡಿಸಬೇಕಾದರೆ ಅದ್ವೈತ ಸಿದ್ಧಾಂತ ಅತಿಸರಳವಾದುದು. ದ್ವೈತವನ್ನು ಭರತಖಂಡದಲ್ಲಿ ಮತ್ತೆ ಇತರಕಡೆ ಬೋಧಿಸಿದುದೆ ಒಂದು ದೊಡ್ಡ ತಪ್ಪು. ಜನ ಪರಮ ಸತ್ಯವನ್ನು ಗ್ರಹಿಸಲಿಲ್ಲ, ಜಟಿಲಮಾರ್ಗವನ್ನು ಮಾತ್ರ ಗಮನಿಸಿದರು. ಅನೇಕರಿಗೆ ಅದ್ಭುತ ತಾತ್ತ್ವಿಕ ಮತ್ತು ನೈಯಾಯಿಕ ಪ್ರಮೇಯಗಳು ತಲ್ಲಣಗೊಳಿಸುತ್ತಿದ್ದವು. ಇದನ್ನು ಎಲ್ಲರಿಗೂ ಅನ್ವಯಿಸುವುದಕ್ಕೆ ಆಗುವುದಿಲ್ಲ. ಇದು ನಿತ್ಯ ಜೀವನದಲ್ಲಿ ಅನುಷ್ಠಾನ ಸಾಧ್ಯವಲ್ಲ. ದೊಡ್ಡ ತತ್ತ್ವದ ಹೆಸರಿನಲ್ಲಿ ಜನ ಸ್ವಚ್ಛಂದವಾಗಿ ವರ್ತಿಸುವರು ಎಂದು ಭಾವಿಸಿದರು.

ಆದರೆ ಪ್ರಪಂಚಕ್ಕೆ ಅದ್ವೈತ ಬೋಧಿಸುವುದರಿಂದ ಅನೀತಿ ದುರ್ಬಲತೆ ಉಂಟಾಗುವುದೆಂದು ನಾನು ನಂಬುವುದಿಲ್ಲ. ಅದಕ್ಕೆ ವಿರೋಧವಾಗಿ ಜಗದ ಅವನತಿಗೆ ಏಕಮಾತ್ರ ಚಿಕಿತ್ಸೆಯೇ ಇದು ಎಂದು ನಂಬುತ್ತೇನೆ. ಇದು ಸತ್ಯವಾದರೆ, ಜೀವವನ್ನು ದಾನಮಾಡುವ ಅಮೃತ ಹರಿಯುತ್ತಿರು

ವಾಗ ಜನ ಬಚ್ಚಲು ನೀರನ್ನು ಏತಕ್ಕೆ ಕುಡಿಯಬೇಕು? ಅವರೆಲ್ಲ ಪರಿಶುದ್ಧರು ಎಂಬುದು ಸತ್ಯವಾದರೆ ಈ ಕ್ಷಣ ಅದನ್ನು ಏತಕ್ಕೆ ಜನರಿಗೆ ಬೋಧಿಸ ಬಾರದು? ಸಿಡಿಲಿನ ಧ್ವನಿಯಲ್ಲಿ ಹುಟ್ಟಿದ ಎಲ್ಲರಿಗೂ ಪಾಪಿಯತಿಗಳಿಗೆ ಸ್ತ್ರಿ ಪುರುಷ ಮಕ್ಕಳಿಗೆ, ಸಿಂಹಾಸನದ ಮೇಲಿರುವವನಿಗೆ, ಬೀದಿ ಕಸ ಗುಡಿಸುವವರಿಗೆಲ್ಲಾ ಏತಕ್ಕೆ ಬೋಧಿಸಬಾರದು?

ಇದೊಂದು ಅದ್ಭುತ ಅಸಾಧ್ಯ ಸಾಹಸವೆಂದು ತೋರುವುದು. ಅನೇಕರಿಗೆ ಇದು ವಿಸ್ಮಯವಾಗುವುದು. ಆದರೆ ಇದಕ್ಕೆ ಕಾರಣ ಮೂಢ ನಂಬಿಕೆಯಲ್ಲದೆ ಬೇರಲ್ಲ. ಕೆಲಸಕ್ಕೆ ಬಾರದ ಜೀರ್ಣಿಸಿಕೊಳ್ಳಲಾರದ ಆಹಾರವನ್ನು ಭಕ್ಷಿಸಿಯೋ ಅಥವಾ ಉಪವಾಸದಿಂದ ನರಳಿಯೋ ಒಳ್ಳೆ ಆಹಾರವನ್ನು ಈಗ ಸೇವಿಸಲು ಅಯೋಗ್ಯರಾಗಿರುವೆವು. ನಾವು ಬಾಲ್ಯಾರಭ್ಯ ದುರ್ಬಲಕಾರಕ ಉಪದೇಶ ಕೇಳಿರುವೆವು. ದೆವ್ವದಲ್ಲಿ ನಂಬಿಕೆ ಇಲ್ಲ ಎನ್ನುವವರನ್ನು ನೀವು ಕೇಳಿರುವಿರಿ: ಆದರೆ ಕತ್ತಲೆಯಲ್ಲಿ ಸ್ವಲ್ಪವೂ ಅಂಜದವರು ಬಹಳ ಅಪರೂಪ. ಇದು ಬರೀ ಮೂಢ ನಂಬಿಕೆ. ಇದರಂತೆಯೇ ಎಲ್ಲಾ ಧಾರ್ಮಿಕ ಮೂಢ ನಂಬಿಕೆಕೂಡ. ಶೈತಾನನಿಲ್ಲ ಎಂದರೆ ಧರ್ಮ ಸರ್ವನಾಶವಾಯಿತು ಎಂದು ಭಾವಿಸುವ ಜನ ಇಲ್ಲಿರುವರು. ಶೈತಾನನಿಲ್ಲದೆ ಧರ್ಮ ಹೇಗೆ ಸಾಧ್ಯ ಎಂದು ಜನ ನನ್ನನ್ನು ಕೇಳಿರುವರು. ನಮಗೆ ಮಾರ್ಗ ತೋರಿಸುವವರಿಲ್ಲದೆ, ಧರ್ಮ ಹೇಗೆ ಸಾಧ್ಯ? ಮತ್ತೊಬ್ಬರಿಂದ ಆಳಿಸಿಕೊಳ್ಳದೆ ನಾವು ಹೇಗೆ ಬದುಕಬಲ್ಲೆವು? ನಮಗೆ ಯಾವಾಗಲೂ ಹೀಗೆಯೆ ಇಪ್ಪು ಅಭ್ಯಾಸ. ಹೀಗೆಯೆ ಇರಬೇಕೆಂದು ಆಶಿಸುವೆವು. ಪ್ರತಿದಿನ ಯಾರೂ ನಮ್ಮನ್ನು ಬೈಯುದೇ ಇದ್ದರೆ ಮನಸ್ಸಿಗೆ ನೆಮ್ಮದಿ ಇಲ್ಲ. ಅದೇ ಹಳೆಯ ಮೂಢ ನಂಬಿಕೆ! ಅದು ಈಗ ಎಷ್ಟೆ ಭಯಂಕರವಾಗಿ ಕಂಡರೂ, ನಾವು ಪ್ರತಿಯೊಬ್ಬರೂ ಹಿಂತಿರುಗಿ ಪರಿಶುದ್ಧಾತ್ಮನನ್ನು ಆವರಿಸಿದ ಮೂಢನಂಬಿಕೆ ನೋಡಿ ನಗುವ ಒಂದು ಸಮಯ ಬಂದೇ ಬರುವುದು. ಆಗ ಸಂತೋಷದಿಂದ ಧೈರ್ಯವಾಗಿ ನಾನು ಈಗ ಮುಕ್ತ, ಹಿಂದೆ ಮುಕ್ತನಾಗಿ ಎಂದೆಂದಿಗೂ ಮುಕ್ತನಾಗಿರುವೆ ಎನ್ನುವೆವು. ವೇದಾಂತದಿಂದ ಈ ಅದ್ವೈತ ಭಾವನೆ ಉದಿಸುವುದು. ಪ್ರಪಂಚದಲ್ಲಿ ಬಾಳಲು ಯೋಗ್ಯವಾದ ಭಾವನೆ ಇದೊಂದೆ. ಶಾಸ್ತ್ರಗಳು ನಾಳೆ ನಾಶವಾಗಿ ಹೋಗಬಹುದು. ಈ ಭಾವನೆ ಮೊದಲು ಹೆಬ್ರುಗಳಿಗೆ ಹೊಳೆಯಿತೊ ಅಥವಾ ಧೃವದ ಸಮೀಪದಲ್ಲಿ ವಾಸಿಸುವ ಜನರಿಗೆ ಹೊಳೆಯಿತೊ ಯಾರೂ ಲೆಕ್ಕಿಸುವುದಿಲ್ಲ. ಇದು ಸತ್ಯ, ಸತ್ಯ ಸನಾತನವಾದುದು. ಇದು ಯಾವ ವ್ಯಕ್ತಿಯ ಅಥವಾ ದೇಶದ ವಿಶೇಷ ಆಸ್ತಿಯಲ್ಲ.

ಈ ಸತ್ಯ ಮನುಷ್ಯ ಮೃಗ ದೇವತೆ ಎಲ್ಲರಿಗೂ ಸೇರಿದುದು. ಅವರೆಲ್ಲರೂ ಇದನ್ನು ಸ್ವೀಕರಿಸಲಿ. ಜೀವನವನ್ನೇಕೆ ದುಸ್ಸಾಧ್ಯವನ್ನಾಗಿ ಮಾಡುವಿರಿ ? ಕೆಲಸಕ್ಕೆ ಬಾರದ ಮೂಢ ನಂಬಿಕೆ ಪಾಲಾಗುವುದಕ್ಕೆ ಜನರಿಗೆ ಏಕೆ ಅವಕಾಶ ಕೊಡುತ್ತೀರಿ ? ಇಪ್ಪತ್ತು ಜನ ತಮ್ಮ ಮೂಢನಂಬಿಕೆ ತ್ಯಜಿಸಿದರೆ ನಾನು ಹತ್ತು ಸಹಸ್ರ ಜನ್ಮಗಳನ್ನು ಧಾರೆ ಎರೆಯುವೆನು. ಈ ದೇಶದಲ್ಲಿ ಮಾತ್ರ ವಲ್ಲ. ಈ ಸಿಧ್ಧಾಂತದ ತೌರೂರಿನಲ್ಲಿ ಜನರಿಗೆ ಇದನ್ನು ಬೋಧಿಸಿದರೂ ಅವರಂಜುವರು. "ಈ ತತ್ತ್ವ ಪ್ರಪಂಚ ತ್ಯಜಿಸಿ ಕಾಡಿನಲ್ಲಿ ವಾಸಿಸುವ ಸನ್ಯಾಸಿಗಳಿಗೆ ಮಾತ್ರ, ನಮ್ಮಂತಹ ಗೃಹಸ್ಥರಿಗೆಲ್ಲ ಒಂದು ವಿಧ ಅಂಜಿಕೆ ಇರಲೇ ಬೇಕು, ಆಚಾರ ಇರಬೇಕು" ಎನ್ನುವರು.

ಪ್ರಪಂಚವನ್ನು ಬೇಕಾದಷ್ಟುಕಾಲ ದ್ವೈತಭಾವನೆ ಆಳಿದೆ. ಇದೇ ಅದರ ಪ್ರತಿಫಲ. ಬೇರೊಂದು ಹೊಸ ಪ್ರಯೋಗವನ್ನೇಕೆ ಮಾಡಬಾರದು ? ಎಲ್ಲರೂ ಅದ್ವೈತ ಸ್ವೀಕಾರ ಯೋಗ್ಯರಾಗಬೇಕಾದರೆ ಶತ ಶತಮಾನಗಳು ಬೇಕಾಗಬಹುದು. ಅದನ್ನು ಇಂದಿನಿಂದ ಏತಕ್ಕೆ ಪ್ರಾರಂಭಿಸ ಬಾರದು ? ನಮ್ಮ ಜೀವನದಲ್ಲಿ ಇದನ್ನು ಇಪ್ಪತ್ತು ಜನರಿಗೆ ಹೇಳಿದರೆ ಒಂದು ಮಹಾ ಕಾರ್ಯವನ್ನು ಸಾಧಿಸಿದಂತೆ.

ಅನೇಕ ವೇಳೆ ಇದನ್ನು ವಿರೋಧಿಸುವ ಒಂದು ಭಾವನೆ ಇದೆ. ಅದೇ ಇದು : "ನಾನೇ ಪರಿಶುದ್ಧ ಆನಂದಮಯ ಎನ್ನುವುದೇನೋ ಸರಿ. ಆದರೆ ಯಾವಾಗಲೂ ನನ್ನ ಜೀವನದಲ್ಲಿ ಅದನ್ನು ವ್ಯಕ್ತಗೊಳಿಸಲಾರೆ. ಅದೇನೊ ನಿಜ. ಆದರ್ಶ ಬಹಳ ಕಷ್ಟ. ಹುಟ್ಟಿದ ಪ್ರತಿಯೊಂದು ಮಗುವೂ ಬಹಳ ದೂರದಲ್ಲಿ ಮೇಲಿರುವ ಆಕಾಶವನ್ನು ನೋಡುವುದು. ಅದು ಸಿಕ್ಕುವುಧಿಲ್ಲ. ಆದರೆ ಆಕಾಶವನ್ನು ನೋಡುವುದು ತಪ್ಪೆ ? ಮೂಢ ಭಕ್ತಿಗಳನ್ನು ಸ್ವೀಕರಿಸಿ ದರೆ ಸುಲಭವಾಗುವುದೆ ? ಅಮೃತ ಸಿಕ್ಕಲಿಲ್ಲವೆಂದು ವಿಷ ಕುಡಿದರೆ ಸಮಸ್ಯೆ ಬಗೆಹರಿಯುವುದೆ ? ತಕ್ಷಣ ನಾವು ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಆಗುವುದಿಲ್ಲವೆಂದು ಅಜ್ಞಾನದಲ್ಲಿ ನಿರತರಾಗಿ ದುರ್ಬಲತೆ ಮತ್ತು ಮೂಢ ನಂಬಿಕೆಗೆ ವಶರಾಗುವುದರಿಂದ ಏನಾದರೂ ಹಿತವಾಗುವುದೆ ?

ದ್ವೈತತತ್ತ್ವದ ಹಲವು ಭಾವನೆಗೆ ನನ್ನ ಆಕ್ಷೇಪಣೆ ಏನೂ ಇಲ್ಲ. ಅದರಲ್ಲಿ ಹಲವನ್ನು ನಾನು ಮೆಚ್ಚುತ್ತೇನೆ. ಆದರೆ ಮಾನವರನ್ನು ದುರ್ಬಲರನ್ನಾಗಿ ಮಾಡುವ ಪ್ರತಿಯೊಂದು ಭಾವನೆಯನ್ನೂ ನಾನು ವಿರೋಧಿಸುತ್ತೇನೆ. ಕಾಯಿಕ ಮಾನಸಿಕ ಆಧ್ಯಾತ್ಮಿಕ ಸಾಧನೆಮಾಡುವಾಗ ಪ್ರತಿಯೊಬ್ಬ ಸ್ತ್ರೀ ಪುರುಷ, ಬಾಲಕರನ್ನೂ ನಾನು ಈ ಒಂದು ಪ್ರಶ್ನೆ ಕೇಳುತ್ತೇನೆ. ನೀವು

ಬಲಾಢ್ಯರಾಗಿರುವಿರಾ? ಬಲಾಢ್ಯರಂತೆ ಭಾವಿಸುವಿರಾ? ಸತ್ಯ ಒಂದೇ ಬಲವನ್ನು ನೀಡ ಬಲ್ಲದೆಂಬುದು ನನಗೆ ಗೊತ್ತಿದೆ. ಸತ್ಯವೊಂದೇ ಜೀವನ ವನ್ನು ಕೊಡಬಲ್ಲದೆಂದು ನನಗೆ ಗೊತ್ತಿದೆ. ಸತ್ಯದೆಡೆಗೆ ಹೋಗುವುದರಿಂದ ಮಾತ್ರ ನಾವು ಬಲಾಢ್ಯರಾಗಬಹುದು. ಬಲಶಾಲಿಯಾಗುವವರಿಗೆ ಯಾರೂ ಸತ್ಯವನ್ನು ಸೇರಲಾರರು. ಯಾವ ಸಿದ್ಧಾಂತ ಮನಸ್ಸನ್ನು ದುರ್ಬಲಗೊಳಿ ಸುವುದೊ, ಸೋಮಾರಿಯನ್ನಾಗಿ ಮಾಡುವುದೊ, ಅಸಾಧ್ಯ ರಹಸ್ಯ ಮೌಢ್ಯತೆಗಳನ್ನೆಲ್ಲ ಆಶಿಸುವಂತೆ ಯಾವುದು ಮಾಡುವುದೊ ಅದನ್ನು ನಾನು ಗೌರವಿಸುವುದಿಲ್ಲ. ಅದರ ಪರಿಣಾಮ ಅಪಾಯಕರ. ಇಂತಹ ಸಿದ್ಧಾಂತ ದಿಂದ ಎಂದಿಗೂ ಮಂಗಳವಾಗುವುದಿಲ್ಲ. ಇಂತಹ ಭಾವನೆ ಮನಸ್ಸಿಗೆ ಒಂದು ಜಾಡ್ಯದಂತೆ ದುರ್ಬಲಮಾಡುವುದು. ಇದು ಎಷ್ಟು ದುರ್ಬಲ ವಾಗುವುದೆಂದರೆ ಕಾಲ ಕ್ರಮೇಣ ಸತ್ಯ ಸ್ವೀಕರಿಸುವುದಕ್ಕೆ ಅದರಂತೆ ಬಾಳುವುದಕ್ಕೆ ಅದಕ್ಕೆ ಸಾಧ್ಯವೇ ಆಗುವುದಿಲ್ಲ. ನಮಗಿಂದು ಅವಶ್ಯಕವಾಗಿ ಬೇಕಾಗಿರುವುದು ಶಕ್ತಿ; ಭವರೋಗಕ್ಕೆ ಭೇಷಜ ಶಕ್ತಿ. ಶ್ರೀಮಂತರ ದಬ್ಬಾಳಿಕೆಗೆ ಸಿಕ್ಕಿದಾಗ ದೀನರಿಗೆ ಶಕ್ತಿ ಔಷಧಿ ಬೇಕು. ಪಾಪಿಗಳಿಗೆ ಇತರ ಪಾಪಿಗಳ ಉಪಟಳಕ್ಕೆ ಸಿಕ್ಕಿದಾಗ ಶಕ್ತಿ ಔಷಧಿ ಬೇಕು. ಅದ್ವೈತ ಭಾವನೆ ಶಕ್ತಿಯನ್ನು ನೀಡುವಂತೆ ಮತ್ತಾವುದೂ ನೀತಿವಂತರನ್ನಾಗಿ ಮಾಡಲಾರದು. ನಾವೇ ಎಲ್ಲಕ್ಕೂ ಹೊಣೆಗಾರರಾದಾಗ ಮಾತ್ರ ಅತಿ ಶ್ರೇಷ್ಠ ಕೆಲಸವನ್ನು ಮಾಡಲು ಸಾಧ್ಯ. ನಾನು ನಿಮ್ಮನ್ನೆಲ್ಲಾ ಕೇಳುತ್ತೇನೆ, ನಿಮ್ಮ ಕೈಗೆ ಒಂದು ಸಣ್ಣ ಮಗುವನ್ನು ಕೊಟ್ಟರೆ ನೀವು ಹೇಗೆ ವರ್ತಿಸು ತ್ತೀರಿ? ತತ್ಕಾಲಕ್ಕೆ ನಿಮ್ಮ ಇಡೀ ಜೀವನ ಬದಲಾಯಿಸುವುದು. ನೀವು ಏನಾದರೂ ಆಗಿರಿ. ತಾತ್ಕಾಲಿಕವಾಗಿಯಾದರೂ ನೀವು ನಿಸ್ವಾರ್ಥಿಗಳಾಗ ಬೇಕು. ಜವಾಬ್ದಾರಿ ನಿಮ್ಮ ಮೇಲೆ ಬಿದ್ದರೆ ನಿಮ್ಮ ದುಷ್ಟ ಸ್ವಭಾವವನ್ನೆಲ್ಲ ಬಿಡುವಿರಿ. ನಮ್ಮ ಇಡೀ ಶೀಲ ಬದಲಾಯಿಸುವುದು. ನಾವೇ ಎಲ್ಲಕ್ಕೂ ಎಂದು ಹೊಣೆಗಾರರಾಗುವೆವೊ ಆಗ ನಮ್ಮ ಅತಿ ಶ್ರೇಷ್ಠ ಶೀಲವ್ಯಕ್ತವಾಗು ವುದು. ನಾವು ಮತ್ತಾರನ್ನೂ ಸೆಳೆಯದೆ ಇರುವಾಗ, ದೂರುವುದಕ್ಕೆ ಮತ್ತಾವ ದೆವ್ವವೂ ಇಲ್ಲದೆ ಇರುವಾಗ, ನಮ್ಮ ಹೊರೆಯನ್ನು ಹೊರುವುದಕ್ಕೆ ಯಾವ ಸಾಕಾರ ದೇವರೂ ಇಲ್ಲದೆ ಇರುವಾಗ, ನಾವೇ ಎಲ್ಲಕ್ಕೂ ಹೊಣೆ ಗಾರರಾದಾಗ, ನಮ್ಮ ಶೀಲದ ಭವ್ಯ ಶಿಖರಕ್ಕೆ ಏರುವೆವು. ನನ್ನ ಅದೃಷ್ಟಕ್ಕೆ ನಾನೇ ಹೊಣೆ. ನಾನೇ ನನ್ನ ಒಳ್ಳೆಯದಕ್ಕೆ ಕಾರಣ, ನಾನೆ ನನ್ನ ಕೆಟ್ಟು ದಕ್ಕೆ ಕಾರಣ. ನಾನು ನಿತ್ಯ ಶುದ್ಧ ಮುಕ್ತ ಸ್ವಭಾವದವನು. ಇದನ್ನು

ವಿರೋಧಿಸುವ ಭಾವನೆಯನ್ನೆಲ್ಲಾ ನಾವು ತ್ಯಜಿಸಬೇಕು. "ನನಗೆ ಅಂಜಿಕೆ ಮರಣಗಳಿಲ್ಲ, ನನಗೆ ಕುಲಗೋತ್ರವಿಲ್ಲ. ನನಗೆ ತಾಯಿ ತಂದೆಗಳಿಲ್ಲ, ಮಿತ್ರಶತ್ರುಗಳಿಲ್ಲ, ಮರಣವಿಲ್ಲ. ನಾನು ಸಚ್ಚಿದಾನಂದ ಸ್ವರೂಪ. ನಾನೆ ಶಿವ, ನಾನೆ ಶಿವ. ಪಾಪ ಪುಣ್ಯಗಳಿಂದ ಸುಖ ದುಃಖಗಳಿಂದ ನಾನು ಬದ್ಧನಾಗಿಲ್ಲ. ತೀರ್ಥ ಶಾಸ್ತ್ರ ಯಾಗಾದಿಗಳು ನನ್ನನ್ನು ಬಂಧಿಸಲಾರವು. ನನಗೆ ಹಸಿವು ದಾಹಗಳಿಲ್ಲ. ದೇಹ ನನ್ನದಲ್ಲ. ದೇಹಕ್ಕೆ ಬರುವ ಭ್ರಾಂತಿ ನಾಶಗಳಾವುವೂ ನನಗೆ ಇಲ್ಲ. ನಾನೆ ಸಚ್ಚಿದಾನಂದ, ಶಿವೋಹಂ."

ಇದೊಂದೆ ನಮ್ಮ ಪ್ರಾರ್ಥನೆಯಾಗಬೇಕೆನ್ನುವುದು ವೇದಾಂತ. ನಾವು ಪವಿತ್ರರೆಂದು ಭಾವಿಸುವುದು ಅದನ್ನು ಇತರರಿಗೆ ಬೋಧಿಸುವುದೊಂದೆ ಗುರಿ ಎಡೆಗೆ ದಾರಿ. ನಾವು ಇದನ್ನು ಮಾಡುತ್ತಿದ್ದರೆ ಶಕ್ತಿ ಬರುವುದು. ಯಾರು ಮೊದಲು ಅಂಜುವರೋ ಅವರು ಬರಬರುತ್ತಾ ಧೀರರಾಗುವರು. ಆ ವಾಣಿಯ ಧ್ವನಿ ಬರಬರುತ್ತಾ ಹೆಚ್ಚುವುದು. ಸತ್ಯ ನಮ್ಮ ಹೃದಯವನ್ನು ಆಕ್ರಮಿಸಿ ರಕ್ತದಲ್ಲಿ ಸಂಚರಿಸಿ ದೇಹವನ್ನೆಲ್ಲಾ ವ್ಯಾಪಿಸುವುದು. ಜ್ಞಾನ ಕಾಂತಿ ಹೆಚ್ಚಿದಂತೆ ಭ್ರಾಂತಿ ತಗ್ಗುವುದು. ಅಜ್ಞಾನದ ಹೊರೆ ಮಾಯ ವಾಗುವುದು. ಎಲ್ಲ ಮಾಯವಾಗಿ ಆ ಪರಂಜ್ಯೋತಿಯೊಂದೆ ಇರುವ ಒಂದು ಸಮಯ ಬರುವುದು.



# ಬ್ರಹ್ಮಾಂಡ

ನಮ್ಮ ಸುತ್ತಲಿರುವ ಆಲರುಗಳು ಸುಂದರವಾಗಿವೆ ; ಸೂರ್ಯೋದಯ ಸುಂದರವಾಗಿದೆ; ಪ್ರಕೃತಿಯ ನಾನಾ ವರ್ಣಗಳು ಸುಂದರವಾಗಿವೆ; ಇಡೀ ವಿಶ್ವ ಸುಂದರವಾಗಿದೆ. ಮನುಷ್ಯ ಹುಟ್ಟಿದಂದಿನಿಂದಲೂ ಇದನ್ನು ನೋಡಿ ಆನಂದಿಸುವನು. ಉತ್ತುಂಗಗಿರಿ ಶಿಖರಗಳೂ, ಸಾಗರಾಭಿಮುಖವಾಗಿ ಧಾವಿಸುತ್ತಿರುವ ಮಹಾ ನದಿಗಳು, ಅಸೀಮ ಮರುಭೂಮಿ, ಅನಂತ ಸಾಗರ, ತಾರಾಖಚಿತ ಗಗನ ಇವುಗಳೆಲ್ಲ ಸುಂದರವಾಗಿವೆ; ಭವ್ಯವಾಗಿವೆ; ಭಯ ಭಕ್ತಿ ಹುಟ್ಟಿಸುತ್ತವೆ. ಅನಾದಿ ಕಾಲದಿಂದಲೂ ಪ್ರಕೃತಿ ಎನ್ನುವ ಬಾಹ್ಯ ವಿಶ್ವವೆಲ್ಲ ಮಾನವನ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ. ಇದರ ಪರಿಣಾಮವಾಗಿಯೇ "ಇದೇನು? ಎಲ್ಲಿಂದ ಬಂದುವು?" ಎಂಬ ಪ್ರಶ್ನೆ ಎದ್ದಿವೆ. ಅತಿ ಪ್ರಾಚೀನ ಮಾನವಕೃತ ವೇದಗಳ ಕಾಲದಲ್ಲೂ "ಇವೆಲ್ಲಿಂದ ಬಂದುವು? ಅಸ್ತಿನಾಸ್ತಿಗಳಿಲ್ಲದೆ ಇರುವಾಗ, ಕತ್ತಲೆ ಕತ್ತಲೆಯಲ್ಲಿ ಆವೃತವಾಗಿದ್ದಾಗ, ಯಾರು ಈ ಸೃಷ್ಟಿಯನ್ನು ಸೃಜಿಸಿದರು. ಹೇಗೆ? ಯಾರಿಗೆ ಇದು ಗೊತ್ತು? ಎಂಬ ಪ್ರಶ್ನೆಗಳೆದ್ದುವು. ಈಗಿನವರೆಗೂ ಆ ಪ್ರಶ್ನೆಗಳು ಬಂದಿವೆ. ಈ ಪ್ರಶ್ನೆ ಬಗೆಹರಿಸಲು ಕೋಟ್ಯಂತರ ವೇಳೆ ಇದಕ್ಕೆ ಉತ್ತರ ಕೊಡಬೇಕಾಗುವುದು. ಪ್ರತಿಯೊಂದು ಉತ್ತರವೂ ಸಮರ್ಪಕವಾಗಿಲ್ಲ ಎಂದು ಅರ್ಥವಲ್ಲ. ಈ ಪ್ರಶ್ನೆಗೆ ಕೊಟ್ಟ ಪ್ರತಿಯೊಂದು ಉತ್ತರದಲ್ಲಿಯೂ ಸತ್ಯಾಂಶಗಳಿದ್ದವು. ಈ ಸತ್ಯ ಕಾಲ ಕಳೆದಂತೆ ಹೆಚ್ಚು ಹೆಚ್ಚು ಪ್ರಬಲವಾಗುತ್ತ ಬರುವುದು. ಪ್ರಾಚೀನ ದಾರ್ಶನಿಕರು ಇದಕ್ಕೆ ಇತ್ತ ಉತ್ತರದ ಸಾರಾಂಶವನ್ನು ಆಧುನಿಕ ಜ್ಞಾನಕ್ಕೆ ವಿರೋಧವಲ್ಲದೆ ನಿಮ್ಮ ಮುಂದೆ ಇಡ ಬಯಸುತ್ತೇನೆ.

ಈ ಅತಿ ಪುರಾತನ ಪ್ರಶ್ನೆಯ ಕೆಲವು ಅಂಶಗಳಾಗಲೇ ಬಗೆಹರಿದಿರುವುದು ನಮಗೆ ತೋರುವುದು. ಮೊದಲನೆಯದೆ ಅಸ್ತಿನಾಸ್ತಿಗಳಿಲ್ಲದ ಒಂದು ಕಾಲವಿತ್ತು ಎನ್ನುವುದು. ಈ ಪ್ರಪಂಚ ಆಗ ಇರಲಿಲ್ಲ. ಸಾಗರ ನದಿ ಗಿರಿ ನಗರ ಗ್ರಾಮ ಮಾನವ ಪ್ರಾಣಿ ವೃಕ್ಷ ಪಕ್ಷಿಗಳಿಂದ ಕೂಡಿದ ನಮ್ಮ ಪೃಥ್ವಿತಾಯಿ ಇರಲಿಲ್ಲ. ಗ್ರಹ ನಕ್ಷತ್ರಾದಿಗಳಾವುವೂ ಇರಲಿಲ್ಲ. ಇದು ನಮಗೆ ಸತ್ಯವೆಂದು ಗೊತ್ತೆ? ಈ ನಿರ್ಣಯಕ್ಕೆ ಹೇಗೆ ಬಂದರು ಎಂಬುದನ್ನು ಕಂಡುಹಿಡಿಯಲು ಯತ್ನಿಸೋಣ. ಮನುಷ್ಯ ತನ್ನ ಸುತ್ತಲೂ ಏನನ್ನು ನೋಡುತ್ತಾನೆ? ಒಂದು ಸಣ್ಣ ಗಿಡ ತೆಗೆದುಕೊಳ್ಳಿ. ಅವನು

ಒಂದು ಬೀಜವನ್ನು ನೆಲಕ್ಕೆ ಹಾಕುತ್ತಾನೆ. ಕೊಂಚ ಕಾಲದ ಮೇಲೆ ಒಂದು ಸಸಿಯಾಗುವುದನ್ನು ನೋಡುವನು. ಕ್ರಮೇಣ ನೆಲದಿಂದ ಮೇಲೆದ್ದು ಬೆಳೆದು ಬೆಳೆದು ಒಂದು ಭೀಮ ವೃಕ್ಷವಾಗುವುದು. ಅನಂತರ ಅದು ಬೀಜವನ್ನು ಮಾತ್ರ ಬಿಟ್ಟು ಸಾಯುವುದು. ಅದು ವೃತ್ತವನ್ನು ಪೂರೈಸುವುದು. ಬೀಜದಿಂದ ಒಂದು ಮರವಾಗಿ ಪುನಃ ಬೀಜದಲ್ಲೇ ಪರ್ಯವಸಾನವಾಗುವುದು. ಹಕ್ಕಿಯನ್ನು ನೋಡಿ. ಅದು ಮೊಟ್ಟೆಯಿಂದ ಬಂದು ಬೆಳೆದು ಮುಂದಿನ ಹಕ್ಕಿಗಳಿಗೆ ಮೊಟ್ಟೆ ಇಟ್ಟು ಸಾಯುವುದು. ಇದ ರಂತೆಯೇ ಪ್ರಾಣಿ ಮನುಷ್ಯ ಕೂಡ. ಪ್ರಕೃತಿಯಲ್ಲಿ ಪ್ರತಿಯೊಂದೂ ಕೆಲವು ಬೀಜದಿಂದ, ಮೂಲಶಾಖೆಯಿಂದ, ಸೂಕ್ಷ್ಮ ಆಕಾರದಿಂದ ಮೊದಲಾಗಿ ಸ್ಥೂಲವಾಗಿ ಕೆಲ್ಲವು ಕಾಲ ಬೆಳೆದು ಸೂಕ್ಷ್ಮದಲ್ಲಿ ಪರ್ಯವಸಾನವಾಗುವುದು. ಸುಂದರ ರವಿಕಿರಣ ಮಿನುಗುತ್ತಿರುವ ಮಳೆಯಹನಿಯು ಸಾಗರದಿಂದ ಆವಿ ಯಂತೆ ಆಕಾಶದಮೇಲೇರಿ ಅಲ್ಲಿ ಮಳೆಹನಿಯಾಗಿ ಈಗ ನಮ್ಮೆದುರಿಗಿರುವ ಹನಿಯಂತೆ ಬಿದ್ದಿದೆ. ಅದು ಪುನಃ ಆವಿಯಾಗುವುದು. ಪ್ರಪಂಚದಲ್ಲಿ ನಮ್ಮನ್ನು ಸುತ್ತುತ್ತಾಯಿರುವ ಪ್ರತಿಯೊಂದು ವಸ್ತುವೂ ಹೀಗೆಯೆ. ಮಹಾಪರ್ವತಗಳು, ಹರಿವ ನೀರ್ಗಲ್ಲ ರಾಶಿ ಮತ್ತು ನದಿಗಳ ಪ್ರಭಾವಕ್ಕೆ ಸಿಕ್ಕಿ ನಿಧಾನವಾಗಿ ಆದರೆ ನಿಜವಾಗಿ ಧೂಳೀಕಣಗಳಾಗಿ ಸಾಗರಕ್ಕೆ ಹರಿದು ಹೋಗುತ್ತಿವೆ. ಅಲ್ಲಿ ಸಾಗರದಡಿಯಲ್ಲಿ ಪದರಪದರಗಳಮೇಲೆ ಹರಡಿ ಬಂಡೆಯಂತೆ ಗಟ್ಟಿಯಾಗಿ ಒಂದುಸಲ ಬೆಟ್ಟದಂತೆ ಏಳುವುದಕ್ಕೆ ಅಣಿ ಯಾಗುತ್ತದೆ. ಪುನಃ ಅವು ಘರ್ಷಣೆಗೆ ಸಿಕ್ಕಿ ಧೂಳೀಕಣಗಳಾಗುವುವು. ಹೀಗೆ ಘಟನೆ ಪುನರಾವೃತ್ತಿಯಾಗುತ್ತಿರುವುದು. ಮರಳಿನಿಂದ ಬೆಟ್ಟ ಗಳೇಳುವುವು, ಪುನಃ ಮರಳಿಗೆ ಹಿಂತಿರುಗುವುವು.

ಪ್ರಕೃತಿ ಒಂದೇ ಕ್ರಮವನ್ನನುಸರಿಸುವುದು ಸತ್ಯವಾದರೆ, (ಇದು ವರೆಗೂ ಯಾವ ಮನುಷ್ಯನ ಅನುಭವವೂ ಇದನ್ನು ವಿರೋಧಿಸಿಲ್ಲ.) ಒಂದು ಸಣ್ಣ ಮರಳಿನ ಕಣ ಹೇಗೆ ಆಗುವುದೋ ಅದರಂತೆಯೇ ಬೃಹತ್ ಸೂರ್ಯನಕ್ಷತ್ರಾವಳಿಗಳೆಲ್ಲಾ ಆಗುವುವು. ಒಂದು ಕಣ ಹೇಗೆ ಆಗಿದೆಯೋ ಹಾಗೆಯೇ ವಿಶ್ವವೆಲ್ಲ ಸೃಷ್ಟಿಯಾಗುವುದು ಸತ್ಯವಾಗಿದ್ದರೆ, ವಿಶ್ವದಲ್ಲೆಲ್ಲಾ ಒಂದೇ ನಿಯಮ ಜಾರಿಯಲ್ಲಿರುವುದು ಸತ್ಯವಾದರೆ, ವೇದದಲ್ಲಿ ಹೇಳುವಂತೆ "ಒಂದು ಹಿಡಿ ಮಣ್ಣನ್ನು ತಿಳಿಯುವುದರಿಂದ ಪ್ರಪಂಚದ ಮಣ್ಣನ್ನೆಲ್ಲಾ ತಿಳಿಯಬಹುದು." ಒಂದು ಸಣ್ಣ ಸಸಿಯ ಜೀವನವನ್ನು ಪರೀಕ್ಷಿಸಿ ನೋಡಿ. ಅದರಿಂದ ಇಡೀ ಪ್ರಪಂಚ ಹೇಗಿದೆ ಎಂಬುದನ್ನು ತಿಳಿಯ

ಬಹುದು. ಇದೆ ವಾದಸರಣಿಯನ್ನು ವಿಶ್ವಕ್ಕೆ ಅನ್ವಯಿಸಿದರೆ ನಮಗೆ ಮೊದಲು ತೋರುವುದೇ ಪ್ರತಿಯೊಂದು ಆದಿ ಮತ್ತು ಅಂತ್ಯದಲ್ಲಿ ಒಂದೇ ಸಮನಾಗಿರುವುದು ಎಂಬುದು. ಬೆಟ್ಟ ಮರಳಿನಿಂದ ಆಗುವುದು, ಪುನಃ ಮರಳಿಗೆ ತೆರಳುವುದು. ನದಿ ಆವಿಯಿಂದ ಆಗುವುದು, ಆವಿಗೇ ಹೋಗು ವುದು. ಸಸ್ಯಗಳು ಬೀಜದಿಂದ ಬಂದು ಬೀಜಕ್ಕೆ ಹೋಗುವುವು. ಮಾನವ ಜೀವಾಣುವಿನಿಂದ ಬಂದು ಜೀವಾಣುವಿಗೆ ಹೋಗುವನು. ಗ್ರಹ ತಾರಾ ವಳಿಗಳಿಂದ ಕೂಡಿದ ವಿಶ್ವ ನೀಹಾರಿಕೆಯಿಂದ ಬಂದು ಅಲ್ಲಿಗೆ ಹೋಗ ಬೇಕಾಗಿದೆ. ಇದರಿಂದ ನಾವೇನು ಕಲಿಯುವೆವು? ವ್ಯಕ್ತವಾಗಿರುವುದು ಅಥವಾ ಸ್ಥೂಲವಾಗಿರುವುದು ಪರಿಣಾಮ; ಸೂಕ್ಷ್ಮವೇ ಕಾರಣ. ಸಾವಿ ರಾರುವರ್ಷಗಳ ಹಿಂದೆ ಎಲ್ಲ ತತ್ತ್ವಗಳ ಜನಕನಂತಿದ್ದ ಕಪಿಲ, ನಾಶವೆಂದರೆ ಮೂಲಕಾರಣಕ್ಕೆ ಹಿಂತಿರುಗುವುದು ಎಂದು ಸಾರಿದನು. ಇಲ್ಲಿರುವ ಮೇಜು ನಾಶವಾದರೆ, ಯಾವ ಸೂಕ್ಷ್ಮಕಣಗಳಿಂದಾಗಿ ಮೇಜು ಎಂಬ ಆಕಾರವನ್ನು ಧರಿಸುವುದೋ ಆ ಕಣಗಳ ಸ್ಥಿತಿಗೆ ತೆರಳುವುದು. ಮನುಷ್ಯ ಕಾಲವಾದರೆ, ಯಾವ ಪಂಚಭೂತಗಳಿಂದ ಆಗಿರುವನೋ ಅಲ್ಲಿಗೆ ಹೋಗುವನು. ಈ ಭೂಮಿ ನಾಶವಾದರೆ ಯಾವ ಸೂಕ್ಷ್ಮವಸ್ತುವಿನಿಂದ ಭೂಮಿಯಾಯಿತೋ ಅಲ್ಲಿಗೆ ಹಿಂತೆರಳುವುದು. ಇದನ್ನೇ ನಾವು ನಾಶ ವೆನ್ನುವುದು. ಕಾರಣಕ್ಕೆ ಹಿಂತಿರುಗುವುದು. ಕಾರ್ಯ ಕಾರಣಕ್ಕಿಂತ ಬೇರೆ ಅಲ್ಲ ಎಂಬುದನ್ನು ಇದರಿಂದ ನಾವು ತಿಳಿಯುವೆವು. ಇದು ಬೇರೊಂದು ಸ್ಥಿತಿಯಲ್ಲಿದೆ. ಈ ಗ್ಲಾಸು ಒಂದು ಪರಿಣಾಮ. ಇದಕ್ಕೆ ಒಂದು ಕಾರಣ ವಿತ್ತು. ಈ ಕಾರಣ ಈ ಆಕಾರದಲ್ಲಿ ಐಕ್ಯವಾಗಿದೆ. ಗ್ಲಾಸು ಎನ್ನುವ ಒಂದು ಮೂಲವಸ್ತು ಜೊತೆಗೆ ಅದನ್ನು ತಯಾರಿಸುವವನ ಶಕ್ತಿ ಇವೆರಡೂ ಉಪಾದಾನ ಮತ್ತು ನಿಮಿತ್ತಕಾರಣ. ಇವೆರಡೂ ಸೇರಿ ಗ್ಲಾಸು ಆಯಿತು. ತಯಾರಿಸುವವನ ಕೈಯ್ಯಲ್ಲಿದ್ದ ಶಕ್ತಿ ಗ್ಲಾಸಿನಲ್ಲಿ ಒಂದು ಕಣ ಮತ್ತೊಂದಕ್ಕೆ ಅಂಟಿಕೊಳ್ಳುವಂತೆ ಮಾಡಿದೆ. ಇವಿಲ್ಲದೆ ಇದ್ದರೆ ಗ್ಲಾಸು ಈರೀತಿಯಲ್ಲಿ ಇರುತ್ತಿರಲಿಲ್ಲ. ಜೊತೆಗೆ ಗ್ಲಾಸಿನ ಮೂಲವಸ್ತುವೂ ಇದೆ. ಗ್ಲಾಸು ಎಂಬುದು ಸೂಕ್ಷ್ಮಕಣಗಳ ಹೊಸದೊಂದು ಆವಿರ್ಭಾವನೆಯಾಗಿದೆ. ಇದನ್ನು ಒಡೆದುಹಾಕಿದರೆ ಪರಸ್ಪರ ಅಂಟಿಕೊಳ್ಳುವ ಶಕ್ತಿ ಮೂಲರೂಪಕ್ಕೆ ಹೋಗುವುದು. ಹೊಸದೊಂದು ರೂಪು ತಾಳುವತನಕ ಗ್ಲಾಸು ಅದೇ ರೂಪದಲ್ಲಿರುವುದು.

ಕಾರ್ಯ ಕಾರಣಕ್ಕಿಂತ ಬೇರೆ ಅಲ್ಲ ಎಂಬುದನ್ನು ನೋಡಿ ಆಯಿತು.

ಸೂಕ್ಷ್ಮವಾಗಿರುವ ಕಾರಣದ ಸ್ಥೂಲ ಆವಿರ್ಭಾವನೆಯೇ ಕಾರ್ಯ. ಅನಂತರ ಮನುಷ್ಯ ಮೃಗ ವೃಕ್ಷಗಳೆಂಬ ಆಕಾರಗಳೆಲ್ಲಾ ಪುನಃ ಪುನಃ ಬಂದು ಹೋಗುತ್ತಿರುವುವು. ಬೀಜ ಮರವನ್ನು ಸೃಷ್ಟಿಸುವುದು, ಮರ ಬೀಜ ವನ್ನು ಮಾಡುವುದು, ಅದು ಪುನಃ ಮತ್ತೊಂದು ಮರವಾಗುವುದು. ಹೀಗೆಯೆ ಇದಕ್ಕೆ ಅಂತ್ಯವಿಲ್ಲ. ನೀರಿನ ಹನಿ ಬೆಟ್ಟದಿಂದುರುಳಿ ಸಾಗರಕ್ಕೆ ಹರಿಯುವುದು; ಅಲ್ಲಿಂದ ಆವಿಯಂತೆ ಮೇಲಿದ್ದು ಹನಿಯಾಗಿ ಬಿದ್ದು ಪುನಃ ಸಾಗರಕ್ಕೆ ಹರಿಯುವುದು. ಹೀಗೆಯೇ ಏಳುತ್ತ ಬೀಳುತ್ತ ವೃತ್ತ ಸಾಗುವುದು. ಇದರಂತೆ ನಾವು ನೋಡುವ ಅನುಭವಿಸುವ ಕೇಳುವ ಕಲ್ಪಿಸಿಕೊಳ್ಳುವ ಪ್ರತಿಯೊಂದು ವಸ್ತು ಜೀವನ ಕೂಡ. ನಮ್ಮ ಜ್ಞಾನ ಮೇರೆಯಲ್ಲಿರುವ ಪ್ರತಿಯೊಂದು ವಸ್ತುವೂ ಉಚ್ಛ್ವಾಸನಿಶ್ವಾಸದಂತೆ ಬಂದುಹೋಗುತ್ತಿರುವುವು. ಸೃಷ್ಟಿಯಲ್ಲಿ ಪ್ರತಿಯೊಂದು ವಸ್ತುವೂ ಹೀಗೆಯೇ ಆಗುತ್ತಿದೆ. ಒಂದು ಅಲೆ ಏಳುವುದು, ಒಂದು ಅಲೆ ಬೀಳು ವುದು, ಪುನಃ ಏಳುವುದು, ಪುನಃ ಬೀಳುವುದು. ಪ್ರತಿಯೊಂದು ಏರಿಗೂ ಇಳಿತವಿದೆ, ಪ್ರತಿಯೊಂದು ಇಳಿತಕ್ಕೂ ಏರಿದೆ. ಇದೇ ನಿಯಮ ಸಮಷ್ಟಿ ವಿಶ್ವಕ್ಕೂ ಅನ್ವಯಿಸಬೇಕು. ಏಕೆಂದರೆ ಇದು ಏಕಪ್ರಕಾರವಾಗಿರುವುದು. ಈ ಸೃಷ್ಟಿ ಮೂಲಕಾರಣಕ್ಕೆ ಹಿಂತಿರುಗಬೇಕು. ಸೂರ್ಯ ಚಂದ್ರ ತಾರಾವಳಿ ಪೃಥ್ವಿ ದೇಹ ಮನಸ್ಸು ವಿಶ್ವದ ಪ್ರತಿಯೊಂದೂ ತಮ್ಮ ಸೂಕ್ಷ್ಮ ಕಾರಣಕ್ಕೆ ಹಿಂತಿರುಗಬೇಕು, ಮಾಯವಾಗ ಬೇಕು, ನಾಶವಾಗಬೇಕು. ಕಾರಣಗಳಲ್ಲಿ ಸೂಕ್ಷ್ಮರೂಪಿನಂತೆ ಅವು ಇರುವುವು. ಈ ಸೂಕ್ಷ್ಮಕಾರಣ ಗಳಿಂದ ಅವು ಪುನಃ ಹೊಸ ಭೂಮಿ ಸೂರ್ಯ ಚಂದ್ರ ತಾರೆಗಳಂತೆ ವ್ಯಕ್ತ ವಾಗುವುವು.

ಈ ಏರಿಳಿತಗಳ ವಿಷಯದಲ್ಲಿ ನಾವು ಮತ್ತೊಂದು ಭಾವನೆಯನ್ನು ತಿಳಿದುಕೊಳ್ಳಬೇಕಾಗಿದೆ. ಬೀಜ ಮರದಿಂದಾಗುವುದು. ಅದು ತಕ್ಷಣವೇ ಮರವಾಗುವುದಿಲ್ಲ. ಕೊಂಚಕಾಲ ಅಕರ್ಮದಲ್ಲಿರುವುದು ಅಥವಾ ಅತಿ ಸೂಕ್ಷ್ಮವಾದ ಅವ್ಯಕ್ತ ಕ್ರಿಯಾರೂಪದಲ್ಲಿರುವುದು. ಬೀಜ ನೆಲದೊಳಗೆ ಕೆಲವುಕಾಲ ಕೆಲಸಮಾಡಬೇಕು. ಅದು ಚೂರುಚೂರಾಗಿ ನಾಶವಾಗು ವುದು. ಆ ನಾಶದಿಂದ ಪುನಃ ಜೀವನವೇಳುವುದು. ಆ ರೀತಿಯಲ್ಲಿ ಕೆಲವುಕಾಲ ಸೃಷ್ಟಿ ಹಾಗೆ ಕೆಲಸಮಾಡಬೇಕು. ಅವ್ಯಕ್ತ ಅದೃಶ್ಯ ಸೂಕ್ಷ್ಮಾವಸ್ಥೆಯಲ್ಲಿರಬೇಕು. ಇದನ್ನೇ ಪ್ರಳಯವೆನ್ನುವುದು. ಇದ ರಿಂದ ಹೊಸಸೃಷ್ಟಿಯಾಗುವುದು. ಸೂಕ್ಷ್ಮಾವಸ್ಥೆಗೆ ಹೋಗಿ ಅಲ್ಲಿ ಕೆಲವು

ಕಾಲವಿದ್ದು ಪುನಃ ವ್ಯಕ್ತವಾಗುವ ಒಂದು ಸೃಷ್ಟಿಗೆ ಕಲ್ಪವೆಂದು ಸಂಸ್ಕೃತ ದಲ್ಲಿ ಹೆಸರು. ನಂತರ ಬರುವ ಪ್ರಶ್ನೆಯೇ ಆಧುನಿಕರಿಗೆ ಅತಿಮುಖ್ಯ ವಾದುದು. ಸೂಕ್ಷ್ಮವಸ್ತುಗಳು ಕ್ರಮೇಣ ಅಭಿವೃದ್ಧಿಯಾಗಿ ಸ್ಥೂಲ ವಾಗುತ್ತಾ ಬರುವುದನ್ನು ನೋಡುಸೆವು. ಕಾರಣವೇ ಕಾರ್ಯ ಕಾರ್ಯವೇ ಮತ್ತೊಂದು ರೂಪಿನ ಕಾರಣ ಎಂಬುದನ್ನು ನಾವು ನೋಡಿದೆವು. ಆದ ಕಾರಣ ಈ ಸೃಷ್ಟಿ ಶೂನ್ಯದಿಂದ ಬರಲಾರದು. ಯಾವುದೂ ಕಾರಣ ವಿಲ್ಲದೆ ಬರಲಾರದು. ಕಾರಣವೇ ಮತ್ತೊಂದು ರೂಪಿನಲ್ಲಿರುವ ಕಾರ್ಯ.

ಹಾಗಾದರೆ ವಿಶ್ವ ಯಾವುದರಿಂದ ಆಯಿತು? ಅದಕ್ಕಿಂತ ಹಿಂದೆ ಇದ್ದ ಮತ್ತೊಂದು ಸೂಕ್ಷ್ಮವಸ್ತುವಿನಿಂದ. ಮನುಷ್ಯ ಯಾವುದರಿಂದ ಆದ ? ಅದಕ್ಕಿಂತ ಮುಂಚೆಇದ್ದ ಸೂಕ್ಷ್ಮಸ್ಥಿತಿಯಿಂದ. ಮರ ಯಾವುದ ರಿಂದ ಆಯಿತು ? ಬೀಜದಿಂದ. ಮರವೆಲ್ಲ ಆಗಲೆ ಬೀಜದಲ್ಲಿತ್ತು. ಅದು ಹೊರಗೆಬಂದು ವ್ಯಕ್ತವಾಗುವುದು. ಇಡೀ ವಿಶ್ವವೆಲ್ಲಾ ಆದೇ ವಿಶ್ವದ ಸೂಕ್ಷ್ಮಸ್ಥಿತಿಯಿಂದ ಜನಿಸಿತು. ಅದು ಈಗ ವ್ಯಕ್ತವಾಗಿದೆ. ಅದು ಪುನಃ ಸೂಕ್ಷ್ಮಕ್ಕೆ ಹಿಂತಿರುಗುವುದು, ಪುನಃ ವ್ಯಕ್ತವಾಗುವುದು. ಸೂಕ್ಷ್ಮ ವಸ್ತುಗಳು ವ್ಯಕ್ತವಾಗಿ ಕ್ರಮೇಣ ಸ್ಥೂಲ ಸ್ಥೂಲವಾಗಿ ತಮ್ಮ ಮಿತಿಯನ್ನು ಮುಟ್ಟಿದಮೇಲೆ ಪುನಃ ಸೂಕ್ಷ್ಮ ಸೂಕ್ಷ್ಮವಾಗುವುದು. ಸೂಕ್ಷ್ಮದಿಂದ ವ್ಯಕ್ತವಾಗಿ ಅವಯವಗಳ ಕ್ರಮವನ್ನು ಬದಲಾವಣೆ ಮಾಡಿದಂತೆ ಸ್ಥೂಲ ವಾಗುವುದನ್ನೇ ಆಧುನಿಕ ಕಾಲದಲ್ಲಿ ವಿಕಾಸವಾದವೆನ್ನುವುದು. ಇದು ನಿಜವಾದ ಸತ್ಯ. ಪೂರ್ಣ ಸತ್ಯ. ನಾವು ನಮ್ಮ ಜೀವನದಲ್ಲೇ ಇದನ್ನು ನೋಡುತ್ತೇವೆ. ಯಾವ ವಿಚಾರಪರನೂ ವಿಕಾಸವಾದಿಗಳೊಂದಿಗೆ ಒಪ್ಪದೇ ಇಲ್ಲ. ಆದರೆ ನಾವು ಮತ್ತೊಂದು ವಿಷಯುವನ್ನು ತಿಳಿದುಕೊಳ್ಳ ಬೇಕು. ನಾವು ಮತ್ತೊಂದು ಹೆಜ್ಜೆ ಮುಂದೆ ಹೋಗಬೇಕು. ಅದೇನು? ಪ್ರತಿಯೊಂದು ವಿಕಸನದ ಹಿಂದೆ ಆಪೂರಣವಿರಬೇಕು. ಬೀಜ ಮರದ ತಾಯಿ. ಮತ್ತೊಂದು ಮರವೇ ಆ ಬೀಜಕ್ಕೆ ತಾಯಾಗಿರುವುದು. ಬೀಜ ಸೂಕ್ಷ್ಮ. ಅದರಿಂದ ದೊಡ್ಡಮರ ಬರುವುದು. ಮತ್ತೊಂದು ದೊಡ್ಡ ಮರ ಆಗಲೇ ಬೀಜದಲ್ಲಿ ಅಂತರ್ಗತವಾಗಿದೆ. ಈ ಬ್ರಹ್ಮಾಂಡವೆಲ್ಲಾ ಸೂಕ್ಷ್ಮ ಜಗತ್ತಿನಲ್ಲಿತ್ತು. ಅನಂತರ ಮನುಷ್ಯನಾಗುವ ಜೀವಕಣ, ಮನುಷ್ಯ ಸುಪ್ತನಾಗಿರುವ ಸ್ಥಿತಿ, ಅದು ಅನಂತರ ಮನುಷ್ಯನಂತೆ ವಿಕಾಸ ವಾಗುವುದು. ಇದು ಸ್ಪಷ್ಟವಾದರೆ ವಿಕಾಸವಾದಿಯೊಂದಿಗೆ ನಮ್ಮ ಭಿನ್ನಾಭಿ ಪ್ರಾಯವೇನೂ ಇಲ್ಲ. ಅವರು ಇದೊಂದು ವಿಷಯವನ್ನೊಪ್ಪಿಕೊಂಡರೆ

ಧರ್ಮ ಧ್ವಂಸಕರಾಗುವ ಬದಲು ಶ್ರೇಷ್ಠಧರ್ಮರಕ್ಷಕರಾಗುವರು.

ಶೂನ್ಯದಿಂದ ನಾವೇನನ್ನೂ ಸೃಷ್ಟಿಸಲಾರೆವೆಂಬುದನ್ನು ನೋಡಿದೆವು. ಪ್ರತಿಯೊಂದೂ ಎಂದೆಂದಿಗೂ ಇರುವುದು, ಮುಂದೆಯೂ ಎಂದೆಂದಿಗೂ ಇರುವುದು. ಏಳುಬೀಳುಗಳಂತೆ ಮಾತ್ರ ಇದರ ಗಮನ; ಸೂಕ್ಷ್ಮಕ್ಕೆ ಹೋಗುವುದು, ಪುನಃ ಸ್ಥೂಲವಾಗಿ ವ್ಯಕ್ತವಾಗುವುದು. ಈ ಸಂಕೋಚ ವಿಕಾಸ ವಿಶ್ವದಲ್ಲೆಲ್ಲಾ ಆಗುತ್ತಿರುವುದು. ಅತಿಕ್ಷುದ್ರತಮ ಜೀವದಿಂದ ಹಿಡಿದು ಅತಿಶ್ರೇಷ್ಠತಮ ಪರಿಪೂರ್ಣ ಮಾನವನವರೆಗೆ ಆಗಿರುವ ವಿಕಸನಗಳೆಲ್ಲ ಮತ್ತೊಂದು ಆಪೂರಣದಿಂದ ಬಂದಿರಬೇಕು. ಆಪೂರಣ ವೆಂಬುದೇ ಪ್ರಶ್ನೆ. ಯಾವುದು ಆಪೂರಣವಾದದ್ದೋ ಅದೇ ದೇವರು. ಅದು ದೇವರು ಎಂಬ ಭಾವನೆ ತಪ್ಪುಎಂದು ವಿಕಾಸವಾಗಿ ಹೇಳುವನು. ಏತಕ್ಕೆ? ಏಕೆಂದರೆ ನೀವು ದೇವರನ್ನು ಚೈತನ್ಯಸ್ವರೂಪ ಎನ್ನುವಿರಿ. ಆದರೆ ಚೈತನ್ಯ ವಿಕಾಸದ ಮೇಲೆಮೇಲಿನ ಮೆಟ್ಟಲಲ್ಲಿಮಾತ್ರ ಆವಿರ್ಭವಿಸುವುದು. ಚೈತನ್ಯಮನುಷ್ಯ ಮತ್ತು ಮೇಲಿನವರ್ಗದ ಮೃಗಗಳಲ್ಲಿ ಮಾತ್ರ ವ್ಯಕ್ತ ವಾಗುವುದು. ಈ ಚೈತನ್ಯಬರುವುದಕ್ಕೆ ಕೋಟ್ಯಂತರವರ್ಷಗಳಾದವು. ನಮ್ಮ ವಾದಸರಣಿಯನ್ನು ಉಪಯೋಗಿಸಿದರೆ ವಿಕಾಸವಾದಿಯ ಆಕ್ಷೇಪ ಣೆಗೆ ಬುಡವಿಲ್ಲವೆಂದು ಗೊತ್ತಾಗುವುದು. ಮರ ಬೀಜದಿಂದ ಬಂದು ಪುನಃ ಬೀಜಕ್ಕೆ ಹೋಗುವುದು. ಮೊದಲು ಮತ್ತು ಕೊನೆ ಎರಡೂ ಒಂದೇ ಕಾರಣವಾದ ಭೂಮಿಯಿಂದ ಬಂದು ಪುನಃ ಅಲ್ಲಿಗೇ ಹಿಂತಿರುಗುತ್ತದೆ. ಆದಿ ಸಿಕ್ಕಿದರೆ ಅಂತ್ಯವೂ ಸಿಕ್ಕುವುದೆಂದು ನಮಗೆ ಗೊತ್ತಿದೆ. ಹಾಗೆಯೇ ಕೊನೆ ಸಿಕ್ಕಿದರೆ ಮೂಲಸಿಕ್ಕುವುದು. ಇದು ಹಾಗಿದ್ದರೆ ವಿಕಸನದ ಶ್ರೇಣಿಯನ್ನೆಲ್ಲಾ ಒಟ್ಟಿಗೆ ತೆಗೆದುಕೊಳ್ಳಿ. ಜೀವಾಣುವಿನಿಂದ ಹಿಡಿದು ಸಿದ್ಧಮಾನವನವರೆಗೆ ತೆಗೆದುಕೊಂಡರೆ ಈ ಶ್ರೇಣಿಯೆಲ್ಲ ಒಂದೇ ಜೀವನದ ವಿಕಸನ. ಕೊನೆಗೆ ನಮಗೆ ಸಿದ್ಧಮಾನವ ದೊರಕುವನು. ಆದಕಾರಣ ಆದಿಯಲ್ಲಿಯೂ ಹಾಗೆಯೇ ಆಗಿರಬೇಕು. ಆದಕಾರಣ ಜೀವಾಣು ಮಹಾಚೈತನ್ಯದ ಅಪೂರಣಸ್ಥಿತಿಯಾಗಿರಬೇಕು. ಅದು ನಿಮಗೆ ಗೊತ್ತಾ ಗದೆ ಇರಬಹುದು. ಆಪೂರಣಚೈತನ್ಯ ಮಾತ್ರ ಪೂರ್ಣ ಸಿದ್ಧಾತ್ಮನಾ ಗುವವರೆಗೆ ವಿಕಾಸವಾಗುತ್ತಾ ಹೋಗುವುದು. ಇದನ್ನು ಗಣಿತಶಾಸ್ತ್ರದ ಮೂಲಕ ಬೇಕಾದರೆ ವಿವರಿಸಬಹುದು. ಶಕ್ತಿಸ್ಥಾಯಿತ್ವ (Conservation of energy) ಸಿದ್ಧಾಂತ ಸತ್ಯವಾದರೆ, ಯಂತ್ರಕ್ಕೆ ಮುಂಚೆ ನೀವು ಏನನ್ನೂ ಹಾಕದೆಇದ್ದರೆ ಏನೂ ದೊರಕುವುದಿಲ್ಲ. ನಿಮಗೆ ರೈಲ್ವೆ

ಎಂಜನ್ನಿನಿಂದ ಅದಕ್ಕೆ ಹಾಕಿದ ಕಲ್ಲಿದ್ದಲು ಮತ್ತು ನೀರಿನ ಪ್ರಮಾಣದಲ್ಲಿ ಶಕ್ತಿ ದೊರಕುವುದು. ಅದಕ್ಕಿಂತ ಕಡಿಮೆಯೂ ಇಲ್ಲ, ಹೆಚ್ಚೂ ಇಲ್ಲ. ನಾನು ಈಗ ಮಾಡುತ್ತಿರುವ ಕೆಲಸ ನನ್ನ ದೇಹದೊಳಗೆ ಗಾಳಿ ಆಹಾರ ಮತ್ತು ಇನ್ನೂ ಇತರ ವಸ್ತುಗಳನ್ನೂ ಹಾಕಿದ ಪ್ರಮಾಣಕ್ಕೆ ಸರಿಯಾಗಿದೆ. ಇದು ಬದಲಾವಣೆಯಾಗಿ ವ್ಯಕ್ತವಾಗುವುದು ಅಷ್ಟೆ. ಈ ಬ್ರಹ್ಮಾಂಡಕ್ಕೆ ನಾವು ಒಂದು ಕಣವಸ್ತುವನ್ನೂ ಅಥವಾ ಒಂದು ಪೌಂಡಿನಷ್ಟು ಶಕ್ತಿಯನ್ನೂ ಹಾಕಲಾರೆವು ಅಥವಾ ಅಷ್ಟನ್ನು ತೆಗೆಯಲಾರೆವು. ಇದು ಹಾಗಿದ್ದರೆ ಈ ಚೈತನ್ಯವೆಂತಹುದು? ಇದು ಜೀವಾಣುವಿನಲ್ಲಿ ಇಲ್ಲದೆ ಇದ್ದರೆ ಇದು ಅಕಸ್ಮಾತ್ತಾಗಿ ಬಂದಿರಬೇಕು. ಶೂನ್ಯದಿಂದ ಏನೊ ಬರುವುದು ಅಸಂಬದ್ಧ. ಆದಕಾರಣ ಸಿದ್ಧಪುರುಷ ಮುಕ್ತಾತ್ಮ ದೇವಮಾನವ ಪ್ರಕೃತಿಯ ನಿಯಮಗಳಾಚೆ ಹೋಗಿರುವನು, ಎಲ್ಲವನ್ನೂ ಮೀರಿರುವನು. ಅವನು ಇನ್ನು ವಿಕಾಸದಮೂಲಕ ಹೋಗಬೇಕಾಗಿಲ್ಲ; ಜನನ ಮತ್ತು ಮರಣ ಅನುಭವಿಸಬೇಕಾಗಿಲ್ಲ. ಇವನನ್ನೇ ಕ್ರೈಸ್ತರು ಕ್ರಿಸ್ತನೆನ್ನುವರು, ಬೌದ್ಧರು ಬುದ್ಧನೆನ್ನುವರು, ಯೋಗಿಗಳು ಮುಕ್ತನೆನ್ನುವರು. ಈತನೇ ವಿಕಸನದ ಆದಿಯಲ್ಲಿ ಜೀವಾಣುವಿನಲ್ಲಿ ಅಪೂರಣಸ್ಥಿತಿಯಲ್ಲಿದ್ದನು ಎಂದು ನಿರ್ವಿವಾದ ವಾಗಿ ಹೇಳಬಹುದು.

ಇದೇ ವಾದವನ್ನು ಇಡೀ ಬ್ರಹ್ಮಾಂಡಕ್ಕೆ ಅನ್ವಯಿಸಿದರೆ ಚೈತನ್ಯವೇ ಸೃಷ್ಟಿಗೆ ಒಡೆಯನಾಗಿರಬೇಕು, ಕಾರಣವಾಗಿರಬೇಕು ಎಂದು ತೋರು ವುದು. ಮನುಷ್ಯನಿಗೆ ವಿಕಾಸವಾಗಿರುವ ಪ್ರಪಂಚದಲ್ಲಿ ಶ್ರೇಷ್ಠ ಯಾವುದು? ಅದೇ ಚೈತನ್ಯ. ಒಂದುಭಾಗ ಮತ್ತೊಂದಕ್ಕೆ ಹೊಂದಿಕೊಂಡು ಹೋಗು ವುದು, ಇವೇ ಚೈತನ್ಯದ ಕ್ರಿಯೆ. ಪುರಾತನಸೃಷ್ಟಿರಚನಾಸಿದ್ಧಾಂತ ಇದನ್ನು ವ್ಯಕ್ತಗೊಳಿಸಲು ಒಂದು ಪ್ರಯತ್ನವಾಗಿತ್ತು. ಆದಕಾರಣ ಆದಿಚೈತನ್ಯವಾಗಿರಬೇಕು, ಮಧ್ಯದಲ್ಲಿ ಅದು ಅಪೂರಣವಾಗುವುದು, ಕೊನೆಗೆ ಆ ಚೈತನ್ಯ ವಿಕಾಸವಾಗುವುದು. ಪ್ರಪಂಚದಲ್ಲಿ ವ್ಯಕ್ತವಾಗಿರುವ ಚೈತನ್ಯದ ಮೊತ್ತ, ಈಗ ವಿಕಾಸವಾಗುತ್ತಿರುವ ಅಪೂರಣವಾದ ವಿಶ್ವ ಚೈತನ್ಯವಿರಬೇಕು. ಈ ವಿಶ್ವಚೈತನ್ಯವನ್ನೇ ನಾವು ದೇವರೆಂದು ಕರೆ ಯುವುದು. ನೀವು ಅದನ್ನು ಯಾವ ಹೆಸರಿನಿಂದ ಕರೆದರೂ, ಆದಿಯಲ್ಲಿ ಆ ಅನಂತ ವಿಶ್ವಚೈತನ್ಯವಿತ್ತು ಎಂಬುದು ನಿರ್ವಿವಾದವಾದುದು. ಆ ವಿಶ್ವ ಚೈತನ್ಯ ಅಪೂರಣವಾಗುವುದು. ಅದು ವ್ಯಕ್ತವಾಗಿ ಕ್ರೈಸ್ತನಂತೆ ಬುದ್ಧ ನಂತೆ ಆಗುವವರೆಗೂ ವಿಕಾಸವಾಗುತ್ತಿರುವುದು. ಅನಂತರ ಅದು ತನ

ಮೂಲಕ್ಕೆ ತೆರಳುವುದು. ಆದಕಾರಣವೆ ಎಲ್ಲ ಶಾಸ್ತ್ರಗಳೂ "ನಾವು ಅವನಲ್ಲಿ ಬಾಳಿಬದುಕುತ್ತೇವೆ" ಎನ್ನುವುವು. ಎಲ್ಲ ಧರ್ಮಗ್ರಂಥಗಳೂ "ನಾವು ದೇವರಿಂದ ಬಂದೆವು ದೇವರೆಡೆಗೆ ಹೋಗುವೆವು" ಎನ್ನುವುವು. ಇಂತಹ ದೇವತಾಪದಗಳಿಗೆ ನೀವು ಅಂಜಬೇಕಾಗಿಲ್ಲ. ಪದಗಳು ನಿಮ್ಮನ್ನು ಅಂಜಿಸಿದರೆ ನೀವು ತತ್ತ್ವಜ್ಞರಾಗಲು ಯೋಗ್ಯರಲ್ಲ. ಈ ವಿಶ್ವಚೈತನ್ಯವನ್ನೇ ಧರ್ಮಾನುಯಾಯಿಗಳು ದೇವರು ಎನ್ನುವರು.

"ದೇವರು ಎಂಬ ಹಳೆಯಪದವನ್ನೇತಕ್ಕೆ ಉಪಯೋಗಿಸುತ್ತೀರಿ?" ಎಂದ. ಅನೇಕವೇಳೆ ನನ್ನನ್ನು ಕೇಳಿರುವರು. ಏಕೆಂದರೆ ಇದು ನಮ್ಮ ಕೆಲಸಕ್ಕೆ ಅತಿಶ್ರೇಷ್ಠಪದ. ಅದಕ್ಕಿಂತ ಉತ್ತಮಪದ ನಿಮಗೆ ದೊರಕಲಾರದು. ಮಾನವಕೋಟಿಯ ಆಕಾಂಕ್ಷೆ ಭರವಸೆ ಸಂತೋಷಗಳೆಲ್ಲಾ ಆ ಒಂದು ಪದನಲ್ಲಿ ನೆಲೆಸಿವೆ. ಈಗ ಅದನ್ನು ಬದಲಾಯಿಸುವುದಕ್ಕೆ ಸಾಧ್ಯವೇ ಇಲ್ಲ. ಇದರ ಅರ್ಥ ತಿಳಿದುಕೊಂಡು ಅದನ್ನು ಸಾಕ್ಷಾತ್ಕಾರ ಮಾಡಿಕೊಂಡವರು ಈ ಪದಗಳನ್ನು ಮೊದಲು ಸೃಷ್ಟಿಸಿದರು. ಇದು ಸಮಾಜದಲ್ಲಿ ಪ್ರಚಾರವಾದಮೇಲೆ, ಅರಿಯದವರು ಈ ಪದಗಳನ್ನು ಬಳಸುವರು. ಇವರ ಪರಿಣಾಮವಾಗಿಯೆ ಅದರ ಅರ್ಥಮಹಿಮೆ ಮಾಯವಾಗುವುದು. ಅನಾದಿಕಾಲದಿಂದಲೂ ದೇವರು ಎಂಬ ಪದವನ್ನು ಉಪಯೋಗಿಸುತ್ತಿರುವರು. ವಿಶ್ವಚೈತನ್ಯದ ಭಾವನೆ ಪವಿತ್ರವಾದುದು, ಮಹಿಮಾನ್ವಿತವಾದುದು ಎಲ್ಲವೂ ದೇವರು ಎಂಬ ಪದದೊಂದಿಗೆ ಸಂಬಂಧಪಡೆದಿದೆ. ಕೆಲವು ಮೂರ್ಖರು ಆ ಪದದಿಂದ ಪ್ರಯೋಜನವಿಲ್ಲವೆಂದರೆ ನೀವು ಅವನ್ನು ಆಚೆಗೆ ಎಸೆಯಬೇಕೆ? ಇನ್ನೊಬ್ಬ ಬಂದು ನನ್ನ ಪದ ತೆಗೆದುಕೊಳ್ಳಿ ಎನ್ನುವನು, ಮತ್ತೊಬ್ಬ ಬಂದು ನನ್ನ ಪದ ತೆಗೆದುಕೊಳ್ಳಿ ಎನ್ನುವನು. ಹೀಗೆ ಕೆಲಸಕ್ಕೆ ಬಾರದ ಪದಗಳಿಗೆ ಒಂದು ಅಂತ್ಯವೇ ಇರುವುದಿಲ್ಲ. ಹಳೆಯಪದವನ್ನೇ ಉಪಯೋಗಿಸಿ, ಆದರೆ ಅದನ್ನು ಸರಿಯಾದ ಅರ್ಥವಲ್ಲಿ ಉಪಯೋಗಿಸಿ. ಅದನ್ನು ಆವರಿಸಿರುವ ಮೂಢನಂಬಿಕೆಯನ್ನು ತೊಳೆಯಿರಿ. ಈ ಪುರಾತನ ಪವಿತ್ರಪದದ ಅರ್ಥವನ್ನು ಪೂರ್ಣ ತಿಳಿಯಿರಿ. ಸಾಂಬಂಧಿಕ ನಿಯಮಶಕ್ತಿ (Power of the laws of association) ನಿಮಗೆ ಅರಿವಾದರೆ ಈ ದೇವರು ಎಂಬ ಪದ ಅನಂತ ಭವ್ಯ ಸಾಮರ್ಥ್ಯಭಾವಗಳೊಂದಿಗೆ ಮಾನಸಿಕ ಸಂಬಧ ಪಡೆದಿರುವುದು ಗೊತ್ತಾಗುವುದು. ಕೋಟ್ಯಂತರ ಜೀವಿಗಳು ಇದನ್ನು ಉಪಯೋಗಿಸುವರು. ಆರಾಧಿಸಿರುವರು. ಅತಿ ಶ್ರೇಷ್ಠವಾದ, ಭವ್ಯವಾದ,

ನ್ಯಾಯಸಮ್ಮತವಾದುದೆಲ್ಲ ಮಾನವರಲ್ಲಿ ಪ್ರೀತಿಗೆ ಯೋಗ್ಯವಾದುದೆಲ್ಲ, ಮಹತ್ವಪೂರ್ಣವಾದುದೆಲ್ಲ, ವೈಭವಯುಕ್ತವಾದುದೆಲ್ಲ ದೇವರು ಎಂಬ ಪದದೊಂದಿಗೆ ಮಾನಸಿಕಸಂಬಂಧಪಡೆದಿರುವುದು. ಸಂಬಂಧದಿಂದ ಇಂತಹ ಭವ್ಯಭಾವನೆಗಳು ಉದಿಸುತ್ತದೆ. ಅದನ್ನು ನಾವು ತ್ಯಜಿಸಲಾರೆವು. ಇವುಗಳನ್ನೆಲ್ಲ ದೇವರು ಈ ವಿಶ್ವವನ್ನು ಸೃಷ್ಟಿಸಿದನು ಎಂಬುದರ ಮೂಲಕ ವಿವರಿಸಲು ಯತ್ನಿಸಿದ್ದರೆ ನಿಮಗೆ ಯಾವ ಅರ್ಥವೂ ಆಗುತ್ತಿರಲಿಲ್ಲ. ನಮ್ಮ ಹೋರಾಟವೆಲ್ಲ ಕೊನೆಗೊಂಡಮೇಲೆ ಆ ಸನಾತನ ಈಶ್ವರನೆಡೆಗೆ ಬರಲೇಬೇಕು.

ವಸ್ತು ಆಲೋಚನೆ ವೇಗ ಚೇತನ ಮುಂತಾದುವೆಲ್ಲ ವಿಶ್ವಶಕ್ತಿಯ ಹಲವು ಅವಿರ್ಭಾವನೆಗಳೆಂದು ಈಗ ನಮಗೆ ಅರಿವಾಗುವುದು. ಅಥವಾ ಇನ್ನು ಮೇಲೆ ಅವನ್ನು ಪರಮೇಶ್ವರ ಎಂದು ಬೇಕಾದರೂ ಹೇಳಬಹುದು. ನೀವು ನೋಡುವ ಕೇಳುವ ಅನುಭವಿಸುವುದೆಲ್ಲ ಇಡೀ ಬ್ರಹ್ಮಾಂಡವೆಲ್ಲ ಅವನ ಸೃಷ್ಟಿ; ಅಥವಾ ನಾವು ಇನ್ನೂ ನಿಸ್ಪಷ್ಟವಾಗಿ ಹೇಳಬೇಕಾದರೆ ಈಶ್ವರನ ಬಾಹ್ಯರೂಪಣೆ ಮತ್ತೂ ನಿಸ್ಪಷ್ಟವಾಗಿ ಹೇಳಬೇಕಾದರೆ ಸ್ವಯಂ ಈಶ್ವರನೆ ಹೀಗೆ ಆಗಿರುವನು. ಅವನೇ ಸೂರ್ಯ ನಕ್ಷತ್ರಗಳಂತೆ ರಾರಾಜಿಸುತ್ತಿರುವನು. ಅವನೇ ಭೂಮಿತಾಯಿ, ಅವನೇ ಸಾಗರ. ಅವನೇ ಮಂದಗಮನದಿ ಮಳೆಯಂತೆ ಬೀಳುವನು. ನಾವು ಉಸಿರಾಡುವ ಮಂದಾನಿಲನು ಅವನೆ . ಅವನೆ ದೇಹದಲ್ಲಿ ಪ್ರಾಣದಂತೆ ಕೆಲಸಮಾಡುತ್ತಿರುವನು. ಆಡಿದ ಮಾತು ಅವನು. ಮಾತನಾಡುತ್ತಿರುವ ಮನುಷ್ಯನವನು. ಇಲ್ಲಿರುವ ಪ್ರೇಕ್ಷಕನವನು. ನಾನು ನಿಂತಿರುವ ವೇದಿಕೆ ಅವನು. ನಿಮ್ಮ ಮೊಗವನ್ನು ನೋಡಲು ಸಹಾಯ ಮಾಡುವ ಬೆಳಕು ಅವನು. ಎಲ್ಲಾ ಅವನೆ. ಅವನೆ ವಿಶ್ವದ ಉಪಾದಾನ ಮತ್ತು ನಿಮಿತ್ತ ಕಾರಣ. ಅತಿ ಕ್ಷುದ್ರ ಜೀವಾಣುವಿನಲ್ಲಿ ಅಪೂರಣನ ಗಿರುವವನೂ ಅವನೆ, ಮತ್ತೊಂದು ಕಡೆಯಲ್ಲಿ ವಿಕಾಸವಾಗಿ ದೇವರಾಗುವವನೂ ಅವನೆ. ಅವರೋಹಣದಿಂದ ಕ್ಷುದ್ರತಮ ಅಣುವಾಗುವುದು, ಕ್ರಮೇಣ ಆರೋಹಣದಿಂದ ತನ್ನ ಸ್ವಭಾವವನ್ನು ವ್ಯಕ್ತಗೊಳಿಸುತ್ತಾ ಕೊನೆಗೆ ತನ್ನನ್ನೇ ಸೇರುವನು. ಇದೇ ವಿಶ್ವರಹಸ್ಯ. "ನೀನೇ ಪುರುಷ, ನೀನೇ, ಸ್ತ್ರೀ, ನೀನೇ ಯೌವನದ ಮದದಲ್ಲಿ ನಡೆಯುತ್ತಿರುವ ಯುವಕ, ನೀನೆ ಸರ್ವ ಹೇ ದೇವ, ನೀನೆ ಸರ್ವ." ಮಾನವ ಯುಕ್ತಿಯನ್ನು ತೃಪ್ತಿಪಡಿಸಬಲ್ಲ ಬ್ರಹ್ಮಾಂಡ ಸಮಸ್ಯೆಗೆ ಇದೊಂದೇ ನಿವಾರಣೋಪಾಯ. ಒಂದು ಮಾತಿಯಲ್ಲಿ ನಾವು ಅವನಿಂದ ಬಂದೆವು. ಅವನಲ್ಲಿರುವೆವು. ಅವನ ಬಳಿಗೆ ತೆರಳುವೆವು.

# ಜೀವ

ಮಾನವನ ಮನಸ್ಸು ಸ್ವಾಭಾವಿಕವಾಗಿ ಇಂದ್ರಿಯಗಳ ಮೂಲಕ ಹೊರಗೆ ಹೋಗಲು ದೇಹದಿಂದ ಹೊರಗೆ ಇಣುಕಲು ಇಚ್ಛಿಸುವುದು. ಕಣ್ಣು ನೋಡಬೇಕು, ಕಿವಿ ಕೇಳಬೇಕು, ಇಂದ್ರಿಯಗಳು ಬಾಹ್ಯ ಜಗತ್ತನ್ನು ಅನುಭವಿಸಬೇಕು. ಸ್ವಾಭಾವಿಕವಾಗಿ ಪ್ರಕೃತಿಯ ಸೌಂದರ್ಯ ಮತ್ತು ಭವ್ಯತೆಗಳು ಮೊದಲು ಮನುಷ್ಯನನ್ನು ಆಕರ್ಷಿಸುವುವು. ಮನುಷ್ಯರಲ್ಲಿ ಮೊದಲೆದ್ದ ಪ್ರಶ್ನೆ ಬಾಹ್ಯಜಗತ್ತಿಗೆ ಸಂಬಂಧಿಸಿದ್ದು. ಆಕಾಶ ತಾರಾವಳಿ ಗ್ರಹ ಭೂಮಿ ನದಿ ಗಿರಿ ಸಾಗರ ಇವುಗಳನ್ನು ವಿಶ್ವರಹಸ್ಯಪರಿಹಾರಕ್ಕೆ ಪ್ರಶ್ನೆಮಾಡುವನು. ಎಲ್ಲಾ ಪುರಾತನ ಧರ್ಮಗಳಲ್ಲಿಯೂ ಮೊದಲು ಅರಸುತ್ತಿರುವ ಮನುಷ್ಯ ಬಾಹ್ಯವಸ್ತುಗಳನ್ನು ಆಶ್ರಯಿಸುವುದನ್ನು ನೋಡುವೆವು. ನದಿಗೊಬ್ಬ ದೇವರು, ಆಕಾಶಕ್ಕೆ ಒಬ್ಬ ದೇವರು, ಮೇಘಕ್ಕೆ ದೇವರು, ಮಳೆಗೆ ದೇವರು ಇದ್ದರು. ನಾವು ಈಗ ಪ್ರಕೃತಿ ಶಕ್ತಿಯೆನ್ನುವ ಬಾಹ್ಯವಸ್ತುಗಳೆಲ್ಲ ರೂಪು ಬದಲಾಯಿಸಿ ಅನ್ಯರೂಪುಧಾರಣೆಮಾಡಿ ದೈವೇಚ್ಛೆ, ದೇವದೂತರು ದೇವತೆಗಳಾದರು. ಪ್ರಶ್ನೆ ಗಾಢವಾಗುತ್ತ ಬಂದಹಾಗೆ ಬಾಹ್ಯವಸ್ತುಗಳ, ಅವರಿಗೆ ತೃಪ್ತಿಯನ್ನು ತರಲಿಲ್ಲ. ಕೊನೆಗೆ ಆ ಶಕ್ತಿ ಅಂತರ್ಮುಖವಾಯಿತು ಮನುಷ್ಯನ ಜೀವನ ಎಂದರೇನು ಎಂದು ಪ್ರಶ್ನೆ ಕೇಳಿದರು. ಬ್ರಹ್ಮಾಂಡದಿಂದ ಪ್ರಶ್ನೆ ಪಿಂಡಾಂಡಕ್ಕೆ ಬರುವುದು. ಬಾಹ್ಯವಾದ ಪ್ರಶ್ನೆ ಅಂತರ್ಮುಖವಾಗಿರುವುದು. ಬಾಹ್ಯಪ್ರಕೃತಿಯ ವಿಭಜನೆಯಿಂದ ಕ್ರಮೇಣ ಅವನು ಅಂತರ್ಜಗತ್ತನ್ನು ವಿಭಜನೆ ಮಾಡಬೇಕಾಗಿದೆ. ಸಂಸ್ಕೃತಿ ಮೇಲಿನ ಮಟ್ಟಕ್ಕೆ ಮುಟ್ಟಿ ಪ್ರಕೃತಿಯನ್ನು ವಿಶಾಲವಾಗಿ ತಿಳಿದುಕೊಂಡು ಬುದ್ಧಿ ವಿಕಾಸವಾದಮೇಲೆ ಅಂತರ್ಜಗತ್ತಿನ ಪ್ರಶ್ನೆ ಏಳುವುದು.

ಇಂದಿನ ಸಂಜೆ ಉಪನ್ಯಾಸದ ವಿಷಯ ಈ ಅಂತರ್ಜಗತ್ತು. ಮನುಷ್ಯನ ಅಂತರಂಗಕ್ಕಿಂತ ಮತ್ತಾವ ಪ್ರಶ್ನೆಯೂ ಮನುಷ್ಯನ ಹೃದಯಕ್ಕೆ ಅಷ್ಟು ಹತ್ತಿರದಲ್ಲಿಲ್ಲ; ಅಷ್ಟು ಪ್ರೀತಿಗೆ ಪಾತ್ರವಾಗಿಲ್ಲ. ಎಷ್ಟು ದೇಶದಲ್ಲಿ ಎಷ್ಟು ಕೋಟಿ ವೇಳೆ ಈ ಪ್ರಶ್ನೆಯನ್ನು ಹಾಕಿರುವರು. ಋಷಿಗಳು ರಾಜರು ಬಡವ ಬಲ್ಲಿದ ಪಾಪಿ ಯತಿ ಪ್ರತಿಯೊಬ್ಬ ಸ್ತ್ರೀಪುರುಷರೂ ಕಾಲಕಾಲಕ್ಕೆ ಈ ಪ್ರಶ್ನೆಯನ್ನು ಹಾಕಿರುವರು. ಈ ಕ್ಷಣಿಕ ಮಾನವ ಬಾಳುವೆಯಲ್ಲಿ ಯಾವುದಾದರೂ ಶಾಶ್ವತವಾದುದು ಇದೆಯೆ? ನಮ್ಮ

ದೇಹ ಮಣ್ಣುಪಾಲಾದರೆ, ಮಣ್ಣುಪಾಲಾಗದ ಮತ್ತೊಂದು ಇಲ್ಲವೆ? ದೇಹವನ್ನು ಭಸ್ಮೀಭೂತಮಾಡುವ ಬೆಂಕಿಯಿಂದ ದಹಿಸದ ಮತ್ತೊಂದು ಇದೆಯೆ? ಇದ್ದರೆ ಅದರ ಗುರಿ ಎಲ್ಲಿ? ಎಲ್ಲಿಗೆ ಹೋಗುವುದು? ಅದು ಎಲ್ಲಿಂದ ಬಂತು? ಪುನಃಪುನಃ ಈ ಪ್ರಶ್ನೆಯನ್ನು ಕೇಳಿರುವರು. ಸೃಷ್ಟಿ ಇರುವವರೆಗೆ, ಆಲೋಚಿಸುವ ಮನುಷ್ಯನಿರುವವರೆಗೆ ಈ ಪ್ರಶ್ನೆಯನ್ನು ಕೇಳಲೇಬೇಕಾಗಿದೆ. ಇದಕ್ಕೆ ಉತ್ತರ ಬರಲೇ ಇಲ್ಲವೆಂದಲ್ಲ ಅರ್ಥ. ಪ್ರತಿಯೊಂದು ಸರಿಯೂ ಉತ್ತರ ಬಂದಿತು. ಕಾಲಕಳೆದಂತೆ ಉತ್ತರ ಬರ ಬರುತ್ತ ಸ್ಪಷ್ಟವಾಗುತ್ತ ಬರುವುದು. ಸಾವಿರಾರು ವರ್ಷಗಳ ಹಿಂದೆ ಈ ಪ್ರಶ್ನೆಯನ್ನು ಒಂದೇಸಲ ಬಗೆಹರಿಸಿದರು. ಅಂದಿನಿಂದ ಇಲ್ಲಿಯವರೆಗೆ ಅವನ್ನೇ ಒತ್ತಿಹೇಳಿರುವರು, ಉದಹರಿಸಿರುವರು, ಮತ್ತೂ ಸ್ಪಷ್ಟ ಮಾಡಿರುವರು. ನಾವು ಉತ್ತರವನ್ನು ಈಗ ಪುನಃ ವಿವರಿಸಬೇಕಾಗಿದೆ. ಈ ಸ್ವಾರಸ್ಯ ಸಮಸ್ಯೆಯಮೇಲೆ ನಾವು ಹೆಚ್ಚು ಬೆಳಕನ್ನು ತೋರುತ್ತೇವೆ ಎಂದು ನಟಿಸುವುದಿಲ್ಲ. ಆಧುನಿಕಭಾಷೆಯಲ್ಲಿ ಪುರಾತನ ಸತ್ಯವನ್ನು ವಿವರಿಸುತ್ತೇವೆ. ಆಧುನಿಕ ಭಾವನೆಯ ಮೂಲಕ ಪುರಾತನ ಭಾವನೆ ವಿವರಿಸುತ್ತೇವೆ. ತಾತ್ತ್ವಿಕ ಭಾವನೆಗಳನ್ನು ಸಾಧಾರಣ ಜನರ ಭಾಷೆಯ ಮೂಲಕ ವಿವರಿಸುತ್ತೇವೆ. ದೇವದೂತರ ಭಾವನೆಯನ್ನು ಮಾನವ ಭಾವನೆ ಯಲ್ಲಿ ವ್ಯಕ್ತಗೊಳಿಸುತ್ತೇವೆ. ದೇವತೆಗಳ ಭಾವನೆಯನ್ನು ದೀನಮಾನವ ಅರ್ಥಮಾಡಿಕೊಳ್ಳಲೆಂದು ಅವನ ಭಾಷೆಯಲ್ಲಿ ಹೇಳುತ್ತೇವೆ. ಈ ಭಾವನೆ ಗಳು ಜನಿಸಿದ ಪರಮಾತ್ಮನ ಸಾರ ಮಾನವನಲ್ಲಿ ಯಾವಾಗಲೂ ಇರು ವುದು. ಆದಕಾರಣವೆ ಅವನು ಅದನ್ನು ಯಾವಾಗಲೂ ಅರ್ಥಮಾಡಿ ಕೊಳ್ಳಬಲ್ಲ.

ನಾನು ನಿಮ್ಮನ್ನು ನೋಡುತ್ತಿರುವೆನು. ಈ ನೋಟಕ್ಕೆ ಎಷ್ಟು ವಿಷಯಗಳು ಆವಶ್ಯಕ? ಮೊದಲು ಕಣ್ಣು. ನಾನು ಎಲ್ಲಾ ವಿಧದಲ್ಲೂ ಚೆನ್ನಾಗಿದ್ದು ಕಣ್ಣುಗಳಿಲ್ಲದೆ ಇದ್ದರೆ ನಾನು ನೋಡುವುದಕ್ಕೆಆಗುತ್ತಿರಲಿಲ್ಲ. ಎರಡನೆಯದೆ ನೋಟಕ್ಕೆ ಮುಖ್ಯಕೇಂದ್ರ ಕಣ್ಣಲ್ಲ ನೋಟಕ್ಕೆ ಮುಖ್ಯ ಅವಯವ. ಅವು ಕೇವಲ ನೋಟಕ್ಕೆ ಇರುವ ಯಂತ್ರವಷ್ಟೆ. ಅದರ ಹಿಂದೆ ಮೆದುಳಿನಲ್ಲಿರುವ ನೋಟದ ಸ್ನಾಯುಕೇಂದ್ರ ಮುಖ್ಯವಾದ ಅವಯವ. ಆ ಕೇಂದ್ರಕ್ಕೆ ಅಪಾಯ ತಗುಲಿದ್ದರೆ ಮನುಷ್ಯನಿಗೆ ಅತಿ ಸ್ಪಷ್ಟವಾದ ಕಣ್ಣುಗಳಿರಬಹುದು. ಆದರೂ ಅವನು ಏನನ್ನೂ ನೋಡ ಲಾರ. ಆದಕಾರಣ ಈ ಕೇಂದ್ರ ನೋಟದ ನಿಜವಾದ ಅವಯವ ಅಲ್ಲಿರ

ಬೇಕು. ಹೀಗೆ ನಮ್ಮ ಎಲ್ಲಾ ಇಂದ್ರಿಯಗಳೂ ಕೂಡ. ಹೊರಗೆ ಇರುವ ಕಿವಿ ಶಬ್ದದ ತರಂಗಗಳನ್ನು ಮೆದುಳಿನ ಕೇಂದ್ರಕ್ಕೆ ಒಯ್ಯುವ ಯಂತ್ರ. ಇದೇ ಸಾಲದು. ನೀವು ಪುಸ್ತಕಾಲಯದಲ್ಲಿ ತುಂಬಾ ಆಸಕ್ತಿಯಿಂದ ಏನನ್ನೋ ಓದುತ್ತಿರುವಿರಿ ಎಂದು ಭಾವಿಸೋಣ. ಗಡಿಯಾರ ಹೊಡೆಯುವುದು. ಆದರೂ ಅದು ನಿಮಗೆ ಕೇಳುವುದಿಲ್ಲ. ಶಬ್ದವಿದೆ, ಆಕಾಶದಲ್ಲಿ ಅದರ ಸ್ಪಂದನೆ ಇದೆ, ಕಿವಿ ಕೇಳುವ ಕೇಂದ್ರವೂ ಇದೆ. ಈ ಸ್ಪಂದನವನ್ನು ಆ ಕೇಂದ್ರಕ್ಕೆ ನರಗಳು ಒಯ್ದಿವೆ. ಆದರೂ ನೀವು ಕೇಳಲಿಲ್ಲ. ಏನು ಬೇಕಾಗಿತ್ತು? ಮನಸ್ಸು ಅಲ್ಲಿರಲಿಲ್ಲ. ಆವಶ್ಯಕವಾಗಿದ್ದ ಮೂರನೆಯದೆ ಮನಸ್ಸು ಎಂದು ಗೊತ್ತಾಗುವುದು. ಮೊದಲು ಬಾಹ್ಯ ಯಂತ್ರಗಳು. ಈ ಬಾಹ್ಯಯಂತ್ರಗಳು ಸುದ್ದಿಯನ್ನು ಎಲ್ಲಿಗೆ ಒಯ್ಯುವುವೋ ಆ ಕೇಂದ್ರ ಎರಡನೆಯದು. ಕೊನೆಗೆ ಆ ಮನಸ್ಸಿಗೆ ಸೇರಿರಬೇಕು. ಮನಸ್ಸು ಆ ಕೇಂದ್ರಕ್ಕೆ ಸೇರಿಲ್ಲದೆ ಇದ್ದರೆ ಕಿವಿ ಮತ್ತು ಆ ಕೇಂದ್ರ ಶಬ್ದ ಕೇಳಬಹುದು. ಆದರೂ ಅದು ನಮಗೆ ಗೊತ್ತಾಗುವುದಿಲ್ಲ. ಮನಸ್ಸು ಕೂಡ ವಾಹಕ. ಅದು ಇನ್ನೂ ಮುಂದಕ್ಕೆ ಈ ಸಂವೇದನೆಗಳನ್ನು ಬುದ್ಧಿಗೆ ಒಯ್ಯಬೇಕಾಗಿದೆ. ಬುದ್ಧಿಯೇ ನಿಷ್ಕರ್ಷಿಸುವುದು. ತನಗೆ ಬಂದುದರ ಮೇಲೆ ಅದು ನಿಶ್ಚಯಿಸುವುದು. ಆದರೂ ಇದೂ ಪೂರ್ಣವಲ್ಲ. ಬುದ್ಧಿ ಇನ್ನೂ ಮುಂದೆ ಒಯ್ಯಬೇಕು. ದೇಹದ ಅಧಿಪತಿಯಾದ ಜೀವಾತ್ಮನಿಗೆ ರಾಜನಿಗೆ ಒಪ್ಪಿಸಬೇಕು. ಅವನ ಮುಂದೆ ಇದನ್ನು ಒಪ್ಪಿಸುವುದು. ಅವನಿಂದ ಏನು ಮಾಡಬೇಕು ಏನು ಮಾಡಬಾರದು ಎಂದು ಅಪ್ಪಣೆ ಬರುವುದು. ಅಪ್ಪಣೇ ಇದೇ ಕ್ರಮದಲ್ಲಿ ಬುದ್ಧಿ ಮನಸ್ಸು ಮೆದುಳಿನ ಕೇಂದ್ರ ಅಲ್ಲಿಂದ ಅವಕ್ಕೆ ಸಂಬಂಧಪಟ್ಟ ಇಂದ್ರಿಯಕ್ಕೆ ಹೋಗುವುದು. ಆಗ ಇಂದ್ರಿಯಗ್ರಹಣ ಪೂರ್ಣವಾಗುವುದು.

ಇಂದ್ರಿಯಗಳು ಮನುಷ್ಯನ ಸ್ಥೂಲ ದೇಹದಲ್ಲಿದೆ. ಆದರೆ ಮನಸ್ಸು ಬುದ್ಧಿ ಅಲ್ಲಿ ಇಲ್ಲ. ಇವು ಹಿಂದೂ ತಾತ್ತ್ವಿಕರು ಹೇಳುವ ಸೂಕ್ಷ್ಮ ಶರೀರದಲ್ಲಿವೆ. ಇದನ್ನೇ ಕ್ರೈಸ್ತಧರ್ಮದಲ್ಲಿ ಮಾನವನ ಆಧ್ಯಾತ್ಮಿಕತನು ಎನ್ನುವರು. ಇದು ದೇಹಕ್ಕಿಂತ ಸೂಕ್ಷ್ಮ, ಆದರೆ ಆತ್ಮವಲ್ಲ. ಆತ್ಮ ಇದನ್ನು ಮೀರಿದೆ. ಬಾಹ್ಯಶರೀರ ಕೆಲವು ವರ್ಷಗಳಲ್ಲಿ ನಾಶನಾಗುವುದು. ಒಂದು ಸಣ್ಣ ಕಾರಣ ಅವನ್ನು ಕೆರಳಿಸಿ ನಾಶ ಮಾಡಬಲ್ಲದು. ಸೂಕ್ಷ್ಮ ಶರೀರ ಇಷ್ಟು ಸುಲಭವಾಗಿ ನಾಶವಾಗುವುದಿಲ್ಲ. ಆದರೂ ಇದು ಕೆಲವು ವೇಳೆ ಅವನತಿಗೆ ಬರುವುದು, ಕೆಲವು ವೇಳೆ ಉನ್ನತಿಗೆ ಬರುವುದು. ವೃದ್ಧರಲ್ಲಿ

ಮನಸ್ಸು ತನ್ನ ಘಟುತ್ವವನ್ನು ಕಳೆದು ಕೊಳ್ಳುವುದನ್ನು ನೋಡುವೆವು ಶರೀರದಾರ್ಢ್ಯವಾಗಿರುವಾಗ ಮನಸ್ಸು ದಾರ್ಢ್ಯವಾಗಿರುವುದು. ಮನಸ್ಸಿನ ಮೇಲೆ ಹಲವು ಔಷಧಿ ಪರಿಣಾಮಕಾರಿಯಾಗಬಲ್ಲದು. ಪ್ರತಿಯೊಂದು ಬಾಹ್ಯ ವಸ್ತುವೂ ಅದರ ಮೇಲೆ ತನ್ನ ಪ್ರಭಾವವನ್ನು ಬೀರಬಲ್ಲದು. ಇದು ಅವಕ್ಕೆ ಪ್ರತಿಕ್ರಿಯೆಯನ್ನು ಬೀರಬಲ್ಲದು. ದೇಹಕ್ಕೆ ವೃದ್ಧಿಕ್ಷಯಗಳಿರು ವಂತೆ ಮನಸ್ಸಿಗೂ ಇರುವುದು. ಆದಕಾರಣವೇ ಮನಸ್ಸು ಆತ್ಮವಲ್ಲ. ಏಕೆಂದರೆ ಆತ್ಮ ವೃದ್ಧಿಕ್ಷಯಗಳಿಗೆ ಒಳಗಾಗದು. ಇದು ನಮಗೆ ಹೇಗೆ ಗೊತ್ತು? ಈ ಮನಸ್ಸಿನ ಹಿಂದೆ ಮತ್ತೊಂದು ಇದೆ ಎಂದು ನಮಗೆ ಹೇಗೆ ಗೊತ್ತು? ಏಕೆಂದರೆ ಜ್ಞಾನ ಸ್ವಯಂ ವೇದ್ಯ, ಚೇತನಕ್ಕೆ ಮೂಲ. ಇದು ಜಡ, ಚೇತನಕ್ಕೆ ಸೇರಲಾರದು. ಯಾವ ಜಡವಸ್ತುವೂ ಚೇತನ ಅದರ ಸಾರವಾಗಿರುವುದನ್ನು ನೋಡಿಲ್ಲ. ಯಾವ ಜಡ ಅಚೇತನ ವಸ್ತುವೂ ಸ್ವಯಂ ವೇದ್ಯವಾಗಲಾರದು. ಚೇತನನೇ ಜಡವನ್ನು ಅರಿಯುವುದು. ಈ ಪ್ರಾಂಗಣ ಒಂದು ಚೇತನದ ಮೂಲಕ ಇಲ್ಲಿದೆ. ಏಕೆಂದರೆ ಚೇತನವಿರುವ ಯಾರಾದರೂ ಕಟ್ಟದೇ ಇದ್ದರೆ ಇದು ಇರುತ್ತಿರಲಿಲ್ಲ. ಈ ದೇಹ ಸ್ವಯಂವೇದ್ಯವಲ್ಲ. ಇದು ಹಾಗಿದ್ದರೆ ಸತ್ತ ಮನುಷ್ಯನಲ್ಲಿಯೂ ಇದು ಇರಬೇಕಾಗುವುದು. ಮನಸ್ಸಾಗಲಿ ಸೂಕ್ಷ್ಮ ಶರೀರವಾಗಲಿ ಸ್ವಯಂಪ್ರ ಕಾಶಿತವಾಗಲಾರದು. ಅದು ಚೇತನ ಸಾರವಲ್ಲ. ಯಾವುದು ಸ್ವಯಂಪ್ರಕಾ ಶವಾಗಿರುವುದೋ ಅದು ನಾಶವಾಗಲಾರದು. ಎರವಲಾಗಿ ಪಡೆದ ಕಾಂತಿ ಬರುವುದು ಹೋಗುವುದು. ಆದರೆ ಯಾವುದು ಸ್ವಯಂಜ್ಯೋತಿಯೆ ಆಗಿ ರುವುದೊ ಅದನ್ನು ಬಂದು ಹೋಗುವಂತೆ ಯಾವುದು ಮಾಡುವುದು? ವೃದ್ಧಿಕ್ಷಯಗಳಿಗೆ ಸಿಲುಕುವಂತೆ ಯಾವುದು ಮಾಡುವುದು? ಚಂದ್ರನ ಕಾಂತಿ ಹೆಚ್ಚು ಕಡಿಮೆಯಾಗುವುದು. ಏಕೆಂದರೆ ಇದು ಸೂರ್ಯನಿಂದ ಎರವ ಲಾಗಿ ತಂದ ಬೆಳಕಿನಲ್ಲಿ ಪ್ರಕಾಶಿಸಬೇಕಾಗಿದೆ. ಕಬ್ಬಿಣದ ಚೂರನ್ನು ಬೆಂಕಿಗೆ ಹಾಕಿದರೆ ಅದು ಕಾದು ಕೆಂಪಾಗಿ ಹೊಳೆಯುವುದು. ಆದರೆ ಆ ಬೆಳಕು ನಾಶವಾಗುವುದು. ಏಕೆಂದರೆ ಇದು ಎರವಲಾಗಿ ತಂದ ಬೆಳಕು. ಯಾವುದು ನಮ್ಮದಲ್ಲವೊ, ಯಾವುದನ್ನು ಎರವಲಾಗಿ ತೆಗೆದುಕೊಂಡಿರು ವೆವೊ ಅದಕ್ಕೆ ಮಾತ್ರ ಕ್ಷಯ ಸಾಧ್ಯ. ಯಾವುದರಿಂದ ಅದನ್ನು ತೆಗೆದು ಕೊಂಡಿರುವೆವೊ ಅದಕ್ಕೆ ಅಲ್ಲ.

ದೇಹಕ್ಕೆ ಬಾಹ್ಯ ಆಕಾರಕ್ಕೆ ಜ್ಞಾನವಿಲ್ಲ. ಸ್ವಯಂಜ್ಯೋತಿಯಿಲ್ಲ. ಅದು ತನ್ನನ್ನು ತಾನೆ ತಿಳಿದುಕೊಳ್ಳಲಾರದು. ಇವರಂತೆಯೇ ಮನಸ್ಸೂ

ಕೂಡ. ಏತಕ್ಕೆ? ಮನಸ್ಸಿಗೆ ವೃದ್ಧಿಕ್ಷಯಗಳಿವೆ. ಕೆಲವು ವೇಳೆ ದೃಢವಾಗಿರುವುದು, ಕೆಲವು ವೇಳೆ ಕ್ಷೀಣವಾಗಿರುವುದು. ಪ್ರತಿಯೊಂದರ ಪ್ರಭಾವಕ್ಕೆ ಇದು ಒಳಗಾಗುವುದು. ಆದಕಾರಣ ಮನಸ್ಸಿನ ಮೂಲಕ ಪ್ರಕಾಶಿಸುವ ಕಾಂತಿ ಮನಸ್ಸಿಗೆ ಸೇರಿಲ್ಲ. ಹಾಗಾದರೆ ಯಾರದು? ಇದು ಯಾವುದರ ಸಾರವೊ ಅದಕ್ಕೆ ಸೇರಿರಬೇಕು. ಹಾಗಾದರೆ ಅದಕ್ಕೆ ಕ್ಷಯ ನಾಶವಿಲ್ಲ. ಎಂದಿಗೂ ಅದು ದುರ್ಬಲ ಅಥವಾ ನಿರ್ಬಲವಾಗುವುದಿಲ್ಲ. ಇದು ಸ್ವಯಂಪ್ರಕಾಶಮಾನವಾಗಿರುವುದು. ಇದು ಪ್ರಕಾಶವೇ ಆಗಿರುವುದು. ಆತ್ಮನಿಗೆ ಇದು ಗೊತ್ತಿದೆ ಎನ್ನಲಾಗುವುದಿಲ್ಲ. ಇದು ಜ್ಞಾನವೇ ಆಗಿದೆ. ಆತ್ಮ ಇದೆ ಎನ್ನಲಾರೆವು. ಇರವೇ ಆತ್ಮ. ಆತ್ಮ ಆನಂದವಾಗಿದೆ ಎನ್ನಲಾರೆವು. ಆನಂದವೇ ಆತ್ಮ. ಯಾವುದು ಆನಂದವಾಗಿದೆಯೋ ಅದು ಆನಂದವನ್ನು ಎರವಲಾಗಿ ಪಡೆದಿವೆ. ಯಾವುದಕ್ಕೆ ಜ್ಞಾನವಿದೆಯೊ ಅದು ಜ್ಞಾನವನ್ನು ಪಡೆದಿದೆ. ಯಾವುದಕ್ಕೆ ಸಾಂಬಂಧಿಕ ಅಸ್ತಿತ್ವವಿದೆಯೊ ಅದರ ಇರವು ಕೇವಲ ತೋರಿಕೆಯ ಇರವು. ಎಲ್ಲಿ ಗುಣಗಳಿವೆಯೊ ಅಲ್ಲಿ ಗುಣಗಳು ದ್ರವ್ಯದ ಮೇಲೆ ಪ್ರತಿಬಿಂಬಿತವಾಗಿದೆ. ಆತ್ಮಕ್ಕೆ ಸತ್–ಚಿತ್–ಆನಂದ ಗುಣವಾಗಿಲ್ಲ. ಇದು ಆತ್ಮಸಾರವೇ ಆಗಿದೆ.

ಇದು ನಿಜ ಎಂದು ನಾವೇಕೆ ಒಪ್ಪಿಕೊಳ್ಳಬೇಕೆಂಬ ಪ್ರಶ್ನೆಯನ್ನು ಬೇಕಾದರೆ ಕೇಳಬಹುದು. ಆತ್ಮನಿಗೆ ಸತ್–ಚಿತ್–ಆನಂದ ಸಾರವಾಗಿದೆ. ಅದನ್ನು ಎರವಲಾಗಿ ತಂದಿಲ್ಲ ಎಂದು ಏತಕ್ಕೆ ಒಪ್ಪಿಕೊಳ್ಳಬೇಕು? ಆತ್ಮನ ಸ್ವಯಂಪ್ರಭೆ, ಅದರ ಆನಂದ, ಅದರ ಚಿತ್ತ ಇವು ದೇಹ ಮನಸ್ಸಿನಿಂದ ಹೇಗೆ ಎರವಲಾಗಿ ಬೆಳಗುವುದೋ ಹಾಗೆಯೇ ಆತ್ಮನೂ ಮತ್ತೊಂದರಿಂದ ಇದನ್ನು ಪಡೆದುಕೊಂಡಿರುವನೆಂದು ಏತಕ್ಕೆ ನಾನು ವಾದಿಸಬಾರದು? ಈರೀತಿ ವಾದಮಾಡಿದರೆ ಇದಕ್ಕೆ ಒಂದು ಅಂತ್ಯವೇ ಇಲ್ಲ. ಇದೇ ಇದರ ಅಸಂಬದ್ಧತೆ. ಯಾರಿಂದ ಇದನ್ನು ಎರವಲಾಗಿ ಪಡೆದುದು? ಮತ್ತೊಂದು ವಸ್ತುವಿನಿಂದ ಎಂದರೆ, ಅದಕ್ಕೆ ಎಲ್ಲಿಂದ ಬಂತು ಎಂದು ಕೇಳಬೇಕಾಯಿತು. ಕೊನೆಗೆ ಸ್ವಯಂಪ್ರಕಾಶಮಾನವಾದ ಯಾವುವಾದರೂ ಒಂದು ಕಡೆಗೆ ಬರಬೇಕಾಗಿದೆ. ಇದನ್ನು ಕೊನೆಗಾಣಿಸಬೇಕಾದರೆ ನೈಯಾಯಿಕರೀತಿಯ ಸ್ವಯಂಪ್ರಕಾಶ ಎಲ್ಲಿ ದೊರಕುವುದೋ ಅಲ್ಲಿ ನಿಲ್ಲುವುದು. ಅಲ್ಲಿಂದ ಮುಂದಕ್ಕೆ ಹೋಗಕೂಡದು.

ಮನುಷ್ಯ ಮೊದಲು ಸ್ಥೂಲದಿಂದಾಗಿರುವನು. ಎರಡನೆಯದಾಗಿ

ಮನಸ್ಸು ಬುದ್ಧಿ ಅಹಂಕಾರಗಳಿಂದ ಕೂಡಿದ ಸೂಕ್ಷ್ಮದೇಹವಾಗಿರುವನು. ಅದರ ಹಿಂದೆ ನಿಜವಾದ ಆತ್ಮನಿರುವನು. ಸ್ಥೂಲದೇಹದ ಗುಣಶಕ್ತಿಗಳೆಲ್ಲ ಮನಸ್ಸಿನಿಂದ ಬಂದಿದೆ, ಈ ಸೂಕ್ಷ್ಮದೇಹವೆಂಬ ಮನಸ್ಸು ತನ್ನ ಹಿಂದೆ ಇರುವ ಆತ್ಮನಿಂದ ಪಡೆಯುವುದನ್ನು ನೋಡುವೆವು.

ಆತ್ಮನ ಸ್ವಭಾವದಮೇಲೆ ಹಲವು ಪ್ರಶ್ನೆಗಳೇಳುವುವು. ಆತ್ಮ ಸ್ವಯಂಪ್ರಕಾಶಮಾನನಾದುದರಿಂದ ಅದು ಇದೆ, ಸತ್ ಚಿತ್ ಆನಂದ ಸ್ವರೂಪವೇ ಅದರ ಸಾರ ಎಂದು ನಾವು ನಿರ್ಣಯಿಸಿದರೆ ಇಂತಹ ಆತ್ಮ ಎಂದಿಗೂ ಹೊಸದಾಗಿ ಹುಟ್ಟಲಿಲ್ಲ ಎಂಬುದು ಸ್ವಾಭಾವಿಕವಾಗಿ ಬರುವುದು. ಸ್ವಯಂಪ್ರಕಾಶಮಾನವಾದ ನಿರಪೇಕ್ಷನಾದ ಯಾವುದೂ ಮತ್ತೊಂದರಿಂದ ಬಂದಿರಲಾರದು. ಆದು ಯಾವಾಗಲೂ ಇತ್ತು. ಅದು ಇಲ್ಲದ ಕಾಲವೇ ಇರಲಿಲ್ಲ. ಈ ಆತ್ಮ ಇಲ್ಲದೇಇದ್ದರೆ ಕಾಲವೆಲ್ಲಿ ಇರುತ್ತಿತ್ತು? ಕಾಲ ಆತ್ಮನಲ್ಲಿದೆ. ಆತ್ಮ ಮನಸ್ಸಿನಮೇಲೆ ತನ್ನ ಶಕ್ತಿಯನ್ನು ಹರಿಸಿದಾಗ, ಮನಸ್ಸು ಆಲೋಚಿಸಿದಾಗ ಕಾಲ ಬರುವುದು. ಆತ್ಮನಿಲ್ಲದೇಇದ್ದರೆ ಯಾವ ಆಲೋಚನೆಯೂ ನಿಜವಾಗಿ ಇರುತ್ತಿರಲಿಲ್ಲ. ಆಲೋಚನೆ ಯಿಲ್ಲದೆ ಕಾಲವಿರುತ್ತಿರಲಿಲ್ಲ. ಕಾಲವೇ ಆತ್ಮನಲ್ಲಿರುವಾಗ ಆತ್ಮ ಕಾಲ ದಲ್ಲಿದೆ ಎಂದು ಹೇಗೆ ಹೇಳುವುದು? ಅದಕ್ಕೆ ಜನನ ಮರಣಗಳಿಲ್ಲ. ಆದರೆ ಇದು ಹಲವು ಸ್ಥಿತಿಗಳ ಮೂಲಕ ಹೋಗುತ್ತಿದೆ. ಕ್ರಮೇಣ ಕೆಳಗಿ ನಿಂದ ಮೇಲಕ್ಕೆ ಇದು ನಿಧಾನವಾಗಿ ವಿಕಾಸವಾಗುತ್ತಿದೆ. ಇದು ಮನ ಸ್ಸಿನ ಮೂಲಕ ದೇಹದಲ್ಲಿ ಕೆಲಸಮಾಡುತ್ತ ದೇಹದಮೂಲಕ ಬಾಹ್ಯ ಜಗತ್ತನ್ನು ಅರಿಯುತ್ತ ಆತ್ಮ ತನ್ನ ಮಹಿಮೆಯನ್ನು ವ್ಯಕ್ತಗೊಳಿಸುತ್ತಿದೆ. ಅದೊಂದು ದೇಹವನ್ನು ಪಡೆದು ಉಪಯೋಗಿಸಿಕೊಳ್ಳುವುದು. ದೇಹದ ಮೂಲಕ ಕೆಲಸಮಾಡಿ ಅದ ಮೇಲೆ ಅದು ದುರ್ಬಲವಾದಾಗ ಅದು ಮತ್ತೊಂದು ದೇಹವನ್ನು ಧಾರಣೆಮಾಡುವುದು. ಹೀಗೆಯೇ ಮಾಡುತ್ತಾ ಹೋಗುವುದು.

ಇಲ್ಲಿ ಮತ್ತೊಂದು ಸ್ವಾರಸ್ಯ ಪ್ರಶ್ನೆ ಏಳುವುದು. ಅದೇ ಸಾಧಾರಣ ವಾಗಿ ಗೊತ್ತಿರುವ ಜೀವಿಯ ಪುನರ್ಜನ್ಮ ಎನ್ನುವುದು. ಕೆಲವು ವೇಳೆ ಜನ ಈ ಭಾವನೆ ಕೇಳಿದರೆ ಅಂಜುವರು. ವಿವೇಚನಾಪರರು ತಾವು ಶೂನ್ಯದಿಂದ ಬಂದೆವೆಂದು ನಂಬುವರು. ಮೂಢ ನಂಬಿಕೆಯ ಪ್ರಭಾವ ಇಂತಹುದು. ಅನಂತರ ಬಹಳ ಯುಕ್ತಿಯಿಂದ ತಾವು ಶೂನ್ಯದಿಂದ ಬಂದರೂ ಅನಂತರ ಎಂದೆಂದಿಗೂ ಇರುವೆವು ಎಂದು ಸಾಧಿಸುವರು.

ಯಾರು ಶೂನ್ಯದಿಂದ ಬಂದಿರುವರೊ ಅವರು ನಿಜವಾಗಿ ಶೂನ್ಯಕ್ಕೇ ಹೋಗ ಬೇಕಾಗಿದೆ. ನೀನಾಗಲಿ ನಾನಾಗಲಿ ಅಥವಾ ಇನ್ನು ಯಾರಾದರೂ ಆಗಲಿ ಯಾರೂ ಶೂನ್ಯದಿಂದ ಬಂದಿಲ್ಲ. ಶೂನ್ಯಕ್ಕೆ ಹೋಗುವುದಿಲ್ಲ. ನಾವು ಯಾವಾಗಲೂ ಇದ್ದೆವು, ಇರುವೆವು. ನಿಮ್ಮ ನಮ್ಮನ್ನು ನಾಶಮಾಡುವ ಅಥವಾ ಶೂನ್ಯಕ್ಕೆ ಕಳಿಸುವ ಯಾವ ಶಕ್ತಿಯೂ ಪೃಥ್ವಿ ಯಲ್ಲಿ ಅಥವಾ ಅದಕ್ಕೆ ಅತೀತವಾಗಿ ಇಲ್ಲ. ಈ ಪುನರ್ಜನ್ಮದ ಭಾವನೆ ಅಂಜಿಕೆ ಹುಟ್ಟಿಸುವುದಿಲ್ಲ. ಮಾನವ ಕೋಟಿಯ ಕಲ್ಯಾಣಕ್ಕೆ ಇದು ಅತ್ಯಾವಶ್ಯಕ. ವಿಚಾರಪರರು ನಿರ್ಣಯಕ್ಕೆ ಬರಬಹುದಾದ ಏಕಮಾತ್ರ ತರ್ಕಸಮತ್ಮ ಸಿದ್ಧಾಂತ. ನೀನು ಇನ್ನು ಮೇಲೆ ಅನಂತನಾಗಿ ಬಾಳುವೆ ಯಾದರೆ ನೀನು ಹಿಂದೆಯೂ ಅನಂತವಾಗಿಯೇ ಇರಬೇಕಾಯಿತು. ಅನ್ಯಥಾ ಇರಲಾರದು. ಈ ಸಿದ್ಧಾಂತಕ್ಕೆ ವಿರೋಧವಾಗಿ ತರುವ ಕೆಲವು ಆಕ್ಷೇಪಣೆಗಳಿಗೆ ನಾನು ಉತ್ತರ ಕೊಡುತ್ತೇನೆ. ಅವು ನಿರಾಧಾರವಾದ ಆಕ್ಷೇಪಣೆ ಎಂದು ನಿಮ್ಮಲ್ಲಿ ಹಲವರು ಯೋಚಿಸಿದರೂ ನಾವು ಸಮಾಧಾನ ಕೊಡಬೇಕಾಗಿದೆ. ಏಕೆಂದರೆ ಪ್ರಪಂಚದಲ್ಲಿ ಕೆಲವುವೇಳೆ ಅರೆಬುದ್ಧಿವಂತರು ಅಸಮಂಜಸ ಆಕ್ಷೇಪಣೆ ತರುವರು. ತಾತ್ತ್ವಿಕರು ಸಮರ್ಥಿಸದ, ಕೆಲಸಕ್ಕೆ ಬಾರದ ಯಾವ ವಿಷಯವೂ ಇಲ್ಲ ಎಂದು ಕೆಲವು ವೇಳೆ ಹೇಳುವರು. ಮೊದಲನೆ ಆಕ್ಷೇಪಣೆಯೆ, ನಾವು ನಮ್ಮ ಹಿಂದಿನದನ್ನು ಏತಕ್ಕೆ ಜ್ಞಾಪಿಸಿ ಕೊಳ್ಳಲಾರೆವು? ಈ ಜೀವನದ ನಮ್ಮ ಹಿಂದಿನದೆಲ್ಲ ನಾವು ಜ್ಞಾಪಿಸಿಕೊಳ್ಳ ಬಲ್ಲೆವೆ? ನೀವು ಸಣ್ಣ ಮಗುವಾಗಿರುವಾಗ ಏನು ಮಾಡಿದಿರಿ ಅದೆಲ್ಲ ನಿಮಗೆ ಗೊತ್ತಿದೆಯೆ? ನಿಮ್ಮ ಬಾಲ್ಯಾವಸ್ಥೆ ಯಾರಿಗೂ ಗೊತ್ತಿಲ್ಲ. ಜ್ಞಾಪಕದ ಮೇಲೆ ಅಸ್ತಿತ್ವ ಇರುವ ಹಾಗೆ ಇದ್ದರೆ ಈ ವಾದದಿಂದ ನೀವು ಮಕ್ಕಳಾದಾಗ ಇರಲಿಲ್ಲ ಎನ್ನಬೇಕಾಗುವುದು. ಏಕೆಂದರೆ ನಿಮ್ಮ ಬಾಲ್ಯ ನಿಮಗೆ ಜ್ಞಾಪಕವಿಲ್ಲ. ನಮ್ಮ ನೆನಪಿನ ಆಧಾರದ ಮೇಲೆ ನಮ್ಮಿರವು ಇದೆ ಎಂದು ಹೇಳುವುದು ಪರಿಹಾಸ್ಯ, ಮೂರ್ಖತನ. ನಾನು ಹಿಂದಿನದನ್ನು ಏತಕ್ಕೆ ಜ್ಞಾಪಿಸಿಕೊಳ್ಳಬೇಕು. ಆಗ ಇದ್ದ ಮೆದುಳು ಈಗ ಇಲ್ಲ. ಹೊಸ ಮೆದುಳಿದೆ. ಈ ಮೆದುಳಿಗೆ ಈಗ ಇರುವುದೆಲ್ಲ ಹಿಂದಿನ ನಮ್ಮ ಪೂರ್ವ ವಾಸನೆಗಳ ಮೊತ್ತ. ಈ ವಾಸನೆಗಳೊಂದಿಗೆ ಮನಸ್ಸು ದೇಹದಲ್ಲಿರಲು ಬಂದಿರುವುದು.

ನಿಮ್ಮೆದುರಿಗೆ ಇರುವ ನಾನು ನನ್ನ ಹಿಂದಿರುವ ಅನಂತ ಕಾಲದ್ಧ ಪರಿಣಾಮ ಪ್ರತಿಫಲ. ನನ್ನ ಹಿಂದಿನದನ್ನೆಲ್ಲ ಜ್ಞಾಪಕದಲ್ಲಿಟ್ಟುಕೊಳ

ಬೇಕಾದ ಅವಶ್ಯಕವೇನು? ಒಬ್ಬ ಪುರಾತನ ಪ್ರಖ್ಯಾತ ಮಹಾತ್ಮ ಋಷಿ ಅಥವಾ ದೇವದೂತ ಸತ್ಯವನ್ನು ಸಾಕ್ಷಾತ್ಕಾರಮಾಡಿಕೊಂಡಿರುವವರು ಎಂದು ಏನಾದರೂ ಹೇಳಿದರೆ ಈ ಆಧುನಿಕರು ಅವನೊಬ್ಬ ಹುಚ್ಚ ಎಂದು ತಿರಸ್ಕರಿಸುವರು, ಆದರೆ ಹಕ್ಸ್‌ಲೆ ಹೇಳುತ್ತಾನೆ, ಟಿಂಡಲ್ ಹೇಳುತ್ತಾನೆ ಎನ್ನಿ, ಅದು ಸತ್ಯವಾಗಿರಬೇಕೆಂದು ಅದನ್ನು ಸ್ವೀಕರಿಸುತ್ತಾರೆ. ಪೂರ್ವದ ಮೂಢನಂಬಿಕೆಗಳ ಬದಲು ಆಧುನಿಕ ಮೂಢನಂಬಿಕೆ ಸೃಜಿಸಿರುವರು. ಹಿಂದಿನಕಾಲದ ಧರ್ಮಪೋಪರ ಬದಲು ಆಧುನಿಕ ವೈಜ್ಞಾನಿಕ ಪೋಪರನ್ನು ಸೃಷ್ಟಿಸಿರುವರು. ನೆನಪಿನ ಆಧಾರದಮೇಲೆ ತರುವ ಈ ಆಕ್ಷೇಪಣೆ ನಿಜವಲ್ಲ. ಈ ಸಿದ್ಧಾಂತಕ್ಕೆ ವಿರೋಧವಾಗಿ ತರುವ ಹೊಸ ಮುಖ್ಯ ಆಕ್ಷೇಪಣೆಯೇ ಇದು : ಈ ಸಿದ್ಧಾಂತಕ್ಕೆ ನಮ್ಮ ಹಿಂದಿನ ಜೀವನದ ನೆನಪನ್ನು ತಿಳಿದುಕೊಳ್ಳುವುದು ಆವಶ್ಯಕವಲ್ಲವಾದರೂ ಕೆಲವು ವೇಳೆ ಇಂತಹ ನೆನಪು ಬರುವುದೆಂದು ಹೇಳುವೆವು. ನಾವು ಮುಕ್ತರಾದಾಗ ಈ ನೆನಪೆಲ್ಲ ನಮಗೆ ಆಗ ಬರುವುದು. ಆಗಮಾತ್ರ ಈ ಜಗತ್ತು ಒಂದು ಸ್ವಪ್ನದಂತೆ ತೋರುವುದು. ಆಗಮಾತ್ರ ನೀವು ಹೃದಯಾಂತರಾಳದಲ್ಲಿ ನೀವು ಕೇವಲ ಪಾತ್ರಧಾರಿಗಳು, ಪ್ರಪಂಚ ರಂಗಭೂಮಿ ಎಂದು ಗೊತ್ತಾಗುವುದು. ಆಗಮಾತ್ರ ಅನಂತಶಕ್ತಿಯೊಡಗೂಡಿ ನಿಮಗೆ ಅನಾಸಕ್ತಿ ಬರುವುದು. ಆಗ ಭೋಗೇಚ್ಛೆ, ಜೀವನಾಸಕ್ತಿ ಮತ್ತು ಪ್ರಪಂಚದಮೇಲೆ ಆಸಕ್ತಿ ಎಂದೆಂದಿಗೂ ಮಾಯವಾಗುವುದು. ಆಗ ಮನಸ್ಸು ಹಗಲಿನಷ್ಟು ಸ್ಪಷ್ಟವಾಗಿ ಈ ವಿಷಯಗಳೆಲ್ಲ ನಮಗಾಗಿ ಎಷ್ಟೋ ವೇಳೆ ಇದ್ದುವು, ಎಷ್ಟೋ ಕೋಟಿವೇಳೆ ನಮಗೆ ತಂದೆ ತಾಯಿ ಮಗಳು ಮಗ ಗಂಡ ಹೆಂಡತಿ ಬಂಧು ಬಳಗ ಐಶ್ವರ್ಯ ಅಧಿಕಾರ ಇದ್ದವು ಎಂಬುದು ಗೊತ್ತಾಗುವುದು. ಅವು ಬಂದು ಹೋದವು ಎಷ್ಟೋ ವೇಳೆ ನೀನು ಭರವಸೆಯ ಅಲೆಯ ತುತ್ತತುದಿಯಲ್ಲಿದ್ದೆ. ನೀನು ಎಷ್ಟು ವೇಳೆ ನಿರಾಶೆಯ ಕೂಪದಲ್ಲಿದ್ದೆ? ನೆನಪು ನಿನಗೆ ಇವನ್ನೆಲ್ಲಾ ತಂದಾಗ ಆಗ ಮಾತ್ರ ನೀನು ಧೀರನಂತೆ ನಿಂತು ಬದ್ಧಭೃಕುಟಿಯಿಂದ ಚುಚ್ಚುತ್ತಿರುವ ಪ್ರಪಂಚವನ್ನು ನೀನು ನೋಡಿ ನಗುವೆ. ಆಗಮಾತ್ರ ನೀವು ಎದ್ದುನಿಂತು "ಮೃತ್ಯು ನಾನು ನಿನ್ನನ್ನು ಲೆಕ್ಕಿಸುವುದಿಲ್ಲ. ಏನಿದೆ ನಿನ್ನ ಪ್ರತಾಪ?" ಎನ್ನುವೆವು. ಇದು ಎಲ್ಲರಿಗೂ ಬರುವುದು.

ಈ ಪುನರ್ಜನ್ಮವನ್ನು ಸಮರ್ಥಿಸುವುದಕ್ಕೆ ಏನಾದರೂ ವಾದಗಳಿವೆಯೆ? ಕಾರಣಗಳಿವೆಯೆ? ಇದುವರೆಗೆ ಪ್ರತಿಪಕ್ಷದವರ ಅಭಿಪ್ರಾಯ

ಸರಿಯಲ್ಲ ಎಂದು ಮಾತ್ರ ಹೇಳುತ್ತಿದ್ದೆವು. ಅದು ನಿಷೇಧ ರೂಪಕವಾಗಿತ್ತು. ಪ್ರತ್ಯಕ್ಷವಾಗಿ ಯಾವುದಾದರೂ ಕಾರಣಗಳಿವೆಯೆ? ಇವೆ. ಬಹಳ ಯುಕ್ತಿ ಪೂರ್ವಕ ಕಾರಣಗಳಿ ಇವೆ. ಪ್ರತಿಯೊಬ್ಬನಲ್ಲಿಯೂ ಜ್ಞಾನಾರ್ಜನೆಗೆ ಇರುವ ವ್ಯತ್ಯಾಸಕ್ಕೆ ಕಾರಣವನ್ನು ಪುನರ್ಜನ್ಮ ಸಿದ್ಧಾಂತವಲ್ಲದೆ ಮತ್ತಾವುದೂ ಕೊಡಲಾರದು. ಮೊದಲು ನಾವು ಜ್ಞಾನವನ್ನು ಹೇಗೆ ಪಡೆಯುತ್ತೇವೆ ಎಂಬುದನ್ನು ವಿಚಾರಿಸೋಣ. ನಾನು ರಸ್ತೆಗೆ ಹೋಗಿ ಒಂದು ನಾಯಿ ನೋಡುತ್ತೇನೆ ಎಂದು ಭಾವಿಸೋಣ. ಅದೊಂದು ನಾಯಿ ಎಂದು ಹೇಗೆ ಗೊತ್ತು? ಅದನ್ನು ನನ್ನ ಮನಸ್ಸಿಗೆ ಒಪ್ಪಿಸುತ್ತೇನೆ. ನನ್ನ ಮನಸ್ಸಿನಲ್ಲಿ ಹಿಂದಿನ ಅನುಭವವೆಲ್ಲ ಬೇರೆ ಬೇರೆ ವರ್ಗೀಕರಣವಾಗಿ ಜೋಡಿಸಲ್ಪಟ್ಟಿವೆ. ನನಗೊಂದು ಹೊಸ ಅನುಭವ ಆದೊಡನೆ ಅದನ್ನು ಹಳೆಯ ಅನುಭವಕ್ಕೆ ಹೋಲಿಸುವೆನು. ಆಗಲೆ ಇಂಥಹ ನೆನಪು ಅಲ್ಲಿದ್ದರೆ ಇದನ್ನು ಅದರೊಂದಿಗೆ ಜೋಡಿಸುವೆನು. ಆಗ ನನಗೆ ತೃಪ್ತಿಯಾಗುವುದು. ಅದು ಹಿಂದೆ ಇದ್ದ ಅನುಭವಗಳೊಂದಿಗೆ ಒಪ್ಪಿಕೊಂಡಾಗ ಅದು ನಾ ಯಿ ಎಂದು ಗೊತ್ತಾಗುವುದು. ಇದನ್ನು ಹೋಲುವ ಹಳೆಯ ಅನುಭವ ಅಲ್ಲಿ ಇಲ್ಲದೇ ಇದ್ದರೆ ನನಗೆ ಅಸಮಾಧಾನ. ಇದನ್ನೆ ಅಜ್ಞಾನ ಎನ್ನುವುದು. ಇಂತಹ ನೆನಪು ಆಗಲೆ ಅಲ್ಲಿದ್ದರೆ ನನಗೆ ಸಮಾಧಾನವಾಗಿ ಇದನ್ನು ಜ್ಞಾನ ಎನ್ನುವೆನು. ಒಂದು ಸೇಬು ನೆಲಕ್ಕೆ ಬಿದ್ದಾಗ ಮನುಷ್ಯನಿಗೆ ಅತೃಪ್ತಿಯಾಯಿತು. ಕ್ರಮೇಣ ಆ ವರ್ಗವನ್ನು ಕಂಡುಹಿಡಿದರು. ಅವರಿಗೆ ದೊರೆತ ಗುಂಪು ಯಾವುದು? ಅದೇ ಎಲ್ಲಾ ಸೇಬೂ ಬೀಳುವುವು. ಅದನ್ನೇ ಆಕರ್ಷಣ ಎಂದರು. ಆಗಲೆ ಒಂದು ಅನುಭವದ ನಿಧಿ ಇಲ್ಲದೆ ಇದ್ದರೆ ಹೊಸ ಅನುಭವ ಸಾಧ್ಯವಿಲ್ಲ. ಹೊಸ ಅನುಭವವನ್ನು ಹೋಲಿಸುವುದಕ್ಕೆ ಹಿಂದಿನ ಜ್ಞಾನರಾಶಿಯೇ ಇರುವುದಿಲ್ಲ. ಕೆಲವು ಪಾಶ್ಚಾತ್ಯ ತತ್ತ್ವಜ್ಞರು ಆಲೋಚಿಸಿರುವಂತೆ ಮಗು ಪ್ರಪಂಚಕ್ಕೆ ಖಾಲಿ ಬರುವುದು [ Tabularasa ] ಎಂಬುದು ನಿಜವಾದರೆ ಆ ಮಗು ಎಂದಿಗೂ ಬುದ್ಧಿವಂತನಾಗಲಾರದು. ಏಕೆಂದರೆ ಅವನ ಹೊಸ ಭಾವನೆಯನ್ನು ಹೋಲಿಸುವುದಕ್ಕೆ ಯಾವ ಹಿಂದಿನ ಭಾವವರ್ಗವೂ ಇರುವುದಿಲ್ಲ. ಪ್ರತಿಯೊಬ್ಬನಲ್ಲಿಯೂ ಜ್ಞಾನವನ್ನು ಸಂಪಾದಿಸುವ ಶಕ್ತಿ ವ್ಯತ್ಯಾಸವಾಗುವುದು. ಇದರಿಂದ ಪ್ರತಿಯೊಬ್ಬರೂ ಪ್ರಪಂಚಕ್ಕೆ ವ್ಯತ್ಯಾಸವಾಗುವ ಜ್ಞಾನರಾಶಿಯೊಂದಿಗೆ ಬರುವರು ಎನ್ನುವುದು ಸಿದ್ಧಾಂತವಾಯಿತು. ಜ್ಞಾನ ಅನುಭವದ ಮೂಲಕ ಮಾತ್ರ ಸಿದ್ಧಿಸುವುದು. ಬೇರೆ ಮಾರ್ಗವೇ ಇಲ್ಲ. ನಾವು ಈ ಜನ್ಮದಲ್ಲಿ ಅದನ್ನು

ಅನುಭವಿಸದೇ ಇದ್ದರೆ ಹಿಂದಿನ ಜನ್ಮದಲ್ಲಿ ಅನುಭವಿಸಿರಬೇಕು. ಎಲ್ಲಾ ಕಡೆಗಳಲ್ಲಿಯೂ ಮೃತ್ಯು ಭಯವೇಕೆ ಇರುವುದು? ಕೋಳಿ ಮರಿ ಈಗತಾನೆ ಮೊಟ್ಟೆಯಿಂದ ಒಡೆದಿದೆ. ಅದನ್ನು ಹಿಡಿಯಲು ಒಂದು ಹದ್ದು ಬರುವುದು. ಆಗಲೇ ಅದು ರಕ್ಷಣೆಗೆ ಓಡುವುದು ಇದಕ್ಕೆ ಒಂದು ಹಳೆ ವಿವರಣೆ ಇದೆ. ಇದನ್ನು ಹುಟ್ಟುಗುಣ ಎನ್ನುವರು. ಈಗತಾನೆ ಮೊಟ್ಟೆಯಿಂದ ಹೊರಗೆ ಬಂದ ಮರಿಗೆ ಸಾವಿಗೆ ಅಂಜುವಂತೆ ಮಾಡುವುದಾವುದು? ಬಾತಿನ ಮರಿ ಮೊಟ್ಟೆಯಿಂದ ಬಂದೊಡನೆಯೆ ನೀರಿನ ಹತ್ತಿರ ಬಂದರೆ ಅದರಲ್ಲಿ ಬಿದ್ದು ಹೇಗೆ ಈಜಬಲ್ಲದು? ಅದು ಹಿಂದೆ ಎಂದೂ ಈಜಿರಲಿಲ್ಲ. ಅಥವಾ ಈಜುವವರನ್ನು ನೋಡಿಯೂ ಇರಲಿಲ್ಲ. ಜನ ಇದನ್ನು ಹುಟ್ಟು ಗುಣ ಎನ್ನುವರು. ಇದೊಂದು ಪ್ರೌಢಪದ. ಆದರೆ ನಮ್ಮ ಅಜ್ಞಾನ ಎಳ್ಳಷ್ಟೂ ಕಡಿಮೆಯಾಗುವುದಿಲ್ಲ. ಈ ಹುಟ್ಟು ಗುಣವೆಂಬ ಸಂಗತಿಯನ್ನು ಸ್ವಲ್ಪ ನೋಡೋಣ. ಮಗು ಪಿಯಾನೊ ಬಾರಿಸುವುದು. ಮೊದಲು ಪ್ರಕೃತಿಯೊಂದು ಮನೆಯನ್ನು ನೋಡಿ ಅದು ಬಾರಿಸ ಬೇಕು. ಹೀಗೆ ಹಲವು ವರುಷ ಅಭ್ಯಾಸವಾದಮೇಲೆ ಅದು ನಮ್ಮ ಅರಿವಿಲ್ಲದೆ ಹುಟ್ಟು ಗುಣವಾಗುವುದು. ಮೊದಲು ನಾವು ಯಾವುದನ್ನು ಐಚ್ಛಿಕವಾಗಿ ಮಾಡಿರುವೆವೊ ಅದಕ್ಕೆ ಅನಂತರ ಐಚ್ಛಿಕ ಪ್ರಯತ್ನ ಬೇಕಿಲ್ಲ. ಇದು ಇನ್ನೂ ಪೂರ್ಣ ಸಮರ್ಥನೆ ಆಗಿಲ್ಲ. ಇನ್ನರ್ಧ ಭಾಗ ಉಳಿದಿರುವುದು. ಈಗ ಅನೈಚ್ಛಿಕವಾಗಿ ಇರುವ ಕಾರ್ಯಗಳನ್ನೆಲ್ಲಾ ಐಚ್ಛಿಕವಾಗಿ ಮಾಡಬಹುದು. ದೇಹದ ಪ್ರತಿಯೊಂದು ಮಾಂಸಖಂಡವನ್ನೂ ನಮ್ಮ ಇಚ್ಛೆಗೆ ಅಧೀನ ಮಾಡಬಹುದು. ಇದು ಎಲ್ಲರಿಗೂ ಚೆನ್ನಾಗಿ ಗೊತ್ತಿದೆ. ಈ ಎರಡು ಮಾರ್ಗದಿಂದ ವಿವರಣೆ ಪೂರ್ಣವಾಗುವುದು. ಈಗ ನಾವು ಯಾವುದನ್ನು ಹುಟ್ಟು ಗುಣ ಎನ್ನುವೆವೊ ಅವು ಐಚ್ಛಿಕ ಕ್ರಿಯೆಗಳ ಅವರೋಹಣ. ಈ ಉಪಮಾನವನ್ನು ನಾವು ಇಡೀ ವಿಶ್ವಕ್ಕೆ ಅನ್ವಯಿಸಿದರೆ ಪ್ರಕೃತಿ ಎಲ್ಲಾ ಕಡೆಯೂ ಒಂದೇ ಸಮನಾಗಿದ್ದರೆ ಯಾವುದು ಕೆಳವರ್ಗದ ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಹುಟ್ಟು ಗುಣವಾಗಿದೆಯೊ ಅದು ಇಚ್ಛೆಯ ಅವರೋಹಣವಾಗಿರಬೇಕು.

ಬ್ರಹ್ಮಾಂಡದಲ್ಲಿ ಉಪಯೋಗಿಸಿದ ಪ್ರತಿಯೊಂದು ಆಪೂರಣ ಒಂದು ವಿಕಾಸವನ್ನು ಊಹಿಸ ಬೇಕಾಗಿದೆ. ಪ್ರತಿಯೊಂದು ವಿಕಾಸವೂ ಒಂದು ಆಪೂರಣವನ್ನು ಊಹಿಸಬೇಕಾಗಿದೆ ಎಂಬ ನಿಯಮವನ್ನು ಇಲ್ಲಿ ಅನ್ವಯಿಸಿದರೆ ಹುಟ್ಟು ಗುಣ ಎಂದರೆ ಯುಕ್ತಿಯ ಆಪೂರಣ ಸ್ಥಿತಿ [Evolving state] ಎನ್ನಬೇಕಾಗುವುದು. ಮನುಷ್ಯ ಪ್ರಾಣಿಗಳಲ್ಲಿ ಯಾವುದನ್ನು

ಹುಟ್ಟು ಗುಣ ಎನ್ನುವೆವೊ ಅವು ಐಚ್ಛಿಕ ಕ್ರಿಯೆಗಳ ಅವರೋಹಣವಿರ ಬೇಕು. ಐಚ್ಛಿಕ ಕ್ರಿಯೆಗಳು ಅನುಭವವಿಲ್ಲದೆ ಸಾಧ್ಯವಿಲ್ಲ. ಅನುಭವವೇ ಜ್ಞಾನಕ್ಕೆ ಮೂಲ. ಅಜ್ಞಾನ ಅಲ್ಲಿದೆ. ಮರಣ ಭಯ, ಬಾತಿನ ಮರಿ ನೀರಿ ನಲ್ಲಿ ಈಜುವುದು, ಮನುಷ್ಯನಲ್ಲಿರುವ ಎಲ್ಲಾ ಅನೈಚ್ಛಿಕ ಕ್ರಿಯೆಗಳೂ ಹಿಂದಿನ ಅನುಭವದ ಪರಿಣಾಮ. ನಾವು ಇಲ್ಲಿಯವರೆಗೆ ಬಹಳ ಸ್ಪಷ್ಟವಾಗಿ ಮುಂದುವರಿದಿರುವೆವು. ಇಲ್ಲಿಯವರೆವಿಗೂ ಅತಿ ಆಧುನಿಕ ವಿಜ್ಞಾನ ನಿಮ್ಮೊಂದಿಗೆ ಇರುವುದು. ಆದರೆ ಇಲ್ಲಿ ಮತ್ತೊಂದು ಕಷ್ಟ ಬರುವುದು. ಅತ್ಯಾಧುನಿಕ ವೈಜ್ಞಾನಿಕರು ಹಿಂದೆ ಋಷಿಗಳ ಭಾವನೆಯ ಸಮೀಪಕ್ಕೆ ಬರುತ್ತಿರುವರು. ಇಲ್ಲಿಯವರೆಗೆ ಪರಸ್ಪರ ಸಾಮರಸ್ಯವಿದೆ. ಪ್ರತಿಯೊಬ್ಬ ಮನುಷ್ಯ ಮತ್ತು ಪ್ರಾಣಿ ಎಲ್ಲರೂ ಪೂರ್ವ ಸಂಸ್ಕಾರಗಳೊಂದಿಗೆ ಹುಟ್ಟು ವರು ಎಂಬುದನ್ನು ಒಪ್ಪಿಕೊಳ್ಳುವರು. ಮನಸ್ಸಿನ ಚಟುವಟಿಕೆಗೆಲ್ಲ ಹಿಂದಿನ ಅನುಭವವೇ ಮೂಲ ಎನ್ನುವರು. “ಆದರೆ ಅನುಭವ ಜೀವಕ್ಕೆ ಏತಕ್ಕೆ ಸೇರಿದೆ ಎಂದು ಹೇಳ ಬೇಕು. ದೇಹಕ್ಕೆ ಮಾತ್ರ ಸೇರಿದೆ ಎಂದು ಏತಕ್ಕೆ ಹೇಳಬಾರದು? ಇದೇ ಕೊನೆಯ ಪ್ರಶ್ನೆ. ನಾನು ಹುಟ್ಟುವಾಗ ಬರುವ ಅನುಭವವೆಲ್ಲ ನನ್ನ ಪೂರ್ವಿಕರ ಅನುಭವದ ಪರಿಣಾಮ ಎಂದು ಏತಕ್ಕೆ ಹೇಳಬಾರದು? ಜೀವಾಣುವಿನಿಂದ ಹಿಡಿದು ಅತಿ ಶ್ರೇಷ್ಠ ಮಾನವ ನವರಿಗೆ ಆದ ಅನುಭವವೆಲ್ಲ ನನ್ನಲ್ಲಿದೆ. ಆದರೆ ಇದು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಅನುವಂಶಿಕವಾಗಿ ಹರಿದು ಬಂದಿದೆ. ಇದಕ್ಕೆ ಏನ್ನು ತೊಂದರೆ? ಈ ಪ್ರಶ್ನೆಯೇನೋ ಚೆನ್ನಾಗಿದೆ. ನಾವು ಕೂಡ ಇದರಲ್ಲಿ ಸ್ವಲ್ಪ ಭಾಗ ಅನುವಂಶಿಕವೆಂದು ಒಪ್ಪುತ್ತೇವೆ. ಆದರೆ ಎಷ್ಟು? ನಮಗೆ ಒಂದು ದೇಹ ಕೊಡುವುದಕ್ಕೆ ಮಾತ್ರ. ನಮ್ಮ ಪೂರ್ವ ಕರ್ಮಗಳ ಪ್ರತಿ ಫಲವಾಗಿ ನಾವು ಯಾವುದೋ ಒಂದು ಮನೆಯಲ್ಲಿ ದೇಹಧಾರಣೆ ಮಾಡ ಬೇಕಾಗಿದೆ. ಆ ದೇಹಕ್ಕೆ ಬೇಕಾದ ವಸ್ತು ತಂದೆ ತಾಯಿಗಳಿಂದ ಬರು ವುದು. ಅವರು ಅಂತಹ ಶಿಶುವಿನ ಜನನಕ್ಕೆ ತಮ್ಮ ಕರ್ಮದಿಂದ ಇದಕ್ಕೆ ಯೋಗ್ಯತೆ ಪಡೆದಿರುವರು.

ಅನುವಂಶಿಕ ಸಿದ್ಧಾಂತ ಸಕಾರಣವಿಲ್ಲದೆ ಮಾನಸಿಕ ಅನುಭವವನ್ನು ವಸ್ತುವಿನಲ್ಲಿ ಶೇಖರಿಸಬಹುದು ಮತ್ತು ವಸ್ತುವಿನಿಂದ ಮಾನಸಿಕ ಭಾವನೆ ವಿಕಾಸವಾಗಬಹುದು ಎಂಬ ಅರೆವಿಚಿತ್ರವಾದ ಊಹೆಯನ್ನು ಒಪ್ಪಿಕೊಳ್ಳು ವುದು. ನಾನು ನಿನ್ನನ್ನು ನೋಡಿದಾಗ ನನ್ನ ಚಿತ್ತ ಸರೋವರದಲ್ಲಿ ಒಂದು ಅಲೆಏಳುವುದು. ಆ ಅಲೆ ಮಾಯವಾಗುವುದು. ಆದರೆ ಅದೊಂದು ಅನುಭವ

ದಂತೆ ಸೂಕ್ಷ್ಮರೂಪದಲ್ಲಿರುವುದು. ದೇಹದಲ್ಲಿ ಒಂದು ಭೌತಿಕ ಚಿಹ್ನೆಯನ್ನು ನಾವು ಬೇಕಾದರೆ ತಿಳಿದುಕೊಳ್ಳಬಹುದು. ಆದರೆ ಮಾನಸಿಕ ಅನುಭವ ದೇಹದಲ್ಲಿದೆ ಎಂಬುದಕ್ಕೆ ಆಧಾರ ವೇನು? ದೇಹ ನಾಶವಾಗಿ ಹೋಗುವುದು. ಯಾವುದು ಅದನ್ನು ಹೊತ್ತುಕೊಂಡು ಹೋಗುವುದು. ಒಂದು ವೇಳೆ ಪ್ರತಿಯೊಂದು ಮಾನಸಿಕ ಭಾವನೆಯೂ ದೇಹದಲ್ಲಿ ತನ್ನ ಛಾಯೆಯನ್ನು ಬಿಡುವುವೆಂಬುದನ್ನು ಒಪ್ಪಿಕೊಂಡರೂ ಆದಿ ಮಾನವನಿಂದ ಹಿಡಿದು ತನ್ನ ತಂದೆಯವರೆಗೂ ಎಲ್ಲಾ ಅನುಭವಗಳೂ ನನ್ನ ತಂದೆಯಲ್ಲಿದ್ದರೆ ಅವನ್ನು ಹೇಗೆ ವರ್ಗಾಯಿಸಲು ಸಾಧ್ಯ? ರೇತಸ್ಸಿನ ಮೂಲಕ. ಇದು ಹೇಗೆ ಸಾಧ್ಯ? ತಂದೆಯ ದೇಹವೆಲ್ಲ ಮಗುವಿಗೆ ಬರುವುದಿಲ್ಲ. ಒಂದೇ ತಾಯಿ ತಂದೆಗಳಿಗೆ ಹಲವು ಮಕ್ಕಳು ಇರಬಹುದು. ಈ ಅನುವಂಶಿಕ ವರ್ಗಣೆಯ ಸಿದ್ಧಾಂತದಿಂದ ಭಾವನೆ ಮತ್ತು ಅದು ಯಾವುದರ ಮೇಲೆ ಮುದ್ರಿತವಾಗಿದೆಯೊ ಅವೆರಡೂ ಒಂದೇ ಆದರೆ ಪ್ರತಿಯೊಂದು ಮಗು ಜನನವಾದಮೇಲೆ ತಂದೆ ತಾಯಿಗಳು ತಮ್ಮ ಸಂಸ್ಕಾರದ ಮೊತ್ತವನ್ನು ಸ್ವಲ್ಪ ಕಳೆದುಕೊಳ್ಳಬೇಕು. ಅಥವಾ ತಂದೆತಾಯಿಗಳು ತಮ್ಮ ಸಂಸ್ಕಾರವನ್ನೆಲ್ಲಾ ಮಗುವಿಗೆ ಧಾರೆ ಎರೆದರೆ ಮೊದಲು ಶಿಶು ಜನನವಾದಮೇಲೆ ಅವರ ಮನಸ್ಸೆಲ್ಲ ಖಾಲಿಯಾಗುವುದು. ನ್ಯಾಯವಾಗಿ ಹೀಗೆ ಆಗ ಬೇಕಾಗಿದೆ. ವೀರ್ಯ ಕಣದಲ್ಲಿ ಅನಾದಿಕಾಲದ ಅನಂತ ಅನುಭವವೆಲ್ಲ ಅಲ್ಲಿ ಸೇರಿದ್ದರೆ ಅದು ಎಲ್ಲಿದೆ? ಹೇಗೆ ಬಂತು? ಇದು ಅಸಾಧ್ಯವಾದ ಸ್ಥಿತಿ. ವೈಜ್ಞಾನಿಕರು ಆ ಜೀವ ಕಣದಲ್ಲಿ ಈ ಅನುಭವಗಳೆಲ್ಲ ಎಲ್ಲಿದೆ ಮತ್ತು ಅವು ಅಲ್ಲಿಗೆ ಹೇಗೆ ಬಂದುವು, ಮಾನಸಿಕ ಸಂಸ್ಕಾರಗಳು ದೈಹಿಕ ಗ್ರಂಥಿಯಲ್ಲಿ ಸುಪ್ತವಾಗಿವೆ ಎಂದು ವಿವರಿಸುವವರಿಗೆ ಅವರ ಪಕ್ಷವನ್ನು ಒಪ್ಪಿಕೊಳ್ಳುವಂತೆ ಇಲ್ಲ. ಇದಿಷ್ಟು ಈಗ ಸ್ಪಷ್ಟವಾಗಿದೆ. ಈ ಸಂಸ್ಕಾರಗಳು ಮನಸ್ಸಿನಲ್ಲಿವೆ. ಈ ಮನಸ್ಸು ಜನ್ಮಗಳನ್ನು ಧರಿಸಲು ಬರುವುದು. ತನಗೆ ಯೋಗ್ಯವಾದ ವಸ್ತುವನ್ನು ಅದು ಆರಿಸಿ ಕೊಳ್ಳುವುದು. ಯಾವುದೋ ಒಂದು ದೇಹದಲ್ಲಿ ಹುಟ್ಟುವುದಕ್ಕೆ ಸಾಧ್ಯವಾದ ಮನಸ್ಸು ಆ ದೇಹ ಅದಕ್ಕೆ ಸಿಕ್ಕುವತನಕ ಕಾಯಬೇಕಾಗುವುದು. ಇದನ್ನು ನಾವು ತಿಳಿದುಕೊಳ್ಳಬಹುದು. ಈ ಸಿದ್ಧಾಂತ ಅನಂತರ ಹೀಗೆ ಆಗುವುದು: ಜೀವಿಗೆ ಒಂದು ದೇಹ ಒದಗಿಸುವವರೆಗೆ ಮಾತ್ರ ಅನುವಂಶಿಕ ವರ್ಗಾವಣೆ ಇದೆ [Hereditary Transmssion]. ಆದರೆ ಜೀವಿ ಆ ದೇಹವನ್ನು ಬಿಟ್ಟುಹೋಗಿ ಹಲವು ದೇಹಗಳನ್ನು ತಯಾರು ಮಾಡಿಕೊಳ್ಳುವುದು. ನಾವು ಮಾಡಿದ ಪ್ರತಿಯೊಂದು

ಕೆಲಸ ಮತ್ತು ಆಲೋಚನೆ ಕೂಡ ಅಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುವುದು. ಎದ್ದು ಹೊಸ ಆಕಾರವನ್ನು ತಾಳುವುದಕ್ಕೆ ಸಿದ್ಧವಾಗಿರುವುದು. ನಾನು ನಿನ್ನನ್ನು ನೋಡಿದಾಗ ಮನಸ್ಸಿನಲ್ಲಿ ಒಂದು ಅಲೆ ಏಳುವುದು. ಅದು ಕೆಳಗೆ ಹೋಗಿ ಸೂಕ್ಷ್ಮವಾಗಿರುವುದು. ಆದರೆ ನಾಶವಾಗುವುದಿಲ್ಲ. ಅದು ನೆನಪಿನಂತೆ ಬೇರೊಂದು ಅಲೆಯಾಗುವುದಕ್ಕೆ ಸಿದ್ಧವಾಗಿರುವುದು. ಈ ಸಂಸ್ಕಾರಗಳೆಲ್ಲ ನನ್ನ ಮನಸ್ಸಿನಲ್ಲಿದೆ. ನಾನು ಕಾಲವಾದರೆ ಇದರ ಪರಿಣಾಮ ನನ್ನಲ್ಲಿರುವುದು. ಒಂದು ಚೆಂಡು ಕೋಣೆಯಲ್ಲಿರುವುದು. ಒಂದು ಹಿಡಿಯಿಂದ ಪ್ರತಿಯೊಬ್ಬರೂ ಚೆಂಡನ್ನು ಎಲ್ಲಾ ಕಡೆಯಿಂದಲೂ ಹೊಡೆಯುವರು. ಚೆಂಡು ಹಲವು ಕಡೆ ಕೋಣೆಯಲ್ಲಿ ತಗುಲಿ ಬಾಗಿಲ ಹತ್ತಿರ ಬಂದಾಗ ಹಾರಿ ಹೋಗುವುದು. ಅದು ಏನನ್ನು ಹೊತ್ತುಕೊಂಡು ಹೋಗುವುದು. ಯಾವಕಡೆ ಚೆಂಡು ಹೋಗಬೇಕೆಂಬುದನ್ನು ನಿಷ್ಕರ್ಷಿಸುವುದು. ದೇಹ ನಾಶವಾದರೆ ಜೀವವನ್ನು ಯಾವುದು ನಿರ್ದೇಶಿಸುವುದು? ಅದು ಮಾಡಿದ ಕೆಲಸ ಮತ್ತು ಆಲೋಚನೆಯ ಪ್ರತಿಫಲದ ಮೊತ್ತ ಅದನ್ನು ನಿರ್ದೇಶಿಸುವುದು. ಈ ಒಟ್ಟು ಸಂಘಟಿತ ಫಲದಿಂದ ಮತ್ತೊಂದು ದೇಹ ಈ ಜೀವಿಯ ಅನುಭವಕ್ಕೆ ಆವಶ್ಯಕವೆಂದು ತೋರಿದರೆ ಇಂತಹ ಜೀವನಕ್ಕೆ ಒಂದು ದೇಹವನ್ನು ನೀಡಲು ಸಿದ್ಧರಾಗಿರುವ ತಂದೆ ತಾಯಿಗಳಿಗೆ ಇದು ಹೋಗುವುದು. ಜೀವ ಹೀಗೆ ದೇಹದಿಂದ ದೇಹಕ್ಕೆ ಹೋಗುತ್ತಿರುವುದು. ಕೆಲವು ವೇಳೆ ಸ್ವರ್ಗಕ್ಕೆ ಹೋಗುವುದು, ಪುನಃ ಕೆಲವು ವೇಳೆ ಭೂಮಿಗೆ ಬರುವುದು. ಮನುಷ್ಯನಾಗುವುದು ಅಥವಾ ಕೆಲವು ವೇಳೆ ಪ್ರಾಣಿಯಾಗುವುದು. ತನ್ನ ಅನುಭವವನ್ನು ಪೂರೈಸಿಕೊಳ್ಳುವವರೆಗೆ ಹೀಗೆಯೇ ಹೋಗುತ್ತಿದ್ದು ವೃತ್ತವನ್ನು ಪೂರ್ಣಮಾಡುವುದು. ಆಗ ಅದಕ್ಕೆ ತನ್ನ ಭಾವದ ಅರಿವಾಗುವುದು, ಅಜ್ಞಾನ ಮಾಯವಾಗುವುದು. ಅದರ ಶಕ್ತಿ ವ್ಯಕ್ತವಾಗುವುದು, ಅದು ಪೂರ್ಣವಾಗುವುದು. ಜೀವಿ ಇನ್ನು ದೇಹದಮೂಲಕ ಹೆಚ್ಚು ಕೆಲಸಮಾಡಬೇಕಾಗಿಲ್ಲ. ಮನಸ್ಸು ಮತ್ತು ಸೂಕ್ಷ್ಮಶರೀರದ ಮೂಲಕವೂ ಅದು ಕೆಲಸಮಾಡಬೇಕಾದ ಆವಶ್ಯಕವಿಲ್ಲ. ಅದು ತನ್ನ ಸ್ವಯಂಪ್ರಭೆಯಿಂದ ಪ್ರಕಾಶಿಸುವುದು, ಮುಕ್ತವಾಗುವುದು. ಅದು ಇನ್ನು ಹುಟ್ಟಿ ಅಳಿಯಬೇಕಾಗಿಲ್ಲ.

ಇವುಗಳ ವಿಶದ ವಿವರಣೆಗೆ ಈಗ ಹೋಗುವುದಿಲ್ಲ. ಈ ಪುನರ್ಜನ್ಮ ಸಿದ್ಧಾಂತದ ವಿಷಯದಲ್ಲಿ ಮತ್ತೊಂದು ಭಾವನೆಯನ್ನು ತರುತ್ತೇನೆ. ಜೀವಿಯ ಸ್ವಾತಂತ್ರ್ಯವನ್ನು ಸಾರುವ ಸಿದ್ಧಾಂತ ಇದು. ನಮ್ಮ

ದುರ್ಬಲತೆಗೆ ಮತ್ತೊಬ್ಬರನ್ನು ದೂರದೆ ಇರುವ ಸಿದ್ಧಾಂತವಿದು. ಇದು ಮಾನವ ಸಹಜ ದೋಷ. ನಮ್ಮ ದೇಹವನ್ನು ನಾವು ನೋಡುವುದಿಲ್ಲ. ಕಣ್ಣು ತನ್ನನ್ನು ನೋಡಿಕೊಳ್ಳುವುದಿಲ್ಲ. ಅದು ಇತರರ ಕಣ್ಣನ್ನೆಲ್ಲ ನೋಡುವುದು. ಮನುಷ್ಯ ಎಲ್ಲಿಯವರೆಗೆ ಇತರರನ್ನು ದೂರುವುದಕ್ಕೆ ಸಾಧ್ಯವೋ ಅಲ್ಲಿಯವರೆಗೆ ನಮ್ಮ ದುರ್ಬಲತೆ ಮತ್ತು ದೋಷ ತಿಳಿದು ಕೊಳ್ಳಲಾರೆವು. ಸಾಧಾರಣವಾಗಿ ಜನರು ತಪ್ಪನ್ನೆಲ್ಲ ಇತರರ ಮೇಲೆ ಹೊರಿಸುವರು, ತಪ್ಪಿದರೆ ದೇವರು ಇಲ್ಲವೆ ದೈವ ಅಥವಾ ಅದೃಷ್ಟ ಎನ್ನು ವರು. ಅದೃಷ್ಟವೆಲ್ಲಿದೆ? ಅದೃಷ್ಟ ಯಾವುದು? ನಾವು ಬಿತ್ತುದನ್ನು ಬಿಡಿಸ ಬೇಕಾಗಿದೆ. ನಾವೇ ನಮ್ಮ ಅದೃಷ್ಟಕ್ಕೆ ಹೊಣೆ. ಇತರರನ್ನು ನಿಂದಿಸ ಬೇಕಾಗಿಲ್ಲ, ಹೊಗಳ ಬೇಕಾಗಿಲ್ಲ. ಗಾಳಿ ಬೀಸುತ್ತಿದೆ. ಯಾವ ದೋಣಿ ಧ್ವಜವನ್ನು ಹರಡಿದೆಯೊ ಅದು ಗಾಳಿಗೆ ಮುಂದೆ ಹೋಗುವುದು. ಎಲ್ಲಿ ಧ್ವಜ ಹರಡಿಲ್ಲವೊ ಅವು ಗಾಳಿ ಹಿಡಿಯಲಾರವು. ಇದು ಗಾಳಿಯ ತಪ್ಪೆ? ದಯಾಮಯನಾದ ತಂದೆಯ ತಪ್ಪೆ ಇದು? ಹಗಲು ರಾತ್ರಿ ಬಿಡದೆ ದಯೆ ಎಂಬ ಅವನ ತಂಗಾಳಿ ಬೀಸುತ್ತಿದೆ. ಅವನ ದಯೆ ಎಂದಿಗೂ ಬತ್ತುವು ದಿಲ್ಲ. ಕೆಲವರು ಸುಖಿಗಳಾಗಿರುವುದಕ್ಕೆ ಮತ್ತೆ ಕೆಲವರು ದುಃಖಿಗಳಾಗಿರು ವುದಕ್ಕೆ ಅವನ ತಪ್ಪೆ? ನಾವೆ ನಮ್ಮ ಅದೃಷ್ಟಕ್ಕೆ ಹೊಣೆಗಾರರು. ಅವನ ಪ್ರಭೆ ದುರ್ಬಲರಿಗೆ ಸಬಲರಿಗೆ ಒಂದೇ ಸಮನಾಗಿ ಪ್ರಕಾಶಿಸುತ್ತಿರುವುದು. ಅವನ ಕೃಪೆ ಪಾಪಿಯತಿಗಳಿಗೆ ಒಂದೇ ಸಮನಾಗಿರುವುದು. ಅವನು ಸರ್ವೇಶ್ವರ, ಲೋಕಪಿತ, ದಯಾಮಯ, ನಿಷ್ಪಕ್ಷಪಾತಿ. ಸೃಷ್ಟಿಕರ್ತನಾದ ದೇವರು ನಾವು ನೋಡುವ ದೃಷ್ಟಿಯಲ್ಲಿ ಜೀವನದ ಮುಖ್ಯ ವಿಷಯಗಳನ್ನು ನೋಡುತ್ತಾನೆ ಎಂದು ಭಾವಿಸುವಿರೇನು? ಅದು ಎಂತಹ ಅಧೋಗತಿಗೆ ಇಳಿದ ದೇವರ ಭಾವನೆ? ನಾವು ನಾಯಿ ಮರಿಗಳಂತೆ ಉಳಿವು ಅಳಿವಿಗಾಗಿ ಹೋರಾಡುತ್ತಿರುವೆವು. ನಮ್ಮಂತೆ ದೇವರೂ ಕೂಡ ಅದನ್ನು ಅಷ್ಟೇ ಆಸಕ್ತಿಯಿಂದ ನೋಡುವನು ಎಂದು ಭ್ರಾಂತಿ ಪಡುವೆವು. ಅವನಿಗೆ ಗೊತ್ತಿದೆ ನಾಯಿ ಚೆಲ್ಲಾಟ. ದೇವರನ್ನು ದೂರುವುದು, ಅವನನ್ನು ವರ ಶಾಪ ಕೊಡುವಂತೆ ಮಾಡುವುದು, ಎಲ್ಲಾ ಮೂರ್ಖತನ. ಅವನು ಯಾ ರನ್ನೂ ಶಿಕ್ಷಿಸುವುದಿಲ್ಲ. ವರವನ್ನು ಕೊಡುವುದಿಲ್ಲ. ಅವನ ಅನಂತ ದಯಾ ಮಾರುತ. ಎಲ್ಲಾ ಕಾಲದಲ್ಲಿ ಎಲ್ಲಾ ದೇಶದಲ್ಲಿ ಎಲ್ಲಾಸ್ಥಿತಿಯಲ್ಲಿ ಎಂದಿಗೂ ಬಿಡದೆ ನಿರಂತರವಾಗಿ ಬೀಸುತ್ತಿದೆ. ಅದನ್ನು ಹೇಗೆ ಉಪಯೋಗಿಸಿಕೊಳ್ಳ ಬೇಕೆಂಬುದು ನಮ್ಮ ಮೇಲಿದೆ. ಮನುಷ್ಯ, ದೇವರು ಅಥವಾ ಇನ್ನು

ಯಾವುದನ್ನೂ ಪ್ರಪಂಚದಲ್ಲಿ ದೂರಬೇಡಿ. ನೀನು ವ್ಯಥೆಗೀಡಾದರೆ ನೀನೆ ಅದಕ್ಕೆ ಕಾರಣ. ಉತ್ತಮನಾಗಲು ಪ್ರಯತ್ನಿಸು.

ಮನುಷ್ಯನಿಗೆ ಇದೊಂದೇ ಪರಿಹಾರ. ಯಾರು ಅನ್ಯರನ್ನು ದೂರುವರೊ (ದುರದೃಷ್ಟವಶದಿಂದ ಅಂತಹವರ ಸಂಖ್ಯೆ ಕ್ರಮೇಣ ಹೆಚ್ಚುತ್ತಿದೆ) ಅವರು ಸಾಧಾರಣವಾಗಿ ದುಃಖಿಗಳು. ತಮ್ಮ ತಪ್ಪಿನಿಂದ ತಾವೇ ಆ ಸ್ಥಿತಿಗೆ ಬಂದಿರುವರು. ಇತರರನ್ನು ದೂರುವರು. ಇದರಿಂದ ಅವರ ಸ್ಥಿತಿ ಮೇಲಾಗುವುದಿಲ್ಲ. ಯಾವ ವಿಧದಲ್ಲಿಯೂ ಇದು ಅವರಿಗೆ ಸಹಾಯಮಾಡಲಾರದು. ಇತರರನ್ನು ದೂರಿ ತಾವು ಮತ್ತಷ್ಟು ದುರ್ಬಲರಾಗುವರು. ನಿಮ್ಮ ಸ್ವಂತ ಕಾಲಮೇಲೆ ನಿಲ್ಲಿ. ಜವಾಬ್ದಾರಿಯನ್ನೆಲ್ಲ ನೀವು ತೆಗೆದುಕೊಳ್ಳಿ. “ನಾನು ಅನುಭವಿಸುತ್ತಿರುವ ದುಃಖಕ್ಕೆಲ್ಲ ನಾನೆ ಕಾರಣ. ಆದಕಾರಣ ಈ ದುಃಖವನ್ನು ನಾನೇ ನಿವಾರಿಸಬೇಕಾಗಿದೆ.” ನಾನು ಸೃಷ್ಟಿಸಿದುದನ್ನು ನಾನು ನಾಶ ಮಾಡಬಲ್ಲೆ. ಇತರರು ಸೃಷ್ಟಿಸಿದುದನ್ನು ನಾನೆಂದಿಗೂ ನಾಶ ಮಾಡಲಾರೆ. ಎದ್ದು ನಿಲ್ಲಿ! ಧೀರರಾಗಿ! ಬಲಾಢ್ಯರಾಗಿ! ಜವಾಬ್ದಾರಿಯನ್ನೆಲ್ಲಾ ನೀವು ವಹಿಸಿ ನಿಮ್ಮ ಅದೃಷ್ಟಕ್ಕೆ ನೀತಿ ಹೊಣೆ ಎಂದು ತಿಳಿದುಕೊಳ್ಳಿ. ನಿಮಗೆ ಬೇಕಾದ ಶಕ್ತಿ ಸಹಾಯವೆಲ್ಲ ನಿಮ್ಮಲ್ಲೆ ಇದೆ! ಆದಕಾರಣ ನಿಮ್ಮ ಭವಿಷ್ಯವನ್ನು ನೀವೆ ನಿರ್ಮಿಸಿಕೊಳ್ಳಿ. ಕಳೆದುದನ್ನು ಕುರಿತು ವ್ಯಥೆಪಡಬೇಡಿ. ಅನಂತ ಭವಿಷ್ಯ ನಿಮ್ಮೆದುರಿಗೆ ಇದೆ. ಪ್ರತಿಯೊಂದು ಮಾತು ಆಲೋಚನೆ ಕೆಲಸ ನಿನಗಾಗಿ ಕಾದು ಕೊಂಡಿರುವುವು. ಕೆಟ್ಟ ಆಲೋಚನೆ ಕೆಟ್ಟ ಕೆಲಸ ರಕ್ಕಸರಂತೆ ನಿನ್ನ ಮೇಲೆ ಬೀಳಲು ಕಾಯ್ದುಕೊಂಡಿರುವಂತೆ ಒಳ್ಳೆಯ ಆಲೋಚನೆ ಒಳ್ಳೆಯ ಕಾರ್ಯ ಒಂದು ಲಕ್ಷ ದೇವದೂತರ ಶಕ್ತಿಯೊಂದಿಗೆ ನಿನ್ನನ್ನು ಎಂದೆಂದಿಗೂ ರಕ್ಷಿಸಲು ಕಾಯ್ದುಕೊಂಡಿವೆ ಎನ್ನುವುದು ಉತ್ತೇಜನಕಾರಿಯಾದ ಭರವಸೆ.

---

# ಅಮರತ್ವ

ಯಾವ ಪ್ರಶ್ನೆಯನ್ನು ಹಲವು ವೇಳೆ ಪುನಃಪುನಃ ಹಾಕಿರುವರು? ಯಾವ ಭಾವನೆ ವಿಶ್ವವನ್ನು ಉತ್ತರಕ್ಕಾಗಿ ಸಂಶೋಧನೆ ಮಾಡುವಂತೆ ಪ್ರೇರೇಪಿಸುತ್ತಿರುವುದು ಮತ್ತಾವ ಪ್ರಶ್ನೆ ಮಾನವನಿಗೆ ಅತಿ ನಿಕಟವಾಗಿ ಪ್ರಿಯವಾಗಿರುವುದು? ಯಾವ ಪ್ರಶ್ನೆ ನಮ್ಮಿಂದ ಪ್ರತ್ಯೇಕಿಸಲಾಗದಷ್ಟು ನಿಕಟವಾಗಿಪ್ರಿಯವಾಗಿರುವುದು? ಅದೇ ಜೀವಾತ್ಮನ ಅಮರತ್ವದ ವಿಷಯ. ಇದು ಕವಿಗಳ ಋಷಿಗಳ ದೇವರ ಅರ್ಚಕರ ದೇವದೂತರ ಆಲೋಚನಾ ವಿಷಯವಾಗಿದೆ. ಸಿಂಹಾಸನದ ಮೇಲೆ ಕುಳಿತ ರಾಜರು ಇದನ್ನು ಚರ್ಚಿಸಿ ರುವರು, ದಾರಿಯಲ್ಲಿ ಹೋಗುವ ಭಿಕಾರಿಗಳು ಇದನ್ನು ಸಮೀಪಿಸಿರುವರು. ಅತಿ ನಿಕೃಷ್ಟ ಮಾನವರು ಇದನ್ನು ಆಶಿಸುವರು. ವಿಷಯದಮೇಲಿನ ಆಸಕ್ತಿ ಮಾಯವಾಗಿಲ್ಲ. ಎಲ್ಲಿಯವರೆಗೆ ಮಾನವ ಸ್ವಭಾವ ಇರುವುದೊ ಅಲ್ಲಿಯವರೆಗೆ ಮಾಯವಾಗುವಂತೆಯೆ ಇಲ್ಲ. ಹಲವರು ಉತ್ತರವನ್ನು ಇದಕ್ಕೆ ಕೊಟ್ಟಿರುವರು. ಪ್ರತಿಯೊಂದು ಕಾಲದಲ್ಲಿಯೂ ಸಹಸ್ರಾರು ಜನ ಇದರ ಚರ್ಚೆಯನ್ನು ಬಿಟ್ಟಿರುವರು. ಆದರೂ ಪ್ರಶ್ನೆ ಎಂದಿನಂತೆಯೆ ಚಿರನೂತನವಾಗಿರುವುದು. ಜೀವನದ ಹೋರಾಟದಲ್ಲಿ ಗೊಂದಲದಲ್ಲಿ ನಾವು ಇದನ್ನು ಮರೆತಂತೆ ತೋರುವುದು. ತಕ್ಷಣ ಯಾರಾದರೂ ಸಾಯು ವರು. ನಾವು ಪ್ರೀತಿಸಿದ ನಮ್ಮ ಜೀವನಕ್ಕೆ ಅತಿ ಸಮೀಪವಾದ ಪ್ರಿಯ ವಾದವರೊಬ್ಬರು ನಮ್ಮಿಂದ ಕಣ್ಮರೆಯಾಗುವರು. ಕೆಲವು ಕಾಲ ನಮ್ಮ ಸುತ್ತಲಿರುವ ಜಗದ ಗೊಂದಲ ಸ್ತಬ್ಧವಾಗುವುದು. "ಇದಾದ ಮೇಲೆ ಜೀವ ಏನಾಗುವುದು?" ಎಂಬ ಹಳೇ ಪ್ರಶ್ನೆಯನ್ನೇ ಮಾನವ ಕೇಳುವನು. ಮಾನವನ ಜ್ಞಾನವೆಲ್ಲ ಅನುಭವದಿಂದ ಜನಿಸುವುದು. ಅನು ಭವ ವಿನಹ ನಮಗೆ ಏನೂ ತಿಳಿಯದು. ನಮ್ಮ ಯುಕ್ತಿಯೆಲ್ಲ ಸಾಮಾನ್ಯ ರೂಪಕ್ಕೆ ತಂದ ಅನುಭವದ ಮೇಲೆ ನಿಂತಿದೆ. ನಮ್ಮ ಜ್ಞಾನ ಪರಸ್ಪರ ಹೊಂದಿಕೊಂಡ ಅನುಭವವಾಗಿದೆ. ಸುತ್ತಲೂ ನೋಡಿದರೆ ನಮಗೇನು ಕಾಣುವುದು? ನಿರಂತರ ಬದಲಾವಣೆ. ಮರ ಬೀಜದಿಂದ ಆಗುವುದು. ಪುನಃ ಬೀಜ ಮರವಾಗುವುದು. ಗಿಡ ಮರವಾಗಿ ತನ್ನ ವೃತ್ತವನ್ನು ಪೂರೈಸಿ ಪುನಃ ಬೀಜ ಸ್ಥಿತಿಗೆ ಬರುವುದು. ಪ್ರಾಣಿ ಜನಿಸುವುದು ಕೆಲವು ಕಾಲ ಬಾಳುವುದು ಅನಂತರ ಅಳಿಯುವುದು ತನ್ನ ಬಾಳವೃತ್ತವನ್ನು ಪೂರೈಸುವುದು. ಅದರಂತೆಯೇ ಮನುಷ್ಯ. ಗಿರಿಗಳು ನಿಧಾನವಾಗಿ

ಆವರೆ ನಿಜವಾಗಿ ಧೂಳೀಕಣಗಳಾಗುತ್ತಿರುವುವು. ನದಿಗಳು ಸಿಧಾನವಾಗಿ ಆದರೆ ನಿಜವಾಗಿ ಒಣಗಿ ಹೋಗುವುವು. ಮಳೆ ಸಾಗರದಿಂದ ಬಂದು ಪುನಃ ಸಾಗರಕ್ಕೆ ಹೋಗುವುದು. ಎಲ್ಲೆಡೆಯೂ ಜನನ, ವೃದ್ಧಿ ಕ್ಷಯ ಒಂದಾದಮೇಲೊಂದು ಬಂದು ತಮ್ಮ ಬಾಳಗತಿಯ ವೃತ್ತವನ್ನು ಪೂರೈಸು ತ್ತಿರುವುವು. ಇದೇ ನಮ್ಮ ಅನುದಿನದ ಅನುಭವ. ಕ್ಷುದ್ರತಮ ಜೀವಾಣು ವಿನಿಂದ ಹಿಡಿದು ಪುಣ್ಯತಮ ಪುರುಷನವರೆಗೆ ಇರುವ ಜೀವವೆನ್ನುವ ಕೋಟ್ಯಂತರ ಜಾತಿ ವರ್ಗಗಳ ಅಂತರಾಳದಲ್ಲೆಲ್ಲಾ ಒಂದು ಐಕ್ಯತೆ ಕಾಣುವುದು. ಪ್ರತಿ ದಿನ ಒಂದನ್ನು ಮತ್ತೊಂದರಿಂದ ಬೇರೆ ಮಾಡಿದೆ ಎಂದು ಭಾವಿಸಿದ ಗೋಡೆ ಕುಸಿಯುತ್ತಿದೆ. ಎಲ್ಲಾ ವಸ್ತುಗಳೂ ಒಂದೇ ದ್ರವ್ಯದಿಂದ ಆಗಿವೆ ಎಂದು ಆಧುನಿಕ ವಿಜ್ಞಾನಿಗಳು ಇಂದು ಒಪ್ಪುವರು. ಅದು ಹಲವು ರೀತಿಯಲ್ಲಿ ಆವಿರ್ಭಾವವಾಗುತ್ತಿದೆ. ನಿರಂತರ ಸರಪಳಿಯಂತೆ ಒಂದೇ ಜೀವನ ಇದರ ಅಂತರಾಳದಲ್ಲೆಲ್ಲ ಹರಿಯುತ್ತಿದೆ. ಅದರಲ್ಲಿ ಭಿನ್ನ ಭಿನ್ನ ಆವಿರ್ಭಾವನೆಗಳೆಲ್ಲ ಒಂದೇ ಸರಪಳಿಯಲ್ಲಿರುವ ಅನಂತ ಕೊಂಡಿಗ ಳಂತೆ ಇವೆ. ಇದನ್ನೇ ವಿಕಾಸವೆನ್ನುವುದು. ಇದೊಂದು ಬಹಳ ಪುರಾತನ ಭಾವನೆ. ಮಾನವ ಸಮಾಜದಷ್ಟೇ ಹಳೆಯದಿದು. ಮಾನವನ ಜ್ಞಾನ ಸೀಮೆ ಹೆಚ್ಚಿದಂತೆ ಇದು ಹೊಸ ಹೊಸ ರೂಪನ್ನು ಧಾರಣೆ ಮಾಡುತ್ತಿದೆ ಅಷ್ಟೆ. ಮತ್ತೊಂದು ವಿಷಯವಿದೆ. ಅದನ್ನು ಹಿಂದಿನವರು ನೋಡಿದರು ಆದರೆ ಅಧುನಿಕ ಕಾಲದಲ್ಲಿ ಅದು ಅಷ್ಟು ಸ್ಪಷ್ಟವಾಗಿ ಕಂಡಿಲ್ಲ. ಅದೇ ಆಪೂರಣ [Involution]. ಬೀಜ ಮರವಾಗುವುದು; ಮರಳ ಕಣ ಎಂದಿಗೂ ಆಗುವುದಿಲ್ಲ. ತಂದೆಯಲ್ಲಿರುವುದು ಮಗುವಾಗುವುದು. ಮಣ್ಣಿನ ಮುದ್ದೆ ಎಂದಿಗೂ ಮಗುವಾಗುವುದಿಲ್ಲ. ಈ ವಿಕಸನವಾಗುವುದು? ಇದೇ ಪ್ರಶ್ನೆ. ಯಾವುದು ಬೀಜ? ಅದು ಮರದಂತೆಯೇ ಇತ್ತು. ಮುಂದೆ ಮರವಾಗುವ ಶಕ್ತಿಯೆಲ್ಲ ಆ ಬೀಜದಲ್ಲಿ ಸುಪ್ತವಾಗಿರುವುದು. ಮುಂದೆ ಮನುಷ್ಯನಾಗುವ ಸಾಧ್ಯತೆಗಳೆಲ್ಲ ಸಣ್ಣ ಮಗುವಿನಲ್ಲಿರುವುದು. ಭವಿಷ್ಯ ಜೀವನದ ಸಾಧ್ಯತೆ ಗಳೆಲ್ಲ ಜೀವಾಣುವಿನಲ್ಲಿರುವುದು. ಇದೇನು? ಇದನ್ನು ಪುರಾತನ ಭಾರತ ದಾರ್ಶನಿಕರು ಆಪೂರಣ ಎಂದು ಕರೆದರು. ಪ್ರತಿಯೊಂದು ವಿಕಸನವೂ ಒಂದು ಆಪೂರಣವನ್ನು ಊಹಿಸಬೇಕಾಗಿ ಬರುವುದೆಂಬುದನ್ನು ನಾವು ನೋಡುವೆವು. ಯಾವುದು ಆಗಲೆ ಇಲ್ಲವೊ ಅದೆಂದಿಗೂ ವಿಕಾಸವಾಗಲಾ ರದು. ಇಲ್ಲಿ ಆಧುನಿಕ ವಿಜ್ಞಾನ ನಮ್ಮ ಸಹಾಯಕ್ಕೆ ಬರುವುದು. ಗಣಿತ ಶಾಸ್ತ್ರ ರೀತಿ ವಿಶ್ವದಲ್ಲಿ ವ್ಯಕ್ತವಾಗುವ ಶಕ್ತಿಯ ಮೊತ್ತ ಯಾವಾಗಲೂ

ಒಂದೇ ಎಂಬುದು ನಿಮಗೆ ಗೊತ್ತಿದೆ. ನೀವು ಒಂದು ಕಣ ದ್ರವ್ಯವನ್ನಾಗಲಿ, ಒಂದು ಫುಟ್ ಪೌಂಡು ಶಕ್ತಿಯನ್ನಾಗಲಿ ಕಡಿಮೆ ಮಾಡಲಾರಿರಿ. ಒಂದು ಕಣವನ್ನಾಗಲಿ ಒಂದು ಫುಟ್ ಪೌಂಡು ಶಕ್ತಿಯನ್ನಾಗಲಿ ನೀವು ಸೇರಿಸಲಾರಿರಿ. ಆದಕಾರಣ ವಿಕಸನ ಶೂನ್ಯದಿಂದ ಬರಲಾರದು. ಹಾಗಾದರೆ ಅದು ಎಲ್ಲಿಂದ ಬರುವುದು? ಹಿಂದಿನ ಆಪೂರಣದಿಂದ. ಶಿಶು ಆಪೂರಣವಾದ ಮನುಷ್ಯ. ಮನುಷ್ಯ ವಿಕಾಸವಾದ ಮಗು. ಬೀಜ ಅಂತರ್ಗತವಾದ ಮರ, ಪರಿಣಾಮವಾದ ಬೀಜ. ಜೀವನದ ಸಾಧ್ಯತೆಗಳೆಲ್ಲ ಜೀವಾಣುವಿನಲ್ಲಿ ಇವೆ. ಸಮಸ್ಯೆ ಸ್ವಲ್ಪ ಸ್ಪಷ್ಟವಾಗುವುದು. ಇದರ ಜೊತೆಗೆ ಜೀವನದ ಮುನ್ನಡೆಯನ್ನೂ ತೆಗೆದುಕೊಳ್ಳಿ. ಅತಿ ಕ್ಷುದ್ರ ಜೀವಾಣುವಿನಿಂದ ಅತ್ಯುಚ್ಚ ಮಾನವನವರೆಗೆ ನಿಜವಾಗಿ ಒಂದೇ ಜೀವನ ಇರುವುದು. ಒಂದು ಜೀವನದಲ್ಲೇ ಇದರ ಹಲವಾರು ಆವಿರ್ಭಾವನೆಗಳನ್ನು ನೋಡುವೆವು. ಆ ಜೀವಾಣು ಶಿಶುವಾಗುವುದು, ಮಗುವಾಗುವುದು, ಯುವಕನಾಗುವುದು, ವೃದ್ಧನಾಗುವುದು. ಆ ಜೀವಾಣುವಿನಿಂದ ಹಿಡಿದು ಸಿದ್ಧಮಾನವನವರೆಗೆ ಒಂದು ನಿರಂತರ ಜೀವನ ಪ್ರವಾಹದ ಒಂದು ಅಖಂಡ ಸರಪಳಿ ದೊರಕುವುದು. ಇದೇ ವಿಕಾಸ. ಪ್ರತಿಯೊಂದು ವಿಕಾಸವೂ ಒಂದು ಆಪೂರಣವನ್ನು ಸೂಚಿಸುವುದೆಂಬುದನ್ನು ನಾವು ನೋಡಿದೆವು. ಜೀವಾಣುವಿನಿಂದ ಹಿಡಿದು ಸಿದ್ಧ ಪುರುಷನವರೆಗೆ ಅವತಾರದವರಗೆ ವಿಕಾಸವಾಗುವ ಜೀವನವೆಲ್ಲ ಒಂದೇ. ಈ ಆವಿರ್ಭಾವನೆಯೆಲ್ಲ ಆ ಜೀವಾಣುವಿನಲ್ಲಿ ಆಪೂರಣವಾಗಿರಬೇಕು. ಇಡೀ ಜೀವನ ಭೂಮಿಯ ಮೇಲಿರುವ ಪ್ರತ್ಯಕ್ಷ ದೇವರು ಅದರಲ್ಲಿ ಆಪೂರಣವಾಗಿತ್ತು. ಕ್ರಮೇಣ ನಿಧಾನವಾಗಿ ಅದು ವಿಕಾಸವಾಗುತ್ತ ಬಂದಿತು. ಸೂಕ್ಷ್ಮ ಸ್ಥಿತಿಯಲ್ಲಿ ಅತಿ ಶ್ರೇಷ್ಠ ಆವಿರ್ಭಾವನೆ ಅಲ್ಲಿ ಭ್ರೂಣಸ್ಥಿತಿಯಲ್ಲಿರ ಬೇಕು. ಆದಕಾರಣ ಈ ಒಂದು ಶಕ್ತಿ ಜೀವನದ ಅಖಂಡ ಸರಪಳಿಯೆಲ್ಲ ವಿಶ್ವ ವ್ಯಾಪಿಯಾದ ಆ ಚೈತನ್ಯದ ಆಪೂರಣ ಸ್ಥಿತಿ. ಈ ಚೈತನ್ಯರಾಶಿಯೊಂದೆ ಜೀವದ್ರವ್ಯದಿಂದ ಪೂರ್ಣಾತ್ಮನವರೆಗೆ ನಿಧಾನವಾಗಿ ವ್ಯಕ್ತವಾಗುತ್ತಿದೆ. ಅದು ಬೆಳೆಯುತ್ತದೆ ಎಂದು ಅಲ್ಲ. ಬೆಳವಣಿಗೆ ಎಂಬ ಭಾವನೆಯನ್ನು ನಿಮ್ಮ ಮನಸ್ಸಿನಿಂದ ತೊಡೆದು ಹಾಕಿ. ಬೆಳವಣಿಗೆಯ ಭಾವನೆಯಲ್ಲಿ ಹೊರಗಿನಿಂದ ಏನೊ ಬರುತ್ತದೆ ಎಂಬ ಅರ್ಥದ ಸಂಬಂಧವಿದೆ. ಇದು ಎಲ್ಲಾ ಜೀವಿಗಳಲ್ಲೂ ಸುಪ್ತವಾಗಿರುವ ಅನಂತ ಬಾಹ್ಯ ಧರ್ಮಗಳಿಂದ ಸ್ವತಂತ್ರವಾಗಿದೆ ಎಂಬ ಸತ್ಯವನ್ನು ಅಲ್ಲಗಳೆಯುವುದು. ಅದೆಂದಿಗೂ ಬೆಳೆಯಲಾರದು. ಅದು ಯಾವಾಗಲೂ ಅಲ್ಲಿತ್ತು. ಅದು ಕ್ರಮೇಣ ವ್ಯಕ್ತವಾಗುವುದಷ್ಟೆ.

ಪರಿಣಾಮವೆಂದರೆ ಆವಿರ್ಭೂತವಾದ ಕಾರಣ. ಕಾರ್ಯಕಾರಣಗಳಿಗೆ ಮುಖ್ಯವಾದ ವ್ಯತ್ಯಾಸವೇನೂ ಇಲ್ಲ. ಉದಾಹರಣೆಗೆ ಈ ಗ್ಲಾಸನ್ನು ತೆಗೆದುಕೊಳ್ಳಿ. ಅದಕ್ಕೆ ಮೂಲದ್ರವ್ಯವಿದೆ. ಅದು ಮತ್ತು ತಯಾರು ಮಾಡುವವನ ಇಚ್ಛಾಶಕ್ತಿಯಿಂದ ಅದು ಗ್ಲಾಸಾಗಿದೆ. ಇವೆರಡೂ ಅದಕ್ಕೆ ಕಾರಣ. ಅವು ಅಲ್ಲಿವೆ. ಯಾವ ಸ್ಥಿತಿಯಲ್ಲಿ? ಪರಸ್ಪರ ಅಂಟಿ ಕೊಂಡಿರುವ ಸ್ಥಿತಿಯಲ್ಲಿ. ಆ ಶಕ್ತಿ ಅಲ್ಲಿರದೆ ಇದ್ದರೆ ಪ್ರತಿಯೊಂದು ಕಣವೂ ಬೇರೆ ಬೇರೆ ಆಗುತ್ತಿತ್ತು. ಹಾಗಾದರೆ ಇದರ ಪರಿಣಾಮ ಏನು? ಕಾರಣದಂತೆಯೆ; ಆದರೆ ಬೇರೊಂದು ರೂಪವನ್ನು ಧರಿಸಿರುವುದು. ಕಾರಣ ಬದಲಾಯಿಸಿ ಕಾಲದಲ್ಲಿ ಒಂದು ಮಿತಿಗೆ ಸಿಕ್ಕಿದರೆ ಅದು ಕಾರ್ಯವಾಗು ವುದು. ನಾವು ಇದನ್ನು ಜ್ಞಾಪಕದಲ್ಲಿಡಬೇಕು. ಇದನ್ನು ನಮ್ಮ ಜೀವನದ ಭಾವನೆಗೆ ಹೋಲಿಸಿದರೆ ಜೀವದ್ರವ್ಯದಿಂದ ಪೂರ್ಣಾತ್ಮನವರೆಗೆ ಆದ ಆವಿರ್ಭಾವನೆಗಳೆಲ್ಲ ವಿಶ್ವಚೈತನ್ಯವೇ ಇರಬೇಕು ಎನ್ನುವುದು ಸಿದ್ಧಿಸು ವುದು. ಮೊದಲು ಅದು ಆಪೂರಣವಾಗಿ ಸೂಕ್ಷ್ಮವಾಯಿತು; ಆ ಸೂಕ್ಷ್ಮದ ಕಾರಣದಿಂದ ವಿಕಾಸವಾಗುತ್ತ ವ್ಯಕ್ತವಾಗುತ್ತ ಸ್ಥೂಲವಾಗುತ್ತ ಬಂತು.

ಅಮರತ್ವದ ಪ್ರಶ್ನೆಯುನ್ನು ಇನ್ನೂ ಇತ್ಯರ್ಥಮಾಡಿಲ್ಲ. ಪ್ರಪಂಚದಲ್ಲಿ ಎಲ್ಲಾ ಅವಿನಾಶಿ ಎಂಬುದನ್ನು ನೋಡಿದೆವು. ಯಾವುದೂ ಹೊಸದಿಲ್ಲ. ಯಾವುದೂ ಮುಂದೆ ಹೊಸದಿರಲಾರದು. ಒಂದೇ ಆವಿರ್ಭಾವನೆ ಒಂದಾದಮೇಲೊಂದು ಚಕ್ರದಂತೆ ಮೇಲೆದ್ದು ಕೆಳಗುರುಳಿಹೋಗುತ್ತಿರು ವುದು. ಪ್ರಪಂಚದಲ್ಲಿ ಚಲನೆಯೆಲ್ಲ ಕ್ರಮವಾಗಿ ಅಲೆಯಂತೆ ಎದ್ದು ಬೀಳುತ್ತಿದೆ. ಹಲವು ವ್ಯವಸ್ಥಿತ ವ್ಯೂಹಗಳೆಲ್ಲ ಸೂಕ್ಷ್ಮಸ್ಥಿತಿಯಿಂದ ಒಂದು ವಿಕಾಸವಾಗಿ ಸ್ಥೂಲರೂಪಧಾರಣೆಮಾಡಿ ಪುನಃ ಸೂಕ್ಷ್ಮಸ್ಥಿತಿಗೆ ಕರಗಿ ಹೋಗುವಂತೆ ಇರುವುವು. ಪುನಃ ಅವುಗಳಿಂದ ಎದ್ದು ವಿಕಾಸವಾಗಿ ಕ್ರಮೇಣ ಕಾರಣಕ್ಕೆ ಮರಳುವುದು. ಇದರಂತೆ ಎಲ್ಲಾ ಜೀವನ. ಪ್ರತಿ ಯೊಂದು ಜೀವನದ ಆವಿರ್ಭಾವನೆಯೂ ಮೇಲೇಳುವುದು, ಪುನಃ ಮರಳು ವುದು. ಯಾವುದು ಮಾಯವಾಗುವುದು? ಆಕಾರ. ಆಕಾರ ಧ್ವಂಸ ವಾಗುವುದು, ಪುನಃ ಬರುವುದು. ಒಂದು ದೃಷ್ಟಿಯಿಂದ ದೇಹ ಮತ್ತು ಆಕಾರ ಎರಡಕ್ಕೂ ಆದಿ ಅಂತ್ಯವಿಲ್ಲ. ಹೇಗೆ? ನಾವು ಕೆಲವು ದಾಳ ವನ್ನು ತೆಗೆದುಕೊಂಡು ಎಸೆಯೋಣ. ಅವು ೭, ೫, ೩, ೪ ಕ್ರಮದಲ್ಲಿ ಬೀಳುವುವು. ನಾವು ದಾಳಗಳನ್ನು ತೆಗೆದುಕೊಂಡು ಪುನಃ ಎಸೆಯೋಣ. ಪುನಃ ಅದೇ ಗರ. ಅದೇ ಕ್ರಮಬರುವ ಒಂದುಕಾಲ ಬರಲೇಬೇಕು.

ಈ ಪ್ರಪಂಚದಲ್ಲಿರುವ ಪ್ರತಿಯೊಂದು ಕಣವೂ ಅಂತಹ ಗರದಂತೆ. ಇದನ್ನು ಪುನಃ ಪುನಃ ಎಸೆಯುತ್ತಿರುವೆವು. ನಿಮ್ಮ ಎದುರಿಗೆ ಇರುವ ಆಕಾರ ಒಂದು ಕ್ರಮ. ಗ್ಲಾಸು, ಮೇಜು, ನೀರಿನಪಾತ್ರೆ ಇತ್ಯಾದಿ. ಇದು ಒಂದು ಸಂಯೋಗಕ್ರಮ. ಕಾಲಕ್ರಮೇಣ ಇದು ನಾಶವಾಗುವುದು. ಈಗಿರುವ ಕ್ರಮದಂತೆಯೇ ಮುಂದೆ ಸಂಯೋಗವಾಗುವ ಒಂದುಕಾಲ ಬಂದೇ ಬರಬೇಕು. ಆಗ ನೀವು ಇಲ್ಲಿರುವಿರಿ, ಈ ಆಕಾರ ಇಲ್ಲಿರುವುದು, ಇದೇ ಉಪನ್ಯಾಸವಾಗುವುದು. ಇದೇ ಪಾತ್ರೆ ಇಲ್ಲಿರುವುದು. ಇದು ಅನೇಕವೇಳೆ ಹಾಗೆ ಆಗಿದೆ ಮುಂದೆ ಆಗುವುದು. ಇಷ್ಟು ಬಾಹ್ಯ ಆಕಾರದ ಮಾತಾಯಿತು. ನಮಗೆ ಏನು ಕಾಣುವುದು? ಭೌತಿಕ ಆಕಾರಗಳ ಸಂಯೋಗ ಕೂಡ ಅನೇಕವೇಳೆ ಪುನರಾವರ್ತನೆಯಾಗು ತ್ತಿರುವುದು.

ಈ ಸಿದ್ಧಾಂತದ ಮೂಲಕ ಬರುವ ಒಂದು ಸ್ವಾರಸ್ಯವಾದ ನಿರ್ಣಯವೇ ಈ ವಿಷಯಗಳ ವಿವರಣೆ. ನಿಮ್ಮಲ್ಲಿ ಕೆಲವರು ಜ್ಯೋತಿಷ್ಯ ಹೇಳುವವರನ್ನು ನೋಡಿರಬಹುದು. ಅವರು ನಿಮ್ಮ ಜೀವನದಲ್ಲಿ ಹಿಂದೆ ಏನಾಯಿತು, ಮುಂದೆ ಏನಾಗಬಹುದು ಎಂಬುದನ್ನು ಹೇಳುವರು. ಒಂದು ಸುವ್ಯವಸ್ಥಿತ ಭವಿಷ್ಯವಿಲ್ಲದೆ ಇದ್ದರೆ ಭವಿಷ್ಯವನ್ನು ಯಾರಿಗಾದರೂ ಹೇಳುವುದು ಹೇಗೆ? ಹಿಂದಿನ ಕರ್ಮಫಲ ಮುಂದೆ ಸಿದ್ಧಿಸುವುದು. ಇದು ನಿಜವೆಂಬುದನ್ನು ನಾವು ನೋಡುವೆವು. ಚಿಕಾಗೊ ನಗರದ ದೊಡ್ಡ ಫೆರೀಸ್ ಚಕ್ರ ನೋಡಿರಬಹುದು. ಚಕ್ರ ಸುತ್ತುತ್ತಿರುವುದು. ಅದರಲ್ಲಿರುವ ತೊಟ್ಟಿಲು ಒಂದಾದಮೇಲೊಂದು ಬರುತ್ತಿರುವುದು. ಒಂದು ಬಗೆ ಜನ ಹತ್ತುವರು. ಅವರ ಸರದಿ ಆದಮೇಲೆ ಅವರಿಳಿಯುವರು, ಹೊಸಬರು ಏರುವರು. ಈ ಪ್ರತಿಯೊಂದು ಗುಂಪೂ ಕೂಡ ಕ್ಷುದ್ರತಮ ಪ್ರಾಣಿಯಿಂದ ಮುಕ್ತಾತ್ಮನವರೆಗೆ ಇರುವ ಆವಿರ್ಭಾವನೆ. ಪ್ರಕೃತಿ ಫೆರಿ ಚಕ್ರದಲ್ಲಿರುವ ತೊಟ್ಟಿಲಿನಂತೆ. ಅದಕ್ಕೆ ಆದಿ ಅಂತ್ಯವಿಲ್ಲ. ಅದರಲ್ಲಿರುವ ಸಣ್ಣ ಸಣ್ಣ ತೊಟ್ಟಿಲುಗಳೇ ದೇಹ ಅಥವಾ ಆಕಾರ. ಅದರಲ್ಲಿ ಹೊಸ ಹೊಸ ಜನ ಪ್ರತಿಸಲವೂ ಕುಳಿತುಕೊಳ್ಳುವರು. ಅದರಲ್ಲಿ ಮುಕ್ತರಾಗುವವರೆಗೂ ಮೇಲೆ ಮೇಲೆ ಹೋಗಿ ಅನಂತರ ಹೊರಗೆ ಬರುವರು. ಆದರೆ ಚಕ್ರ ತಿರುಗುತ್ತಿರುವುದು. ಎಲ್ಲಿಯವರೆಗೆ ದೇಹ ಚಕ್ರದಲ್ಲಿದೆಯೊ ಅಲ್ಲಿಯವರೆಗೆ ಅವು ಎಲ್ಲಿಗೆ ಹೋಗುತ್ತವೆ ಎಂಬುದನ್ನು ಶಾಸ್ತ್ರೀಯವಾಗಿ ಹೇಳಬಹುದು. ಆತ್ಮನ ವಿಷಯದಲ್ಲಿ ಇದನ್ನು ಹೇಳಲಾಗುವುದಿಲ್ಲ. ಹೀಗೆ ಒಬ್ಬನ

ಭೂತ ಮತ್ತು ಭವಿಷ್ಯವನ್ನು ನಿರ್ದಿಷ್ಟವಾಗಿ ಹೇಳುವುದು ಸಾಧ್ಯ. ಕೆಲವು ವೇಳೆ ಕೆಲವು ಘಟನೆಗಳು ಒಂದೇ ಕ್ರಮದಲ್ಲಿ ಕೂಡಿಬರುವುವು. ಆ ಕ್ರಮ ಅನೇಕವೇಳೆ ಹಾಗೆ ನಡೆದಿರುವುದು. ಆದರೆ ಇದು ಆತ್ಮನ ಅಮರತ್ವವಲ್ಲ. ಯಾವ ಶಕ್ತಿಯೂ ನಾಶವಾಗಲಾರದು, ಯಾವ ದ್ರವ್ಯವೂ ನಾಶವಾಗ ಲಾರದು. ಅದೇನಾಗುವುದು ? ಅದು ಬಂದ ಸ್ಥಳಕ್ಕೆ ಹಿಂತಿರುಗುವವರೆಗೆ ಹಿಂದಕ್ಕೆ ಮುಂದಕ್ಕೆ ಅಲೆದಾಡುತ್ತಿರುವುದು. ಸರಳರೇಖೆಯಲ್ಲಿ ಚಲನೆ ಇಲ್ಲ. ಪ್ರತಿಯೊಂದೂ ವೃತ್ತದಲ್ಲಿ ಚಲಿಸುವುದು. ಒಂದು ಸರಳರೇಖೆ ಯನ್ನು ಅನಂತವಾಗಿ ಮುಂದುವರಿಸಿದರೆ ಅದೊಂದು ವೃತ್ತವಾಗುವುದು. ಹೀಗಿದ್ದರೆ ಯಾವ ಜೀವಿಗೂ ಅನಂತ ನರಕವಿರಲಾರದು. ಅದು ಸಾಧ್ಯವೇ ಇಲ್ಲ. ಪ್ರತಿಯೊಂದೂ ವೃತ್ತವನ್ನು ಪೂರೈಸಬೇಕು. ಹೊರಟ ಸ್ಥಳಕ್ಕೆ ಹಿಂತಿರುಗಬೇಕು. ನಾನು, ನೀವು, ಮತ್ತು ಉಳಿದ ಜೀವಿಗಳೆಲ್ಲ ಏನೆಂದು ಭಾವಿಸಿದಿರಿ? ನಾವು ಪರಿಣಾಮ ಮತ್ತು ಆಪೂರಣವಿಷಯವನ್ನು ಚರ್ಚಿಸುತ್ತಿದ್ದಾಗ ನಾವು ನೀವುಗಳೆಲ್ಲ ಆಪೂರಣವಾದ ವಿಶ್ವಚೈತನ್ಯ ವಿಶ್ವ ಜೀವನ ವಿಶ್ವಮನಸ್ಸಿನ ಅಂಶಗಳೆಂಬುದನ್ನು ನೋಡಿದೆವು. ನಾವು ವೃತ್ತವನ್ನು ಪೂರೈಸಿ ವಿಶ್ವಚೈತನ್ಯನಾದ ದೇವರಬಳಿಗೆ ಹೋಗಬೇಕು. ಈ ವಿಶ್ವಚೈತನ್ಯವನ್ನೇ ಜನರು ಈಶ್ವರ ದೇವರು ಕ್ರೈಸ್ತ ಬುದ್ಧ ಬ್ರಹ್ಮ ಎಂದರು. ಭೌತಿಕವಾದಿಗಳು ಶಕ್ತಿ ಎನ್ನುವುದೂ ಇದೆ. ಅಜ್ಞೇಯ ವಾದಿಗಳು ನಾವು ವ್ಯಕ್ತಗೊಳಿಸಲಾಗದ ಅನಂತ ಎನ್ನುವುದೂ ಇದೆ. ನಾವೆಲ್ಲ ಅದರ ಅಂಶಗಳು.

ಇದೆ ಎರಡನೆ ಭಾವನೆ. ಆದರೂ ಇದೆ ಸಾಲದು. ಇನ್ನೂ ಹಲವು ಅನುಮಾನಗಳು ಇರುವುವು. ಯಾವ ಶಕ್ತಿಯೂ ನಾಶವಾಗುವು ದಿಲ್ಲ ಎನ್ನುವುದೇನೋ ಸರಿ. ನಾವು ನೋಡುವ ಶಕ್ತಿ ಆಕಾರಗಳೆಲ್ಲಾ ಸಂಯೋಗದಿಂದ ಆದುವು. ನಮ್ಮೆದುರಿಗೆ ಇರುವ ಆಕಾರ ಹಲವು ಭಾಗಗಳ ಒಂದು ಸಂಯೋಗ. ಹಾಗೆಯೇ ನಮ್ಮ ಎದುರಿಗೆ ಇರುವ ಪ್ರತಿಯೊಂದು ಶಕ್ತಿಯೂ ಒಂದು ಮಿಶ್ರ. ವೈಜ್ಞಾನಿಕ ಶಕ್ತಿಭಾವನೆ ಯನ್ನು ತೆಗೆದುಕೊಂಡು ಅದನ್ನು ಹಲವು ಶಕ್ತಿಗಳ ಮೊತ್ತ, ಅದರ ಪರಿಣಾಮ ಎಂದರೆ ನಿಮ್ಮ ವ್ಯಕ್ತಿತ್ವ ಏನಾಗುವುದು ? ಮಿಶ್ರವಾಗಿರುವ ಪ್ರತಿಯೊಂದೂ ಬೇಗಲೊ ನಿಧಾನವಾಗಿಯೊ ತಮ್ಮ ಮೂಲಾವಸ್ಥೆಗೆ ಹಿಂತಿ ರುಗಬೇಕು. ಈ ಪ್ರಪಂಚದಲ್ಲಿ ಯಾವುದು ದ್ರವ್ಯ ಅಥವಾ ಶಕ್ತಿಯಿಂದ ಆಗಿದೆಯೊ ಅವುಗಳೆಲ್ಲ ಇಂದಲ್ಲ ನಾಳೆ ಆಯಾ ವಸ್ತುಗಳ ಮೂಲಕ್ಕೆ

ಹೋಗಬೇಕು. ಯಾವುದು ಕೆಲವು ಕಾರಣಗಳ ಪರಿಣಾಮವಾಗಿ ಆಗಿದೆಯೊ ಅವು ಸಾಯಬೇಕು, ನಾಶವಾಗಬೇಕು. ಅವು ಧ್ವಂಸವಾಗಿ ಮೂಲಕಾರಣಕ್ಕೆ ಹಿಂತಿರುಗುವುದು. ಆತ್ಮ ಒಂದು ಶಕ್ತಿಯಲ್ಲ, ಅದೊಂದು ಭಾವನೆಯೂ ಅಲ್ಲ. ಅದು ಭಾವನೆಯನ್ನು ಸೃಷ್ಟಿಸುವುದು ಭಾವನೆಯಲ್ಲ. ಅದು ದೇಹವನ್ನು ಸೃಷ್ಟಿಸುವುದು ದೇಹವಲ್ಲ. ಇದು ಹೇಗೆ? ದೇಹ ಆತ್ಮವಾಗಲಾರದು. ಏತಕ್ಕೆ? ಏಕೆಂದರೆ ಅದು ಚೇತನ ವಲ್ಲ. ಶವಕ್ಕೆ ಚೇತನವಿಲ್ಲ. ಕಟುಕನ ಅಂಗಡಿಯಲ್ಲಿರುವ ಒಂದು ಚೂರು ಮಾಂಸಕ್ಕೆ ಚೇತನವಿಲ್ಲ. ಚೇತನ ಎಂದರೆ ನಾವು ಏನು ಭಾವಿಸಿರುವೆವು? ಪ್ರತಿಕ್ರಿಯಾ ಶಕ್ತಿ. ನಾವು ಇದನ್ನು ಸ್ವಲ್ಪ ವಿಶದವಾಗಿ ತಿಳಿದುಕೊಳ್ಳಬೇಕಾಗಿದೆ. ಇಲ್ಲೊಂದು ಪಾತ್ರೆ ಇದೆ. ನಾನು ಅದನ್ನು ನೋಡುತ್ತೇನೆ. ಹೇಗೆ? ಪಾತ್ರೆಯ ಕಿರಣ ನನ್ನ ಕಣ್ಣಮೇಲೆ ಬಿದ್ದು ಕಣ್ಣಿನ ರೆಟೀನಾಮೇಲೆ ಒಂದು ಚಿತ್ರವಾಗುವುದು. ಅದು ಮೆದುಳಿಗೆ ತಲಪುವುದು. ಆದರೂ ಅಲ್ಲಿ ದೃಶ್ಯವಿಲ್ಲ. ಶರೀರಶಾಸ್ತ್ರಜ್ಞರು ಕರೆವ ಜ್ಞಾನ ವಾಹಕನರ (sensory nerves) ಈ ವೇದನೆಗಳನ್ನು ಮತ್ತೂ ಒಳಗೆ ಒಯ್ಯುವುದು. ಇಲ್ಲಿಯವರೆಗೆ ಯಾವ ಪ್ರತಿಕ್ರಿಯೆಯೂ ಇರುವುದಿಲ್ಲ. ಮೆದುಳಿನಲ್ಲಿ ಸ್ನಾಯುಕೇಂದ್ರ ಇದನ್ನು ಮನಸ್ಸಿಗೆ ಒಯ್ಯುವುದು. ಆಗ ಮನಸ್ಸು ಪ್ರತಿಕ್ರಿಯೆಯನ್ನು ಸೂಚಿಸುವುದು. ತಕ್ಷಣ ಆ ವಸ್ತು ಹೊಳೆಯುವುದು. ಮತ್ತೊಂದು ಸಾಧಾರಣ ಉದಾಹರಣೆ ತೆಗೆದುಕೊಳ್ಳಿ. ನೀವು ತುಂಬಾ ಆಸಕ್ತಿಯಿಂದ ನನ್ನ ಉಪನ್ಯಾಸವನ್ನು ಕೇಳುತ್ತಿರುವಿರಿ ಎಂದು ಭಾವಿಸೋಣ. ಒಂದು ಸೊಳ್ಳೆ ನಿಮ್ಮ ಮೂಗಿನಮೇಲೆ ಕುಳಿತುಕೊಂಡು ನಿಮ್ಮನ್ನು ಕಚ್ಚುತ್ತಿದೆ ಎಂದು ಭಾವಿಸೋಣ. ನೀವು ನನ್ನನ್ನು ಅಷ್ಟು ಆಸಕ್ತಿಯಿಂದ ಕೇಳುತ್ತಿರುವುದರಿಂದ ಸೊಳ್ಳೆ ಅರಿವಾಗುವುದೇ ಇಲ್ಲ. ಏತಕ್ಕೆ? ಸೊಳ್ಳೆ ನಿಮ್ಮ ಚರ್ಮವನ್ನು ಕಡಿದಿದೆ. ಅಲ್ಲಿ ಕೆಲವು ನರಗಳಿವೆ. ಅವು ವೇದನೆಯನ್ನು ಮೆದುಳಿಗೆ ಒಯ್ದಿವೆ. ಆದರೆ ಮನಸ್ಸು ಬೇರೆ ಕಡೆ ನಿರತವಾಗಿರುವುದರಿಂದ ಪ್ರತಿ ಕ್ರಿಯೆಯನ್ನು ಮಾಡಲಿಲ್ಲ. ಅದಕ್ಕೆ ಸೊಳ್ಳೆಯ ಅರಿವು ನಿಮಗೆ ಆಗಲಿಲ್ಲ. ಒಂದು ಹೊಸ ಅನುಭವವಾದರೆ, ಮನಸ್ಸಿನಿಂದ ಪ್ರತಿ ಕ್ರಿಯೆ ಆಗದೆ ಇದ್ದರೆ ನಮಗೆ ಅದರ ಅರಿವು ಆಗುವುದೇ ಇಲ್ಲ. ಪ್ರತಿ ಕ್ರಿಯೆ ಆದೊಡನೆಯೇ ಅದು ನಮಗೆ ಅರಿವಾಗುವುದು. ನಾವು ಅದನ್ನು ನೋಡುವೆವು, ಕೇಳುವೆವು. ಈ ಪ್ರತಿ ಕ್ರಿಯೆಯಿಂದ ಸಾಂಖ್ಯದಾರ್ಶನಿಕರು ಹೇಳುವಂತೆ ಜ್ಞಾನ ಪ್ರಾಪ್ತವಾಗುವುದು. ದೇಹ

ಜ್ಞಾನವನ್ನು ಕೊಡಲಾರದು. ಏಕೆಂದರೆ ಲಕ್ಷ್ಯವಿಲ್ಲದೇ ಇದ್ದರೆ ಯಾವ ಇಂದ್ರಿಯ ಸಂವೇದನೆಯೂ ಸಾಧ್ಯವಿಲ್ಲ. ಕೆಲವು ವಿಚಿತ್ರ ಸ್ಥಿತಿಯಲ್ಲಿ ಒಂದು ಭಾಷೆಯ ಪರಿಚಯವೇ ಇಲ್ಲದವನು ಅದನ್ನು ಮಾತನಾಡಿದ ಪ್ರಸಂಗಗಳು ಕೆಲವು ಇವೆ. ಅನಂತರ ವಿಚಾರಿಸಿದಾಗ ಬಾಲ್ಯದಲ್ಲಿ ಆ ಮಗು ಆ ಭಾಷೆ ಮಾತನಾಡುವವರ ಹತ್ತಿರ ಬೆಳೆಯಿತೆಂದೂ ಆ ಭಾವನೆಗಳೆಲ್ಲ ಮನಸ್ಸಿನಲ್ಲಿ ಸುಪ್ತವಾಗಿದ್ದವೆಂದೂ ತಿಳಿದು ಬಂದಿದೆ. ಕೆಲವು ಕಾರಣಗಳಿಂದ ಮನಸ್ಸು ಪ್ರತಿಕ್ರಿಯೆಗೆ ಒಳಗಾದಾಗ ಅದು ನೆನಪಿಗೆ ಬಂದು ಅದನ್ನು ಮಾತನಾಡ ತೊಡಗಿದನು. ಮನಸ್ಸೊಂದೆ ಸಾಲದು. ಇದು ಮತ್ತಾವುದರ ಕೈಯ್ಯಲ್ಲೊ ಒಂದು ಯಂತ್ರ ಎಂದು ಇದರಿಂದ ಗೊತ್ತಾಗುವುದು. ಆ ಹುಡುಗನ ವಿಚಾರದಲ್ಲಿ ಮನಸ್ಸಿನಲ್ಲಿ ಆ ಭಾಷೆ ಇತ್ತು. ಆದರೂ ಅವನಿಗೆ ಅದು ಗೊತ್ತಾಗಲಿಲ್ಲ. ಕೆಲವು ಕಾರಣಗಳಿಂದ ಅರಿವಾಗುವ ಕಾಲ ಬಂದಿತು. ಮನಸ್ಸಿಗಿಂತ ಬೇರೊಂದು ಅಲ್ಲಿದೆ ಎಂಬುದನ್ನು ಇದು ತೋರುವುದು. ಆತ ಸಣ್ಣ ಮಗುವಾಗಿದ್ದಾಗ ಆ ಶಕ್ತಿಯನ್ನು ಉಪಯೋಗಿಸಲಿಲ್ಲ. ದೊಡ್ಡವನಾದ ಮೇಲೆ ಅದನ್ನು ಉಪಯೋಗಿಸಿದನು. ಮೊದಲು ದೇಹ ಎರಡನೆಯದು ಮನಸ್ಸು ಅಥವಾ ಭಾವನೆಯ ಯಂತ್ರವಿದೆ. ಮೂರನೆಯದೆ ಇದರ ಹಿಂದೆ ಇರುವ ಜೀವಾತ್ಮ. ಸಂಸ್ಕೃತದಲ್ಲಿ ಇದಕ್ಕೆ ಆತ್ಮ ಎಂದು ಹೆಸರು. ಆಧುನಿಕ ತತ್ತ್ವಶಾಸ್ತ್ರಜ್ಞರು ಆಲೋಚನೆಯನ್ನು ಮಿದುಳಿನಲ್ಲಿ ಆಗುವ ಸೂಕ್ಷ್ಮ ಕಣಗಳ ಚಲನೆಯೊಂದಿಗೆ ಸಂಬಂಧಿಸಿರುವುದರಿಂದ ಇದನ್ನು ವಿವರಿಸುವುದಕ್ಕೆ ಆಗಲಿಲ್ಲ. ಅವರು ಸಾಧಾರಣವಾಗಿ ಅದನ್ನು ಅಲ್ಲಗಳೆಯುವರು. ಮನಸ್ಸಿಗೆ ಮಿದುಳಿನೊಂದಿಗೆ ಅತಿ ನಿಕಟ ಸಂಬಂಧವಿದೆ. ಮಿದುಳು ದೇಹ ಬದಲಾಯಿಸಿದಾಗಲೆಲ್ಲ ನಾಶವಾಗುವುದು. ಆತ್ಮನೇ ಜ್ಞಾನಿ, ಮನಸ್ಸು ಅದರ ಕೈಯಲ್ಲಿ ಒಂದು ಯಂತ್ರ. ಆ ಯಂತ್ರದ ಮೂಲಕ ಬಾಹ್ಯ ಯಂತ್ರದೊಡನೆ ಅದು ಸಂಬಂಧವನ್ನು ಬೆಳೆಸಿಕೊಂಡಾಗ ಇಂದ್ರಿಯಗ್ರಹಣವಾಗುವುದು. ಬಾಹ್ಯ ಇಂದ್ರಿಯಗಳು ವೇದನೆಗಳನ್ನು ಮಿದುಳಿನಲ್ಲಿ ಆಯಾ ಕೇಂದ್ರಕ್ಕೆ ಒಯ್ಯುವುವು. ಬಾಹ್ಯ ಕಣ್ಣು ಕಿವಿ ಕೇವಲ ಸಂವೇದನೆಗಳನ್ನು ಸ್ವೀಕರಿಸುವುವು. ಆಂತರಿಕ ಕೇಂದ್ರ ಮಾತ್ರ ಪ್ರಚೋದಿಸುವುದು ಎಂಬುದನ್ನು ನೀವು ಜ್ಞಾಪಕದಲ್ಲಿಡಬೇಕು. ಸಂಸ್ಕೃತದಲ್ಲಿ ಇವನ್ನು ಇಂದ್ರಿಯಗಳೆನ್ನುವರು. ಇವು ಮನಸ್ಸಿಗೆ ಸಂವೇದನೆಗಳನ್ನು ಒಯ್ಯುವುವು. ಮನಸ್ಸು ಅದನ್ನು ಚಿತ್ತಕ್ಕೆ ಒಯ್ಯುವುದು. ಅಲ್ಲಿ ಅವು ಇಚ್ಛೆಯಾಗಿ ಪರಿವರ್ತನವಾಗಿ ಒಳಗೆ ಎಲ್ಲವನ್ನೂ ಆಳುವ ಸರ್ವೇಶ್ವರನಾದ

ಆತ್ಮನೆಡೆಗೆ ಒಯ್ಯುವುವು. ಆಗ ಅವನು ನೋಡಿ ಒಪ್ಪಿಗೆ ನೀಡುವನು. ಆಗ ಮನಸ್ಸು ತಕ್ಷಣ ಇಂದ್ರಿಯಗಳನ್ನು ಪ್ರಚೋದಿಸುವುದು. ಇಂದ್ರಿಯಗಳು ಬಾಹ್ಯದೇಹವನ್ನು ಪ್ರಚೋದಿಸುವುವು. ನಿಜವಾಗಿ ನೋಡುವವನು, ಆಳುವವನು, ಎಲ್ಲವನ್ನೂ ನಡಿಸುವವನು ಆತ್ಮ.

ಹಾಗಾದರೆ ಮನುಷ್ಯನ ಆತ್ಮ ದೇಹವಲ್ಲ. ಅದು ಆಲೋಚನೆಯೂ ಅಲ್ಲ ಎಂಬುದನ್ನು ನೋಡಿದೆವು. ಅದೊಂದು ಮಿಶ್ರವಲ್ಲ. ಏತಕ್ಕೆ? ಏಕೆಂದರೆ ಪ್ರತಿಯೊಂದು ಮಿಶ್ರವನ್ನೂ ನಾವು ನೋಡಬಹುದು, ಊಹಿಸಬಹುದು. ನಾವು ಯಾವುದನ್ನು ನೋಡಲಾರೆವೊ ಕಲ್ಪಿಸಿಕೊಳ್ಳಲಾರೆವೊ ಯಾವುದನ್ನು ಒಟ್ಟಿಗೆ ಸಂಗ್ರಹಿಸಲಾರೆವೊ ಅದು ಶಕ್ತಿ ಅಥವಾ ದ್ರವ್ಯವಲ್ಲ, ಕಾರ್ಯ ಅಥವಾ ಕಾರಣವಲ್ಲ, ಅದೊಂದು ಮಿಶ್ರವಾಗಲಾರದು. ಈ ಮಿಶ್ರದ ಮೇಳೈಕೆ ನಮ್ಮ ಮನೋಪ್ರಪಂಚದೊಳಗೆ ಮಾತ್ರ ಆಲೋಚನಾ ರಾಜ್ಯದೊಳಗೆ ಮಾತ್ರ ಇರುವುದು. ಇದರಾಚೆ ಅದಕ್ಕೆ ಬೆಲೆಯಿಲ್ಲ. ನಿಯಮ ಆಳುವುದು ಇಲ್ಲಿ ಮಾತ್ರ. ನಿಯಮಕ್ಕೆ ಅತೀತವಾಗಿರುವುದು ಯಾವುದಾದರೂ ಇದ್ದರೆ ಅದು ಮಿಶ್ರವಾಗಲಾರದು. ಮಾನವನ ಆತ್ಮ ಕಾರ್ಯಕಾರಣಗಳನ್ನು ಮೀರಿರುವುದರಿಂದ ಅದೊಂದು ಮಿಶ್ರವಲ್ಲ. ಅದು ನಿತ್ಯ ಮುಕ್ತ. ನಿಯಮಕ್ಕೆ ಒಳಪಟ್ಟಿರುವುದನ್ನೆಲ್ಲಾ ಆಳುವುದು ಅದು. ಅದೆಂದಿಗೂ ನಾಶವಾಗಲಾರದು. ಏಕೆಂದರೆ ನಾಶವೆಂದರೆ ಯಾವುದರಿಂದ ಆಗಿದೆಯೊ ಆ ಮೂಲಭೂತಗಳಿಗೆ ಹಿಂತಿರುಗಿ ಹೋಗುವುದು. ಯಾವುದು ಎಂದಿಗೂ ಒಂದು ಮಿಶ್ರವಾಗಿರಲಿಲ್ಲವೊ ಅದೆಂದಿಗೂ ನಾಶವಾಗದು. ಅದು ನಾಶವಾಗುವುದು ಎಂದು ಹೇಳುವುದು ಅಸತ್ಯ.

ನಾವೀಗ ಅತಿ ಸೂಕ್ಷ್ಮಭಾವನೆಗಳನ್ನು ಅವಲೋಕಿಸುತ್ತಿರುವೆವು. ನಿಮ್ಮಲ್ಲಿ ಕೆಲವರಿಗೆ ಅಂಜಿಕೆಯಾಗಬಹುದು. ಆತ್ಮ ದ್ರವ್ಯ ಶಕ್ತಿ ಮತ್ತು ಆಲೋಚನೆಯ ಕಿರಿಯ ಜಗತ್ತಿನ ಹೊರಗೆ ಇರುವುದರಿಂದ ಅಮಿಶ್ರವಾದುದು. ಆದಕಾರಣ ಅದು ನಾಶವಾಗಲಾರದು. ಯಾವುದು ಸಾಯಲಾರದೊ ಅದು ಬದುಕಿಯೂ ಇರಲಾರದು. ಜನನಮರಣಗಳು ಒಂದೆ ನಾಣ್ಯದ ಇಬ್ಭಾಗಗಳು. ಜೀವನ ಮರಣಕ್ಕೆ ಬೇರೊಂದು ಹೆಸರು, ಮರಣ ಜೀವನಕ್ಕೆ ಬೇರೊಂದು ಹೆಸರು. ಒಂದು ಬಗೆಯ ಆವಿರ್ಭಾವನೆಯನ್ನು ಜನನವೆನ್ನುವೆವು, ಮತ್ತೊಂದು ಬಗೆಯ ಆವಿರ್ಭಾವನೆಯನ್ನು ಮರಣವೆನ್ನುವೆವು. ಅಲೆ ಮೇಲೆದ್ದಾಗ ಜೀವನ, ಅದು ಕೆಳಗೆ ಬಿದ್ದಾಗ

ಮರಣ. ಯಾವುದಾದರೂ ಮರಣದ ಆಚೆ ಇದ್ದರೆ ಅದು ಜೀವನದ ಆಚೆಯೂ ಇರಬೇಕು. ಮಾನವನ ಆತ್ಮ ಭಗವಂತನೆಂಬ ವಿಶ್ವಚೈತನ್ಯದ ಒಂದು ಅಂಶ ಎಂಬ ಮೊದಲ ಸಿದ್ಧಾಂತವನ್ನು ನಿಮಗೆ ಜ್ಞಾಪಿಸ ಬೇಕಾಗಿದೆ. ಆತ್ಮ ಜನನ ಮರಣಾತೀತವೆಂಬುದು ನಮಗೀಗ ತೋರು ವುದು. ನೀನು ಎಂದೂ ಹುಟ್ಟಲಿಲ್ಲ, ನೀನು ಎಂದೂ ಸಾಯುವುದಿಲ್ಲ. ನಮ್ಮ ಸುತ್ತಲೂ ಇರುವ ಜನನ ಮರಣ ಯಾವುದು ? ಇದು ಕೇವಲ ದೇಹಕ್ಕೆ ಸೇರಿದ್ದು. ಆತ್ಮ ಸರ್ವವ್ಯಾಪಿ. ಇದು ಹೇಗೆ ಸಾಧ್ಯವೆಂದು ನೀವು ಕೇಳಬಹುದು. ಇಲ್ಲಿ ಎಷ್ಟೊ ಜನ ಕುಳಿತಿರುವರು. ಆದರೂ ಆತ್ಮ ಸರ್ವವ್ಯಾಪಿ ಎಂದು ಹೇಳುವಿರಲ್ಲ ? ಎಂದು ನೀವು ಕೇಳಬಹುದು. ಕಾರ್ಯಕಾರಣ ನಿಯಮದಾಚೆ ಇರುವುದಕ್ಕೆ ಯಾವುದು ಮಿತಿಯನ್ನು ಕಲ್ಪಿಸಬಲ್ಲುದೆಂದು ನಾನು ಕೇಳುತ್ತೇನೆ. ಗ್ಲಾಸು ಮಿತವಾಗಿದೆ. ಇದು ಸರ್ವವ್ಯಾಪಿಯಲ್ಲ. ಸುತ್ತಲೂ ಇರುವ ದ್ರವ್ಯ, ಅದಕ್ಕೆ ಆಕಾರವನ್ನು ತೆಗೆದುಕೊಳ್ಳುವಂತೆ ಬಲಾತ್ಕರಿಸುವುದು, ವಿಸ್ತಾರವಾಗುವುದಕ್ಕೆ ಅದಕ್ಕೆ ಅವಕಾಶ ಕೊಡುವುದಿಲ್ಲ. ಆದರೆ ಯಾವುದು ನಿಯಮದಾಚೆ ಇದೆಯೊ ಯಾವುದು ಅದರ ಮೇಲೆ ತನ್ನ ಪ್ರಭಾವವನ್ನು ಬೀರಲಾರದೊ ಅದು ಹೇಗೆ ಮಿತವಾಗಬಲ್ಲದು? ಅದು ಸರ್ವವ್ಯಾಪಿಯಾಗಿರಬೇಕು. ನೀನು ವಿಶ್ವದಲ್ಲಿ ಸರ್ವತ್ರ ಇರುವೆ. ಹಾಗಾದರೆ ನಾನು ಹುಟ್ಟುವುದೂ ಸಾಯು ವುದೂ ಇದೆಲ್ಲ ಏನು ? ಅದು ಅಜ್ಞಾನ. ಮಿದುಳಿನ ಭ್ರಾಂತಿ. ನೀನು ಎಂದೂ ಹುಟ್ಟಲಿಲ್ಲ, ಎಂದಿಗೂ ಸಾಯುವುದಿಲ್ಲ. ನಿನಗೆ ಜನನವಾಗಲಿ ಪುನರ್ಜನ್ಮವಾಗಲಿ ಇಲ್ಲ. ಜೀವನ ಅವತಾರ ಮುಂತಾದುವಾವುದೂ ಇಲ್ಲ. ಬಂದು ಹೋಗುವುದೆಂದರೆ ಅರ್ಥವೇನು ? ಎಲ್ಲಾ ತಿರುಳಿಲ್ಲದ ಪುರುಳು. ನೀನು ಸರ್ವತ್ರ ಇರುವೆ. ಹಾಗಾದರೆ ಬಂದುಹೋಗುವುದರ ಅರ್ಥವೇನು? ಮನಸ್ಸೆನ್ನುವ ಸೂಕ್ಷ್ಮದೇಹ ಬದಲಾವಣೆಯಿಂದ ಜನಿಸಿದ ಭ್ರಾಂತಿ ಅಷ್ಟೆ. ಇದು ಹೋಗುತ್ತಿದೆ. ಆಕಾಶದಲ್ಲಿ ಒಂದು ಸಣ್ಣ ಮುಗಿಲ ತುಂಡಿನಂತೆ ಸಂಚರಿಸುತ್ತದೆ. ಅದು ಮುಂದೆ ಮುಂದೆ ಸಂಚರಿಸಿ ದಂತೆ ಆಕಾಶ ಚಲಿಸುತ್ತಿದೆ ಎಂಬ ಭ್ರಾಂತಿಯನ್ನು ಹುಟ್ಟಿಸಬಹುದು. ಕೆಲವು ವೇಳೆ ಚಂದ್ರನ ಮುಂದೆ ಮೋಡ ಚಲಿಸುವುದನ್ನು ನೋಡುವೆವು. ಚಂದ್ರ ಚಲಿಸುತ್ತಿರುವನು ಎಂದು ಭಾವಿಸುವೆವು. ನಾವು ರೈಲಿನಲ್ಲಿರು ವಾಗ ನೆಲ ಹಾರುತ್ತಿರುವಂತೆ ತೋರುವುದು. ನೀವು ದೋಣಿಯಲ್ಲಿರು ವಾಗ ನೀರು ಸಂಚರಿಸಿದಂತೆ ತೋರುವುದು. ನಿಜವಾಗಿ ನೀನು ಹೋಗು

ತ್ತಲೂ ಇಲ್ಲ, ಬರುತ್ತಲೂ ಇಲ್ಲ. ನೀನು ಹುಟ್ಟೂ ಇಲ್ಲ, ಪುನರ್ಜನ್ಮ ಪಡೆಯುವುದೂ ಇಲ್ಲ. ನೀನು ಅನಂತ, ಯಾವಾಗಲೂ ಇರುವೆ; ಎಲ್ಲಾ ಕಾರ್ಯಕಾರಣಗಳಾಚೆ ಇರುವೆ; ನಿತ್ಯ ಮುಕ್ತ. ಅಂತಹ ಪ್ರಶ್ನೆಗೆ ಅವಕಾಶವೇ ಇಲ್ಲ. ಇದು ಬರಿ ಭ್ರಾಂತಿ. ಹುಟ್ಟೆ ಇಲ್ಲದ ಮೇಲೆ ಸಾವು ಹೇಗೆ ಸಾಧ್ಯ? ನಾವು ತಾರ್ಕಿಕ ನಿರ್ಣಯಕ್ಕೆ ಹೋಗಬೇಕಾದರೆ ಮತ್ತೊಂದು ಹೆಜ್ಜೆ ಮುಂದೆಹೋಗಬೇಕು. ಅರ್ಧ ದಾರಿಯಲ್ಲಿ ನಿಲ್ಲಲಾರೆವು. ನೀವು ತಾತ್ತ್ವಿಕರು ದಾರಿಯಲ್ಲೆಲ್ಲೂ ನಿಲ್ಲಲಾರಿರಿ. ನಾವು ಎಲ್ಲಾ ನಿಯಮಗಳಾಚೆ ಇದ್ದರೆ ನಾವು ಸರ್ವಜ್ಞರಾಗಿರಬೇಕು, ನಿತ್ಯ ಮುಕ್ತರಾಗಿರಬೇಕು. ಎಲ್ಲಾ ಜ್ಞಾನ ಶಕ್ತಿ ಮಂಗಳ ನಮ್ಮಲ್ಲಿರಬೇಕು. ನಿಜವಾಗಿಯೂ ನೀನೇ ವಿಶ್ವದ ಸರ್ವಜ್ಞ ಸರ್ವವ್ಯಾಪಿ. ಇಂತಹವರು ಹಲವರು ಇರಲು ಸಾಧ್ಯವೆ? ಒಂದು ಸಹಸ್ರ ಕೋಟಿ ಸರ್ವವ್ಯಾಪಿಗಳು ಇರಲು ಸಾಧ್ಯವೆ? ಎಂದಿಗೂ ಇಲ್ಲ. ಹಾಗಾದರೆ ನಮ್ಮೆಲ್ಲರ ಗತಿ ಏನಾಗುವುದು? ನಿನ್ನೊಬ್ಬನೆ, ಇಂತಹ ಒಂದೆ ಆತ್ಮ ಇರುವುದು. ಆ ಆತ್ಮವೆ ನೀನು. ಈ ಪ್ರಕೃತಿಯ ಹಿಂದೆ ನಿಂತಿರುವುದನ್ನೆ ನಾವು ಆತ್ಮವೆನ್ನುವುದು. ಒಬ್ಬನೆ ಇರುವುದು, ಅಸ್ತಿತ್ವ ಒಂದೆ ಇರುವುದು. ನಿತ್ಯಶುದ್ಧ ಸರ್ವವ್ಯಾಪಿ ಸರ್ವಜ್ಞ ಜನನ ಮರಣಾತೀತನವನು. "ಅವನಾಜ್ಞೆಯಿಂದ ಆಕಾಶ ವಿಸ್ತರಿಸುವುದು. ಅವನಾಜ್ಞೆಯಂತೆ ಗಾಳಿ ಬೀಸುವುದು. ಅವನಾಜ್ಞೆಯಂತೆ ಸೂರ್ಯ ಬೆಳಗುವನು. ಅವನಾಜ್ಞೆಯಂತೆ ಎಲ್ಲರೂ ಜೀವಿಸುವರು. ಆತನೆ ಪ್ರಕೃತಿಯಲ್ಲೂ ಸತ್ಯ. ಆತನೆ ನಿನ್ನ ಆತ್ಮನ ಆತ್ಮ. ಇಲ್ಲ ಅದಕ್ಕಿಂತ ಹೆಚ್ಚು ನೀನೆ ಅವನು." ಎಲ್ಲಿ ಎರಡು ಇರುವುದೋ ಅಲ್ಲಿ ಅಂಜಿಕೆ, ಅಪಾಯ, ಘರ್ಷಣೆ, ಮನಸ್ತಾಪ. ಎಲ್ಲಾ ಒಂದಾದರೆ ದ್ವೇಷಿಸುವವರಾರು? ಹೋರಾಡುವವರಾರು? ಎಲ್ಲಾ ಆತನೆ ಆದರೆ ಯಾರೊಂದಿಗೆ ನೀನು ಹೋರಾಡಬೇಕು? ಜೀವನದ ನೈಜಸ್ವಭಾವವನ್ನು ಇದು ವಿವರಿಸುವುದು. ಅಸ್ತಿತ್ವವನ್ನು ವಿವರಿಸುವುದು. ಇದೆ ಪೂರ್ಣತೆ. ಇದೆ ದೇವರು. ಎಲ್ಲಿಯವರೆಗೆ ನೀವು ಹಲವನ್ನು ನೋಡುವಿರೊ ಅಲ್ಲಿಯವರೆಗೆ ನೀವು ಭ್ರಾಂತಿಯಲ್ಲಿರುವಿರಿ. "ಈ ವೈವಿಧ್ಯ ಪ್ರಪಂಚದಲ್ಲಿ ಯಾರು ಒಂದನ್ನು ನೋಡುವನೊ ಅನವರತ ಬದಲಾಯಿಸುತ್ತಿರುವ ಜಗತ್ತಿನಲ್ಲಿ ಬದಲಾಯಿಸದೆ ಇರುವುದನ್ನು ಯಾರು ನೋಡುವನೊ, ಯಾರು ಆತನನ್ನು ಆತ್ಮದ ಆತ್ಮನೆಂದು ಭಾವಿಸುವನೊ, ತನ್ನ ಸ್ವಂತ ಆತ್ಮವೆಂದು ಭಾವಿಸುವನೂ ಅವನೆ ಮುಕ್ತ, ಅವನೆ ಶುದ್ಧ,

ಅವನೆ ಗುರಿಯನ್ನು ಮುಟ್ಟಿರುವನು.” ಅದಕಾರಣವೆ ಮೊದಲು ನೀನೆ ಅವನೆಂದು ತಿಳಿ. ನೀನೆ ಈ ಪ್ರಪಂಚದ ದೇವರು. ತತ್ತ್ವಮಸಿ. ನಾನು ಗಂಡಸು ಹೆಂಗಸು, ರೋಗಿಷ್ಠ ಅಥವಾ ಆರೋಗ್ಯವಾಗಿರುವವನು, ಬಲಿಷ್ಠ ಅಥವಾ ದುರ್ಬಲ, ನಾನು ದ್ವೇಷಿಸುತ್ತೇನೆ ಅಥವಾ ಪ್ರೀತಿಸುತ್ತೇನೆ, ನನಗೆ ಅಧಿಕಾರ ವಿದೆಯೆಂಬುದೆಲ್ಲ ಭ್ರಾಂತಿ. ಇವುಗಳಿಂದ ಪಾರಾಗಿ. ಯಾವುದು ನಿಮ್ಮನ್ನು ದುರ್ಬಲರನ್ನಾಗಿ ಮಾಡುವುದು? ಯಾವುದಕ್ಕೆ ನೀವು ಅಂಜು ವುದು? ನೀನೊಬ್ಬನೆ ಪ್ರಪಂಚದಲ್ಲಿರುವವನು. ಯಾವುದು ನಿನ್ನನ್ನು ಅಂಜಿಸುವುದು? ಎದ್ದು ನಿಂತು ಮುಕ್ತರಾಗಿ! ನಿಮ್ಮನ್ನು ಪ್ರಪಂಚದಲ್ಲಿ ಯಾವ ಆಲೋಚನೆ ಅಥವಾ ಕ್ರಿಯೆ ದುರ್ಬಲರನ್ನಾಗಿ ಮಾಡುವುದೊ ಅದೊಂದೆ ಪ್ರಪಂಚದಲ್ಲಿರುವ ಪಾಪ. ಯಾವುದು ಜನರನ್ನು ದುರ್ಬ ಲರನ್ನಾಗಿ ಮಾಡುವುದೊ, ಅಂಜಿಸುವುದೊ ಅದೊಂದೆ ಸಾವು. ಪಾರಾಗ ಬೇಕಾದ ಮಹಾಪಾತಕ. ಯಾವುದು ನಿಮ್ಮನ್ನು ಅಂಜಿಸುವುದು? ಸೂರ್ಯಬಿದ್ದರೆ, ಚಂದ್ರ ಪುಡಿಯಾಗಿಹೋದರೆ, ಅನಂತ ವ್ಯೂಹಗಳು ನಾಶ ವಾಗಿ ಹೋದರೆ ನಿನಗೇನಂತೆ. ಬಂಡೆಯಂತೆ ನಿಲ್ಲು. ನೀನು ಅವಿನಾಶಿ. ನೀನೆ ಆತ್ಮ. “ವಿಶ್ವದ ದೇವರು ನಾನೆ. ಸಚ್ಚಿದಾನಂದ ಸ್ವರೂಪ, ತತ್ತ್ವಮಸಿ” ಎನ್ನು. ಸಿಂಹ ಪಂಜರ ಸೀಳುವಂತೆ ನಿಮ್ಮ ಶೃಂಖಲೆಯನ್ನು ಕಿತ್ತೊಗೆದು ಎಂದೆಂದಿಗೂ ಮುಕ್ತರಾಗಿ. ಯಾವುದು ನಿಮ್ಮನ್ನು ಅಂಜಿಸು ವುದು? ಯಾವುದು ನಿಮ್ಮನ್ನು ತಗ್ಗಿಸುವುದು? ಭ್ರಾಂತಿ ಅಜ್ಞಾನ ಒಂದೆ; ಮತ್ತಾವುದೂ ನಿಮ್ಮನ್ನು ಬಂಧಿಸಲಾರದು. ನೀನು ನಿತ್ಯಶುದ್ಧ ಮಂಗಳಸ್ವರೂಪ.

ಕೆಲಸಕ್ಕೆ ಬಾರದ ಮೂರ್ಖರು ಪಾಪಿಗಳೆಂದು ನಿಮ್ಮನ್ನು ಕರೆಯು ವರು. ನೀವು ಒಂದು ಮೂಲೆಯಲ್ಲಿ ಕುಳಿತು ಅಳುವಿರಿ. ಪಾಪಿಗಳೆಂದು ನಿಮ್ಮನ್ನು ಕರೆಯುವುದು ಶುದ್ಧ ಮೂರ್ಖತನ, ದುಷ್ಟತನ, ಠಕ್ಕತನ. ನೀವೆಲ್ಲಾ ದೇವರು ನಿಮಗೆ ದೇವರು ಕಾಣುವುದಿಲ್ಲವೆ! ಮನುಷ್ಯನೆಂದು ಕರೆಯುತ್ತೀರಲ್ಲ? ಧೈರ್ಯವಿದ್ದರೆ ಅದರ ಮೇಲೆ ನಿಂತು ನಿಮ್ಮ ಜೀವನವನ್ನು ಹದಗೊಳಿಸಿ. ನಿಮ್ಮ ಕತ್ತು ಕತ್ತರಿಸಿದರೆ ಬೇಡ ಎನ್ನಬೇಡಿ. ಏಕೆಂದರೆ ನೀವೆ ನಿಮ್ಮ ಕತ್ತನ್ನು ಕತ್ತರಿಸಿಕೊಳ್ಳುವಿರಿ. ನೀನು ದೀನರಿಗೆ ಸಹಾಯ ಮಾಡಿದರೆ ಸ್ವಲ್ಪವೂ ಅಹಂಕಾರ ಪಡಬೇಡ. ಅದು ನಿನಗೊಂದು ಪೂಜೆ ಯಂತೆ. ಅಹಂಕಾರ ಪಡಲು ಕಾರಣವಿಲ್ಲ. ಇಡೀ ವಿಶ್ವ ನೀನಲ್ಲವೆ? ನೀನಲ್ಲದೆ ಇರುವುದು ಯಾವುದಿದೆ. ನೀನೆ ಈ ವಿಶ್ವದ ಆತ್ಮ. ನೀನೆ

ಸೂರ್ಯ, ಚಂದ್ರ, ನಕ್ಷತ್ರಾವಳಿ. ನೀನೆ ಎಲ್ಲಾ ಕಡೆಯಲ್ಲಿಯೂ ಪ್ರಕಾಶಿಸುತ್ತಿರುವುದು. ಇಡೀ ವಿಶ್ವವೆ ನೀನು. ನೀನು ದ್ವೇಷಿಸುವುದು ಯಾರನ್ನು ? ಯಾರೊಂದಿಗೆ ಹೋರಾಡುವುದು ? ನೀನೇ ಅವನೆಂದು ತಿಳಿದು ಇಡೀ ಜೀವನವನ್ನು ರೂಢಿಸು. ಯಾರು ಇದನ್ನು ತಿಳಿದು ತಮ್ಮ ಜೀವನವನ್ನು ಇದರಂತೆ ಬದಲಾಯಿಸಿಕೊಳ್ಳುವರೊ ಅವರು ಎಂದಿಗೂ ಅಜ್ಞಾನದಲ್ಲಿ ತೊಳಲುವುದಿಲ್ಲ.

---

# ಆತ್ಮ

ಮ್ಯಾಕ್ಸ್ ಮುಲ್ಲರ್ ಬರೆದಿರುವ "ಮೂರು ವೇದಾಂತ ಉಪನ್ಯಾಸಗಳು" ಎಂಬ ಪ್ರಖ್ಯಾತ ಪುಸ್ತಕವನ್ನು ನಿಮ್ಮಲ್ಲಿ ಹಲವರು ಓದಿರಬಹುದು. ಕೆಲವರು ಪ್ರೊಫೆಸರ್ ಡಾಯ್‌ಸನ್ ಬರೆದಿರುವ ವೇದಾಂತ ತತ್ತ್ವವನ್ನು ಓದಿರಬಹುದು. ಭಾರತೀಯ ಧರ್ಮದ ವಿಚಾರವಾಗಿ ಪಾಶ್ಚಾತ್ಯದಲ್ಲಿ ಬರೆದ ಗ್ರಂಥ ಮತ್ತು ಪ್ರಚಾರವಾದ ಭಾವನೆಗಳಲ್ಲಿ ಅದ್ವೈತವೆಂಬ ಒಂದು ಭಾಗವನ್ನು ಮಾತ್ರ ಮುಖ್ಯವಾಗಿ ವಿವರಿಸಿರುವರು. ಕೆಲವು ವೇಳೆ ವೇದಾಂತದ ಬೋಧನೆಯೆಲ್ಲಾ ಅದ್ವೈತ ಒಂದೆ ಎಂದು ಭಾವಿಸುವರು. ಅಲ್ಲಿ ಹಲವು ಹಿಂದೂ ತತ್ತ್ವಗಳಿವೆ. ಇವುಗಳಲ್ಲಿ ಅದ್ವೈತಾನುಯಾಯಿಗಳು ಕನಿಷ್ಟ ಪಕ್ಷದವರಾಗಿರಬಹುದು. ಪ್ರಾಚೀನ ಕಾಲದಿಂದಲೂ ಭರತ ಖಂಡದಲ್ಲಿ ಎಷ್ಟೋ ತಾತ್ತ್ವಿಕ ಸಂಪ್ರದಾಯಗಳಿವೆ. ಪ್ರತಿಯೊಬ್ಬರೂ ಯಾವ ಸಿದ್ಧಾಂತವನ್ನು ನಂಬಬೇಕೆಂದು ಜನರಿಗೆ ತಿಳಿಸುವ ಸುವ್ಯವಸ್ಥಿತ ಸಂಸ್ಥೆ ಅಥವಾ ಜನರು ಇಲ್ಲದೇ ಇದ್ದುದರಿಂದ ಜನ ತಮ್ಮ ಮನಸ್ಸಿಗೆ ತೋರಿದ ಪಂಥ ತತ್ತ್ವ ಆರಿಸಿಕೊಂಡು ತಮ್ಮ ಮತವನ್ನು ಪ್ರತಿಷ್ಠಿಸಬಹುದಾಗಿತ್ತು. ಆದಕಾರಣವೆ ಅತಿ ಪ್ರಾಚೀನಕಾಲದಿಂದಲೂ ಭರತಖಂಡದಲ್ಲಿ ಬೇಕಾದಷ್ಟು ಪಂಗಡಗಳಿದ್ದುವು. ಈಗ ಸದ್ಯದಲ್ಲಿ ಎಷ್ಟು ಸಹಸ್ರ ಪಂಗಡಗಳಿವೆಯೊ ನನಗೆ ಗೊತ್ತಿಲ್ಲ. ಪ್ರತಿ ವರ್ಷವೂ ಹೊಸ ಹೊಸ ಪಂಗಡಗಳು ಹುಟ್ಟುತ್ತಿವೆ. ಆ ಜನಾಂಗದ ಧರ್ಮ ಚಟುವಟಿಕೆಗೆ ಅಂತ್ಯವೆ ಇಲ್ಲದಂತೆ ತೋರುವುದು.

ವಿಭಿನ್ನ ಪಂಗಡಗಳನ್ನು ಮೊದಲು ಎರಡು ವಿಭಾಗ ಮಾಡಬಹುದು. ಆಸ್ತಿಕ ಮತ್ತು ನಾಸ್ತಿಕ ಸಂಪ್ರದಾಯಗಳು. ವೇದ ಸನಾತನ ತತ್ತ್ವವನ್ನು ವ್ಯಕ್ತಗೊಳಿಸುವುದು ಎಂದು ಯಾರು ನಂಬುತ್ತಾರೊ ಅವರು ಆಸ್ತಿಕರು. ವೇದವನ್ನು ತ್ಯಜಿಸಿ ಬೇರೆ ಪ್ರಮಾಣವನ್ನು ಒಪ್ಪುವವರು ನಾಸ್ತಿಕರು. ಆಧುನಿಕ ಮುಖ್ಯ ನಾಸ್ತಿಕರ ಸಂಪ್ರದಾಯಗಳೆ ಬೌದ್ಧರು ಮತ್ತು ಜೈನರು. ಆಸ್ತಿಕರಲ್ಲಿ ಕೆಲವರು ಯುಕ್ತಿಗಿಂತ ಶಾಸ್ತ್ರ ಪ್ರಮಾಣಕ್ಕೆ ಹೆಚ್ಚು ಪ್ರಧಾನ್ಯತೆ ಕೊಡುವರು. ಮತ್ತೆ ಕೆಲವರು ಶಾಸ್ತ್ರದಲ್ಲಿ ಯಾವುದು ಯುಕ್ತಿಬದ್ಧವಾಗಿದೆಯೊ ಅದನ್ನು ಮಾತ್ರ ಸ್ವೀಕರಿಸಿ ಉಳಿದುದನ್ನು ತಿರಸ್ಕರಿಸಬೇಕು ಎನ್ನುವರು. ಸಾಂಖ್ಯ ನ್ಯಾಯ ಮೀಮಾಂಸ ಎಂಬ ಮೂರು ಆಸ್ತಿಕ ಸಂಪ್ರದಾಯಗಳಲ್ಲಿ ಮೊದಲನೆಯ

ಎರಡು ದರ್ಶನಗಳಾಗಿದ್ದರೂ ಒಂದು ಪಂಗಡವಾಗಲಿಲ್ಲ. ಈಗ ಇಂಡಿಯಾ ದೇಶದಲ್ಲಿ ಇರುವ ಪಂಗಡಗಳಲ್ಲೆಲ್ಲಾ ಮುಖ್ಯವಾಗಿರುವುದೆ ಮೀಮಾಂಸಮತ ಅಥವಾ ವೇದಾಂತಿಗಳು. ಅವರ ತತ್ತ್ವವನ್ನು ವೇದಾಂತ ಎನ್ನುವರು. ಹಿಂದೂ ದರ್ಶನಗಳು ವೇದಾಂತ ಅಥವಾ ಉಪನಿಷತ್ತಿನಿಂದ ಪ್ರಾರಂಭವಾಗುವುದು. ಆದರೆ ಅದ್ವೈತಿಗಳು ವಿಶೇಷವಾಗಿ ಈ ಹೆಸರನ್ನು ತಾವೇ ತೆಗೆದು ಕೊಳ್ಳುವರು. ಅವರು ತಮ್ಮ ಮತ ತತ್ತ್ವ ಎಲ್ಲವನ್ನೂ ವೇದಾಂತದ ಆಧಾರದ ಮೇಲೆ ಮಾತ್ರ ಇಡಲು ಯತ್ನಿಸಿದರು. ಕೊನೆಗೆ ವೇದಾಂತ ಒಂದೇ ಉಳಿಯಿತು. ಈಗ ಭರತಖಂಡದಲ್ಲಿರುವ ಪಂಗಡಗಳನ್ನೆಲ್ಲಾ ವೇದಾಂತದಲ್ಲಿ ಯಾವುದಾದರೂ ಒಂದು ಶಾಖೆಗೆ ಸೇರಿಸಬಹುದು. ಆದರೂ ಈ ಶಾಖೆಯವರೆಲ್ಲ ತಮ್ಮ ಅಭಿಪ್ರಾಯದಲ್ಲಿ ಏಕಮತೀಯರಲ್ಲ.

ವೇದಾಂತಿಗಳಲ್ಲಿ ಮೂರು ಮುಖ್ಯ ವ್ಯತ್ಯಾಸಗಳು ನಮಗೆ ತೋರಿಬರುವುವು. ಒಂದರಲ್ಲಿ ಮಾತ್ರ ಅವರೆಲ್ಲರೂ ಏಕಮತೀಯರು. ಅದೆ ಅವರೆಲ್ಲರೂ ದೇವನನ್ನು ನಂಬುವರು. ವೇದಾಂತಿಗಳೆಲ್ಲ ವೇದ ದೇವೋಕ್ತ ಎಂದು ನಂಬುವರು. ಕ್ರೈಸ್ತ ಅಥವಾ ಮಹಮ್ಮದೀಯರು ನಂಬುವಂತೆ ಅಲ್ಲ. ಬೇರೊಂದು ವಿಶೇಷ ದೃಷ್ಟಿಯಿಂದ. ಅವರ ಅಭಿಪ್ರಾಯದಲ್ಲಿ ವೇದಗಳು ಭಗವಂತನ ಭಾವನೆಯನ್ನು ವ್ಯಕ್ತಗೊಳಿಸುವುವು. ದೇವರು ಅನಾದಿಯಾಗಿರುವಂತೆ ಅವನ ಜ್ಞಾನವೂ ಕೂಡ ಅನಾದಿ. ಅದರಂತೆ ವೇದವೂ ಕೂಡ ಅನಾದಿ ಎಂದು ನಂಬುವರು. ಇವರೆಲ್ಲರಿಗೂ ಸರ್ವ ಸಾಮಾನ್ಯವಾದ ಮತ್ತೊಂದು ಭಾವನೆ ಇದೆ. ಅದೆ ಸೃಷ್ಟಿಕಲ್ಪಿತ, ಸೃಷ್ಟಿವ್ಯಕ್ತವಾಗುವುದು ಮಾಯವಾಗುವುದು. ಅದು ವ್ಯಕ್ತವಾಗಿ ಸ್ಥೂಲವಾಗುವುದು. ಎಷ್ಟೋ ಕೋಟ್ಯಂತರ ವರ್ಷಗಳಾದ ಮೇಲೆ ಸೂಕ್ಷ್ಮ ಸೂಕ್ಷ್ಮವಾಗಿ ಅವ್ಯಕ್ತವಾಗುವುದು. ಕೆಲವು ಕಾಲ ಸುಮ್ಮನಿರುವುದು. ಪುನಃ ವ್ಯಕ್ತವಾಗಿ ಅದೆ ಕ್ರಮದಲ್ಲಿ ಹೋಗುವುದು. ಅವರು ಈಗಿನ ವೈಜ್ಞಾನಿಕರು ಈಥರ್ ಎಂದು ಕರೆಯುವುದನ್ನು ಹೋಲುವ ಆಕಾಶ ಮತ್ತು ಪ್ರಾಣವನ್ನು ಆಧಾರವಾಗಿಟ್ಟುಕೊಳ್ಳುವರು. ಪ್ರಾಣದ ಸ್ಪಂದನದಿಂದ ಸೃಷ್ಟಿಯಾಗುವುದು ಎನ್ನುವರು. ಒಂದು ಕಲ್ಪ ಮುಗಿದರೆ ಪ್ರಕೃತಿಯ ಆವಿರ್ಭಾವನೆಗಳೆಲ್ಲ ಸೂಕ್ಷ್ಮ ಸೂಕ್ಷ್ಮವಾಗಿ ಆಕಾಶದಲ್ಲಿ ತಲ್ಲೀನವಾಗುವುದು. ಆಕಾಶವನ್ನು ನೋಡಲಾರೆವು, ಅನುಭವಿಸಲಾರೆವು. ಆದರೂ ಎಲ್ಲಾ ಅದರಿಂದ ಆಗಿರುವುದು. ಪ್ರಕೃತಿಯಲ್ಲಿ ನಮಗೆ ಕಾಣುವ

ಗುರುತ್ವಾಕರ್ಷಣ, ಆಕರ್ಷಣ ಮತ್ತು ವಿಕರ್ಷಣ, ಆಲೋಚನೆ, ಭಾವನೆ ಮತ್ತು ಸ್ನಾಯುಃಗತಿ ಇದೆಲ್ಲಾ ಪ್ರಾಣದಲ್ಲಿ ಐಕ್ಯವಾಗುವುವು. ಪ್ರಾಣ ಸ್ಪಂದನ ನಿಲ್ಲುವುದು. ಇದೆ ಸ್ಥಿತಿಯಲ್ಲಿ ಮತ್ತೊಂದು ಕಲ್ಪದ ವರೆಗೂ ಹಾಗೆಯೆ ಇರುವುದು. ಪುನಃ ಪ್ರಾಣ ಸ್ಪಂದಿಸುವುದು. ಈ ಸ್ಪಂದನೆ ಆಕಾಶದ ಮೇಲೆ ತನ್ನ ಪ್ರಭಾವವನ್ನು ಬೀರುವುದು ಆಗ ಒಂದು ಕ್ರಮ ದಲ್ಲಿ ಹಲವು ಆಕಾರಗಳಲ್ಲಿ ವ್ಯಕ್ತವಾಗುವುವು.

ನಾನು ನಿಮಗೆ ಹೇಳುವ ಮೊದಲನೆ ಸಿದ್ಧಾಂತವನ್ನು ದ್ವೈತ ಎನ್ನು ವರು. ದ್ವೈತಿಗಳು ವಿಶ್ವವನ್ನು ಸೃಷ್ಟಿಸುವ ದೇವರು, ಅವನೇ ಈಶ್ವರ. ಅವನು ಸೃಷ್ಟಿಯಿಂದ ಜೀವದಿಂದ ಎಂದೆಂದಿಗೂ ಬೇರೆ ಎಂದು ನಂಬು ವರು. ದೇವರು ಆದಿ ಅಂತ್ಯರಹಿತ, ಜಗತ್ತು ಆದಿ ಅಂತ್ಯರಹಿತ, ಹಾಗೆಯೆ ಜೀವವೂ ಕೂಡ ಆದಿ ಅಂತ್ಯರಹಿತ. ಜೀವ ಜಗತ್ತು ವ್ಯಕ್ತ ವಾಗಿ ಬದಲಾಯಿಸುವುವು, ಆದರೆ ದೇವರು ಹಾಗೆಯೆ ಇರುವನು. ದ್ವೈತಿಗಳ ದೃಷ್ಟಿಯಲ್ಲಿ ದೇವರು ಸಗುಣ ಅಂದರೆ ಅವನಿಗೆ ಆಕಾರವಿದೆ ಎಂದು ಅಲ್ಲ. ಅವನಿಗೆ ಗುಣಗಳಿವೆ. ಅವನಿಗೆ ಮಾನವೀಯ ಗುಣ ಗಳಿವೆ. ಅವನು ದಯಾಮೂರ್ತಿ, ನ್ಯಾಯಪರ, ಅವನು ಪರಾಕ್ರಮ ಶಾಲಿ, ಸರ್ವಶಕ್ತ. ಅವನ ಹತ್ತಿರ ಹೋಗಬಹುದು, ಅವನನ್ನು ಪ್ರಾರ್ಥಿ ಸಬಹುದು, ನಾವು ಅವನನ್ನು ಪ್ರೀತಿಸಬಹುದು. ಅವನು ಅದಕ್ಕೆ ಪ್ರತಿ ಯಾಗಿ ನಮ್ಮನ್ನೂ ಪ್ರೀತಿಸುವನು. ಒಂದುಮಾತಿನಲ್ಲಿ ಹೇಳುವುದಾದರೆ ಅವನು ಮಾನವೀಯ ದೇವರು. ಆದರೆ ಮನುಷ್ಯನಿಗಿಂತ ಬಹಳ ದೊಡ್ಡ ವನು. ಮನುಷ್ಯರಲ್ಲಿರುವ ದೋಷಗಳಾವುವೂ ಅವನಲ್ಲಿ ಇಲ್ಲ. " ಅವನು ಅನಂತ ಕಲ್ಯಾಣಗುಣಗಣ ". ಇದೇ ದ್ವೈತಿಗಳ ದೇವರ ವಿವರಣೆ. ದ್ರವ್ಯವಿಲ್ಲದೆ ಅವನು ಸೃಷ್ಟಿಸಲಾರ. ವಿಶ್ವವನ್ನು ಸೃಷ್ಟಿಸುವುದಕ್ಕೆ ಪ್ರಕೃ ತಿಯೆ ಅವನಿಗೆ ದ್ರವ್ಯ. ಕಣವಾದಿಗಳೆಂಬ ಕೆಲವು ಅವೈದಿಕ ದ್ವೈತಿ ಗಳಿರುವರು. ಅವರು ಪ್ರಕೃತಿ ಎಂದರೆ ಅನಂತಕಣರಾಶಿ, ಭಗವಂತ ತನ್ನ ಇಚ್ಛೆಯಿಂದ ಇವುಗಳ ಮೂಲಕ ಸೃಷ್ಟಿಸುವನು ಎಂದು ನಂಬುವರು. ವೇದಾಂತಿಗಳು ಈ ಕಣ ಸಿದ್ಧಾಂತವನ್ನು ಒಪ್ಪುವುದಿಲ್ಲ. ಇದು ಅಸಂ ಬದ್ಧ ಎನ್ನುವರು. ಅವಿಭಾಜ್ಯ ಕಣಗಳು ಉದ್ದ ಅಗಲ ಗಾತ್ರವಿಲ್ಲದ ರೇಖಾಗಣಿತದ ಚುಕ್ಕಿಗಳಂತೆ. ಯಾವುದಕ್ಕೆ ಭಾಗಗಳಿಲ್ಲವೊ ಉದ್ದ ಅಗಲ ಗಾತ್ರಗಳಿಲ್ಲವೊ ಅದನ್ನು ಎಷ್ಟು ಅಂಕೆಯಿಂದ ಗುಣಿಸಿದರೂ ಒಂದೇ ಸಮನಾಗಿರುವುದು. ಭಾಗವಿಲ್ಲದುದು ಭಾಗವಿರುವ ಯಾವು

ಇನ್ನೂ ಸೃಷ್ಟಿಸಲಾರದು. ಎಷ್ಟು ಸೊನ್ನೆ ಸೇರಿಸಿದರೂ ಒಂದು ಆಗು ವುದಿಲ್ಲ. ಕಣಕ್ಕೆ ಗಾತ್ರ ಭಾಗಗಳಿಲ್ಲದಿದ್ದರೆ ಅವುಗಳಿಂದ ಜಗತ್ತು ಸೃಷ್ಟಿ ಯಾಗುವುದು ಅಸಂಭವ. ವೇದಾಂತ ದ್ವೈತಿಗಳು ವ್ಯಕ್ತ, ಪ್ರಕೃತಿ ಇದ ಅದರಿಂದ ದೇವರು ಸೃಷ್ಟಿಸುವವನು ಎನ್ನುವರು. ಭರತಖಂಡದ ಬಹು ಜನ ದ್ವೈತಿಗಳು. ಮಾನವ ಭಾವನೆ ಇವಕ್ಕಿಂತ ಮೇಲಿನ ಯಾವುದನ್ನೂ ಸ್ವಾಭಾವಿಕವಾಗಿ ಕಲ್ಪಿಸಿಕೊಳ್ಳಲಾರದು. ಧರ್ಮದಲ್ಲಿ ನಂಬುವ ಜನರಲ್ಲಿ ಶೇಖಡ ತೊಂಭತ್ತು ಮಂದಿ ದ್ವೈತಿಗಳು. ಯೂರೋಪ್ ಮತ್ತು ಏಷ್ಯಾ ಖಂಡದ ಪಶ್ಚಿಮಭಾಗದವರೆಲ್ಲರೂ ದ್ವೈತಧರ್ಮಾವಲಂಬಿಗಳು. ಅವರು ದ್ವೈತಿಗಳೆ ಆಗಬೇಕಾಗಿದೆ. ಸಾಧಾರಣ ಮನುಷ್ಯ ಸ್ಥೂಲವಾಗಿಲ್ಲದ ಯಾವುದನ್ನೂ ಯೋಚಿಸಲಾರ. ತನ್ನ ಬುದ್ಧಿ ಯಾವುದನ್ನು ಗ್ರಹಿಸ ಬಲ್ಲುದೊ ಸಾಧಾರಣವಾಗಿ ಅದರಲ್ಲೆ ಅವನು ಆಸಕ್ತನು. ಗಹನ ಆಧ್ಯಾತ್ಮ ವಿಷಯಗಳನ್ನು ತನ್ನ ಹಂತಕ್ಕೆ ಮೇಲಿನಿಂದ ಎಳೆದು ತಂದಾಗ ಮಾತ್ರ ಅವನು ಗ್ರಹಿಸಬಲ್ಲನು. ಸೂಕ್ಷ್ಮ ಆಧ್ಯಾತ್ಮಿಕ ಭಾವನೆಗಳನ್ನು ಸ್ಥೂಲಮಾಡಿದಾಗ ಮಾತ್ರ ಅವನು ಅದನ್ನು ಗ್ರಹಿಸಬಲ್ಲನು. ಪ್ರಪಂಚ ದಲ್ಲೆಲ್ಲಾ ಜನಸಾಮಾನ್ಯರ ಧರ್ಮವೆ ಇದು. ತಮ್ಮಿಂದ ಬೇರೆಯಾದ ಒಬ್ಬ ದೊಡ್ಡ ಪರಾಕ್ರಮಶಾಲಿ ಚಕ್ರವರ್ತಿಯಂತಿರುವ ಸಗುಣ ದೇವ ರನ್ನು ಮಾತ್ರ ಅವರು ನಂಬುವರು. ಆದರೆ ಮಾನವ ಚಕ್ರವರ್ತಿಗಿಂತ ಪರಿಶುದ್ಧನನ್ನಾಗಿ ಮಾಡುವರು. ಎಲ್ಲಾ ಕಲ್ಯಾಣಗುಣಗಳನ್ನೂ ಅವ ನಿಗೆ ಇತ್ತು ಅವಗುಣಗಳನ್ನು ಅವನಿಂದ ಕಳೆಯುವರು. ಕೆಟ್ಟದಲ್ಲದೆ ಒಳ್ಳೆಯದೇನೊ ಇರುವುದಕ್ಕೆ ಸಾಧ್ಯವಿರುವಂತೆ! ಕತ್ತಲೆಯ ಭಾವನೆಯೆ ಇಲ್ಲದೆ ಬೆಳಕಿನ ಭಾವನೆ ಇರುವುದಕ್ಕೆ ಸಾಧ್ಯವೇನೊ ಎನ್ನುವಂತೆ!

ಎಲ್ಲಾ ದ್ವೈತ ಸಿದ್ಧಾಂತಗಳಲ್ಲಿಯೂ ಮೊದಲ ಕಷ್ಟವೆ ಇಂತಹ ದಯಾಮಯನಾದ ನ್ಯಾಯಮೂರ್ತಿಯಂತಿರುವ ಅನಂತ ಕಲ್ಯಾಣ ಗುಣಾಶ್ರಯನಾದ ದೇವರ ಆಳ್ವಿಕೆಯಲ್ಲಿ ಪ್ರಪಂಚದಲ್ಲಿ ಇಷ್ಟೊಂದು ದೋಷಗಳು ಹೇಗೆ ಇರುವುದಕ್ಕೆ ಸಾಧ್ಯ? ಎಲ್ಲಾ ದ್ವೈತಸಿದ್ಧಾಂತಗಳ ಲ್ಲಿಯೂ ಈ ಪ್ರಶ್ನೆ ಎದ್ದಿತು. ಆದರೆ ಹಿಂದೂಗಳು ಇದರ ಉತ್ತರವಾಗಿ ಒಬ್ಬ ಸೈತಾನನನ್ನು ಸೃಷ್ಟಿಸಲಿಲ್ಲ. ಹಿಂದೂಗಳಲ್ಲಿ ಒಮ್ಮತದಿಂದ ಮನುಷ್ಯ ನನ್ನೆ ಇವಕ್ಕೆ ಕಾರಣಕರ್ತನನ್ನಾಗಿ ಮಾಡಿದರು. ಹೀಗೆ ಮಾಡುವುದು ಅವರಿಗೆ ಸುಲಭವಾಗಿತ್ತು. ಏತಕ್ಕೆ? ನಾನು ಈಗತಾನೆ ಹೇಳಿದಂತೆ ಆತ್ಮ ಶೂನ್ಯದಿಂದ ಜನಿಸಿತು ಎಂದು ಅವರು ನಂಬಲಿಲ್ಲ. ನಾವು ಈ

ಜೀವನದಲ್ಲಿ ಪ್ರತಿಯೊಬ್ಬರೂ ತಮ್ಮ ಭವಿಷ್ಯ ನಿರ್ಧರಿಸುವುದನ್ನು ನೋಡು ತ್ತೇವೆ. ಇಂದು ನಾಳೆಯ ಅದೃಷ್ಟ ನಿರ್ಧರಿಸುವೆವು. ನಾಳೆ ಅದರ ಮಾರನೆಯ ದಿನದ ಭವಿಷ್ಯವನ್ನು ನಿರ್ಧರಿಸುವೆವು. ಈ ಯುಕ್ತಿ ಯನ್ನು ಹಿಂದಕ್ಕೆ ತೆಗೆದುಕೊಂಡು ಹೋಗುವುದು ಕೂಡ ನ್ಯಾಯಸಮ್ಮತ ವಾಗಿದೆ. ನಮ್ಮ ಸ್ವಪ್ರಯತ್ನದಿಂದ ನಾಳಿನ ಭವಿಷ್ಯವನ್ನು ನಿರ್ಧರಿಸಿದರೆ ಇದೆ ಯುಕ್ತಿಯನ್ನು ಭೂತಕಾಲಕ್ಕೆ ಏತಕ್ಕೆ ಅನ್ವಯಿಸಬಾರದು ? ಅನಂತ ಸರಪಳಿಯಲ್ಲಿ ಒಂದು ಒಗೆಯಕೊಂಡಿ ಒಂದನ್ನು ಬಿಟ್ಟು ಮತ್ತೊಂದು ಕ್ರಮದಲ್ಲಿ ಬರುತ್ತಿದ್ದರೆ, ಇಂತಹ ಕೆಲವು ಕೊಂಡಿಗಳ ವರ್ಗ ವನ್ನು ವಿವರಿಸಿದರೆ ಇಡೀ ಸರಪಳಿಯನ್ನೆಲ್ಲಾ ವಿವರಿಸಬಹುದು. ಇದ ರಂತೆಯೆ ಅನಂತಕಾಲದಲ್ಲಿ ಕೂಡ. ಅದರಲ್ಲಿ ಒಂದು ಭಾಗವನ್ನು ಪ್ರತ್ಯೇಕಿಸಿ ಅದನ್ನು ವಿವರಿಸಿ ತಿಳಿದುಕೊಂಡರೆ ಪ್ರಕೃತಿ ಒಂದೇ ಸಮನಾ ಗಿರುವುದು ಸತ್ಯವಾದರೆ, ಇದೇ ವಿವರಣೆ ಇಡೀ ಕಾಲಕ್ಕೆ ಅನ್ವಯಿಸಬೇಕು. ಈ ಅಲ್ಪಕಾಲದಲ್ಲಿ ನಾವು ನಮ್ಮ ಕರ್ಮವನ್ನು ಸಮೆಸುತ್ತಿದ್ದರೆ ನಮಗೆ ಈಗ ಕಾಣುವಂತೆ ಪ್ರತಿಯೊಂದಕ್ಕೂ ಒಂದು ಕಾರಣ ಇರಬೇಕಾದರೆ ನಾವು ಈಗ ಇರುವಸ್ಥಿತಿಗೆ ನಮ್ಮ ಹಿಂದಿನದೆಲ್ಲ ಕಾರಣ ಎಂಬುದೂ ಸತ್ಯವಾಗ ಬೇಕು. ಮಾನವನ ಭವಿಷ್ಯ ನಿರ್ಮಾಣಕ್ಕೆ ಮನುಷ್ಯನಲ್ಲದೆ ಬೇರಾವುದೂ ಆವಶ್ಯಕವಿಲ್ಲ. ಪ್ರಪಂಚದಲ್ಲಿರುವ ಪಾಪವೆಲ್ಲ ನಮ್ಮಿಂದ ಅಲ್ಲದೆ ಬೇರಾ ರಿಂದಲೂ ಆಗಿಲ್ಲ. ನಾವೆ ಈ ಪಾಪವನ್ನೆಲ್ಲಾ ಮಾಡಿದೆವು. ಈಗ ನಾವು ಪಾಪಕೃತ್ಯದಿಂದ ದುಃಖ ಬರುವುದನ್ನು ಪದೇ ಪದೇ ನೋಡುತ್ತಿರು ವಂತೆ ಪ್ರಪಂಚದಲ್ಲಿರುವ ಬಹುಪಾಲು ದುಃಖವೆಲ್ಲಾ ಮನುಷ್ಯನ ಹಿಂದಿನ ಪಾಪಕರ್ಮಫಲ. ಈ ಸಿದ್ಧಾಂತದ ಪ್ರಕಾರ ಮನುಷ್ಯನೊಬ್ಬನೆ ಇದಕ್ಕೆ ಹೊಣೆ. ದೇವರು ಇದಕ್ಕೆ ಹೊಣೆಗಾರನಲ್ಲ. ನಿತ್ಯದಯಾಮಯನಾದ ತಂದೆಗೆ ದೂರು ಸಲ್ಲದು. "ಮಾಡಿದ್ದುಣ್ಣೊ ಮಹರಾಯ !"

ದ್ವೈತಿಗಳ ಮತ್ತೊಂದು ಸಿದ್ಧಾಂತವಿಶೇಷವೆ ಪ್ರತಿಯೊಂದು ಜೀವಿಯೂ ಕೊನೆಗೆ ಮುಕ್ತಿಯನ್ನುಗಳಿಸಬೇಕೆನ್ನುವುದು. ಯಾರೂ ಬಾಹಿರ ರಲ್ಲ. ಹಲವು ಬದಲಾವಣೆ ಮೂಲಕ ಸುಖದುಃಖಗಳಮೂಲಕ ಕೊನೆಗೆ ಹೊರಬರುವರು. ಎಲ್ಲಿಂದ ಹೊರಗೆ ಬರುವರು ? ಹಿಂದೂ ಸಿದ್ಧಾಂತಗಳ ಲ್ಲೆಲ್ಲಾ ಒಂದು ಸಾಮಾನ್ಯ ಅಭಿಪ್ರಾಯವೆ ಜೀವಿಗಳೆಲ್ಲ ಈ ಸಂಸಾರದಿಂದ ಪಾರಾಗಬೇಕು. ನಾವು ನೋಡುವ ಅನುಭವಿಸುವ ಪ್ರಪಂಚವಾಗಲಿ ನಮ್ಮ ಕಾಲ್ಪನಿಕ ಪ್ರಪಂಚವಾಗಲಿ ಸರಿಯಾದುದಲ್ಲ. ಸತ್ಯವಾದುದಲ್ಲ.

ಎರಡರಲ್ಲಿಯೂ ಒಳ್ಳೆಯದು ಕೆಟ್ಟದು ಮಿಶ್ರವಾಗಿರುವುದು. ದ್ವೈತಿಗಳ ದೃಷ್ಟಿಯಲ್ಲಿ ಈ ಸಂಸಾರದ ಆಚೆ ಆನಂದ ಮತ್ತು ಸುಖದಿಂದ ತುಂಬಿದ ಲೋಕ ಒಂದಿದೆ. ಅದನ್ನು ಪಡೆದರೆ ಪುನರ್ಜನ್ಮ ಪಡೆಯಬೇಕಾಗಿಲ್ಲ. ಹುಟ್ಟಿ ಸಾಯಬೇಕಾಗಿಲ್ಲ. ಅವರಿಗೆ ಈ ಭಾವನೆ ಅತಿಪ್ರಿಯವಾದುದು. ಅಲ್ಲಿ ರೋಗರುಜಿನಗಳಿಲ್ಲ, ಮರಣಭಯವಿಲ್ಲ, ಅಲ್ಲಿ ಅನಂತಾನಂದವಿರುವುದು. ಅನವರತ ದೇವರ ಸಾನ್ನಿಧ್ಯದಲ್ಲಿದ್ದು ಅವನನ್ನು ಎಂದೆಂದಿಗೂ ಅನುಭವಿಸುವುದು. ಕ್ಷುದ್ರತಮ ಕೀಟದಿಂದ ಹಿಡಿದು ಶ್ರೇಷ್ಠತಮ ದೇವದೂತ ದೇವತೆಗಳವರೆಗೆ ಎಲ್ಲರೂ ನಿಧಾನವಾಗಿಯೊ ಬೇಗಲೊ ದುಃಖವಿಲ್ಲದ ಲೋಕವನ್ನು ಸೇರುವರು. ಆದರೆ ನಮ್ಮ ಸಂಸಾರಕ್ಕೆ ಅಂತ್ಯವಿಲ್ಲ. ಅಲೆಯಂತೆ ಇದು ಸಂಚರಿಸುತ್ತಿದ್ದರೂ ಅದೆಂದಿಗೂ ಕೊನೆಗಾಣುವುದೇ ಇಲ್ಲ. ಉದ್ಧರಿಸಬೇಕಾದ ಪೂರ್ಣತೆ ಪಡೆಯಬೇಕಾದ ಜೀವಿಗಳು ಅನಂತವಾಗಿವೆ. ಕೆಲವು ಪ್ರಾಣಿಗಳರೂಪದಲ್ಲಿವೆ, ಕೆಲವು ಕೀಳು ಮೃಗಗಳಲ್ಲಿವೆ, ಕೆಲವು ಮನುಷ್ಯನಲ್ಲಿವೆ, ಕೆಲವು ದೇವರಲ್ಲಿವೆ. ಎಲ್ಲರೂ ಅತಿಶ್ರೇಷ್ಠ ದೇವತೆಗಳುಕೂಡ ಅಪೂರ್ಣರು, ಬದ್ಧರು. ಬಂಧನ ಎಂದರೇನು? ಹುಟ್ಟಬೇಕಾದ ಸಾಯಬೇಕಾದ ಆವಶ್ಯಕತೆ. ಅತಿ ಶ್ರೇಷ್ಠ ದೇವನೂ ಸಾಯುವನು. ಈ ದೇವತೆಗಳು ಯಾರು ? ಅವು ಕೆಲವು ಸ್ಥಿತಿ, ಕೆಲವು ಅಧಿಕಾರ. ಉದಾಹರಣೆಗೆ ದೇವೇಂದ್ರ ಎಂಬುದು ಒಂದು ಅಧಿಕಾರ. ಈ ಕಲ್ಪದಲ್ಲಿ ಯಾವ ಜೀವಿ ಬಹಳ ಉತ್ತಮವಾಗಿತ್ತೊ ಅದು ಆ ಅಧಿಕಾರವನ್ನು ವಹಿಸಿಕೊಂಡಿರುವುದು. ಈ ಕಲ್ಪವಾದಮೇಲೆ ಮನುಷ್ಯನಂತೆ ಜನಿಸುವನು. ಈ ಕಲ್ಪದಲ್ಲಿ ಯಾರು ಒಳ್ಳೆಯ ಮನುಷ್ಯನಾಗಿರುವನೊ ಅವನು ಮುಂದಿನ ಕಲ್ಪದಲ್ಲಿ ದೇವೇಂದ್ರನಾಗುವನು. ಇದರಂತೆಯೆ ಎಲ್ಲಾ ದೇವತೆಗಳು ಕೋಟ್ಯಾಂತರ ಜೀವಿಗಳು ಒಬ್ಬರಾದ ಮೇಲೊಬ್ಬರು ಅಧಿಕಾರವನ್ನು ಪಡೆದು ಅನುಭವಿಸಿ ಪುನಃ ಮಾನವರಾಗಿ ಜನಿಸುವರು. ಯಾರು ಸತ್ಕರ್ಮಗಳನ್ನು ಮಾಡುವರೊ ಸ್ವರ್ಗಪಡೆಯುವುದಕ್ಕೆ ಮತ್ತು ಜನರ ಕೀರ್ತಿಪಡೆಯಬೇಕೆಂಬ ಫಲಾಪೇಕ್ಷೆಯಿಂದ ಸತ್ಕರ್ಮ ಮಾಡುವರೊ ಅವರು ಸತ್ತನಂತರ ಆ ಕರ್ಮಫಲವನ್ನು ಅನುಭವಿಸಬೇಕಾಗುವುದು. ಅವರೆ ಇಂತಹ ದೇವತೆಗಳಾಗುವುದು. ಆದರೆ ಇದು ಮುಕ್ತಿಯಲ್ಲ. ಫಲಾಪೇಕ್ಷೆಯಿಂದ ಮುಕ್ತಿ ಎಂದಿಗೂ ಲಭಿಸದು. ಮನುಷ್ಯ ಏನು ಇಚ್ಛೈಸಿದರೂ ದೇವರು ಕೊಡುವನು. ಕೀರ್ತಿ ಗೌರವ ಅಧಿಕಾರ ದೇವತೆಗಳ ಆ ಸ್ವರ್ಗಸುಖ ಇವನ್ನೆ ಮನುಷ್ಯರು ಇಚ್ಛೈಸುವರು. ಅವರು

ಇವನ್ನೇ ಪಡೆಯುವರು. ಯಾವ ಕರ್ಮಪರಿಣಾಮವೂ ಶಾಶ್ವತವಾಗಿ ಇರಲಾರದು. ಕೆಲವು ಕಾಲವಾದಮೇಲೆ ಆ ಫಲ ಮುಗಿದುಹೋಗುವುದು. ಸಹಸ್ರಾರುವರ್ಷಗಳು ನಿಂತರೂ ಅದು ಕೊನೆಗೆ ನಾಶವಾಗುವುದು. ಈ ದೇವತೆಗಳು ಪುನಃ ಬಂದು ಮಾನವರಾಗಬೇಕು. ಮುಕ್ತಿಗೆ ಮತ್ತೊಂದು ಅವಕಾಶಪಡೆಯಬೇಕು. ಕೆಳಗಿರುವ ಪ್ರಾಣಿಗಳು ಮೇಲೆ ಬಂದು ಮನುಷ್ಯರಾಗುವುವು, ದೇವತೆಗಳಾಗುವುವು. ಬಹುಶಃ ಕೊನೆಗೆ ಪುನಃ ಮನುಷ್ಯರಾಗುವರು ಅಥವಾ ಮೃಗವಾಗುವರು. ನಾನು ನನ್ನದು ಎಂಬುದಕ್ಕೆ ಇರುವ ಆಸಕ್ತಿ ನಾಶವಾಗಿ ಭೋಗಸುಖವನ್ನೆ ನಿಕೃಷ್ಟ ದೃಷ್ಟಿಯಿಂದ ನೋಡಿ ಜೀವನಾಸಕ್ತಿಯನ್ನು ಕಳೆದುಕೊಳ್ಳುವವರೆಗೆ ಹೀಗೆ ಸುತ್ತಾಡುತ್ತಿರಬೇಕು. "ನಾನು ನನ್ನದು" ಎಂಬುದೇ ಜಗದ ಪಾಪಗಳೆಲ್ಲಕ್ಕೂ ಮೂಲ. ನೀವು ದ್ವೈತಿಗಳನ್ನು "ಈ ಮಗು ನಿನ್ನದು" ಎಂದರೆ ಇದು ದೇವರದು ಎನ್ನುವನು. "ನನ್ನ ಆಸ್ತಿ ನನ್ನದಲ್ಲ, ಇದು ದೇವರದು". ಪ್ರತಿಯೊಂದನ್ನೂ ದೇವರದು ಎಂದು ಇಟ್ಟುಕೊಂಡಿರಬೇಕು.

ಈ ದ್ವೈತಸಂಪ್ರದಾಯದವರು ಶಾಕಾಹಾರಿಗಳು, ಅಹಿಂಸೋಪಾಸಕರು. ಆಲ್ಲದೆ ಇದು ಬೌದ್ಧರ ಭಾವನೆಯಂತೆ ಇಲ್ಲ. ನೀವು ಬೌದ್ಧರನ್ನು "ಏತಕ್ಕೆ ಪ್ರಾಣಿಹತ್ಯೆಗೆ ವಿರೋಧವಾಗಿ ಬೋಧಿಸುತ್ತೀರಿ?" ಎಂದು ಕೇಳಿದರೆ, ಆತ "ಪ್ರಾಣಿಗಳನ್ನು ಕೊಲ್ಲಲು ನಮಗೆ ಅಧಿಕಾರವಿಲ್ಲ" ಎನ್ನುವನು. ದ್ವೈತಿಗಳನ್ನು ನೀವು ಏತಕ್ಕೆ ಪ್ರಾಣಿಗಳನ್ನು ಕೊಲ್ಲುವುದಿಲ್ಲ ಎಂದರೆ, "ಇವೆಲ್ಲ ದೇವರಿಗೆ ಸೇರಿದ್ದು" ಎನ್ನುವನು. ದ್ವೈತಿಗಳು ನಾನು ನನ್ನದು ಎಂಬುದನ್ನು ದೇವರಿಗೆ ಮಾತ್ರ ಅನ್ವಯಿಸಬೇಕು ಎನ್ನುವನು. ಆತನೊಬ್ಬನೆ "ನಾನು" ಉಳಿದುವೆಲ್ಲ ಅವನದು. ಒಬ್ಬ ಈ ಸ್ಥಿತಿಗೆ ಬಂದಾಗ ಅವನಲ್ಲಿ ನಾನು, ನನ್ನದು ಇಲ್ಲದಾಗ, ಎಲ್ಲವನ್ನೂ ಭಗವಂತನಿಗೆ ನಿವೇದಿಸಿದಾಗ, ಎಲ್ಲರನ್ನೂ ಪ್ರೀತಿಸಿ ಒಂದು ಪ್ರಾಣಿಗಾದರೂ ಫಲಾಪೇಕ್ಷೆಯಿಲ್ಲದೆ ತನ್ನ ಪ್ರಾಣವನ್ನು ಕೊಡಲು ಸಿದ್ಧನಾಗಿರುವಾಗ, ಅವನ ಹೃದಯ ಶುದ್ಧವಾಗುವುದು. ಹೃದಯ ಶುದ್ಧವಾದ ಮೇಲೆ ಅಲ್ಲಿ ಭಗವಂತನ ಪ್ರೇಮ ಉದಿಸುವುದು. ದೇವರು ಎಲ್ಲಾ ಜೀವಿಗಳ ಆಕರ್ಷಣೆಯ ಕೇಂದ್ರ. "ಮಣ್ಣಿನಿಂದ ಮೆತ್ತಿಕೊಂಡಿರುವ ಸೂಜಿ ಅಯಃಕಾಂತ ಶಿಲೆಯ ಆಕರ್ಷಣೆಗೆ ಒಳಗಾಗುವುದಿಲ್ಲ. ಆದರೆ ಸೂಜಿಯನ್ನು ತೊಳೆದೊಡನೆಯೆ ಆಕರ್ಷಿಸಲ್ಪಡುವುದು" ಎನ್ನುವನು ದ್ವೈತಿ. ದೇವರು ಅಯಃಕಾಂತ ಶಿಲೆ, ಜೀವಿ ಸೂಜಿ, ಪಾಪಕರ್ಮವೇ ಅದನ್ನು

ಮುತ್ತಿದ ಮಲ. ಜೀವಿ ಪರಿಶುದ್ಧಿಯಾದೊಡನೆಯೆ ಸ್ವಭಾವತಃ ದೇವರ ಆಕರ್ಷಣೆಗೆ ಒಳಗಾಗಿ ಅವನ ಸಮೀಪಕ್ಕೆ ಬರುವುದು. ಪೂರ್ಣಾತ್ಮ ಇಚ್ಛಿಸಿದರೆ ಯಾವ ದೇಹವನ್ನಾದರೂ ಪಡೆಯಬಲ್ಲ. ಇಚ್ಛಿಸಿದರೆ ನೂರು ದೇಹ ಏಕಕಾಲದಲ್ಲಿ ಧರಿಸಬಹುದು. ಇಲ್ಲದಿದ್ದರೆ ಎಲ್ಲವನ್ನು ಸೃಷ್ಟಿಸುವ ಶಕ್ತಿಯನ್ನಲ್ಲದೆ ಉಳಿದ ಅನಂತ ಶಕ್ತಿಯನ್ನೆಲ್ಲ ಗಳಿಸುವನು. ಸೃಷ್ಟಿ ಶಕ್ತಿ ದೇವರೊಬ್ಬನಿಗೆ ಸೇರಿದ್ದು. ಯಾರು ಎಷ್ಟೇ ಪರಿಪೂರ್ಣ ರಾಗಿದ್ದರೂ ಪ್ರಪಂಚ ಪಾಲನಾ ಕೆಲಸವನ್ನು ನಿರ್ವಹಿಸಲಾರರು. ಅದು ದೇವರೊಬ್ಬನಿಗೇ ಸೇರಿದ್ದು. ಎಲ್ಲಾ ಜೀವರೂ ಪೂರ್ಣಾತ್ಮರಾದಾಗ ನಿತ್ಯಸುಖಿಗಳಾಗಿ ಭಗವಂತನೊಡನೆ ಸದಾ ಇರುವರು. ಇದೇ ದ್ವೈತ ಸಿದ್ಧಾಂತ.

ಮತ್ತೊಂದು ಭಾವನೆಯನ್ನು ದ್ವೈತಿಗಳು ಬೋಧಿಸುವರು. "ಇದನ್ನು ಕೊಡು, ಅದನ್ನು ಕೊಡು" ಎಂದು ದೇವರನ್ನು ಬೇಡುವುದನ್ನು ಅವರು ತಿರಸ್ಕರಿಸುವರು. ಹೀಗೆ ಬೇಡಬಾರದೆಂದು ಅವರು ಭಾವಿಸುವರು. ಯಾವುದಾದರೂ ಪ್ರಾಪಂಚಿಕ ವಸ್ತುಗಳನ್ನು ಬೇಡಬೇಕಾದರೆ ಕೆಳಗಿರುವ ದೇವತೆಗಳನ್ನು ಕೇಳಬೇಕು. ದೇವತೆಗಳೊ ದೇವದೂತರೊ ಅಥವಾ ಯಾರಾದರೂ ಸಿದ್ಧರೊ ಇಂತಹವರಿಂದ ಬೇಕಾದರೆ ಇಂತಹ ಪ್ರಾಪಂಚಿಕ ವರವನ್ನು ಬೇಡಬಹುದು. ಪ್ರೀತಿಸುವುದಕ್ಕೆ ಮಾತ್ರ ದೇವರು ಇರುವುದು. "ದೇವರೆ ನನಗೆ ಇದುಕೊಡು ಅದುಕೊಡು" ಎಂದು ಬೇಡುವುದು ಈಶ್ವರ ನಿಂದೆ. ದ್ವೈತಿಗಳ ಪ್ರಕಾರ ಮನುಷ್ಯರಿಗೆ ಏನು ಬೇಕೊ ಅದು ಬೇಗಲೊ ನಿಧಾನವಾಗಿಯೊ ಇತರ ದೇವತೆಗಳನ್ನು ಬೇಡಿದರೆ ದೊರಕೆ ದೊರಕು ವುದು. ಆದರೆ ಅವನಿಗೆ ಮೋಕ್ಷ ದೊರಕಬೇಕಾದರೆ ದೇವರನ್ನೆ ಪೂಜಿಸಬೇಕು.

ವಿಶಿಷ್ಟಾದ್ವೈತಿಗಳಿಂದ ನಿಜವಾದ ವೇದಾಂತ ತತ್ತ್ವ ಪ್ರಾರಂಭ ವಾಗುವುದು. ಅವರು, ಕಾರ್ಯ ಕಾರಣದಿಂದ ಬೇರೆ ಅಲ್ಲ, ಮತ್ತೊಂದು ರೂಪಿನಲ್ಲಿರುವ ಕಾರಣವೆ ಪರಿಣಾಮ ಎನ್ನುವರು. ದೇವರು ಕಾರಣನಾಗಿ ಜಗತ್ತು ಕಾರ್ಯವಾಗಿದ್ದರೆ ಅದು ದೇವರೇ ಆಗಿರಬೇಕು, ಮತ್ತಾವುದೂ ಅಲ್ಲ. ದೇವರೇ ಉಪಾದಾನ ನಿಮಿತ್ತ ಕಾರಣವೆಂದು ಅವರು ಹೊರಡು ವರು. ಅವನೇ ಸೃಷ್ಟಿಕರ್ತ ಪರಿವ್ಯಾಪ್ತವಾದ ಸೃಷ್ಟಿ, ವಸ್ತುವೆಲ್ಲವೂ ಅವನೆ. ನಿಮ್ಮ ಭಾಷೆಯಲ್ಲಿರುವ creation ಎಂಬುದಕ್ಕೆ ಸರಿಯಾದ ಪದ ಸಂಸ್ಕೃತ ಭಾಷೆಯಲ್ಲಿ ಇಲ್ಲ. ಪಾಶ್ಚಾತ್ಯರಲ್ಲಿ ಸೃಷ್ಟಿ ಎಂದರೆ

ಶೂನ್ಯದಿಂದ ಏನೊ ಬಂದಿದೆ ಎಂದು ಭಾವಿಸುವರು. ಆದರೆ ಭಾರತತತ್ತ್ವ ಸಂಪ್ರದಾಯಗಳಾವುವೂ ಹಾಗೆ ನಂಬ ವುದಿಲ್ಲ. ಹಿಂದಿನ ಕಾಲದಲ್ಲಿ ಇಂತಹ ಭಾವನೆ ಇಟ್ಟುಕೊಂಡಿದ್ದ ಕೆಲವರು ಇದ್ದಿರಬಹುದು. ಆದರೆ ಅವರು ಬಹಳ ಬೇಗ ಸೋಲಿಸಲ್ಪಟ್ಟರು. ಈಗ ಇದನ್ನು ನಂಬುವ ಪಂಗಡ ಯಾವುವೂ ನನಗೆ ಗೊತ್ತಿಲ್ಲ. ಸೃಷ್ಟಿ ಎಂದರೆ ಆಗಲೇ ಇರುವ ವಸ್ತು ನಿನಿಂದ ವ್ಯಕ್ತವಾಗುವುದು ಎಂದು ನಮ್ಮ ಅರ್ಥ. ವಿಶಿಷ್ಟಾದ್ವೈತ ಸಂಪ್ರದಾಯಪ್ರಕಾರ ವಿಶ್ವವೆಲ್ಲ ಭಗವಂತನೆ. ಅವನೇ ಈ ವಿಶ್ವದ ದ್ರವ್ಯ. ನಾವು ಉಪನಿಷತ್ತಿನಲ್ಲಿ "ಜೇಡ ತನ್ನ ದೇಹದಿಂದ ತಂತುವನ್ನು ಮಾಡು ವಂತೆ ಇಡೀ ವಿಶ್ವ ಅವನಿಂದ ಬಂದಿದೆ'' ಎಂದು ಓದುವೆವು.

ಪರಿಣಾಮ ಕಾರಣವಾದ ಪುನಃ ಸೃಷ್ಟಿಯಾದರೆ, "ನಿತ್ಯ ಚೈತನ್ಯ ಸ್ವರೂಪನಾದ ದೇವರಿಂದ ಈ ಪ್ರಪಂಚ ಸೃಷ್ಟಿಯಾಗಿದ್ದರೆ, ಇದೇಕೆ ಜಡ ವಾಗಿದೆ, ಚೇತನಹೀನನಾಗಿದೆ? ಕಾರಣ ಪರಿಶುದ್ಧವಾಗಿ ಪರಿಪೂರ್ಣ ವಾಗಿದ್ದರೆ ಪರಿಣಾಮ ಏತಕ್ಕೆ ವಿರೋಧವಾಗಿರುವುದು? ವಿಶಿಷ್ಟಾದ್ವೈತಿ ಗಳು ಇದಕ್ಕೆ ಏನು ಹೇಳುತ್ತಾರೆ? ಅವರದೊಂದು ವಿಶೇಷ ಸಿದ್ಧಾಂತ. ಜೀವ ಜಗತ್ ದೇವರು ಮೂರೂ ಒಂದೇ ಎನ್ನುವರು. ದೇಹ ಆತ್ಮನಂತೆ, ಜೀವ ಪ್ರಕೃತಿ ದೇವರ ದೇಹದಂತೆ. ನನಗೆ ಹೇಗೆ ಒಂದು ದೇಹವಿದೆಯೋ, ಜೀವವಿದೆಯೊ ಹಾಗೆಯೆ ಜೀವಿಗಳಿಂದ ಕೂಡಿದ ವಿಶ್ವವೆಲ್ಲ ದೇವರ ದೇಹ. ದೇವರು ಜೀವಿಯ ಜೀವ. ದೇವರು ಹೀಗೆ ಉಪಾದಾನಕಾರಣ. ದೇಹ ಬದ ಲಾಯಿಸಬಹುದು, ಯುವಕ ಅಥವಾ ವೃದ್ಧನಾಗಿರಬಹುದು, ದುರ್ಬಲಿ ಅಥವಾ ಸಬಲನಾಗಿರಬಹುದು. ಆದರೆ ಇದರಿಂದ ಆತ್ಮನಿಗೇನೂ ಅಪವಾದ ವಿಲ್ಲ. ದೇಹದಮೂಲಕ ವ್ಯಕ್ತವಾಗುತ್ತಿರುವುದೆ ಆ ಪರಾತ್ಪರ ತತ್ತ್ವ. ದೇಹ ಬಂದು ಹೋಗುವುದು ಆದರೆ ಆತ್ಮ ಬದಲಾಯಿಸುವುದಿಲ್ಲ. ಇದರಂತೆಯೆ ಇದೇ ವಿಶ್ವ ದೇವರ ದೇಹ. ಈ ಸೃಷ್ಟಿಯಲ್ಲಿ ಆದು ದೇವರು. ವಿಶ್ವದ ಬದಲಾವಣೆಯಿಂದ ದೇವರಮೇಲೆ ಯಾವ ಬದಲಾವಣೆಯೂ ಆಗುವುದಿಲ್ಲ. ಈ ದ್ರವ್ಯದಿಂದ ದೇವರು ವಿಶ್ವವನ್ನು ಸೃಷ್ಟಿಸುವನು. ಕಲ್ಪದ ಅಂತ್ಯದಲ್ಲಿ ದೇಹ ಸೂಕ್ಷ್ಮವಾಗಿ ಸಂಕುಚಿತವಾಗುವುದು. ಮತ್ತೊಂದು ಕಲ್ಪದ ಪ್ರಾರಂಭದಲ್ಲಿ ಅದು ಪುನಃ ವಿಕಾಸವಾಗುವುದು. ವಿಕಸನದಿಂದ ವೈವಿಧ್ಯತೆ ಜಗತ್ತಿನಲ್ಲಿ ಜನಿಸುವುದು.

ದ್ವೈತಿಗಳು ವಿಶಿಷ್ಟಾದ್ವೈತಿಗಳಿಬ್ಬರೂ, ಆತ್ಮ ಸ್ವಭಾವತಃ ಪರಿಶುದ್ಧ ಆದರೆ ತನ್ನ ಕರ್ಮದಿಂದ ಅಶುದ್ಧವಾಗುವುದೆಂದು ನಂಬುವರು. ವಿಶಿಷ್ಟಾ

ದ್ವೈತಿಗಳು ದ್ವೈತಿಗಳಿಗಿಂತ ಸುಂದರವಾಗಿ ವಿವರಿಸುವರು. ಆತ್ಮನ ಪರಿಪೂರ್ಣತೆ ಮತ್ತು ಪರಿಶುದ್ಧತೆ ಸಂಕೋಚವಾಗಿ ಪುನಃ ವ್ಯಕ್ತವಾಗು ವುದು ಎನ್ನುವರು. ನಾವು ಈಗ ಆತ್ಮನ ನೈಜಗುಣವಾದ ಜ್ಞಾನ ಪವಿತ್ರತೆ ಮತ್ತು ಶಕ್ತಿಯನ್ನು ಪುನಃ ವ್ಯಕ್ತಗೊಳಿಸಲು ಯತ್ನಿಸುತ್ತಿರುವೆವು. ಆತ್ಮ ನಿಗೆ ಹಲವು ಗುಣಗಳಿವೆ. ಆದರೆ ಅನಂತ ಶಕ್ತಿ ಮತ್ತು ಅನಂತ ಜ್ಞಾನವಿಲ್ಲ ಪ್ರತಿಯೊಂದು ಹೀನಕರ್ಮವೂ ಆತ್ಮನನ್ನು ಸಂಕೋಚಮಾಡುವುದು. ಪ್ರತಿಯೊಂದು ಸತ್ಕರ್ಮವೂ ವಿಕಾಸಮಾಡುವುದು. ಈ ಆತ್ಮಗಳೆಲ್ಲ ದೇವರ ಅಂಗ. "ಅಗ್ನಿಕುಂಡದಿಂದ ಅದರ ಸ್ವಭಾವದಂತೆಯೆ ಇರುವ ಸಹಸ್ರಾರು ಕಿಡಿಗಳೇಳುವಂತೆ ಅನಂತ ಬ್ರಹ್ಮನಿಂದ ಈ ಜೀವಾತ್ಮಗಳು ಬಂದಿವೆ." ಪ್ರತಿಯೊಂದರ ಗುರಿಯೂ ಒಂದೆ. ವಿಶಿಷ್ಟಾದ್ವೈತಿಗಳ ದೇವರು ಕೂಡ ಸಗುಣ. ಅನಂತಕಲ್ಯಾಣಗುಣಗಣ ಅವನು. ಅವನು ಪ್ರಪಂಚ ದಲ್ಲೆಲ್ಲಾ ಓತಪ್ರೋತನಾಗಿರುವನು. ಅವನು ಎಲ್ಲದರಲ್ಲಿಯೂ, ಎಲ್ಲಾ ಕಡೆಯಲ್ಲಿಯೂ ಅಂತರ್ಯಾಮಿಯಾಗಿರುವನು. ಶಾಸ್ತ್ರ ದೇವರನ್ನು ಸರ್ವ ವ್ಯಾಪಿ ಎಂದರೆ ದೇವರು ಸರ್ವದಲ್ಲಿಯೂ ಅಂತರ್ಯಾಮಿ ಎಂದು ಅರ್ಥ. ದೇವರು ಗೋಡೆ ಆಗಿರುವನು ಎಂದು ಅಲ್ಲ, ದೇವರು ಗೋಡೆಯಲ್ಲಿರುವನು ಎಂದು ಅರ್ಥ. ಅವನಿಲ್ಲದ ಕಣವೊಂದೂ ಜಗತ್ತಿನಲ್ಲಿ ಇಲ್ಲ. ಜೀವಿಗಳೆಲ್ಲ ಸಾಂತ. ಅವು ಸರ್ವವ್ಯಾಪಿಯಲ್ಲ. ಅವರ ಶಕ್ತಿವಿಕಾಸದಿಂದ ಅವರು ಪರಿ ಪೂರ್ಣರಾದರೆ ಅವರಿಗಿನ್ನು ಜನನಮರಣಗಳಿಲ್ಲ. ಅವರು ದೇವರೊಂದಿಗೆ ಎಂದೆಂದಿಗೂ ಇರುವರು.

ನಾವೀಗ ಅದ್ವೈತಕ್ಕೆ ಬರುವೆವು. ಇದೇ ತತ್ತ್ವ ಮತ್ತು ಧರ್ಮದ ಚರಮ ಸೀಮೆ. ಮತ್ತಾವ ದೇಶ ಮತ್ತು ಕಾಲವೂ ಇಂತಹ ಮಾನವ ಕೋಟಿಯ ಶ್ರೇಷ್ಠ ಭಾವನಾಕುಸುಮವನ್ನು ಸೃಷ್ಟಿಸಿಲ್ಲ. ಮಾನವನ ಯುಕ್ತಿ ತನ್ನ ಪರಾಕಾಷ್ಠತೆಯನ್ನು ಮುಟ್ಟುವುದು ಇಲ್ಲಿ. ಅಭೇದ್ಯ ವಾದ ರಹಸ್ಯವನ್ನು ಕೂಡ ಭೇದಿಸಿಕೊಂಡು ಹೋಗುವುದು. ಇದೇ ಅದ್ವೈತ ವೇದಾಂತ. ಇದು ಬಹಳ ಸೂಕ್ಷ್ಮ, ಅತಿ ಗಹನವಾದುದರಿಂದ ಜನಸಾಮಾನ್ಯರ ಧರ್ಮವಾಗಲಾರದು. ಎಲ್ಲಿ ಕಳೆದ ಮೂರುಸಾವಿರ ವರ್ಷಗಳಿಂದ ಪರಮಾಧಿಪತ್ಯದಲ್ಲಿ ನಿರ್ವಿವಾದವಾಗಿ ರಾರಾಜಿಸುತ್ತಿರುವುದೊ ಅಂತಹ ಅದ್ವೈತ ತತ್ತ್ವದ ತವರೂರಾದ ಭರತ ಖಂಡದಲ್ಲೆ ಜನಸಾಮಾ ನ್ಯರಿಗೆ ಹಂಚಲು ಸಾಧ್ಯವಾಗಲಿಲ್ಲ. ನಾವು ಮುಂದುವರಿದಂತೆ ಅದ್ವೈತ ವನ್ನು ಅರ್ಥಮಾಡಿಕೊಳ್ಳಬೇಕಾದರೆ ಅತಿ ಮೇಧಾವಂತ ಸ್ತ್ರೀಪುರುಷರು

ಕೂಡ ಅತಿಕಷ್ಟವೆನ್ನುವುದು ಗೊತ್ತಾಗುವುದು. ನಾವಷ್ಟು ದುರ್ಬಲರಾಗಿರುವೆವು ದೀನರಾಗಿರುವೆವು. ನಮ್ಮ ಸಮಾನ ಪೌರುಷವಂತರಿಲ್ಲ ಎಂದು ಹೆಮ್ಮೆ ಕೊಚ್ಚಿಕೊಳ್ಳಬಹುದು. ಆದರೂ ಸ್ವಾಭಾವಿಕವಾಗಿ ನಮಗೆ ಇತರರ ಆಸರೆ ಬೇಕು. ನಾವು ಸಣ್ಣ ದುರ್ಬಲ ಸಸಿ. ಯಾವಾಗಲೂ ಆಸರೆ ಬೇಕು. "ಸುಖವಾದ ಧರ್ಮ" ಕೊಡಿ ಎಂದು ಎಷ್ಟೋವೇಳೆ ಜನ ನನ್ನನ್ನು ಕೇಳಿರುವರು! ಸತ್ಯವನ್ನು ಕೇಳಿರುವವರು ವಿರಳ, ಅದನ್ನು ತಿಳಿದುಕೊಳ್ಳುವವರು ಮತ್ತೂ ವಿರಳ. ಅದನ್ನು ಎಲ್ಲಾ ವಿಧದಲ್ಲಿಯೂ ಅನುಷ್ಠಾನಮಾಡತಕ್ಕವರು ಅತ್ಯಲ್ಪಮಂದಿ ಮಾತ್ರ. ಇದು ಅವರ ತಪ್ಪಲ್ಲ; ಅವರ ಮೆದುಳು ದುರ್ಬಲವಾಗಿದೆ. ಯಾವ ಹೊಸಭಾವನೆಯಾಗಲಿ ಅದು ಉತ್ತಮಭಾವನಯಾದರೆ ಮನಸ್ಸಿನಲ್ಲಿ ಒಂದು ಅವ್ಯವಸ್ಥೆಯಾಗುವುದು. ಅದು ಮೆದುಳಿನಲ್ಲಿ ಹೊಸದೊಂದು ಮಾರ್ಗವನ್ನು ಮಾಡಿಕೊಂಡಂತೆ ಇರುವುದು. ಇದರಿಂದ ಅವಯವ ಅಸ್ವಸ್ಥವಾಗುವುದು. ಜನ ತಮ್ಮ ಸ್ವಾರ್ಥ್ಯವನ್ನು ಕಳೆದುಕೊಳ್ಳುವರು. ಅವರು ಒಂದು ವಾತಾವರಣದಲ್ಲಿ ಬೆಳೆದಿರುವರು. ಹಲವು ಹಿಂದಿನ ಮೂಢನಂಬಿಕೆ, ಪೂರ್ವಜನರ ಮೂಢನಂಬಿಕೆ, ಕೋಮಿನ ಮೂಢನಂಬಿಕೆ, ನಗರ ದೇಶಗಳ ಮೂಢನಂಬಿಕೆಯಿಂದ ಪಾರಾಗಿರುವರು. ಇದೆಲ್ಲಕ್ಕಿಂತ ಪ್ರತಿಯೊಬ್ಬನಲ್ಲಿಯೂ ಆಜನ್ಮ ಮೂಢನಂಬಿಕೆಯ ರಾಶಿ ಎಷ್ಟೋ ಇದೆ. ಅದರಿಂದಲೂ ಪಾರಾಗಬೇಕಾಗಿದೆ. ಆದರೂ ಪ್ರಪಂಚದಲ್ಲಿ ಕೆಲವರು ಧೀರರಿರುವರು, ಧೈರ್ಯವಾಗಿ ಸತ್ಯವನ್ನು ಆಲೋಚಿಸಿರುವರು, ಧೈರ್ಯವಾಗಿ ಸ್ವೀಕರಿಸುವರು, ಕೊನೆಯವರೆಗೆ ಧೈರ್ಯವಾಗಿ ಅನುಸರಿಸುವರು.

ಅದ್ವೈತಿ ಸಾರುವುದೇನು? ದೇವರೊಬ್ಬನು ಇದ್ದರೆ ಅವನು ಜಗತ್ತಿನ ಉಪಾದಾನ ಮತ್ತು ನಿಮಿತ್ತ ಕಾರಣ ಎರಡೂ ಆಗಬೇಕು ಎನ್ನುವನು. ಅವನು ಸೃಷ್ಟಿಕರ್ತ ಮಾತ್ರ ಅಲ್ಲ, ಸೃಷ್ಟಿಯಾದವನೂ ಕೂಡ ಅವನೆ ಆಗಿರಬೇಕು. ಅವನೇ ಜಗತ್ತಾಗಬೇಕು, ಇದು ಹೇಗೆ ಸಾಧ್ಯ? ಅಜ್ಞಾನಿಗಳೆಲ್ಲ ಯಾವುದನ್ನು ಪ್ರಪಂಚದಂತೆ ನೋಡುತ್ತಿರುವರೊ ಅದು ನಿಜವಾಗಿಯೂ ಇಲ್ಲ. ನಾನು ನೀವು ಮತ್ತು ನೋಡುವ ಸಕಲವೂ ಹಾಗಾದರೆ ಏನು? ಇದು ಕೇವಲ ಮನೋಭ್ರಾಂತಿ. ಇರುವುದೊಂದೆ ಅನಂತ ಶಿವಮಯವಾಗಿರುವುದು. ಆ ಒಂದು ಅಸ್ತಿತ್ವದಲ್ಲಿ ನಾವು ಈ ಕನಸನ್ನೆಲ್ಲಾ ಕಾಣುವೆವು. ಅದೇ ಆತ್ಮ, ಎಲ್ಲಕ್ಕೂ ಅತೀತವಾಗಿದೆ. ಜ್ಞೇಯ ಜ್ಞಾನಗಳಿಗೆ ಅತೀತವಾಗಿದೆ. ಅದರ ಮೂಲಕ ನಾವು

ಜಗತ್ತನ್ನು ನೋಡುವೆವು. ಇದೊಂದೆ ಸತ್ಯ. ಇದೇ ಮೇಜು, ನನ್ನೆದುರಿಗಿರುವ ಪ್ರೇಕ್ಷಕರು ಗೋಡೆ. ನಾಮರೂಪಗಳನ್ನು ಕಳೆದರೆ ಉಳಿವುದೆಲ್ಲವೂ ಆತ್ಮ. ಮೇಜಿನ ನಾಮ ರೂಪ ಕಳೆದರೆ ಏನು ಉಳಿಯುವುದೊ ಅದೇ ಸತ್ಯ. ವೇದಾಂತಿಗಳು ಅದನ್ನು ಅವನು ಅಥವಾ ಅವಳು ಎಂದು ಕರೆಯುವುದಿಲ್ಲ. ಇವೆಲ್ಲ ಕಲ್ಪನೆ, ಮನೋಭ್ರಾಂತಿ. ಆತ್ಮನಲ್ಲಿ ಲಿಂಗ ಭೇದವಿಲ್ಲ. ಮೃಗಗಳಂತೆ ಇರುವ ಭ್ರಾಂತರು ಪುರುಷ ಸ್ತ್ರೀಯರನ್ನು ನೋಡುವರು. ಆದರೆ ಜೀವಂತರಾಗಿರುವವರು ಪುರುಷರು ಸ್ತ್ರೀಯರನ್ನು ನೋಡುವುದಿಲ್ಲ. ಯಾರೂ ಎಲ್ಲಕ್ಕೂ ಅತೀತರಾಗಿರುವರೊ ಅವರಿಗೆ ಲಿಂಗಭೇದ ಭಾವನೆ ಹೇಗೆ ಸಾಧ್ಯ. ಪ್ರತಿಯೊಬ್ಬರೂ ಪ್ರತಿಯೊಂದು ವಸ್ತುವೂ ಆತ್ಮ ಲಿಂಗಾತೀತ ಪರಿಶುದ್ಧ ನಿತ್ಯಮುಕ್ತ. ದ್ರವ್ಯವೆ ನಾಮ ರೂಪ ದೇಹ ಈ ವ್ಯತ್ಯಾಸಕ್ಕೆಲ್ಲಾ ಕಾರಣ. ಒಂದೆ, ಎರಡಿಲ್ಲ, ಎಲ್ಲೆಡೆಯಲ್ಲಿಯೂ ಏಕವೆ. ಇವೆಲ್ಲವೂ ಸೃಷ್ಟಿಯಾಗುವುವು. ನೋಡುವವನನ್ನು ತಿಳಿಯುವುದು ಹೇಗೆ? ಅದನ್ನು ತಿಳಿದುಕೊಳ್ಳುವುದಕ್ಕೆ ಆಗುವುದಿಲ್ಲ. ನಿಮ್ಮ ಆತ್ಮನನ್ನು ನೀವು ಹೇಗೆ ಬಲ್ಲಿರಿ? ನೀವು ಬೇಕಾದರೆ ಆಲೋಚಿಸಬಹುದು. ಈ ವಿಶ್ವವೆಲ್ಲ ಆ ಪರಮಾತ್ಮನ ಪ್ರತಿಬಿಂಬ (Reflection). ಒಳ್ಳೆ ಕೆಟ್ಟ ಪ್ರತಿಬಿಂಬ ಕಣ್ಣಿನಮೇಲೆ ಬಿದ್ದಾಗ ಒಳ್ಳೆ ಕೆಟ್ಟ ಪ್ರತಿಬಿಂಬಗಳು ವ್ಯಕ್ತವಾಗುವುವು. ಕೊಲೆಪಾತಕನಲ್ಲಿ ಕೆಟ್ಟದ್ದು ಪ್ರತಿಬಿಂಬಕ ಆತ್ಮನಲ್ಲ. ಸಾಧುವಿನಲ್ಲಿ ಪ್ರತಿಬಿಂಬ ಒಳ್ಳೆಯದು. ಆತ್ಮ ಸ್ವಭಾವತಃ ಪರಿಶುದ್ಧ. ವಿಶ್ವದ ಏಕಮಾತ್ರ ಸತ್ಯವೆ ಕ್ಷುದ್ರತಮ ಕೀಟದಿಂದ ಶ್ರೇಷ್ಠತಮ ಪುಣ್ಯಾತ್ಮನ ವರೆಗೆ ಪ್ರತಿಬಿಂಬಿಸುತ್ತಿರುವುದು. ಈ ವಿಶ್ವವೆಲ್ಲ ಏಕ ಒಂದು; ಅಸ್ತಿತ್ವ ದೈಹಿಕ ಮಾನಸಿಕ ನೈತಿಕ ಆಧ್ಯಾತ್ಮಿಕವಾಗಿ ಒಂದು. ಹಲವು ಆಕಾರಗಳಲ್ಲಿ ನಾವು ಏಕವನ್ನು ನೋಡುತ್ತಿರುವೆವು. ಈ ಚಿತ್ರಗಳನ್ನೆಲ್ಲ ಅದರ ಮೇಲೆ ಚಿತ್ರಿಸುತ್ತಿರುವೆವು. ಯಾರು ಮನುಷ್ಯನ ಸ್ಥಿತಿಗೆ ಬಂದಿರುವನೊ ಅವನಿಗೆ ಮಾನವ ಪ್ರಪಂಚವಂತೆ ತೋರುವುದು. ಯಾರು ಉತ್ತಮ ಸ್ಥಿತಿಯಲ್ಲಿರುವರೊ ಅವರಿಗೆ ಇದು ಸ್ವರ್ಗವಾಗಿ ಭಾಸವಾಗಬಹುದು. ವಿಶ್ವದಲ್ಲಿರುವುದು ಒಂದೆ ಆತ್ಮ. ಎರಡಿಲ್ಲ. ಅದು ಬರುವುದೂ ಇಲ್ಲ, ಹೋಗುವುದೂ ಇಲ್ಲ. ಅದು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಪುನರ್ಜನ್ಮ ತಾಳುವುದೂ ಇಲ್ಲ. ಅದು ಸಾಯುವುದು ಹೇಗೆ? ಅದು ಹೋಗುವುದೆಲ್ಲಿಗೆ? ಸ್ವರ್ಗ ಮರ್ತ್ಯ ಲೋಕಗಳೆಲ್ಲ ವೃಥಾಭ್ರಾಂತಿ. ಅವಿಲ್ಲ, ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ.

ನಾನು ವಿಶ್ವವ್ಯಾಪಿಯಾದ ಅನಂತಾತ್ಮ, ಹೋಗುವುದೆಲ್ಲಿಗೆ? ನಾನು ಆಗಲೆ ಎಲ್ಲಿ ಇಲ್ಲ? ನಾನು ಪ್ರಕೃತಿಗ್ರಂಥವನ್ನು ಓದುತ್ತಿರುವೆ. ಜೀವನದ ಒಂದು ಕನಸಾದ ಮೇಲೆ ಮತ್ತೊಂದು ಕನಾಸಾಗಿ ಹೋಗುತ್ತಿದೆ. ಜೀವನದ ಒಂದು ಪುಟ ತೆಗೆದರೆ ಮತ್ತೊಂದು ಕನಸು ಬರುವುದು ಅದೂ ಉರುಳುರುಳಿ ಹೋಗುವುದು. "ನಾನು ಓದಿಯಾದ ಮೇಲೆ ಪುಸ್ತಕವನ್ನು ಬಿಟ್ಟು ಸಾಕ್ಷಿಯಾಗಿ ನಿಲ್ಲುವೆನು. ಆಗ ಎಲ್ಲಾ ಸಮಾಪ್ತವಾಗುವುದು. ಅದ್ವೈತ ಬೋಧಿಸುವುದೇನು? ಇದುವರೆಗೆ ಇದ್ದ ಮತ್ತು ಇರಬಲ್ಲ ದೇವರನ್ನು ಪದಚ್ಯುತರನ್ನಾಗಿ ಮಾಡಿ ಅಲ್ಲಿ ಮಾನವನ ಆತ್ಮವನ್ನು ಪ್ರತಿಷ್ಠಿಸುವುದು. ಸೂರ್ಯ ಚಂದ್ರರಿಗಿಂತ, ಸ್ವರ್ಗಲೋಕಗಳಿಗಿಂತ, ಮಹಾ ವಿಶ್ವಕ್ಕಿಂತ ಮಿಗಿಲಾಗಿರುವನು ಅವನು. ಮನುಷ್ಯನಂತೆ ತೋರುವ ಆತ್ಮನ ಮಹಾತ್ಮ್ಯೆ ಸರ್ವಗ್ರಂಥಶಾಸ್ತ್ರ ವಿಜ್ಞಾನಕ್ಕಿಂತ ಕಲ್ಪನಾತೀತವಾದುದು. ಇಂತಹ ಮಹಿಮಾಮಯ ದೇವರು ಎಂದಿಗೂ ಇರಲಿಲ್ಲ. ಹಿಂದೆ ಇದ್ದ ಈಗ ಇರುವ ಮುಂದೆ ಇರಬಲ್ಲ ಏಕ ಮಾತ್ರ ದೇವನು ಅವನೊಬ್ಬನೆ. ನಾನು ನನ್ನನ್ನು ಅಲ್ಲದೆ ಮತ್ತಾವುದನ್ನೂ ಆರಾಧಿಸಬೇಕಾಗಿಲ್ಲ. "ನಾನು ನನ್ನನ್ನೇ ಪೂಜೆಮಾಡಿಕೊಳ್ಳುವೆನು" ಎನ್ನುವನು ಅದ್ವೈತಿ. ನಾನಾರಿಗೆ ಬಾಗುವುದು? ಆತ್ಮನಿಗೆ ನಮಸ್ಕಾರ. ನಾನು ಸಹಾಯಕ್ಕೆ ಯಾರಹತ್ತಿರ ಹೋಗುವುದು? ವಿಶ್ವದ ಅನಂತ್ಮಾತನಾದ ನನಗೆ ಯಾರು ಸಹಾಯಮಾಡಬಲ್ಲರು. ಇವೆಲ್ಲ ಕನಸು, ವ್ಯರ್ಥಭ್ರಾಂತಿ. ಯಾರು ಮತ್ತೊಬ್ಬರಿಗೆ ಸಹಾಯ ಮಾಡಿದರು? ಯಾರೂ ಇಲ್ಲ. ಒಬ್ಬ ದುರ್ಬಲ ದ್ವೈತಿ ಎಲ್ಲೊ ಮುಗಿಲಾಚೆ ಇರುವ ಭಗವಂತನ ಸಹಾಯಕ್ಕಾಗಿ ಕಂಬನಿಗರೆದು ಪ್ರಾರ್ಥಿಸುವುದನ್ನು ನೀವು ನೋಡಿದರೆ ಆ ಆಕಾಶವೂ ತನ್ನಲ್ಲಿದೆ ಎಂಬುದು ಅವನಿಗೆ ಗೊತ್ತಿಲ್ಲ. ಅವನಿಗೆ ಮೇಲಿನಿಂದ ಸಹಾಯಬೇಕು, ಸಹಾಯ ಬರುವುದು. ಸಹಾಯ ಬಂದೊದಗುವುದನ್ನು ನಾವು ನೋಡುವೆವು. ಆದರೆ ಅದು ತನ್ನ ಅಂತರಾಳದಿಂದಲೆ ಬರುವುದು. ಅದು ಹೊರಗಿನಿಂದ ಬರುತ್ತಿದೆ ಎಂದು ತಪ್ಪುತಿಳಿದುಕೊಳ್ಳುವನು. ಪುನಃ ಅದೇ ಶಬ್ದವನ್ನು ಕೇಳುವನು. ಪುನಃ ಎದ್ದು ಬಾಗಿಲನ್ನು ತೆರೆಯುವನು. ಯಾರೂ ಕಾಣುವುದಿಲ್ಲ. ಕೊನೆಗೆ ಅದು ತನ್ನ ಹೃದಯದ ಶಬ್ದವೆಂದು, ಅದು ಹೊರಗೆ ಬಾಗಿಲ ಸದ್ದು ಎಂದು ತಪ್ಪುತಿಳಿದುಕೊಂಡಿದ್ದನೆಂದು ಗೊತ್ತಾಗುವುದು. ಹೀಗೆಯೆ ಮನುಷ್ಯ ತನ್ನಿಂದ ಹೊರಗೆ ಇರುವ ದೇವರನ್ನು ಹುಡುಕಿ ಹುಡುಕಿ ನಿರಾಶನಾಗಿ

ತಾನು ಹೊರಟ ಸ್ಥಳಕ್ಕೆ ಎಂದರೆ ಆತ್ಮನಡಿಗೆ ಪುನಃ ಬರುವನು. ಯಾವ ದೇವರನ್ನು ಅದ್ರಿಕಣಿವೆಯಲ್ಲಿ ಅರಸುತ್ತಿದ್ದನೊ, ಯಾವ ದೇವರು ಸ್ವರ್ಗ ದಲ್ಲಿ ಕುಳಿತು ಮರ್ತ್ಯ ಲೋಕವನ್ನು ಆಳುತ್ತಿದ್ದನೆಂದು ಊಹಿಸಿದ್ದನೊ ಅವನೆ ತನ್ನಾತ್ಮವೆಂದು ಗೊತ್ತಾಗುವುದು. ನಾನೇ ಅವನು ಅವನೆ ನಾನು. ನಾನಲ್ಲದೆ ಅನ್ಯರು ದೇವರಾಗಿರಲಿಲ್ಲ. ಈ ಕ್ಷುದ್ರ ಅಹಂಕಾರ ಎಂದೂ ಇರಲಿಲ್ಲ.

ಆದರೂ ಈ ಪೂರ್ಣಾತ್ಮ ಹೇಗೆ ಭ್ರಾಂತನಾದನು ? ಅವನೆಂದಿಗೂ ಕನಸನ್ನು ಕಂಡಿರಲಿಲ್ಲ. ಸತ್ಯವೆಂದಿಗೂ ಕನಸಾಗುವುದಿಲ್ಲ. ಈ ಭ್ರಾಂತಿ ಯಿಂದ ಮಾತ್ರ ಜನಿಸುವುದು. ಸತ್ಯ ನೋಡಿದೊಡನೆಯೆ ಮಿಥ್ಯ ಪಲಾಯನವಾಗುವುದು. ಭ್ರಾಂತಿಗೆ ಭ್ರಾಂತಿ ಆಸರೆ ; ಅದೆಂದಿಗೂ ದೇವರು ಸತ್ಯ ಆತ್ಮನ ಮೇಲೆ ಇರಲಿಲ್ಲ. ನೀನು ಎಂದಿಗೂ ಭ್ರಾಂತಿ ಯಲ್ಲಿರಲಿಲ್ಲ. ಭ್ರಾಂತಿ ನಿನ್ನಲ್ಲಿರುವುದು, ನಿನ್ನೆದುರಿಗೆ ಇರುವುದು. ಮುಗಿಲೊಂದು ಇಲ್ಲಿದೆ. ಇನ್ನೊಂದು ಬಂದು ಅದನ್ನು ತಳ್ಳಿ ಅದರ ಸ್ಥಳ ವನ್ನು ಆಕ್ರಮಿಸುವುದು. ಪುನಃ ಮತ್ತೊಂದು ಮುಗಿಲು ಹಾಗೆಯೆ ಮಾಡುವುದು. ನೀಲಿ ಆಗಸದಲ್ಲಿ ಹಲವು ಬಣ್ಣದ ಮುಗಿಲುಗಳು ಬಂದು ಕೆಲವು ಕಾಲವಿದ್ದು ಮಾಯವಾಗಿ ಪುನಃ ಅದೇ ನೀಲಿಯಾಗಸ ಕಾಣುವಂತೆ ನೀನೂ ನಿತ್ಯಮುಕ್ತ, ನಿತ್ಯಶುದ್ಧ, ನೀನೆ ಸಾಕ್ಷಾತ್ ವಿಶ್ವದ ದೇವರು. ಎಂದಿಗೂ ಎರಡಿರಲಿಲ್ಲ. ಒಂದೇ ಒಂದು. ನಾನು ಮತ್ತು ನೀನು ಎನ್ನುವುದು ಭ್ರಾಂತಿ. ಕೇವಲ "ನಾನು". ಎನ್ನಿ ಕೋಟ್ಯಂತರ ವದನಗಳ ಮೂಲಕ ಅಹಾರ ಸೇವಿಸುತ್ತಿರುವನು ನಾನು. ನನಗೆ ಹೇಗೆ ಹಸಿವಾಗುವುದು ? ಅನಂತ ಕರಗಳ ಮೂಲಕ ಕೆಲಸಮಾಡುತ್ತಿರುವವನು ನಾನು. ಹೇಗೆ ಅಕರ್ಮಿಯಾಗಬಲ್ಲೆ ? ನಾನೇ ವಿಶ್ವದ ಬಾಳನೆಲ್ಲ ಬಾಳುತ್ತಿರುವುದು. ನಾನು ಎಲ್ಲಾ ಜನನ ಮರಣಗಳಿಗೆ ಅತೀತ. ನಾನು ಸ್ವಾತಂತ್ರ್ಯವನ್ನು ಅರಸುವುದೆಲ್ಲಿ? ನಾನೇ ಸ್ವಭಾವತಃ ಮುಕ್ತ. ವಿಶ್ವಾ ಧಿಪತಿಯಾದ ನನ್ನನ್ನು ಬಂಧಿಸುವವರಾರು ? ವಿಶ್ವದ ಏಕಮಾತ್ರ ಸತ್ಯ ವಾದ ನನ್ನ ಮಹಿಮೆಯನ್ನು ವಿವರಿಸುವ ಕಿರಿಯ ಭೂಪಟಗಳು ವಿಶ್ವ ಶಾಸ್ತ್ರಗಳು—ಈ ಶಾಸ್ತ್ರಗಳಿಂದ ನನಗೇನು ? ವೇದಾಂತಿ ಹೇಳುವುದು ಹೀಗೆ.

"ಸತ್ಯವನ್ನು ಅರಿ, ತಕ್ಷಣ ಮುಕ್ತನಾಗು" ಆಗ ಅಜ್ಞಾನವೆಲ್ಲ ಮಾಯವಾಗುವುದು. ಮಾನವ ತಾನೆ ವಿಶ್ವಾತ್ಮನೆಂದು ಅರಿತಾಗ, ಭಿನ್ನ

ತೆಯೆಲ್ಲ ಮಾಯವಾದಾಗ, ಸ್ತ್ರೀ ಪುರುಷ, ದೇವದೇವತೆಗಳು, ಪ್ರಾಣಿ ಸತ್ಯರಾಶಿಗಳೆಲ್ಲ ಇಡೀ ವಿಶ್ವವೆಲ್ಲ ಆ ಒಂದರಲ್ಲಿ ತಲ್ಲೀನವಾದಾಗ ಅಂಜಿಕೆಯೆಲ್ಲ ಮಾಯವಾಗುವುದು. ನನಗೆ ನಾನೆ ತೊಂದರೆಕೊಟ್ಟುಕೊಳ್ಳುವೆನೆ ? ಕೊಂದುಕೊಳ್ಳುವೆನೆ ? ಗಾಯಮಾಡಿ ಕೊಳ್ಳುವೆನೆ ? ಅಂಜುವುದಾರಿಗೆ ? ನಿನಗೆ ನೀನೆ ಅಂಜುವೆಯ ? ಆಗ ದುಃಖ ನಾಶವಾಗುವುದು ನಾನೇ ವಿಶ್ವದ ಏಕಮಾತ್ರ ಅಸ್ತಿತ್ವ. ಆಗ ಅ ಸೂ ಯೆ ಯೆ ಲ್ಲ ಮಾಯವಾಗುವುದು. ಯಾರಿಗೆ ಅಸೂಯೆ ಪಡುವುದು ? ನನ್ನೊಡನೆಯೆ ? ಆಗ ಹೀನಭಾವನೆಗಳೆಲ್ಲ ಮಾಯವಾಗುವುವು. ಯಾರೊಂದಿಗೆ ನಾನು ಹೀನೆಭಾವನೆ ಇಟ್ಟುಕೊಳ್ಳಲಿ ? ನನ್ನೊಡನೆಯೆ ? ವಿಶ್ವದಲ್ಲಿ ನಾನಲ್ಲದೆ ಅನ್ಯರಿಲ್ಲ. ಇದು ಜ್ಞಾನಾರ್ಜನೆಗೆ ಏಕ ಮಾತ್ರಮಾರ್ಗ ಎನ್ನುವನು ವೇದಾಂತಿ. ವೈವಿಧ್ಯತೆಯನ್ನು ನಾಶಮಾಡಿ. “ ಬಹುತ್ವದಲ್ಲಿ ಯಾರು ಏಕವನ್ನು ನೋಡುವರೊ, ಅಚೇತನದಲ್ಲಿ ಯಾರು ಚೇತನವನ್ನು ನೋಡುವರೊ, ಅನಿತ್ಯದಲ್ಲಿ ಯಾರು ನಿತ್ಯವನ್ನು ನೋಡುವರೊ ಅವನಿಗೆ ಮಾತ್ರ ಶಾಶ್ವತ ಶಾಂತಿ ಇತರರಿಗಲ್ಲ.”

ಭಾರತ ದರ್ಶನ ದೇವರ ವಿಷಯದಲ್ಲಿ ಸಾರಿದ ಮುಖ್ಯ ಮೂರುಭಾವನೆಗಳು ಇವು. ಹೊರಗಿರುವ ಸಾಕಾರದೇವರಿಂದ ಪ್ರಾರಂಭವಾದುದನ್ನು ನೋಡಿದೆವು. ಬಾಹ್ಯದಿಂದ ವಿಶ್ವವ್ಯಾಪಿಯಾದ ಅಂತರಾತ್ಮನಿಗೆ ಬಂದಿತು. ಆತ್ಮನೆ ಪರಮಾತ್ಮ, ಅವನೆ ವಿಶ್ವದ ಆವಿರ್ಭಾವನೆಗಳಿಗೆಲ್ಲ ಮೂಲ ಎಂಬುದರಲ್ಲಿ ಪರ್ಯವಸಾನವಾಯಿತು. ವೇದಗಳ ಕೊನೆಯ ಮಾತಿದು. ದ್ವೈತದಿಂದ ಪ್ರಾರಂಭವಾಗಿ, ವಿಶಿಷ್ಟಾದ್ವೈತದ ಮೂಲಕ ಹೋಗಿ ಅದ್ವೈತದಲ್ಲಿ ಪರ್ಯವಸಾನವಾಗುವುದು. ಪ್ರಪಂಚದಲ್ಲಿ ಕೊನೆಮೆಟ್ಟಲಿಗೆ ಬರುವವರು, ಅದನ್ನು ನಂಬುವವರು ಕೂಡ ವಿರಳ, ಅದನ್ನು ಅನುಷ್ಠಾನಕ್ಕೆ ತರುವವರು ಅದಕ್ಕೂ ವಿರಳ ಎಂಬುದು ಅವರಿಗೆ ಗೊತ್ತಿದೆ. ಆದರೂ ಅಲ್ಲಿಮಾತ್ರ ಪ್ರಪಂಚದ ಧರ್ಮ ನೀತಿ ಆಧ್ಯಾತ್ಮಿಕತೆಗೆಲ್ಲ ವಿವರಣೆ ದೊರಕುವುದು. ಇತರರಿಗೆ ಉಪಕಾರಮಾಡಿ ಎಂದು ಎಲ್ಲರೂ ಏತಕ್ಕೆ ಹೇಳುವರು, ಇದಕ್ಕೆ ಕಾರಣವೇನು? ಜಗದ ಮಹಾಪುರುಷರೆಲ್ಲ ವಿಶ್ವದಸಹೋದರತ್ವವನ್ನು, ಅತಿ ಶ್ರೇಷ್ಠರು ಇಡೀಜೀವನದ ಸಹೋದರತ್ವವನ್ನು ಏತಕ್ಕೆ ಬೋಧಿಸುವರು ? ಅವರಿಗೆ ಗೊತ್ತಿರಲಿ, ಗೊತ್ತಿಲ್ಲದೆ ಇರಲಿ ಅವರ ವಿಚಾರ, ಸ್ವಂತ ಮೂಢ ನಂಬಿಕೆಗಳ ಮೂಲಕ ಆತ್ಮನ ಪರಂಜ್ಯೋತಿ ವೈವಿಧ್ಯತೆಯನ್ನೆಲ್ಲ ಅಲ್ಲಗಳೆದು ಇಡೀ ವಿಶ್ವ ಏಕವೆಂದು ಸಾರುತ್ತಿತ್ತು.

ಕೊನೆಯಬೋಧನೆ ನಮಗೆ ವಿಶ್ವವನ್ನು ಕೊಟ್ಟಿತು. ಇಂದ್ರಿಯದ ಮೂಲಕ ಅವನ್ನು ದ್ರವ್ಯದಂತೆ ನೋಡುವೆನು, ಬುದ್ಧಿಯಮೂಲಕ ಜೀವಿಯಂತೆ, ಆತ್ಮನಮೂಲಕ ದೇವರಂತೆ ನೋಡುವೆವು. ಮನುಷ್ಯನು ಪ್ರಪಂಚ ಪಾಪ ದೌರ್ಜನ್ಯವೆನ್ನುವ ತೆರೆಯನ್ನು ತನ್ನಮೇಲೆ ಆರೋಪಮಾಡಿಕೊಂಡಾಗ ಈ ಪ್ರಪಂಚ ಬದಲಾಯಿಸಿ ಒಂದು ನರಕಕುಂಡವಾಗುವುದು. ಸುಖವನ್ನು ಅನುಭವಿಸಬೇಕೆನ್ನುವವನಿಗೆ ಈ ಪ್ರಪಂಚ ಸ್ವರ್ಗವಾಗುವುದು. ಪೂರ್ಣಾತ್ಮನಿಗೆ ಈ ಪ್ರಪಂಚವೆಲ್ಲ ಮಾಯವಾಗಿ ತನ್ನ ಸ್ವಂತ ಆತ್ಮವಾಗುವುದು.

ಈಗ ಸಮಾಜವಿರುವ ಸ್ಥಿತಿಯಲ್ಲಿ ಈ ಮೂರು ಹಂತಗಳೂ ಅತ್ಯಾವಶ್ಯಕ. ಒಂದು ಮತ್ತೊಂದನ್ನು ನಿಷೇಧಿಸುವುದಿಲ್ಲ, ಒಂದು ಮತ್ತೊಂದನ್ನು ಪೂರ್ಣಗೊಳಿಸುವುದು. ಅದ್ವೈತ ಅಥವಾ ವಿಶಿಷ್ಟಾದ್ವೈತ, ದ್ವೈತ ತಪ್ಪು ಎನ್ನುವುದಿಲ್ಲ. ಇದೇನೊ ಸರಿ, ಆದರೆ ಕೆಳಗಿನದು ಎನ್ನುವನು. ಇದು ಸತ್ಯ ಗುರಿಯೆಡೆಗೆ ಹೋಗುತ್ತಿದೆ. ಪ್ರತಿಯೊಬ್ಬನೂ ತನ್ನತನ್ನ ಭಾವನೆಗೆ ದೊರಕುವ ಪ್ರಪಂಚದಲ್ಲಿ ಮುಂದುವರಿಯಲಿ. ಯಾರಿಗೂ ತೊಂದರೆ ಕೊಡಬೇಡಿ. ಯಾರ ಪಕ್ಷವನ್ನೂ ಅಲ್ಲಗಳೆಯಬೇಡಿ. ಮನುಷ್ಯ ಎಲ್ಲಿರುವನೊ ಅಲ್ಲಿಂದ ಕರೆದುಕೊಳ್ಳಿ. ಸಾಧ್ಯವಾದರೆ ಸಹಾಯ ಮಾಡಿ, ಮೇಲಿನಸ್ಥಿತಿಗೆ ಒಯ್ಯಿರಿ. ಆದರೆ ಆತನಿಗೆ ತೊಂದರೆಕೊಡಬೇಡಿ, ನಾಶಮಾಡಬೇಡಿ. ಕೊನೆಗೆ ಎಲ್ಲರೂ ಸತ್ಯಕ್ಕೆ ಬರುವರು. "ಹೃದಯದಾಸೆಯೆಲ್ಲ ಮಾಯವಾದಮೇಲೆ ಈ ಮರ್ತ್ಯನೇ ಅಮೃತನಾಗುವನು" ಈ ಮಾನವನೇ ದೇವನಾಗುವನು.



# ಆತ್ಮ: ಇದರ ಬಂಧನ ಮತ್ತು ಮುಕ್ತಿ.

ಅದ್ವೈತವೇದಾಂತಪ್ರಕಾರ ಪ್ರಪಂಚದಲ್ಲಿ ಒಂದೇ ಸತ್ಯವಿರುವುದು, ಅದೇ ಬ್ರಹ್ಮ. ಉಳಿದುದೆಲ್ಲ ಮಿಥ್ಯ. ಬ್ರಹ್ಮನಿಂದ ಮಾಯೆಯಮೂಲಕ ತಯಾರಾದದ್ದು. ಆ ಬ್ರಹ್ಮನನ್ನು ಸೇರುವುದೆ ನಮ್ಮ ಗುರಿ. ನಮ್ಮಲ್ಲಿ ಪ್ರತಿಯೊಬ್ಬರೂ ಆ ಬ್ರಹ್ಮ ಮತ್ತು ಮಿಥ್ಯೆಯಾಗಿರುವೆವು. ನಾವು ಈ ಮಾಯೆಯಿಂದ ಪಾರಾದರೆ ನಾವು ನಮ್ಮ ನೈಜಸ್ಥಿತಿಗೆ ಬರುವೆವು. ಈ ವೇದಾಂತದ ಪ್ರಕಾರ ಪ್ರತಿಯೊಬ್ಬರಿಗೂ ದೇಹ ಮನಸ್ಸು ಮತ್ತು ಆತ್ಮವೆಂಬ ಮೂರುಭಾಗವಿದೆ. ದೇಹ ಬಾಹ್ಯಕವಚ. ಮನಸ್ಸು ಆತ್ಮನ ಅಂತರಕವಚ. ಆತ್ಮನೇ ನಿಜವಾದ ಜ್ಞಾತೃಭೋಕ್ತೃ. ಅವನು ಸೂಕ್ಷ್ಮದೇಹದ ಅಥವಾ ಮನಸ್ಸಿನಮೂಲಕ ದೇಹದಲ್ಲಿ ಕೆಲಸಮಾಡುತ್ತಿರುವನು.

ಆತ್ಮ ಒಂದೆ ಮಾನವದೇಹದಲ್ಲಿರುವ ಅದ್ರವ್ಯ ವಸ್ತು. ಅದು ಅದ್ರವ್ಯವಾಗಿರುವುದರಿಂದ ಕಾರ್ಯಕಾರಣಗಳ ನಿಯಮಗಳಿಗೆ ಅತೀತವಾಗಿರುವುದು. ಆದಕಾರಣ ಅಮೃತವಾಗಿರುವುದು. ಯಾವುದು ಅಮೃತವಾಗಿರುವುದೊ ಅದಕ್ಕೆ ಆದಿಯಿಲ್ಲ. ಏಕೆಂದರೆ ಆದಿ ಇರುವುದಕ್ಕೆಲ್ಲ ಒಂದು ಅಂತ್ಯವಿರಬೇಕು. ಅದು ನಿರಾಕಾರವೆಂದೂ ನಿರ್ಣಯವಾಗುವುದು. ದ್ರವ್ಯವಿಲ್ಲದೆ ಯಾವ ಆಕಾರವೂ ಇರಲಾರದು. ಆಕಾರವಿರುವುದಕ್ಕೆಲ್ಲ ಒಂದು ಆದಿ ಅಂತ್ಯವಿರಬೇಕು. ನಮ್ಮಲ್ಲಿ ಯಾರೂ ಆದಿ ಅಂತ್ಯವಿಲ್ಲದ ಆಕಾರವನ್ನು ನೋಡಿಲ್ಲ. ಒಂದು ಆಕಾರ ದ್ರವ್ಯ ಮತ್ತು ಶಕ್ತಿಯ ಸಂಯೋಗದಿಂದಾಗುವುದು. ಕುರ್ಚಿಗೆ ಒಂದು ವಿಶೇಷ ಆಕಾರವಿದೆ. ಅಂದರೆ ಸ್ವಲ್ಪ ಶಕ್ತಿ ಸ್ವಲ್ಪ ದ್ರವ್ಯದಮೇಲೆ ತನ್ನ ಪರಿಣಾಮವನ್ನು ಬೀರಿ ಅದಕ್ಕೆ ವಿಶೇಷ ಆಕೃತಿಯನ್ನು ಕೊಟ್ಟಿದೆ. ಆಕಾರ ದ್ರವ್ಯ ಮತ್ತು ಶಕ್ತಿ ಸಂಯೋಗದಪ್ರತಿಫಲ, ಸಂಯೋಗ ಶಾಶ್ವತವಾಗಿರಲಾರದು. ಪ್ರತಿಯೊಂದು ಸಂಯೋಗವೂ ನಾಶವಾಗುವ ಒಂದುಕಾಲ ಬಂದೇ ಬರಬೇಕು. ಆದಕಾರಣ ಪ್ರತಿಯೊಂದು ಆಕಾರಕ್ಕೂ ಒಂದು ಆದಿ ಅಂತ್ಯವಿದೆ. ನಮ್ಮ ದೇಹ ನಾಶವಾಗುವುದೆಂದು ನಮಗೆ ಗೊತ್ತಿದೆ. ಅದಕ್ಕೆ ಒಂದು ಆದಿ ಇತ್ತು, ಒಂದು ಅಂತ್ಯವಿರಲೇ ಬೇಕು. ಆದರೆ ಯಾವ ಆಕಾರವೂ ಇಲ್ಲದ ಆತ್ಮ ಆದಿ ಅಂತ್ಯಗಳ ನಿಯಮದಿಂದ ಬದ್ಧವಾಗಲಾರದು. ಅನಾದಿಯಿಂದಲೂ ಅದು ಇದೆ. ಕಾಲ ಹೇಗೆ ಅನಂತವೊ ಹಾಗೆಯೆ ಆತ್ಮ

ಅನಂತ. ಎರಡನೆಯದಾಗಿ ಇದು ಸರ್ವವ್ಯಾಪಿಯಾಗಿರಬೇಕು. ಆಕಾರಮಾತ್ರ ದೇಶ ಕಾಲಕ್ಕೆ ಬದ್ಧವಾಗಿರುವುದು. ಆಕಾರ ಹೀನವಾದುದು ಆಕಾಶದಲ್ಲಿರಲಾರದು. ಅದ್ವೈತರೀತಿ ನನ್ನಲ್ಲಿ ನಿನ್ನಲ್ಲಿ ಮತ್ತು ಎಲ್ಲರಲ್ಲಿ ಸರ್ವವ್ಯಾಪಿಯಾಗುವುದು. ನೀನು ಈಗ ಭೂಮಿಯಲ್ಲಿರುವೆ, ಅಮೆರಿಕಾದಲ್ಲಿರುವಷ್ಟೆ ಇಂಗ್ಲೆಂಡಿನಲ್ಲಿರುವೆ. ಆತ್ಮ, ಮನಸ್ಸು ಮತ್ತು ದೇಹದಮೂಲಕ ಕೆಲಸಮಾಡುವುದು. ಅವು ಎಲ್ಲಿವೆಯೊ ಅಲ್ಲಿ ಇದರ ಕಾರ್ಯ ವ್ಯಕ್ತವಾಗುವುದು.

ನಾವು ಮಾಡುವ ಪ್ರತಿಯೊಂದು ಕೆಲಸ ಮತ್ತು ಆಲೋಚನೆ ಮನಸ್ಸಿನಮೇಲೆ ಒಂದು ಪರಿಣಾಮವನ್ನು ಬಿಡುವುದು. ಇದೇ ಸಂಸ್ಕಾರ. ಈ ಸಂಸ್ಕಾರಗಳ ಮೊತ್ತವೇ ಶೀಲವೆಂಬ ಮಹಾಪ್ರವಾಹವಾಗುವುದು. ಮನುಷ್ಯನ ಶೀಲ ತಾನೆ ಸಂಪಾದನೆ ಮಾಡಿಕೊಂಡಿದ್ದು. ಅವನು ಈ ಜೀವನದಲ್ಲಿ ದೇಹ ಮತ್ತು ಮನಸ್ಸಿನಲ್ಲಿ ಮಾಡಿದ ಕಾರ್ಯಗಳ ಪರಿಣಾಮ. ಈ ಜೀವನದಲ್ಲಿ ಮಾಡಿದ ಒಟ್ಟು ಸಂಸ್ಕಾರಗಳ ಮೊತ್ತವೇ ಮುಂದಿನ ಜನ್ಮಕ್ಕೆ ಒಂದು ರೀತಿಯನ್ನು ಕೊಡುವುದು. ಮನುಷ್ಯ ಸಾಯುವನು. ದೇಹ ಪಂಚಭೂತಗಳಿಗೆ ಹೋಗುವುದು. ಆದರೆ ಸಂಸ್ಕಾರ ಮನಸ್ಸಿಗೆ ಅಂಟಿಕೊಂಡಿರುವುದು. ಮನಸ್ಸು ಸೂಕ್ಷ್ಮವಸ್ತುವಿನಿಂದ ಆದುದರಿಂದ ಅದು ಬೇಗ ನಾಶವಾಗುವುದಿಲ್ಲ. ಸೂಕ್ಷ್ಮವಾದಷ್ಟೂ ಹೆಚ್ಚು ಕಾಲ ಇರುವುದು. ಕೊನೆಗೆ ಮನಸ್ಸು ನಾಶವಾಗುವುದು. ನಾವು ಅದಕ್ಕೇ ಈಗ ಹೋರಾಡುತ್ತಿರುವುದು. ಈ ವಿಷಯದಲ್ಲಿ ನನ್ನ ಮನಸ್ಸಿಗೆ ಬರುವ ಅತ್ಯುತ್ತಮ ಉಪಮಾನವೇ ಸುಂಟರಗಾಳಿ. ಹಲವು ವಾಯುತರಂಗಗಳು ಬೇರೆಬೇರೆ ಕಡೆಯಿಂದ ಬಂದು ಒಂದುಕಡೆ ಸಂಧಿಸುವುವು. ಅಲ್ಲಿ ಕಲೆತು ಸುತ್ತುತ್ತಿರುವುದು. ಸುತ್ತುವಾಗ ಧೂಳಿನಿಂದ ದೇಹವನ್ನು ಕಲ್ಪಿಸಿಕೊಂಡು, ಒಂದುಕಡೆಯಿಂದ ಕಾಗದದಚೂರು, ಹುಲ್ಲು ಮುಂತಾದುವುನ್ನೆಲ್ಲ ಸೆಳೆದುಕೊಂಡು ಮತ್ತೊಂದುಕಡೆಗೆ ಹಾರುತ್ತಾ ಹೋಗುವುವು. ಹೀಗೆ ತಮಗೆ ಸಿಕ್ಕಿದ ದ್ರವ್ಯದಿಂದ ಆಕಾರವನ್ನು ಮಾಡಿಕೊಂಡು ಹೋಗುವುವು. ಇದರಂತೆ ಪ್ರಾಣಕೂಡ ಸಂಧಿಸಿ ದ್ರವ್ಯದಿಂದಲೇ ದೇಹ ಮನಸ್ಸನ್ನು ಮಾಡಿಕೊಂಡು ದೇಹ ಬೀಳುವವರೆಗೆ ಹೋಗುವುದು. ಒಂದು ದೇಹ ಬಿದ್ದಮೇಲೆ ಇತರದ್ರವ್ಯಗಳಿಂದ ಬೇರೆ ದೇಹವನ್ನು ಮಾಡಿಕೊಂಡು ಹೋಗುವುವು. ದ್ರವ್ಯವಿಲ್ಲದೆ ಶಕ್ತಿ ಸಂಚರಿಸಲಾರದು. ದೇಹ ಬಿದ್ದು ಹೋದರೆ ಮನಸ್ಸು ಇರುವುದು. ಪ್ರಾಣ ಸಂಸ್ಕಾರ ರೂಪದಿಂದ ಅದರ

ಮೇಲೆ ಪ್ರಭಾವ ಬೀರುವುದು. ಅದು ಬೇರೊಂದು ಕಡೆಗೆಹೋಗಿ ಹೊಸದ್ರವ್ಯಗಳಿಂದ ಬೇರೊಂದು ಸುಂಟರೆಯನ್ನು ಸೃಷ್ಟಿಸಿ ಪುನಃ ಚಲಿಸುವುದು. ಹೀಗೆ ಶಕ್ತಿಯೆಲ್ಲ ಲಯವಾಗುವವರೆಗೆ ಅದು ಒಂದುಕಡೆಯಿಂದ ಮತ್ತೊಂದುಕಡೆಗೆ ಚಲಿಸುತ್ತಿರುವುದು. ಯಾವ ಸಂಸ್ಕಾರವನ್ನು ಬಿಡದೆ ಮನಸ್ಸು ಪೂರ್ಣಲಯವಾಗಿ ಹೋದರೆ ನಾವು ಸಂಪೂರ್ಣ ಮುಕ್ತರಾಗುವೆವು. ಅಲ್ಲಿಯವರೆಗೆ ನಾವು ಬಂಧನದಲ್ಲಿರುವೆವು. ಅಲ್ಲಿಯವರೆಗೂ ಆತ್ಮ ಮನೋಸುಂಟವರಗಾಳಿಯಿಂದ ಆವೃತನಾಗಿರುವನು. ಒಂದು ಸ್ಥಳದಿಂದ ಮತ್ತೊಂದುಸ್ಥಳಕ್ಕೆ ತಾನು ಒಯ್ಯಲ್ಪಡುತ್ತಿರುವೆ ಎಂದು ಭಾವಿಸುವುದು. ಸುಂಟರಗಾಳಿ ನಿಂತಾಗ ಆತ್ಮಕ್ಕೆ ತಾನು ಸರ್ವವ್ಯಾಪಿ ಎನ್ನುವುದು ಗೊತ್ತಾಗುವುದು. ತನಗೆ ಇಚ್ಛೆಬಂದಕಡೆ ಅದು ಹೋಗುವುದು, ನಿತ್ಯ ಸ್ವತಂತ್ರ, ತನಗೆ ತೋರಿದಷ್ಟು ಮನಸ್ಸು ದೇಹವನ್ನು ಸೃಷ್ಟಿಸಿಕೊಳ್ಳಬಹುದು, ಆದರೆ ಅಲ್ಲಿಯವರೆಗೆ ಇದು ಸುಂಟರಗಾಳಿಯಂತೆ ಮಾತ್ರ ಸಂಚರಿಸಬಲ್ಲುದು. ಈ ಸ್ವಾತಂತ್ರ್ಯದಗುರಿ ಎಡೆಗೇ ನಾವೆಲ್ಲಾ ಧಾವಿಸುತ್ತಿರುವುದು.

ಈ ಕೋಣೆಯಲ್ಲಿ ಒಂದು ಚೆಂಡು ಇದೆ ಎಂದು ಭಾವಿಸೋಣ. ನಮ್ಮಲ್ಲಿ ಪ್ರತಿಯೊಬ್ಬರ ಕೈಯಲ್ಲಿಯೂ ಒಂದು ದಾಂಡು ಇದೆ. ಪ್ರತಿಯೊಬ್ಬರೂ ಅದನ್ನು ಹೊಡೆದು ಮೂಲೆಯಿಂದ ಮೂಲೆಗೆ ಅಟ್ಟುತ್ತಿದ್ದರೆ ಕೊನೆಗೆ ಅದು ಕೋಣೆಯಿಂದ ಹೊರಗೆಹೋಗುವುದು. ಅದು ಯಾವ ವೇಗದಲ್ಲಿ ಯಾವಕಡೆ ಹೊರಗೆಹೋಗುವುದು ? ಕೋಣೆಯಲ್ಲಿ ಅದರಮೇಲೆ ಪ್ರಭಾವ ಬೀರುತ್ತಿದ್ದ ಶಕ್ತಿಗಳಮೊತ್ತ ಅದನ್ನು ನಿರ್ಧರಿಸುವುದು. ಅದಕ್ಕೆ ಬಿದ್ದ ಪ್ರತಿಯೊಂದು ಪೆಟ್ಟೂ ತನ್ನ ಪರಿಣಾಮವನ್ನು ಬೀರಿರುತ್ತದೆ. ನಮ್ಮ ದೈಹಿತ ಮಾನಸಿಕ ಪ್ರತಿಯೊಂದು ಕ್ರಿಯೆಯೂ ಅಂತಹ ಪೆಟ್ಟು. ಮನುಷ್ಯನ ಮನಸ್ಸೇ ನಾವು ಏಟುಕೊಡುತ್ತಿರುವ ಚೆಂಡು. ಪ್ರಪಂಚವೆಂಬ ಕೋಣೆಯಲ್ಲಿ ಪ್ರತಿಕ್ಷಣವೂ ನಮಗೆ ಪೆಟ್ಟು ಬೀಳುತ್ತಿದೆ. ಈ ಪೆಟ್ಟಿನ ಪರಿಣಾಮಗಳ ಮೊತ್ತವೆ ಇದರಿಂದ ಹೊರಗೆ ಹೋಗುವುದನ್ನು ನಿರ್ಧರಿಸುವುದು. ಪ್ರತಿಸಲಿಯೂ ಬಿದ್ದಪೆಟ್ಟು ಚೆಂಡಿನವೇಗ ಮತ್ತು ದಿಕ್ಕನ್ನು ನಿರ್ದೇಶಿಸುವುದು. ನಾವು ಈ ಪ್ರಪಂಚದಲ್ಲಿ ಮಾಡಿದ ಕರ್ಮಮೊತ್ತವೆ ನಮ್ಮ ಭವಿಷ್ಯಜನ್ಮವನ್ನು ನಿರ್ಧರಿಸುವುದು. ನಮ್ಮ ಈಗಿನ ಜನ್ಮ ಹಿಂದಿನದರಪರಿಣಾಮ. ಇನ್ನೊಂದು ಉದಾಹರಣೆಗೆ ತೆಗೆದುಕೊಳ್ಳಿ. ನಾನು ನಿಮಗೆ ಕೊನೆಮೊದಲಿಲ್ಲದ ಅನಂತವಾದ ಸರಪಳಿ

ಕೊಡುತ್ತೇನೆ. ಅದರಲ್ಲಿ ಕ್ರಮವಾಗಿ ಒಂದು ಕಪ್ಪುಕೊಂಡಿ ಒಂದು ಬಿಳಿಕೊಂಡಿ ಇರುವುದು. ಈ ಸರಪಳಿ ಸ್ವಭಾವವೇನು ಎಂದು ನಿಮ್ಮನ್ನು ಪ್ರಶ್ನೆಮಾಡುವೆನು. ಮೊದಲು ನಿಮಗೆ ಸ್ವಲ್ಪ ತೊಂದರೆಯಾಗುವುದು. ಸರಪಳಿಗೆ ಕೊನೆಮೊದಲಿಲ್ಲ. ಆದರೆ ಕ್ರಮೇಣ ಅದೊಂದು ಸರಪಳಿ ಎಂಬುದನ್ನು ಕಂಡುಹಿಡಿಯುವಿರಿ. ಈ ಸರಪಳಿಯಲ್ಲಿ ಬಿಳಿ ಕಪ್ಪು ಕೊಂಡಿಗಳಿವೆ. ಇದನ್ನು ಅನಂತಮಾಡಿದರೆ ಸರಪಳಿಯಾಗುವುದೆಂದು ಬೇಗ ತಿಳಿಯುವಿರಿ. ನಿಮಗೆ ಸರಪಳಿಯೆಲ್ಲಾ ಗೊತ್ತಾಗುವುದು. ಏಕೆಂದರೆ ಇದು ಪೂರ್ಣವಾಗಿ ಪುನರಾವೃತ್ತಿ. ನಮ್ಮ ಭೂತ ವರ್ತಮಾನ ಭವಿಷ್ಯ ಜೀವನವೆಲ್ಲ ಒಂದು ಅನಂತ ಸರಪಳಿಯಾಗುವುದು. ಅದರಲ್ಲಿ ಪ್ರತಿ ಕೊಂಡಿಯೂ ಒಂದೊಂದು ಜನ್ಮ. ಅದಕ್ಕೆ ಒಂದುಕಡೆ ಜನನ ಒಂದು ಕಡೆ ಮರಣವಿದೆ. ಈ ಸರಪಳಿಗೆ ಆದಿ ಅಂತ್ಯವಿಲ್ಲ. ಈಗ ನಾವು ಏನಾಗಿರುವೆವೊ, ಏನು ಮಾಡುವೆವೊ ಅದನ್ನೆ ಪುನಃಪುನಃ ಮಾಡುವೆವು ಸ್ವಲ್ಪ ವ್ಯತ್ಯಾಸಮಾತ್ರ. ನಾವು ಎರಡುಕೊಂಡಿ ತಿಳಿದುಕೊಂಡರೆ ಪ್ರಪಂಚದಲ್ಲಿ ಸಾಗಿಹೋಗಬೇಕಾದ ಮಾರ್ಗವನ್ನೆಲ್ಲ ತಿಳಿದುಕೊಳ್ಳುವೆವು. ನಾವು ಈ ಜನ್ಮಕ್ಕೆ ಬರುವುದಕ್ಕೆ ಕಾರಣವನ್ನು ಹಿಂದಿನಜನ್ಮದಲ್ಲಿ ಮಾಡಿದ ಕರ್ಮಗಳು ಸರಿಯಾಗಿ ನಿರ್ಧರಿಸುವುವು. ನಾವು ನಮ್ಮ ಕರ್ಮ ಫಲದಿಂದ ಈ ಪ್ರಪಂಚದಲ್ಲಿರುವೆವು. ನಾವು ನಮ್ಮ ಕರ್ಮಫಲಗಳ ಮೊತ್ತದೊಂದಿಗೆ ಹೇಗೆ ಹೋಗುವೆವೊ ಹಾಗೆಯೆ ನಾವು ಈ ಪ್ರಪಂಚಕ್ಕೆ ಹಿಂದಿನ ಕರ್ಮಫಲಗಳ ಮೊತ್ತದೊಂದಿಗೆ ಬರುವೆವು. ಯಾವುದು ನಮ್ಮನ್ನು ಆಚೆಗೊಯ್ಯುವುದೊ ಅದೆ ನಮ್ಮನ್ನು ತರುವುದು. ಯಾವುದು ನಮ್ಮನ್ನು ತರುವುದು ? ನಮ್ಮ ಪೂರ್ವಕರ್ಮ. ಯಾವುದು ನಮ್ಮನ್ನು ಕರೆದುಕೊಂಡು ಹೊಗುವುದು? ನಮ್ಮ ಕರ್ಮಫಲಗಳೆ. ಹೀಗೆ ಮುಂದೆ ಮುಂದೆ ಹೊಗುತ್ತಿರುವೆವು. ಕಂಬಳಿಹುಳು ತನ್ನ ಬಾಯಿನಿಂದ ನೂಲನ್ನು ತೆಗೆದು ಗೂಡುಮಾಡಿ ಕೊನೆಗೆ ಅದರಲ್ಲೆ ಬಂಧಿಯಾದಂತೆ ನಾವು ನಮ್ಮ ಕರ್ಮತಂತುವಿನಿಂದ ಬದ್ಧರಾಗಿರುವೆವು. ನಾವೆ ಕರ್ಮಬಲೆಯನ್ನು ನಮ್ಮ ಸುತ್ತಲೂ ಬೀಸಿಕೊಂಡಿರುವೆವು. ಕಾರ್ಯಕಾರಣ ಚಕ್ರಗತಿಗೆ ನಾವೆ ಕಾರಣ. ಅದರಿಂದ ಪಾರಾಗಲು ಈಗ ಕಷ್ಟವಾಗಿಕಾಣುವುದು. ನಾವೆ ಆ ಚಕ್ರವನ್ನು ಚಲಿಸುವಂತೆಮಾಡಿ ಅದರಡಿಗೆ ಸಿಕ್ಕಿ ಜರ್ಝರಿತರಾಗುತ್ತಿರುವೆವು. ನಾವು ಒಂದೇಸಮನಾಗಿ ನಮ್ಮ ಕೆಟ್ಟ ಮತ್ತು ಒಳ್ಳೆಯ ಕರ್ಮಗಳಿಂದ ಬದ್ಧರಾಗಿರುವೆವು ಎಂದು ಈ ಸಿದ್ಧಾಂತ ಸಾರುವುದು.

ಆತ್ಮ ಬರುವುದೂ ಇಲ್ಲ, ಹೋಗುವುದೂ ಇಲ್ಲ. ಹುಟ್ಟುವುದಿಲ್ಲ ಸಾಯುವುದೂ ಇಲ್ಲ. ಈ ಚಲನೆಯ ಪ್ರತಿಬಿಂಬ ಆತ್ಮನಲ್ಲಿ ರುವುದು. ಆತ್ಮ ಭ್ರಾಂತಿಯಿಂದ ನಾನು ಸಂಚರಿಸುತ್ತಿರುವೆನು, ಪ್ರಕೃತಿ ಯಲ್ಲ ಎಂದು ಭಾವಿಸುವುದು. ಆತ್ಮ ಹೀಗೆ ಭಾವಿಸಿದರೆ ಅದೆ ಬಂಧನ. ಎಂದು ನಾನು ಚಲಿಸುವುದಿಲ್ಲ, ನಾನು ಸರ್ವವ್ಯಾಪಿ ಎಂದು ಭಾವಿಸು ವುದೊ ಅದೆ ಮುಕ್ತಿ. ಬಂಧನದಲ್ಲಿರುವ ಆತ್ಮ ಜೀವ. ಆತ್ಮ ಬರುತ್ತದೆ ಹೋಗುತ್ತದೆ ಎಂಬುದು ಅರ್ಥಮಾಡಿಕೊಳ್ಳುವುದಕ್ಕೆ ಸುಲಭವಾಗಲಿ ಎಂದು ಹೇಳಿದ ಮಾತು. ಖಗೋಳ ಶಾಸ್ತ್ರವನ್ನು ನಾವು ಅಧ್ಯಯನ ಮಾಡುವಾಗ ಅರ್ಥಮಾಡಿಕೊಳ್ಳುವುದಕ್ಕೆ ಸುಲಭವಾಗಲೆಂದು ಸತ್ಯವಲ್ಲದೆ ಇದ್ದರೂ ಸೂರ್ಯ ಭೂಮಿಯ ಸುತ್ತಲೂ ಸುತ್ತುತ್ತಿರುವನು ಎಂದು ಊಹಿಸಿಕೊಳ್ಳುವಂತೆ. ಇದರಂತೆಯೆ ಜೀವ ಉತ್ತಮ ಅಥವಾ ಅಧಮ ವರ್ಗಕ್ಕೆ ಬರುವುದು. ಇದೇ ಪ್ರಖ್ಯಾತ ಪುನರ್ಜನ್ಮ ಸಿದ್ಧಾಂತ. ಇದು ಸೃಷ್ಟಿಯನ್ನೆಲ್ಲಾ ತನ್ನ ವಜ್ರಮುಷ್ಟಿಯಲ್ಲಿ ಬಿಗಿಯುವುದು.

ಈ ದೇಶದಲ್ಲಿ ಜನ, ಮನುಷ್ಯ ಪ್ರಾಣಿಯಿಂದ ಬರುವುದು ತುಂಬಾ ಹೇಯವೆಂದು ಭಾವಿಸುವರು. ಏತಕ್ಕೆ? ಆ ಕೋಟ್ಯಂತರ ಪ್ರಾಣಿಗಳ ಗುರಿಯೇನು? ಅವು ಕೆಲಸಕ್ಕೆ ಬಾರದವುಗಳೆ? ನಮಗೆ ಆತ್ಮವಿದ್ದರೆ ಅವಕ್ಕೂ ಆತ್ಮವಿದೆ. ಅವಕ್ಕೆ ಇಲ್ಲದೆ ಇದ್ದರೆ ನಮಗೂ ಇಲ್ಲ. ಮನು ಷ್ಯನಿಗೆ ಮಾತ್ರ ಆತ್ಮವಿದೆ ಅವಕ್ಕೆ ಇಲ್ಲವೆನ್ನುವುದು ಮೌಢ್ಯ.

ಮಾನವ ಜೀವ ಕೆಳಕ್ಕೆ ಮೇಲಕ್ಕೆ ತನ್ನ ಸಂಸ್ಕಾರಕ್ಕೆ ಅನುಗುಣವಾಗಿ ಬಂದು ಹೋಗುತ್ತಿದೆ. ಮಾನವನಂತೆ ಇರುವ ಅತಿ ಶ್ರೇಷ್ಠ ಆಕಾರದಲ್ಲಿ ಮಾತ್ರ ಮುಕ್ತಿ ಸಾಧ್ಯ. ದೇವತೆಗಳಿಗಿಂತ ಮಾನವನ ದೇಹ ಶ್ರೇಷ್ಠ. ಎಲ್ಲಾ ದೇಹಗಳಿಗಿಂತ ಮಾನವನ ದೇಹ ಅತಿ ಶ್ರೇಷ್ಠ. ಮಾನವ ಮುಕ್ತಿ ಪಡೆಯುವುದರಿಂದ ಸೃಷ್ಟಿಯಲ್ಲಿ ಅತ್ಯಂತ ಶ್ರೇಷ್ಠ ಜೀವಿ.

ಈ ವಿಶ್ವವೆಲ್ಲ ಬ್ರಹ್ಮನಲ್ಲಿತ್ತು. ಇದೆಲ್ಲ ಅವನಿಂದ ಬಾಹ್ಯೀಕರಣ ವಾದಂತೆ ಇವೆ. ಡೈನಮೋ ಇಂದ ಬರುವ ವಿದ್ಯುತ್ ಶಕ್ತಿ ಸಂಚಾರ ಮುಗಿಸಿ ಪುನಃ ಬಂದಲ್ಲಿಗೆ ಹೋಗುವಂತೆ ಈ ಸೃಷ್ಟಿಯೆಲ್ಲಾ ಎಲ್ಲಿಂದ ಬಂದಿತೊ ಅಲ್ಲಿಗೆ ಹಿಂತಿರುಗುವುದಕ್ಕೆ ಯತ್ನಿಸುತ್ತಿವೆ. ಇದರಂತೆಯೆ ಆತ್ಮ ಕೂಡ ಬ್ರಹ್ಮನಿಂದ ಹೊರಗೆ ಬಂದು ಸಸ್ಯಪ್ರಾಣಿ ವರ್ಗದಲ್ಲೆಲ್ಲಾ ಸಾಗಿ ಈಗ ಮನುಷ್ಯರೂಪಿನಲ್ಲಿರುವುದು. ಮನುಷ್ಯ ಬ್ರಹ್ಮನಿಗೆ ಅತ್ಯಂತ ಸಮೀಪ. ನಾವು ಬಂದ ಬ್ರಹ್ಮನೆಡೆಗೆ ಹೋಗುವುದಕ್ಕೆ ಈ ಮಹಾ

ಹೋರಾಟವೆಲ್ಲ. ಜನರಿಗೆ ಇದು ತಿಳಿಯಲಿ ಇಲ್ಲದಿರಲಿ ಚಿಂತೆಯಿಲ್ಲ. ನಾವು ಈ ವಿಶ್ವದಲ್ಲಿ ಖನಿಜ ಸಸ್ಯ ಪ್ರಾಣಿವರ್ಗದಲ್ಲಿ ಎಲ್ಲಿ ಚಲನೆ ಹೋರಾಟ ನೋಡುವೆವೊ ಅದೆಲ್ಲ ಕೇಂದ್ರಕ್ಕೆ ಬಂದು ಶಾಂತಿ ಅನುಭವಿಸುವ ಪ್ರಯತ್ನ. ಹಿಂದೆ ಸಮತ್ವ ಇತ್ತು. ಎಲ್ಲ ಭಾಗಗಳು ಕಣಗಳು ಅಣುಗಳು ತಾವು ಕಳೆದುಕೊಂಡ ಸಮತ್ವವನ್ನು ಪುನಃ ಪಡೆಯುವುದಕ್ಕೆ ಯತ್ನಿಸುತ್ತಿವೆ. ಈ ಹೋರಾಟದಲ್ಲಿ ಅವು ಸಂಯೋಗವಾಗಿ ಹಲವು ಆಕಾರಗಳಾಗಿ ಸೃಷ್ಟಿಯ ಅದ್ಭುತ ದೃಶ್ಯವಾಗಿ ಪರಿಣಮಿಸಿವೆ. ಪ್ರಾಣಿ ಸಸ್ಯ ಮತ್ತು ಇತರ ವರ್ಗದಲ್ಲಿ ನಡೆವ ಹೋರಾಟ ಸ್ಪರ್ಧೆಯೆಲ್ಲ, ಸಮಾಜದಲ್ಲಿ ಆಗುವ ಆಂದೋಳನ ಮತ್ತು ಘೋರ ಯುದ್ಧಗಳೆಲ್ಲ, ಆ ಸಮತ್ವವನ್ನು ಪಡೆಯುವುದಕ್ಕೆ ನಡೆಯುತ್ತಿರುವ ನಿರಂತರ ಹೋರಾಟದ ಚಿಹ್ನೆ.

ಜನನದಿಂದ ಮರಣದೆಡೆಗೆ ಹೋಗುವುದನ್ನೆ, ಈ ಪ್ರಯಾಣವನ್ನೆ ಸಂಸ್ಕೃತದಲ್ಲಿ ಸಂಸಾರ ಎನ್ನುವುದು ಎಂದರೆ ಜನನಮರಣ ಚಕ್ರದಂತೆ, ಸೃಷ್ಟಿಯೆಲ್ಲ ಈ ವೃತ್ತದಲ್ಲಿ ಸಂಚರಿಸಿ ಬೇಗಲೋ ನಿಧಾನವಾಗಿಯೂ ಮುಕ್ತವಾಗುವುದು. ನಾವೆಲ್ಲ ಮುಕ್ತಿ ಪಡೆಯುವ ಹಾಗೆ ಇದ್ದರೆ ಅದನ್ನು ಹೊಂದಲು ಪ್ರಯತ್ನವೇಕೆ ಪಡಬೇಕೆಂದು ಪ್ರಶ್ನೆ ಕೇಳಬಹುದು. ಎಲ್ಲರೂ ಮುಕ್ತರಾಗುವ ಹಾಗಿದ್ದರೆ ಕುಳಿತು ನಮ್ಮ ಸರದಿ ಕಾಯೋಣ, ಪ್ರತಿಯೊಂದು ಜೀವವೂ ಇಂದೊ ನಾಳೆಯೊ ಮುಕ್ತವಾಗುವುದೇನೊ ನಿಜ. ಯಾರೂ ಕಳೆದುಕೊಳ್ಳುವುದಿಲ್ಲ. ಯಾವುದೂ ನಾಶವಾಗಲಾರದು. ಎಲ್ಲರೂ ಮೇಲೆ ಬರಬೇಕು. ಹೀಗಿದ್ದರೆ ನಾವೇಕೆ ಪ್ರಯತ್ನ ಪಡಬೇಕು? ಮೊದಲನೆಯದಾಗಿ ಈ ಹೋರಾಟ ಮಾತ್ರ ನಮ್ಮನ್ನು ಗುರಿ ಎಡೆಗೆ ತರುವುದು. ಎರಡನೆಯದಾಗಿ ನಾವು ಏತಕ್ಕೆ ಹೋರಾಡುವೆವೊ ಅದು ನಮಗೆ ಗೊತ್ತಿಲ್ಲ. ನಾವು ಹೋರಾಡಲೇ ಬೇಕು. "ಸಹಸ್ರಾರು ಜನರಲ್ಲಿ ತಾವು ಮುಕ್ತರಾಗುವೆವೆಂದು ಕೆಲವರು ಜಾಗ್ರತರಾಗುವರು." ಪ್ರಪಂಚದ ಬಹುಪಾಲು ಜನ ಪ್ರಾಪಂಚಿಕ ವಸ್ತುಗಳಲ್ಲಿ ತೃಪ್ತರಾಗಿರುವರು. ಕೆಲವರು ಜಾಗ್ರತರಾಗಿ ತಾವು ಬೇಕಾದಷ್ಟು ಪ್ರಪಂಚದಲ್ಲಿ ಆಡಿ ಆಗಿದೆ ಎಂದು ಹಿಂತಿರುಗಲು ಕಾತುರರಾಗಿರುವರು. ಇಂತಹವರು ಅರಿತು ಹೋರಾಡುವರು. ಉಳಿದವರು ಅರಿಯದೆ ಹೋರಾಡುವರು.

ವೇದಾಂತ ತತ್ತ್ವದಸಾರಸರ್ವಸ್ವವೆ ಪ್ರಪಂಚವನ್ನು ತ್ಯಜಿಸುವುದು. ಅಸತ್ಯವನ್ನು ತ್ಯಜಿಸಿ ಸತ್ಯವನ್ನು ಸ್ವೀಕರಿಸಿ. ಯಾರು ಪ್ರಪಂಚಕ್ಕೆ ಮಾರುಹೋಗಿರುವರೊ ಅವರು "ಏತಕ್ಕೆ ಇದರಿಂದ ಪಾರಾಗ

ಬೇಕು? ಕೇಂದ್ರಕ್ಕೆ ಹಿಂತಿರುಗಬೇಕು ? ನಾವೆಲ್ಲ ದೇವರಿಂದ ಬಂದಿರಬಹುದು. ಆದರೆ ಪ್ರಪಂಚ ಸುಖವಾಗಿದ್ದರೆ ಏತಕ್ಕೆ ನಾವು ಹೆಚ್ಚು ಇದನ್ನೆ ಆಶಿಸಬಾರದು ? ಇದರಿಂದ ನಾವು ಏತಕ್ಕೆ ಪಾರಾಗಬೇಕು ?" ಎಂದು ಕೇಳಬಹುದು. ಪ್ರತಿದಿನ ಪ್ರಪಂಚದಲ್ಲಿ ಆಗುತ್ತಿರುವ ಮಾರ್ಪಾಡನ್ನು ನೋಡಿ. ಎಷ್ಟೊಂದು ಸೌಲಭ್ಯವನ್ನು ಪ್ರಪಂಚಕ್ಕಾಗಿ ತಯಾರು ಮಾಡುತ್ತಿರುವರು ? ಇದು ಸಂತೋಷದಾಯಕವಾಗಿದೆ. ನಾವೇಕೆ ಇದನ್ನು ತ್ಯಜಿಸಿ ಮತ್ತಾವುದನ್ನೊ ಅರಸಬೇಕು ? ಇದಕ್ಕೆ ಉತ್ತರವೆ ಪ್ರಪಂಚ ನಾಶವಾಗುವುದು, ಚೂರುಚೂರಾಗುವುದರಲ್ಲಿ ಸಂದೇಹವಿಲ್ಲ. ಹಲವು ವೇಳೆ ಇಂತಹ ಭೋಗ್ಯವಸ್ತುಗಳನ್ನು ಪಡೆದಿದ್ದೆವು. ಈಗ ನಮ್ಮೆದುರಿಗಿರುವ ವಸ್ತುಗಳೆಲ್ಲ ಪುನಃ ವ್ಯಕ್ತವಾಗಿವೆ. ಈಗ ನಾವಿರುವ ಪ್ರಪಂಚ ಹಿಂದೆ ಎಷ್ಟೋಸರಿ ಇತ್ತು. ನಾನು ಹಿಂದೆ ಇದ್ದೆ, ಎಷ್ಟೊ ಸರಿ ನಿಮ್ಮೊಡನೆ ಮಾತನಾಡಿರುವೆ. ಇದು ಹೀಗೆ ಇದ್ದಿರಬೇಕೆಂಬುದನ್ನು ನೀವು ತಿಳಿಯುವಿರಿ. ನೀವು ಈಗ ಏನನ್ನು ಕೇಳುತ್ತಿರುವಿರೊ ಅದನ್ನೆ ಹಿಂದೆ ಎಷ್ಟೋವೇಳೆ ಕೇಳಿದ್ದೀರಿ. ಪುನಃ ಇದನ್ನು ಎಷ್ಟೋವೇಳೆ ಕೇಳುವಿರಿ. ಆತ್ಮ ಎಂದಿಗೂ ಬೇರೆ ಆಗಿರಲಿಲ್ಲ. ದೇಹ ನಿರಂತರ ಹುಟ್ಟಿ ಸಾಯುತ್ತಿದೆ. ಈ ಸೃಷ್ಟಿ ಕಾಲಕಾಲಕ್ಕೆ ಆಗುತ್ತಿರುತ್ತದೆ. ಇಲ್ಲಿ ಮೂರುನಾಲ್ಕು ದಾಳಗಳಿವೆ ಎಂದು ಇಟ್ಟುಕೊಳ್ಳೋಣ. ಅದನ್ನು ಎಸೆದರೆ ಒಂದು ದಾಳದಲ್ಲಿ ಐದು, ಎರಡನೆಯದರಲ್ಲಿ ನಾಲ್ಕು, ಮೂರನೆಯದರಲ್ಲಿ ಮೂರು, ನಾಲ್ಕನೆಯದರಲ್ಲಿ ಎರಡು ಬೀಳುವುದು ಎಂದು ಭಾವಿಸೋಣ. ನೀವು ಹೀಗೆ ಎಸೆಯುತ್ತಾ ಹೋದರೆ ಹಿಂದಿನಂತೆ ಗರ ಮತ್ತೊಂದು ಸರಿ ಬೀಳುವ ಸಮಯ ಬಂದೇ ಬರುವುದು. ಎಷ್ಟು ಸಲ ಎಸೆಯುವುದರಲ್ಲಿ ಅದು ಬರುತ್ತದೆ ಎಂದು ನಿಷ್ಕರ್ಷೆ ಮಾಡಲಾರೆವು. ಇದು ಅನಿರೀಕ್ಷಿತ ನಿಯಮ. ಜೀವಿಗಳು ಮತ್ತು ಅದರ ಸಂಬಂಧಗಳು ಕೂಡ ಕಾಲದ ಅಂತರ ಎಷ್ಟೇ ಇದ್ದರೂ ಒಂದೇ ಬಗೆಯ ಸಂಯೋಗ ಮತ್ತು ವಿಯೋಗ ಅನೇಕ ವೇಳೆ ಆಗುವುದು. ಇದೇ ಜೀವನ. ಕುಡಿಯುವುದು, ತಿನ್ನುವುದು, ಸಾಯುವುದು, ಪುನಃ ಪುನಃ ಬರುತ್ತಿರುವುದು. ಕೆಲವರಿಗೆ ಪ್ರಪಂಚದಲ್ಲಿ ಭೋಗಕ್ಕಿಂತ ಮಿಗಿಲಾದುದು ಏನೂ ಕಾಣುವುದಿಲ್ಲ. ಆದರೆ ಯಾರು ಮುಂದುವರಿಯಬೇಕೆಂದು ಆಶಿಸುವರೊ ಅವರಿಗೆ ಇದು ಕೇವಲ ಮಾರ್ಗ ಮಾತ್ರ ಇದೇ ಗುರಿಯಲ್ಲ.

ಕ್ಷುದ್ರ ಕೀಟದಿಂದ ಹಿಡಿದು ಮಾನವನ ವರೆಗೆ ಪ್ರತಿಯೊಂದು ಆವಿ

ಫೆರ್ರಿಸ್‌ ವೀಲ್ ನಂತೆ. ಭ್ರಾವನೆಯೂ ಚಿಕಾಗೋ ನಗರದಲ್ಲಿರುವ ಗಿರಿಗಿಟ್ಟಿಯಂತೆ. ಅದು ಯಾವಾಗಲೂ ತಿರುಗುತ್ತಿರುವುದು. ಜನಮಾತ್ರ ಬದಲಾಯಿಸುತ್ತಿರುವರು. ಮನುಷ್ಯ ಅದರಲ್ಲಿ ಕುಳಿತು ಸುತ್ತಿ ಹಿಂತಿರುಗಿ ಬರುವನು. ಚಕ್ರ ಸುತ್ತುತ್ತಿರುವುದು. ಜೀವ ಒಂದು ದೇಹವನ್ನು ಪ್ರವೇಶಿಸಿ ಅಲ್ಲಿ ಕೆಲವು ಕಾಲ ಇದ್ದು ಅದನ್ನು ಬಿಟ್ಟು ಮತ್ತೊಂದಕ್ಕೆ ಹೋಗುವುದು. ಪುನಃ ಅಲ್ಲಿಂದ ಮೂರನೆಯದಕ್ಕೆ ಹೋಗುವುದು. ಚಕ್ರದಿಂದ ಪಾರಾಗಿ ಮುಕ್ತರಾಗುವವರೆಗೂ ಹೀಗೆಯೆ ಹೋಗುತ್ತಿರುವುದು.

ಪ್ರತಿಯೊಂದು ದೇಶದಲ್ಲಿಯೂ ಮತ್ತು ಪ್ರತಿಯೊಂದು ಕಾಲದಲ್ಲಿಯೂ ಭವಿಷ್ಯವನ್ನು ಹೇಳುವ ಅದ್ಭುತಶಕ್ತಿ ಕೆಲವರಿಗೆ ಇರುವುದು ಗೊತ್ತಿದೆ. ಇದಕ್ಕೆ ವಿವರಣೆಯೆ, ಆತ್ಮ ಕಾರ್ಯಕಾರಣ ಜಗತ್ತಿನೊಳಗೆ ಇರುವ ಪರಿಯಂತರ ಅದು ತನ್ನ ಮೂಲಶಕ್ತಿಯನ್ನು ಕಳೆದುಕೊಳ್ಳದೆ ಇದ್ದರೂ, ಅದನ್ನು ಬೇಕಾದಾಗ ವ್ಯಕ್ತಗೊಳಿಸಲು ಸಾಧ್ಯವಾದರೂ, ಕಾರ್ಯಕಾರಣ ಜಗತ್ತಿನಾಚೆ ಒಯ್ಯಲು ಶಕ್ತಿಯನ್ನು ವ್ಯಕ್ತಗೊಳಿಸಿದರೂ, ಅದು ಕಾರ್ಯಕಾರಣನಿಯಮಕ್ಕೆ ಒಳಪಟ್ಟಿರುವುದು. ಇದರಿಂದ ಪರಿಣಾಮಗಳನ್ನು ಗಮನಿಸುವ ಅಂತರ್‌ದೃಷ್ಟಿ ಯುಳ್ಳವರು ಭೂತ ಭವಿಷತ್ತುಗಳನ್ನು ವಿವರಿಸಲು ಸಾಧ್ಯ.

ಎಲ್ಲಿಯವರೆಗೆ ಆಸೆ ಇದೆಯೊ, ಆಕಾಂಕ್ಷೆ ಇವೆಯೊ ಅದು ಅಪೂರ್ಣತೆಯ ಲಕ್ಷಣ. ನಿತ್ಯಮುಕ್ತನಿಗೆ ಯಾವ ಆಸೆಯೂ ಇರುವುದಿಲ್ಲ. ದೇವರಿಗೆ ಏನೂ ಬೇಕಾಗಿಲ್ಲ. ಅವನು ಆಶಿಸಿದರೆ ದೇವರಾಗಲಾರ. ಅವನೂ ಅಪೂರ್ಣನಾಗುವನು. ದೇವರಿಗೆ ಅದು ಬೇಕು ಇದು ಬೇಕು, ಅವನಿಗೆ ಒಂದುಸಲಿ ಕೋಪ ಒಂದುಸಲಿ ತೃಪ್ತಿ ಎನ್ನುವುದು ಬಾಲಹರಟೆ. ಅದರಲ್ಲಿ ಸತ್ತ್ವವೇನೂ ಇಲ್ಲ. ಆದಕಾರಣವೆ ಮಹಾಪುರುಷರೆಲ್ಲ "ಏನನ್ನೂ ಆಶಿಸಬೇಡಿ, ಆಸೆಯನ್ನೆಲ್ಲ ತ್ಯಜಿಸಿ, ನಿತ್ಯತೃಪ್ತರಾಗಿ" ಎನ್ನುವುದು.

ಮಗು ತೆವಳುತ್ತ ಹಲ್ಲಿಲ್ಲದೆ ಜಗತ್ತಿಗೆ ಬರುವುದು, ವೃದ್ಧ ಹಲ್ಲಿಲ್ಲದೆ ತೆವಳುತ್ತ ಜಗದಿಂದ ಸಾಗುವನು. ಎರಡು ಕೊನೆಯೂ ಒಂದರಂತೆಯೆ ಕಾಣುವುದು. ಮಗುವಿಗೆ ಜೀವನದ ಪರಿಚಯವೆ ಇರುವುದಿಲ್ಲ. ಮತ್ತೊಬ್ಬ ಇವನ್ನೆಲ್ಲಾ ಅನುಭವಿಸಿರುವನು. ಆಕಾಶದಲ್ಲಿ ಸ್ಪಂದನ ಅತಿ ಕನಿಷ್ಠವಾದಾಗ ನಮಗೆ ಬೆಳಕು ಕಾಣುವುದಿಲ್ಲ. ಎಲ್ಲಾ ಕತ್ತಲೆ. ಸ್ಪಂದನ ವಿಪರೀತ ಜಾಸ್ತಿಯಾದಾಗಲೂ ಕತ್ತಲೆ. ಎರಡಕ್ಕೂ ಧ್ರುವದಷ್ಟು ಅಂತರವಿದ್ದರೂ ಒಂದೇ ಸಮನಾಗಿರುವಂತೆ ತೋರುವುದು. ಗೋಡೆಗೆ ಯಾವ ಆಸೆಯೂ ಇಲ್ಲ. ಅದರಂತೆ ಮುಕ್ತಾತ್ಮನಿಗೆ ಆಸೆಪಡುವುದಕ್ಕೆ ಏನೂ

ಇಲ್ಲ. ಆಸೆ ಇಲ್ಲದ ಕೆಲವು ಮೂರ್ಖರಿರುವರು. ಏಕೆಂದರೆ ಅವರ ಮೆದುಳು ಇನ್ನೂ ವೃದ್ಧಿಯಾಗಿಲ್ಲ. ಆದರೆ ಅತಿ ಶ್ರೇಷ್ಠಸ್ಥಿತಿಕೂಡ ನಮ್ಮಲ್ಲಿ ಆಸೆ ಸಂಪೂರ್ಣ ಮಾಯವಾದಾಗ. ಎರಡೂ ಒಂದೇ ಅಸ್ತಿತ್ವದ ಉತ್ತರ ದಕ್ಷಿಣ ಧೃವದಂತೆ. ಒಂದು ಮೃಗದ ಸಮೀಪವಿದೆ, ಮತ್ತೊಂದು ದೇವನ ಸಮೀಪವಿದೆ.



## ಮಾನವನ ನೈಜ ಮತ್ತು ತೋರಿಕೆಯ ಸ್ಥಿತಿ.

ನಾವಿಲ್ಲಿ ನಿಂತಿರುವೆವು. ಕೆಲವುವೇಳೆ ನಮ್ಮ ಕಣ್ಣು ಮೈಲಿಗಳು ಮುಂದೆ ನೋಡುವುವು. ಮಾನವ ಆಲೋಚನೆಮಾಡುವುದಕ್ಕೆ ಪ್ರಾರಂಭಿಸಿದಂದಿನಿಂದಲೂ ಹೀಗೆ ಮಾಡುತ್ತಿರುವನು. ಅವನಾವಾಗಲೂ ಮುಂದೆ ಮುಂದೆ ನೋಡುತ್ತಿರುವನು. ಮನುಷ್ಯ ತನ್ನ ದೇಹ ನಾಶವಾದಮೇಲೂ ಎಲ್ಲಿಗೆ ಹೋಗುತ್ತೇನೆ ಎಂಬುದನ್ನು ಅರಿಯಲಿಚ್ಛಿಸುವನು. ಇದನ್ನು ವಿವರಿಸುದಕ್ಕೆ ಹಲವು ಸಿದ್ಧಾಂತಗಳನ್ನು ರಚಿಸುವರು, ಹಲವು ತತ್ತ್ವಗಳನ್ನು ಸೃಷ್ಟಿಸಿರುವರು. ಕೆಲವನ್ನು ತಿರಸ್ಕರಿಸುವರು, ಮತ್ತೆ ಕೆಲವನ್ನು ಸ್ವೀಕರಿಸುವರು. ಮನುಷ್ಯ ಭೂಮಿಯಲ್ಲಿ ಇರುವವರಿಗೆ ಹೀಗೆಯೆ ಆಗುತ್ತಿರುವುದು. ಪ್ರತಿಯೊಂದು ಸಿದ್ಧಾಂತಗಳಲ್ಲಿಯೂ ಸತ್ಯಾಂಶಗಳಿವೆ, ಕೆಲಸಕ್ಕೆ ಬಾರದವೂ ಎಷ್ಟೋ ಇವೆ. ಭರತಖಂಡದಲ್ಲಿ ಈ ವಿಷಯದಲ್ಲಿ ಮಾಡಿದ ವಿಚಾರ ಸಾರವನ್ನು ನಿಮ್ಮ ಮುಂದಿಡಲು ಯತ್ನಿಸುವೆನು. ಮಾನಸಿಕ ಶಾಸ್ತ್ರಜ್ಞರು ಮತ್ತು ತಾತ್ತ್ವಿಕರಿಗೆ ರಾಜಿಮಾಡಲು ಯತ್ನಿಸುತ್ತೇನೆ. ಸಾಧ್ಯವಾದರೆ ಅವರನ್ನು ಆಧುನಿಕ ವೈಜ್ಞಾನಿಕರೊಂದಿಗೂ ರಾಜಿಮಾಡಲು ಯತ್ನಿಸುವೆನು.

ವೇದಾಂತ ದಾರ್ಶನಿಕರ ಮುಖ್ಯಧ್ಯೇಯವೆ ಐಕ್ಯತೆಯ ಅನ್ವೇಷಣೆ. ಹಿಂದೂ ಮನಸ್ಸು ವಿವರಗಳನ್ನು ಅಷ್ಟು ಗಮನಿಸುವುದಿಲ್ಲ. ಅದು ಯಾವಾಗಲೂ ಅರಸುವುದು ಸರ್ವಸಾಮಾನ್ಯ ಸಿದ್ಧಾಂತವನ್ನು, ವಿಶ್ವ ಸಿದ್ಧಾಂತವನ್ನು, "ಯಾವುದನ್ನು ತಿಳಿದರೆ ನಾವು ಎಲ್ಲವನ್ನೂ ತಿಳಿಯಬಹುದೊ ಅದಾವುದು?" ಎಂಬುದೆ ಅವರಗುರಿ. "ಒಂದುಹಿಡಿ ಮೃತ್ತಿಕೆಯನ್ನು ತಿಳಿಯುವುದರಿಂದ ಮೃತ್ತಿಕೆಯೆಲ್ಲವನ್ನೂ ತಿಳಿಯುವಂತೆ, ಯಾವುದನ್ನು ತಿಳಿದರೆ ಇಡೀ ವಿಶ್ವವನ್ನು ತಿಳಿಯಬಲ್ಲವೋ ಅದಾವುದು?" ಈ ಅನ್ವೇಷಣೆಯೊಂದೆ ಅವರಗುರಿ. ಹಿಂದೂ ದಾರ್ಶನಿಕರ ಮತದಂತೆ ಇಡೀವಿಶ್ವವನ್ನು ಒಂದರಲ್ಲಿ ಐಕ್ಯಗೊಳಿಸಬಹುದು. ಅದೇ ಆಕಾಶ. ನಮ್ಮ ಸುತ್ತಲೂ ನೋಡುವ ಅನುಭವಿಸುವ ಸ್ಪರ್ಷಮಾಡುವ ರುಚಿನೋಡುವ ಪ್ರತಿಯೊಂದೂ ಆಕಾಶದ ವಿಭಿನ್ನ ಆವಿರ್ಭಾವನೆ. ಇದು ಸರ್ವವ್ಯಾಪಿ, ಸೂಕ್ಷ್ಮ; ಘನ, ದ್ರವ್ಯ, ಅನಿಲ, ದೇಹ ಆಕಾರ, ಪ್ರಥ್ವಿ ಸೂರ್ಯ ಚಂದ್ರ ತಾರಾವಳಿ ಎಲ್ಲ ಆಕಾಶದಿಂದ ಆಗಿದೆ.

ಆಕಾಶದಮೇಲೆ ಯಾವ ಶಕ್ತಿ ತನ್ನ ಪ್ರಭಾವವನ್ನು ಬೀರಿ ಈ ವಿಶ್ವವನ್ನು

ಆದರಿಂದ ಸೃಷ್ಟಿಸುವುದು? ಆಕಾಶದೊಂದಿಗೆ ವಿಶ್ವಶಕ್ತಿಇದೆ. ಶಕ್ತಿ ಅಥವಾ ಆಕರ್ಷಣ ಮತ್ತು ಆಲೋಚನೆಯಂತೆ ಇರುವುದು ಕೂಡ ಒಂದೆ ಶಕ್ತಿಯ ವಿಭಿನ್ನ ಆವಿರ್ಭಾವನೆ. ಇದನ್ನು ಹಿಂದೂಗಳು ಪ್ರಾಣ ಎನ್ನುವರು. ಪ್ರಾಣ ಆಕಾಶದಮೇಲೆ ತನ್ನ ಕ್ರಿಯಾಶಕ್ತಿಯನ್ನು ಬೀರಿ ಇಡೀ ಬ್ರಹ್ಮಾಂಡವನ್ನು ರಚಿಸುತ್ತಿರುವುದು. ಕಲ್ಪದ ಆದಿಯಲ್ಲಿ ಪ್ರಾಣ ಆಕಾಶದ ಅನಂತ ಸಾಗರದಲ್ಲಿ ಸುಪ್ತವಾದಂತೆ ಇರುವುದು. ಆದಿಯಲ್ಲಿ ಅದು ಚಲಿಸದೆ ಇತ್ತು. ಅನಂತರ ಪ್ರಾಣಕ್ರಿಯೆಯಿಂದ ಆಕಾಶದ ಮಹಾಸಾಗರದಲ್ಲಿ ಚಲನೆ ಪ್ರಾರಂಭವಾಗುವುದು. ಆಗ ಹಲವುಬಗೆಯ ಲೋಕಗಳು ಸೂರ್ಯಚಂದ್ರ ನಕ್ಷತ್ರಮಂಡಲ ಪೃಥ್ವಿ ಮನುಷ್ಯ ಪ್ರಾಣಿ ಸಸ್ಯ ಮತ್ತು ಹಲವುಬಗೆ ಶಕ್ತಿಗಳು ಮತ್ತು ದೃಶ್ಯಗಳು ಆವಿರ್ಭವಿಸುವುವು. ಅವರ ಮತದಲ್ಲಿ ಪ್ರತಿಯೊಂದು ವಸ್ತುವಿನ ಆವಿರ್ಭಾವನೆಯೂ ಆಕಾಶ. ಈ ಕಲ್ಪದ ಅಂತ್ಯದಲ್ಲಿ ಘನವಸ್ತುವೆಲ್ಲ ಸೂಕ್ಷ್ಮದ್ರವ್ಯವಾಗುವುದು, ಅದು ಅನಿಲವಾಗುವುದು, ಅದು ಸಮಾನ ಶಾಖದ ಸ್ಪಂದನವಾಗುವುದು. ಆಕರ್ಷಣ ಪ್ರತಿಕರ್ಷಣಚಲನೆ ಮುಂತಾದುವೆಲ್ಲ ಕ್ರಮೇಣ ಪ್ರಾಣದಲ್ಲಿ ತಲ್ಲೀನವಾಗುವುದು. ಆಗ ಪ್ರಾಣ ಕೆಲವುಕಾಲ ಸುಪ್ತಾವಸ್ಥೆಯಲ್ಲಿದ್ದು ಪುನಃ ಈ ವಿಶ್ವವನ್ನೆಲ್ಲಾ ವ್ಯಕ್ತಗೊಳಿಸುವುದು. ಆ ಕಲ್ಪ ಕೊನೆಗೊಂಡರೆ ಎಲ್ಲವೂ ಪುನಃ ಅವ್ಯಕ್ತವಾಗುವುದು. ಈ ಸೃಷ್ಟಿ ಮೇಲೇಳುತ್ತಿದೆ. ಕೆಳಗೆ ಬೀಳುತ್ತಿದೆ, ಹಿಂದೆ ಮುಂದೆ ಓಲಾಡುತ್ತಿದೆ. ಆಧುನಿಕ ವೈಜ್ಞಾನಿಕ ಭಾಷೆಯಲ್ಲಿ ಕೆಲವುಕಾಲ ಅದು ಸಪ್ತವಾಗುವುದು, ಕೆಲವುಕಾಲ ಅದು ವ್ಯಕ್ತವಾಗುವುದು. ಕೆಲವುವೇಳೆ ಅದು ಅಂತಸ್ಥವಾಗುವುದು, ಕೆಲವುವೇಳೆ ಬಾಹ್ಯ ಪ್ರಕಟಿತವಾಗುವುದು. ಅನಾದಿಯಿಂದಲೂ ಈ ಪರ್ಯಾಯ ಕ್ರಮ ಸಾಗುತ್ತಿದೆ.

ಆದರೂ ಈ ವಿಭಜನೆ ಅಸಂಪೂರ್ಣ. ಇಷ್ಟು ಆಧುನಿಕ ವೈಜ್ಞಾನಿಕರಿಗೂ ಗೊತ್ತು. ವೈಜ್ಞಾನಿಕ ಆವಿಷ್ಕಾರಗಳು ಇದನ್ನು ಮೀರಿ ಹೋಗಲಾರವು. ಆದರೆ ಅನ್ವೇಷಣೆ ಇದರಿಂದ ನಿಲ್ಲುವುದಿಲ್ಲ. ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿಯಬಹುದೊ ಅದನ್ನು ನಾವು ಇನ್ನೂ ಕಂಡುಹಿಡಿದಿಲ್ಲ. ವಿಶ್ವವನ್ನೆಲ್ಲಾ ದ್ರವ್ಯ ಮತ್ತು ಶಕ್ತಿ ಅಥವಾ ಹಿಂದೂ ದಾರ್ಶನಿಕರು ಹೇಳುವಂತೆ ಪ್ರಾಣ ಆಕಾಶ ಎಂಬ ಎರಡುರೂಪಕ್ಕೆ ತಂದಾಯಿತು. ಅನಂತರವೆ ಆಕಾಶ ಮತ್ತು ಪ್ರಾಣವನ್ನು ಅವುಗಳ ಮೂಲಕ್ಕೆ ಒಯ್ಯುವುದು. ಎರಡನ್ನೂ ಮಹತ್ ಎಂಬ ಮತ್ತೊಂದರಲ್ಲಿ ಐಕ್ಯಗೊಳಿಸಬಹುದು. ಮಹ

ತ್ತಿನಿಂದ ವಿಶ್ವದಾಲೋಚನೆಯಿಂದ ಆಕಾಶಪ್ರಾಣಗಳು ಆಗಿರುವುವು. ಆಕಾಶ ಮತ್ತು ಪ್ರಾಣಕ್ಕಿಂತ ಆಲೋಚನೆ ಮತ್ತೂ ಸೂಕ್ಷ್ಮವಾಗಿರುವುದು. ಮಹತ್ತೆ ಆಕಾಶ ಪ್ರಾಣದಂತೆ ವಿಭಾಗವಾಗುವುದು. ಆದಿಯಲ್ಲಿದ್ದ ಮಹತ್ತು ವ್ಯಕ್ತವಾಗಿ ಬದಲಾವಣೆಯಾಗಿ ಆಕಾಶ ಪ್ರಾಣದಂತೆ ರೂಪು ಧಾರಣೆ ಮಾಡಿತು. ಈ ಎರಡರ ಮಿಶ್ರದಿಂದ ವಿಶ್ವವೆಲ್ಲಾ ಸೃಷ್ಟಿಯಾಗಿದೆ.

ಅನಂತರ ಮಾನಸಿಕ ಶಾಸ್ತ್ರಕ್ಕೆ ಬರುವೆವು. ನಾನು ನಿಮ್ಮನ್ನು ನೋಡುತ್ತಿರುವೆನು. ಕಣ್ಣುಗಳು ನನ್ನ ಬಾಹ್ಯ ಸಂವೇದನೆಗಳನ್ನು ತರುವುವು. ಅವುಗಳನ್ನು ಸಂವೇದನವಾಹಕ ನರಗಳು ಮೆದುಳಿಗೆ ಒಯ್ಯುವುವು. ದೃಶ್ಯೇಂದ್ರಿಯ ಕಣ್ಣಲ್ಲ. ಅವು ಕೇವಲ ಬಾಹ್ಯಯಂತ್ರ. ಕಣ್ಣುಗಳ ಹಿಂದೆ ಇರುವ ನರ ಮುಖ್ಯ. ಅದು ಸುದ್ದಿಯನ್ನು ಮೆದುಳಿಗೆ ಒಯ್ಯದೆ ಇದ್ದರೆ ನನಗೆ ಇಪ್ಪತ್ತು ಕಣ್ಣುಗಳು ಇದ್ದರೂ ನೋಡಲಾರೆ. ರೆಟಿನಾ ಮೇಲೆ ಚಿತ್ರ ಚೆನ್ನಾಗಿ ಬಿದ್ದಿರಬಹುದು, ಆದರೂ ನಾನು ನಿಮ್ಮನ್ನು ನೋಡಲಾರೆ. ಆದಕಾರಣ ಇಂದ್ರಿಯ ಯಂತ್ರಕ್ಕಿಂತ ಬೇರೆ. ಕಣ್ಣಿನ ಹಿಂದೆ ಇಂದ್ರಿಯಗಳಿರಬೇಕು. ಇದರಂತೆಯೆ ಎಲ್ಲಾ ಸಂವೇದನೆ ಕೂಡು ಮೂಗು ವಾಸನೆಯನ್ನು ಗ್ರಹಿಸುವ ಇಂದ್ರಿಯ. ಅದು ಕೇವಲ ಯಂತ್ರ. ಅದರ ಹಿಂದೆ ಮೂಗಿನ ಇಂದ್ರಿಯವಿದೆ. ನಮ್ಮ ಪ್ರತಿಯೊಂದು ಭಾವನೆ ಯಲ್ಲಿಯೂ ಮೊದಲು ದೇಹದಲ್ಲಿ ಬಾಹ್ಯಯಂತ್ರಗಳಿವೆ. ಅದರ ಹಿಂದೆ ಅದೇ ದೇಹದಲ್ಲಿ ಇಂದ್ರಿಯಗಳಿವೆ. ಆದರೂ ಇವೇ ಸಾಲದು. ನಾನ. ನಿಮ್ಮೊಡನೆ ಮಾತನಾಡುತ್ತಿರುವೆ ಎಂದು ಭಾವಿಸಿ. ನೀವು ಆಸಕ್ತಿಯಿಂದ ಅದನ್ನು ಕೇಳುತ್ತಿರುವಿರಿ. ಆಗ ಏನೊ ಆಗುವುದು. ಗಂಟೆ ಶಬ್ದ ಮಾಡುವುದು ಎಂದು ಇಟ್ಟುಕೊಳ್ಳೋಣ. ನಿಮಗೆ ಅದು ಕೇಳುವುದಿಲ್ಲ. ಆ ಧ್ವನಿಸ್ಪಂದನೆ ನಿಮ್ಮ ಕಿವಿಗೆ ಬಂತು, ಒಳಗೆ ಇರುವ ಟಿಂಪಾನಮ್‌ಗೆ (Tympanum) ತಾಕಿತು. ಆ ಪ್ರತಿಕ್ರಿಯೆಯನ್ನು ಮೆದುಳಿಗೂ ಒಯ್ದಾಯಿತು. ಮೆದುಳಿಗೆ ಒಯ್ಯುವವರೆಗೂ ಕ್ರಮಸರಿಯಾಗಿದ್ದರೆ ನಿಮಗೆ ಏತಕ್ಕೆ ಕೇಳಲಿಲ್ಲ? ಮತ್ತೇನೊ ಬೇಕಾಗಿತ್ತು. ಮನಸ್ಸು ಇಂದ್ರಿಯಕ್ಕೆ ಹೊಂದಿಕೊಂಡಿರಲಿಲ್ಲ. ಮನಸ್ಸಿಗೆ ಇಂದ್ರಿಯ ಸಂಬಂಧ ವಿಲ್ಲದೆ ಇದ್ದರೆ, ಇಂದ್ರಿಯಗಳು ಎಷ್ಟೋ ಸಮಾಚಾರ ತಂದರೂ ಮನಸ್ಸು ಸ್ವೀಕರಿಸುವುದಿಲ್ಲ. ಮನಸ್ಸು ಇಂದ್ರಿಯದೊಂದಿಗೆ ಸಂಬಂಧವನ್ನು ಕಲ್ಪಿಸಿ ಕೊಂಡಾಗ ಮಾತ್ರ ಸುದ್ದಿಯನ್ನು ಸ್ವೀಕರಿಸಲು ಸಾಧ್ಯ. ಆದರೆ ಇದು ಕೂಡ ದೃಶ್ಯವನ್ನು ಪೂರ್ಣಮಾಡುವುದಿಲ್ಲ. ಯಂತ್ರ ಬಾಹ್ಯದಿಂದ

ಸ್ಪಂದನೆ ತರಬಹುದು. ಇಂದ್ರಿಯ ಅದನ್ನು ಮೆದುಳಿಗೆ ಒಯ್ಯಬಹುದು, ಮನಸ್ಸು ಅದರೊಂದಿಗೆ ಸಂಬಂಧವನ್ನೂ ಇಟ್ಟುಕೊಂಡಿರಬಹುದು. ಆದರೂ ಇಂದ್ರಿಯ ಗ್ರಹಣ ಪೂರ್ಣವಾಗುವುದಿಲ್ಲ. ಮತ್ತೊಂದು ಆವಶ್ಯಕ. ಅದೇ ಆಂತರ್ಯದಲ್ಲಿ ಪ್ರತಿಕ್ರಿಯೆ ಯಾಗಬೇಕು. ಈ ಪ್ರತಿಕ್ರಿಯೆ ಯಿಂದ ಜ್ಞಾನ ಸಿದ್ಧಿಸುವುದು. ಹೊರಗೆ ಇರುವುದು ಸುದ್ಧಿಯ ಪ್ರವಾಹ ವನ್ನು ಮೆದುಳಿಗೆ ಕಳುಹಿಸುವಂತೆ ಇರುವುದು. ಮನಸ್ಸು ಇದನ್ನು ಬುದ್ಧಿಗೆ ಒಪ್ಪಿಸುವುದು. ಬುದ್ಧಿ ಇದನ್ನು ಆಗಲೆ ನೋಡಿದ ವಸ್ತುಗಳ ಅನುಭವದೊಂದಿಗೆ ಅದನ್ನು ಜೋಡಿಸಿ ಪ್ರತಿಕ್ರಿಯೆಯನ್ನು ಕಳುಹಿಸು ವುದು. ಆ ಪ್ರತಿಕ್ರಿಯೆಯಿಂದ ಗ್ರಹಣವಾಗುವುದು. ಇಲ್ಲಿ ಇಚ್ಛಾ ಶಕ್ತಿಇದೆ. ಪ್ರತಿಕ್ರಿಯಾ ರೂಪವಾದುದೆ ಬುದ್ಧಿ. ಆದರೆ ಇದೂ ಕೂಡ ಚಿತ್ರವನ್ನು ಪೂರೈಸುವುದಿಲ್ಲ. ಮತ್ತೊಂದು ಸ್ಥಿತಿ ಆವಶ್ಯಕ. ಇಲ್ಲಿ ಒಂದು ಮ್ಯಾಜಿಕ್ ಲ್ಯಾಂಟರನ್ ಇದೆ. ಅಲ್ಲಿ ಒಂದು ತೆರೆ ಇದೆ. ನಾನು ತೆರೆಯ ಮೇಲೆ ಚಿತ್ರವನ್ನು ಬಿಡಬೇಕಾಗಿದೆ. ನಾನು ಏನುಮಾಡಬೇಕು? ನಾನು ಲ್ಯಾಂಟರ್ನ್‌ನಲ್ಲಿ ಇರುವ ಬೆಳಕಿನ ಕಿರಣಗಳನ್ನೆಲ್ಲಾ ಕೇಂದ್ರೀಕರಿಸಿ ಅದನ್ನು ತೆರೆಯಮೇಲೆ ಬಿಡಬೇಕು. ನಾವು ಚಿತ್ರವನ್ನು ತೋರಬೇಕಾದರೆ ಚಲಿಸದೆ ಇರುವ ಯಾವುದಾದರೂ ಒಂದರ ಮೇಲೆ ಇದು ಬೀಳಬೇಕು. ಚಲಿಸುತ್ತಿರುವುದರ ಮೇಲೆ ಚಿತ್ರವನ್ನು ಜೋಡಿಸುವುದಕ್ಕೆ ಆಗುವುದಿಲ್ಲ. ಅದು ಸ್ಥಿರವಾಗಿರಬೇಕು. ಬೀಳುತ್ತಿರುವ ಬೆಳಕಿನ ಕಿರಣ ಚಲಿಸುತ್ತಿದೆ. ಇವೆಲ್ಲ ಒಂದುಕಡೆ ಸೇರಿ ಆಕಾರ ತಾಳಿ ಪೂರ್ಣವಾಗಬೇಕಾಗಿದೆ. ಅದು ಎಲ್ಲಿ ಬೀಳುವುದೊ ಅದು ಸ್ಥಿರವಾಗಿರಬೇಕು. ಇದರಂತೆಯೆ ಇಂದ್ರಿಯ ಮನಸ್ಸಿಗೆ ಒಯ್ಯು ವುದು, ಮನಸ್ಸು ಪುನಃ ಬುದ್ಧಿಗೆ ಒಯ್ಯುವುದು, ಚಿತ್ರವೆಲ್ಲ ಪೂರ್ಣ ವಾಗಿ ಹೊಂದಿಕೊಳ್ಳುವುದಕ್ಕೆ ಸ್ಥಿರವಾದ ಹಿನ್ನೆಲೆ ಇದ್ದೇ ಇರಬೇಕು. ಬದಲಾಯಿಸುತ್ತಿರುವ ನಮ್ಮ ವ್ಯಕ್ತಿತ್ವಕ್ಕೆ ಒಂದು ಐಕ್ಯತೆಯನ್ನು ಕೊಡು ವುದಾವುದು? ನಮ್ಮ ಹಲವು ಸಂವೇದನೆಗಳು ಒಂದುಗೂಡಿ ಭಾವನೆ ಯಾಗಿ ಸಂಪೂರ್ಣವಾಗುವುದು ಯಾವುದು? ಇಂತಹ ಗುರಿಯನ್ನು ಸಾಧಿಸಬೇಕಾದರೆ ಮತ್ತಾವುದೊ ಇರಬೇಕು. ಅದು ದೇಹ ಮತ್ತು ಮನಸ್ಸಿನೊಂದಿಗೆ ಹೋಲಿಸಿದಾಗ ಚಲಿಸುತ್ತಿಲ್ಲ ಎನ್ನುವಂತೆ ಇರಬೇಕು. ಮ್ಯಾಜಿಕ್ ಲ್ಯಾಟರ್ನ್ ಯಾವ ತೆರೆಯಮೇಲೆ ಚಿತ್ರವನ್ನು ಬೀರುವುದೊ ಆ ತೆರೆ, ಚಲಿಸುತ್ತಿರುವ ಕಿರಣಕ್ಕೆ ಹೋಲಿಸಿದರೆ ಸ್ಥಿರವಾಗಿರಬೇಕು.

ಸ್ಥಿರವಾಗಿಲ್ಲದೆ ಇದ್ದರೆ ಚಿತ್ರವೇ ಬೀಳುವುದಿಲ್ಲ. ಅಂದರೆ ಗ್ರಾಹಿಕ ಒಂದು ವ್ಯಕ್ತಿಯಾಗಿರಬೇಕು. ಯಾವುದರ ಮೇಲೆ ಮನಸ್ಸು ಚಿತ್ರವನ್ನೆಲ್ಲಾ ರಚಿಸುತ್ತಿದೆಯೊ ಯಾವುದರ ಮೇಲೆ ಮನಸ್ಸು ಬುದ್ಧಿ ತಂದ ಸಂವೇದನೆಗಳೆಲ್ಲ ಕಲೆತು ವರ್ಗೀಕರಣವಾಗಿ ಭಾವೈಕ್ಯವನ್ನು ನೀಡುವುದೊ ಅದೇ ಮಾನವನ ಜೀವ.

ಮಹತ್ ಅಥವಾ ವಿಶ್ವವ್ಯಾಪಿಯಾದ ಮನಸ್ಸೆ ಆಕಾಶ ಪ್ರಾಣದಂತೆ ಕವಲೊಡೆಯುವುದು ಎಂಬುದನ್ನು ನೋಡಿದೆವು. ಮನಸ್ಸಿನಾಚೆ ನಮ್ಮಲ್ಲಿ ಜೀವಾತ್ಮ ನಿರುವನು ಎಂಬುದನ್ನು ನೋಡಿದೆವು. ವಿಶ್ವದಲ್ಲಿ ಮಹತ್ತಿನ ಹಿಂದೆ ಆತ್ಮವಿದೆ. ಇದೇ ದೇವರು ಅಥವಾ ಪರಮಾತ್ಮ. ಮನುಷ್ಯನಲ್ಲಿ ಇದು ಜೀವಾತ್ಮ. ಈ ಬ್ರಹ್ಮಾಂಡದಲ್ಲಿ ಮಹತ್ತು ಆಕಾಶ ಪ್ರಾಣವಾಗುವುದು. ಪರಮಾತ್ಮನೆ ಮಹತ್ತು ( ವಿಶ್ವಮನಸ್ಸು ) ಆಗುವುದು. ಇದು ಜೀವಾತ್ಮನಿಗೂ ಹೋಲುವುದೆ ? ಅವನ ಆತ್ಮ ಮನಸ್ಸಿಗೆ ಕಾರಣವೆ ? ಮನಸ್ಸು ದೇಹಕ್ಕೆ ಕಾರಣವೆ ? ಅಂದರೆ ಅವನ ದೇಹ, ಮನಸ್ಸು, ಆತ್ಮ ಮೂರು ಬೇರೆಯೆ, ಅಥವಾ ಒಂದರಲ್ಲೆ ಮೂರೂ ಇವೆಯೆ, ಅಥವಾ ಒಂದೇ ವ್ಯಕ್ತಿಯ ಅವಿರ್ಭಾವನೆಯ ಭಿನ್ನ ಸ್ಥಿತಿಗಳೊ ? ಕ್ರಮೇಣ ಇದಕ್ಕೆ ಉತ್ತರವನ್ನು ಕಂಡುಹಿಡಿಯಲು ಯತ್ನಿಸೋಣ. ನಮಗೆ ಮೊದಲು ಸಿದ್ಧಿಸಿದ ವಿಷಯಗಳು ಇವು: ಬಾಹ್ಯ ದೇಹವಿದೆ ಇದರ ಹಿಂದೆ ಮನಸ್ಸು ಬುದ್ಧಿ ಆತ್ಮ ಇದೆ. ಮೊದಲನೆಯದಾಗಿ ಆತ್ಮ ಇದೆ. ಮೊದಲನೆಯದಾಗಿ ಆತ್ಮ ದೇಹದಿಂದ ಬೇರೆ, ಮನಸ್ಸಿನಿಂದ ಬೇರೆ ಎಂಬುದನ್ನು ತಿಳಿದಾಯಿತು. ಇದರ ವಿಷಯದಲ್ಲಿ ಧರ್ಮಗಳಲ್ಲಿ ಹಲವು ಭಿನ್ನಾಭಿಪ್ರಾಯಗಳಿವೆ. ದ್ವೈತಿಗಳೆಂದು ಕರೆದುಕೊಳ್ಳುವ ಮುಕ್ಕಾಲು ಪಾಲು ಜನ ಆತ್ಮನನ್ನು ಸಗುಣ ಎನ್ನುವರು. ಸುಖ ದುಃಖ ಭಾವನೆಗಳೆಲ್ಲ ಜೀವಿಗೆ ಸೇರಿದವು ಎನ್ನುವರು. ಅದ್ವೈತಿಗಳು ಆತ್ಮನಿಗೆ ಇಂತಹ ಗುಣಗಳಿವೆ ಎಂಬುದನ್ನು ಒಪ್ಪಿಕೊಳ್ಳುವುದಿಲ್ಲ. ಅದು ನಿರ್ಗುಣ ಎನ್ನುವರು.

ಮೊದಲು ದ್ವೈತಿಗಳನ್ನು ತೆಗೆದುಕೊಳ್ಳೋಣ. ಜೀವ ಮತ್ತು ಅದರ ಗುರಿಯ ವಿಷದಲ್ಲಿ ಅವರ ಅಭಿಪ್ರಾಯವನ್ನು ಇಡುವೆನು. ಅನಂತರ ಅದನ್ನು ವಿರೋಧಿಸುವ ಸಿದ್ಧಾಂತ, ಕೊನೆಗೆ ಅದ್ವೈತ ನೀಡುವ ಸಾಮರಸ್ಯ ಭಾವನೆಯನ್ನು ಪರೀಕ್ಷಿಸೋಣ. ಜೀವಾತ್ಮ ದೇಹ ಮನಸ್ಸಿಗಿಂತ ಬೇರೆ ಆಗಿರುವುದರಿಂದ, ಆಕಾಶ ಪ್ರಾಣದಿಂದ ಬೇರೆ ಆಗಿರುವುದರಿಂದ,

ಅದು ಜನನ ಮರಣ ರಹಿತವಾಗಿರಬೇಕು. ಏತಕ್ಕೆ ? ನಾಶ ಎಂದರೆ ಏನು ಅರ್ಥ ? ಕ್ಷಯಿಸುವುದು. ಮಿಶ್ರದಿಂದಾದ ವಸ್ತುಗಳಿಗೆ ಮಾತ್ರ ಇವು ಸಾಧ್ಯ. ಎರಡು ಮೂರು ವಸ್ತುಗಳಸಂಯೋಗದಿಂದ ಯಾವುದು ಆಗಿ ರುವುದೊಅದೆಲ್ಲ ನಾಶವಾಗಬೇಕು. ಯಾವುದು ಸಂಯೋಗದಿಂದ ಆಗಿಲ್ಲವೊ ಅದು ಮಾತ್ರ ಕ್ಷಯಿಸುವುದಿಲ್ಲ. ಆದಕಾರಣ ನಾಶವಾಗುವುದಿಲ್ಲ. ಅದು ಮಾತ್ರ ಅಮರವಾದುದು. ಅನಾದಿಯಿಂದಲೂ ಅದು ಇದೆ. ಅದು ಸೃಷ್ಟಿಯಾದುದಲ್ಲ. ಪ್ರತಿಯೊಂದು ಸೃಷ್ಟಿಯೂ ಸಂಯೋಗದ ಫಲ. ಶೂನ್ಯದಿಂದ ಸೃಷ್ಟಿಯಾಗುವುದನ್ನು ಇದುವರೆಗೂ ಯಾರೂ ನೋಡಿಲ್ಲ. ನಮಗೆ ತಿಳಿದಿರುವ ಸೃಷ್ಟಿವಸ್ತುಗಳೆಲ್ಲ ಆಗಲೇ ಇರುವ ವಸ್ತುಗಳ ಸಂಯೋಜನ. ಆದಕಾರಣ ಜೀವಾತ್ಮ ಮಿಶ್ರವಲ್ಲದೆ ಇರುವುದರಿಂದ ಹಿಂದೆ ಎಂದೆಂದೂ ಅವನಿದ್ದೆ ತೀರಬೇಕು, ಮುಂದೆ ಎಂದೆಂದಿಗೂ ಅವನಿರಬೇಕು. ದೇಹ ನಾಶವಾದರೆ ಆತ್ಮ ಜೀವಿಸಿರುವುದು. ವೇದಾಂತಿಗಳ ದೃಷ್ಟಿಯಲ್ಲಿ ದೇಹ ನಾಶವಾದರೆ ಜೀವ ಮನಸ್ಸಿನಲ್ಲಿ ಐಕ್ಯವಾಗುವುದು. ಮನಸ್ಸು ಪ್ರಾಣದಲ್ಲಿ ಲೀನವಾಗುವುದು. ಆ ಪ್ರಾಣ ಜೀವಾತ್ಮನಲ್ಲಿ ಐಕ್ಯವಾಗುವುದು. ಜಿವಾತ್ತ್ಮ ಸೂಕ್ಷ್ಮದೇಹ ಆಧ್ಯಾತ್ಮಿಕ ದೇಹ ಅಥವಾ ಮಾನಸಿಕ ದೇಹದೊಂದಿಗೆ ಬರುವನು. ನೀವು ಇದನ್ನು ಹೇಗೆ ಬೇಕಾದರೂ ಕರೆಯ ಬಹುತು. ಈ ದೇಹದಲ್ಲೆ ಮನುಷ್ಯನ ಸಂಸ್ಕಾರಗಳೆಲ್ಲ ಇವೆ. ಸಂಸ್ಕಾರ ಗಳೆಂದರೇನು ? ಮನಸ್ಸು ಸರೋವರದಂತೆ. ಪ್ರತಿಯೊಂದು ಆಲೋಚನೆಯೂ ಅದರ ಮೇಲೆ ಇರುವ ಅಲೆಯಂತೆ. ಹೇಗೆ ಸರೋವರದಲ್ಲಿ ಅಲೆ ಎದ್ದು ಪುನಃ ಮಾಯವಾಗುವುದೊ ಅದರಂತೆಯೇ ಚಿತ್ತಸರೋವರ ದಲ್ಲಿ ಅನವರತವೂ ಅಲೆ ಎದ್ದು ಬೀಳುತ್ತಿರುವುದು. ಆದರೆ ಅದು ಸಂಪೂರ್ಣ ಮಾಯವಾಗುವುದಿಲ್ಲ. ಅವುಗಳೆಲ್ಲ ಸೂಕ್ಷ್ಮ ಸೂಕ್ಷ್ಮ ಸ್ಥಿತಿ ಯಲ್ಲಿವೆ. ಮತ್ತೊಂದು ಸಮಯದಲ್ಲಿ ಇಚ್ಛಿಸಿದಾಗ ಎದ್ದು ಬರಲು ಸಿದ್ಧವಾಗಿವೆ. ಸೂಕ್ಷ್ಮಾವಸ್ಥೆಯಲ್ಲಿರುವ ಭಾವನೆಗಳನ್ನು ಪುನಃ ಅಲೆಯ ರೂಪಕ್ಕೆ ತರುವುದೆ ಸ್ಮೃತಿ. ನಾವು ಆಲೋಚಿಸಿದ ಪ್ರತಿಯೊಂದು ವಿಷಯವೂ, ನಾವು ಮಾಡಿದ ಪ್ರತಿಯೊಂದು ಕ್ರಿಯೆಯೂ ನಮ್ಮ ಮನಸ್ಸಿನಲ್ಲಿವೆ. ಇವೆಲ್ಲಾ ಅಲ್ಲಿ ಸೂಕ್ಷ್ಮಾವಸ್ಥೆಯಲ್ಲಿವೆ. ಮನುಷ್ಯ ಕಾಲವಾದರೆ ಅವನ ಭಾವನಾ ಮೊತ್ತವೆಲ್ಲ ಅವನಲ್ಲಿರುವುದು. ಅವು ಪುನಃ ಸೂಕ್ಷ್ಮವಸ್ತುಗಳ ಮೂಲಕ ಕೆಲಸಮಾಡುವುವು. ಇಂತಹ ಭಾವನೆಗಳಿಂದ ಅಲಂಕೃತವಾದಂತೆ ಇರುವ ಆತ್ಮ ಸೂಕ್ಷ್ಮದೇಹದೊಂ

ದಿಗೆ ಹೊರಗೆ ಹೋಗುವುದು. ಹಲವು ಭಾವನೆಗಳ ಮೊತ್ತದ ಪರಿಣಾಮ ಅವನ ಭವಿಷ್ಯವನ್ನು ನಿರ್ಧರಿಸುವುದು. ನಮ್ಮ ದೃಷ್ಟಿಯಲ್ಲಿ ಜೀವನಿಗೆ ಮೂರು ಗತಿಗಳಿವೆ.

ಯಾರು ಹೆಚ್ಚು ಆಧ್ಯಾತ್ಮಿಕ ಜೀವಿಗಳೊ ಅವರು ಕಾಲವಾದರೆ ಸೂರ್ಯ ರಷ್ಮಿಯ ಮೂಲಕ ಸೂರ್ಯಲೋಕಕ್ಕೆ ಹೋಗುವರು. ಅಲ್ಲಿಂದ ಅವರು ಚಂದ್ರಲೋಕಕ್ಕೆ ಹೋಗುವರು. ಅಲ್ಲಿಂದ ವಿದ್ಯುತ್ ಲೋಕಕ್ಕೆ ಹೋಗುವರು. ಅಲ್ಲಿ ಆಗಲೆ ಮುಕ್ತಾತ್ಮನಾದ ಒಬ್ಬ ಜೀವಿಯನ್ನು ಇವರು ಸಂಧಿಸುವರು. ಅವನು ಇವನನ್ನು ಲೋಕಗಳಲ್ಲೆಲ್ಲಾ ಶ್ರೇಷ್ಠ ವಾದ ಬ್ರಹ್ಮಲೋಕಕ್ಕೆ ಒಯ್ಯುವನು. ಅಲ್ಲಿ ದೇವರಿಗೆ ಸ್ವಲ್ಪಮಟ್ಟಿಗೆ ಸರಿಸಮನಾಗಿ ಸರ್ವಜ್ಞತೆ ಮತ್ತು ಸರ್ವಶಕ್ತಿಯನ್ನು ಪಡೆದುಕೊಳ್ಳುವನು. ದ್ವೈತಿಗಳ ದೃಷ್ಟಿಯಲ್ಲಿ ಅಲ್ಲಿ ಅವರು ಎಂದೆಂದಿಗೂ ಇರುವರು. ಅಥವಾ ಅದ್ವೈತಿಗಳ ದೃಷ್ಟಿಯಲ್ಲಿ ಕಲ್ಪಾಂತ್ಯದಲ್ಲಿ ದೇವರಲ್ಲಿ ಐಕ್ಯರಾಗುವರು. ಎರಡನೆಬಗೆ ಮಾನವರು ಫಲಾಪೇಕ್ಷೆಯಿಂದ ಕೆಲಸಮಾಡುತ್ತಿರುವರು. ಕಾಲವಾದಮೇಲೆ ಅವರ ಸತ್ಕರ್ಮಗಳು ಚಂದ್ರಲೋಕಕ್ಕೆ ಒಯ್ಯುವುವು. ಅಲ್ಲಿ ಹಲವು ಬಗೆಯ ಸ್ವರ್ಗಗಳಿವೆ. ಅಲ್ಲಿ ಅವರು ಸೂಕ್ಷ್ಮದೇವತೆಗಳ ದೇಹವನ್ನು ಪಡೆದು ಸ್ವರ್ಗಸುಖವನ್ನು ಬಹಳಕಾಲ ಅನುಭವಿಸುವರು. ಅವರು ಕರ್ಮಫಲ ಅನುಭವಿಸಿದಮೇಲೆ ಪುನಃ ಹಿಂದಿನ ಕರ್ಮಗಳು ಅವ ರನ್ನು ಬೆನ್ನುಹತ್ತುವುವು. ಅವರು ಸ್ವರ್ಗದಿಂದ ಕೆಳಗೆ ಬೀಳುವರು. ಅವರು ಗಾಳಿ ಮೋಡಗಳಮೂಲಕ ಮಳೆಯಂತೆ ಭೂಮಿಗೆ ಇಳಿಯುವರು. ಭೂಮಿಯಲ್ಲಿ ಯಾವುದಾದರೂ ಧಾನ್ಯದಲ್ಲಿರುವರು. ಅನಂತರ ಅವರಿಗೆ ಬೇರೆ ಒಂದು ಶರೀರವನ್ನು ಕೊಡಲು ಯೋಗ್ಯರಾದಂತವರು ಅದನ್ನು ತಿನ್ನುವರು. ಕೊನೆಗುಂಪಿನವರೆ ದುಷ್ಟರು. ಕಾಲವಾದರೆ ಭೂತಪ್ರೇತ ಗಳಾಗುವರು. ಇಂದ್ರಲೋಕಕ್ಕೂ ಭೂಮಿಗೂ ಮಧ್ಯಲೋಕದಲ್ಲಿ ಅವರು ಇರುವರು. ಅವುಗಳಲ್ಲಿ ಕೆಲವು ಮಾನವರಿಗೆ ಒಳ್ಳೆಯವು, ಮತ್ತೆ ಕೆಲವು ಕೆಟ್ಟವು. ಅವರುಕೂಡ ಕೆಲವುಕಾಲ ಅಲ್ಲಿದ್ದು ತಿರೆಗೆ ಬಿದ್ದು ಮೃಗಗಳಾಗು ವರು. ಮೃಗದೇಹದಲ್ಲಿ ಕೆಲವುಕಾಲ ಇದ್ದಾದಮೇಲೆ ಅಲ್ಲಿಂದ ಬಿಡುಗಡೆ ಹೊಂದಿ ಪುನಃ ಮನುಷ್ಯರಾಗುವರು. ಪುನಃ ಮುಕ್ತಿಗೆ ಪ್ರಯತ್ನಿಸುವು ದಕ್ಕೆ ಮತ್ತೊಂದು ಅವಕಾಶ ಅವರಿಗೆ ದೊರಕುವುದು. ಯಾರು ಪರಿ ಪೂರ್ಣಸ್ಥಿತಿಯನ್ನು ಸಮೀಪಿಸಿರುವರೊ, ಯಾರಲ್ಲಿ ದೋಷ ಅತಿ ಅಲ ವಾಗಿರುವುದೊ ಅವರು ಸೂರ್ಯರಷ್ಮಿ ಮೂಲಕ ಬ್ರಹ್ಮಲೋಕಕ್ಕೆ ಹೋಗು ವರು. ಫಲಾಪೇಕ್ಷೆಯಿಂದ ಸತ್ಕರ್ಮಮಾಡುವವರು ಚಂದ್ರಲೋಕಕೆ

ಹೋಗಿ ಅಲ್ಲಿ ದೇವತೆಗಳ ದೇಹವನ್ನು ಧರಿಸುವರು. ಅವರು ಕೂಡ ಪುನಃ ಮಾನವರಾಗ ಬೇಕಾಗಿದೆ. ಪೂರ್ಣತೆ ಪಡೆಯಲು ಮತ್ತೊಂದು ಅವಕಾಶ ಅವರಿಗೆ ದೊರಕುವುದು. ಯಾರು ಅತಿದೃಷ್ಟರಾಗಿರುವರೊ ಅವರು ಭೂತಪ್ರೇತಗಳಾಗುವರು. ಅನಂತರ ಅವರು ಮೃಗಗಳಾಗಬೇಕಾಗಿದೆ. ಅನಂತರ ಪುನಃ ಮಾನವರಾಗಿ ಮುಕ್ತಿಪಡೆಯಲು ಮತ್ತೊಂದು ಅವಕಾಶ ವನ್ನು ಪಡೆಯುವರು. ಪೃಥ್ವಿ ಕರ್ಮಭೂಮಿ. ಇಲ್ಲಿ ಮಾತ್ರ ಮನುಷ್ಯ ಒಳ್ಳೆಯ ಅಥವಾ ಕೆಟ್ಟಕರ್ಮವನ್ನು ಮಾಡಬಲ್ಲ. ಒಬ್ಬ ಮನುಷ್ಯ ಸ್ವರ್ಗಲೋಕದ ಸುಖಕ್ಕಾಗಿ ಸತ್ಕರ್ಮಮಾಡಿದರೆ ಅವನು ದೇವನಾಗು ವನು. ಅವನಲ್ಲಿ ಕೆಟ್ಟಕರ್ಮಗಳು ಇರುವುದಿಲ್ಲ. ಭೂಮಿಯಲ್ಲಿ ಮಾಡಿದ ಒಳ್ಳೆಯಕೆಲಸದ ಫಲವನ್ನು ಅಲ್ಲಿ ಅವನು ಅನುಭವಿಸುವನು. ಒಳ್ಳೆಯ ಕರ್ಮಫಲ ತೀರಿದಮೇಲೆ, ಹಿಂದೆಮಾಡಿದ ಪಾಪಕರ್ಮಗಳ ಪರಿಣಾಮವಾಗಿ ಅವನು ಪುನಃ ಧರೆಗೆ ಬರುವನು. ಇದರಂತೆಯೆ ಭೂತಪ್ರೇತಾದಿಗಳು ಆದವರು ಅದೆ ಸ್ಥಿತಿಯಲ್ಲಿರುವರು. ಹೊಸಕರ್ಮ ವನ್ನು ಅವರು ಮಾಡುವುದಿಲ್ಲ. ತಮ್ಮ ಹಿಂದಿನತಪ್ಪುಗಳಿಗೆ ಶಿಕ್ಷೆ ಅನು ಭವಿಸುವರು. ಅನಂತರ ಪ್ರಾಣಿಗಳಂತೆ ಹೊಸಕರ್ಮವನ್ನು ಮಾಡದೆ ಕೆಲವುಕಾಲ ಇರುವರು. ಆ ಸ್ಥಿತಿ ಪೂರೈಸಿದನಂತರ ಅವರೂ ಮನುಷ್ಯ ರಾಗುವರು. ಕೆಟ್ಟ ಮತ್ತು ಒಳ್ಳೆಕರ್ಮಗಳಿಗೆ ಒಂದು ಶಿಕ್ಷೆ ಅಥವಾ ಬಹುಮಾನದಿಂದ ಹೊಸಕರ್ಮ ಸಂಚಯನವಾಗುವುದಿಲ್ಲ. ಅವನು ಅನುಭವಿಸಬೇಕು ಅಷ್ಟೆ. ಒಂದು ಅದ್ಭುತ ಒಳ್ಳೆ ಅಥವಾ ಕೆಟ್ಟಕರ್ಮ ವಿದ್ದರೆ ಅದರಿಂದ ತಕ್ಷಣವೆ ಫಲಪ್ರಾಪ್ತಿಯಾಗುವುದು. ಒಬ್ಬ ಜೀವಾ ವಧಿ ಹೀನಕರ್ಮಗಳನ್ನು ಮಾಡುತ್ತಿದ್ದರೆ, ಒಂದು ಸತ್ಕರ್ಮವನ್ನು ಮಾತ್ರ ಮಾಡಿದರೆ ಅದರ ಪರಿಣಾಮ ತಕ್ಷಣವೆ ಬರುವುದು. ಇದನ್ನು ಅನುಭವಿಸಿದಮೇಲೆ ತನ್ನ ಹೀನಕರ್ಮಗಳ ಶಿಕ್ಷೆಯನ್ನೂ ಅನುಭವಿಸ ಬೇಕು. ಯಾರು ಕೆಲವು ಒಳ್ಳೆಯ ಮಹಾಕಾರ್ಯಗಳನ್ನು ಮಾಡುತ್ತಾ ರೆಯೊ, ಆದರೆ ಅವರ ನಿತ್ಯಜೀವನ ಅಷ್ಟು ಪರಿಶುದ್ಧವಾಗಿರುವುದಿಲ್ಲವೊ ಅವರು ದೇವತೆಗಳಾಗಿರುವರು. ದೇವತೆಗಳ ಆನಂದವನ್ನು ಕೆಲವುಕಾಲ ಅನುಭವಿಸಿದಮೇಲೆ ಅವರು ಪುನಃ ಮಾನವರಾಗುವರು. ಸತ್ಕರ್ಮ ಫಲ ತೀರಿದಮೇಲೆ ಪೂರ್ವಪಾಪಕರ್ಮವನ್ನು ಅನುಭವಿಸಬೇಕಾಗುವುದು. ಯಾರು ಅತಿನೀಚ ಪಾಪಕಾರ್ಯಗಳನ್ನು ಮಾಡುವರೊ ಅವರು ಭೂತ ಪ್ರೇತಗಳ ಜನ್ಮಧಾರಣೆ ಮಾಡಬೇಕಾಗುವುದು. ಪಾಪಕರ್ಮಗಳ ಪರಿ

ಣಾವು ತೀರಿದಮೇಲೆ ಅವರುಮಾಡಿದ ಕಿಂಚಿತ್ ಸತ್ಕರ್ಮ ಅವರನ್ನು ಪುನಃ ಮಾನವರನ್ನಾಗಿ ಮಾಡುವುದು. ಪುನಃ ಹಿಂತರುಗದೆಇರುವ ಬ್ರಹ್ಮ ಲೋಕಮಾರ್ಗವೆ ದೇವಯಾನ ಮಾರ್ಗ. ಮತ್ತೊಂದು ಪಿತೃಯಾನ

ವೇದಾಂತ ತತ್ತ್ವಪ್ರಕಾರ ಮಾನವ ವಿಶ್ವದಲ್ಲಿ ಸರ್ವಶ್ರೇಷ್ಠ ಪ್ರಾಣಿ. ಈ ಕರ್ಮಭೂಮಿಯೇ ಶ್ರೇಷ್ಠಲೋಕ. ಇಲ್ಲಿಮಾತ್ರ ಒಬ್ಬ ಪೂರ್ಣನಾಗುವುದಕ್ಕೆ ಶ್ರೇಷ್ಠ ಅವಕಾಶವಿರುವುದು. ದೇವತೆಗಳು ದೇವದೂತರು ಇಂತಹವರೆಲ್ಲರೂ ಪೂರ್ಣರಾಗಬೇಕಾದರೆ ಮಾ ನ ವ ರಾ ಗ ಬೇ ಕು. ಈ ಮಾನವಜೀವನವೆ ಮಹಾಕೇಂದ್ರ, ಇದೊಂದೆ ಅತ್ಯುತ್ತಮಸ್ಥಿ ಮತ್ತು ಅತಿ ಶ್ರೇಷ್ಠ ಅವಕಾಶ.

ತತ್ತ್ವದ ಬೇರೊಂದುಭಾಗಕ್ಕೆ ಈಗ ಬರುವೆವು. ನಾನು ಈಗ ವಿವರಿಸುತ್ತಿದ್ದ ಆತ್ಮ ಸಿದ್ಧಾಂತವನ್ನು ನಂಬದ ಬೌದ್ಧರಿರುವರು. ಅವರು "ದೇಹ ಮತ್ತು ಮನಸ್ಸಿಗೆ ಒಂದು ಸ್ಥಿರ ಹಿನ್ನೆಲೆ ಇದೆ ಎಂದು ಏತಕ್ಕೆ ಊಹಿಸಬೇಕು. ಸುಮ್ಮನೆ ಆಲೋಚನೆ ಏತಕ್ಕೆ ಸಂಚರಿಸುತ್ತಿರಬಾರದು? ದೇಹ ಮನಸ್ಸಿಗಿಂತ ಮೂರನೆಯದಾದ ಆತ್ಮನನ್ನು ಏತಕ್ಕೆ ಊಹಿಸಬೇಕು? ಇದರ ಪ್ರಯೋಜನವೇನು? ಶರೀರ ಒಂದೆ ಸಾಲದೆ ವಿವರಿಸುವುದಕ್ಕೆ? ಮೂರನೆಯದನ್ನು ಏತಕ್ಕೆ ತೆಗೆದುಕೊಳ್ಳುತ್ತೀರಿ?" ಎನ್ನುವರು. ಇವು ಬಹಳ ಪ್ರಬಲವಾದ ಆಕ್ಷೇಪಣೆ, ಅವರ ಯುಕ್ತಿಸರಣಿ ಸಾಧುವಾಗಿಯೆ ತೋರುವುದು. ಹೊರಗಿನ ಅನ್ವೇಷಣಾದೃಷ್ಟಿಯಿಂದ ದೇಹವೆ ಸಾಕಾದಷ್ಟು ವಿವರಣೆಯಂತೆ ತೋರುವುದು. ನಮ್ಮಲ್ಲಿ ಹಲವರು ಈ ರೀತಿಯೆ ಭಾವಿಸುವರು. ಹಿಂದೆ ಒಂದು ಆತ್ಮ ಏತಕ್ಕೆ ಇರಬೇಕು? ದೇಹ ಮನಸ್ಸು ಅಲ್ಲದೆ ಅದಕ್ಕೆ ಹಿನ್ನೆಲೆಯಂತೆ ಮತ್ತೊಂದು ಏತಕ್ಕೆ ಇರಬೇಕು? ದೇಹ ಮನಸ್ಸುಮಾತ್ರ ಇರಲಿ. ಅನವರತ ಬದಲಾಯಿಸುತ್ತಿರುವ ದ್ರವ್ಯ ಪ್ರವಾಹಕ್ಕೆ ದೇಹ ಎಂದು ಹೆಸರು. ಅನವರತ ಬದಲಾಯಿಸುತ್ತಿರುವ ಆಲೋಚನಾಪ್ರವಾಹಕ್ಕೆ ಮನಸ್ಸು ಎಂದು ಹೆಸರು. ಇವುಗಳಲ್ಲಿ ತೋರಿಕೆಯ ಐಕ್ಯತೆಯನ್ನು ಯಾವುದು ಉಂಟುಮಾಡುವುದು? ಇಂತಹ ಐಕ್ಯತೆ ಇಲ್ಲವೇ ಇಲ್ಲ ಎನ್ನೋಣ. ಒಂದು ಉರಿಯುತ್ತಿರುವ ಪಂಜನ್ನು ವೇಗದಿಂದ ತಿರುಗಿಸಿ. ಬೆಂಕಿಯ ಒಂದು ವೃತ್ತವನ್ನು ನೀವು ನೋಡುವಿರಿ. ನಿಜವಾಗಿಯೂ ಒಂದು ಬೆಂಕಿ ವೃತ್ತವಿಲ್ಲ. ಆದರೆ ಸುತ್ತುತ್ತಿರುವುದರಿಂದ ಹಾಗೆ ಕಾಣುವುದು. ಇದರಂತೆಯೆ ಈ ಜೀವದಲ್ಲಿ ಐಕ್ಯತೆ ಇಲ್ಲ. ಎಲ್ಲವೂ ಅನವರತ ಹರಿಯುವ ದ್ರವ್ಯರಾಶಿ. ಇದನ್ನೆಲ್ಲಾ ಐಕ್ಯ

ಎಂದು ಬೇಕಾದರೆ ಕರೆಯಬಹುದೇ ಹೊರತು ಇದಕ್ಕೆ ಹೆಚ್ಚೇನೂ ಇಲ್ಲ. ಇದರಂತೆಯೆ ಮನಸ್ಸುಕೂಡ. ಪ್ರತಿಯೊಂದು ಆಲೋಚನೆಯೂ ಬೇರೆ. ಧಾವಿಸುತ್ತಿರುವ ಪ್ರವಾಹ ಐಕ್ಯತೆಯ ಒಂದು ಭ್ರಾಂತಿಯನ್ನು ಹುಟ್ಟಿಸುವುದು. ಮೂರನೆ ವಸ್ತುವಿಗೆ ಆವಶ್ಯಕವೇ ಇಲ್ಲ. ಪ್ರಪಂಚದಲ್ಲಿ ದ್ರವ್ಯ ಮತ್ತು ಮನಸ್ಸು ಮಾತ್ರ ಇರುವುದು. ಅದರ ಹಿಂದೆ ಮತ್ತೊಂದನ್ನು ಊಹಿಸಬೇಡಿ. ಆಧುನಿಕ ಕಾಲದ ಕೆಲವು ತಾತ್ತ್ವಿಕರು ಇಂತಹ ಬೌದ್ಧರ ಭಾವನೆ ತೆಗದುಕೊಂಡಿರುವರು. ಪ್ರತಿಯೊಬ್ಬರೂ ಇವು ಹೊಸವು ತಮ್ಮ ಸ್ವಂತ ಸೃಷ್ಟಿ ಎಂದು ಭಾವಿಸುವರು. ಮುಕ್ಕಾಲುಪಾಲು ಬೌದ್ಧದಾರ್ಶನಿಕರ ಮುಖ್ಯಭಾವನೆಯೆ, ಈ ಪ್ರಪಂಚವೆ ಸಾಕು ವಿವರಿಸುವುದಕ್ಕೆ, ಬೇರೊಂದು ಹಿನ್ನೆಲೆ ಅನಾವಶ್ಯಕ ಎಂಬುದು. ಇರುವುದೆಲ್ಲ ಇಂದ್ರಿಯ ಜಗತ್ತು ಮಾತ್ರ. ಈ ವಿಶ್ವಕ್ಕೆ ಮತ್ತೊಂದು ಆಧಾರವಿದೆ ಎಂದು ಏತಕ್ಕೆ ಯೋಚಿಸಬೇಕು? ಎಲ್ಲಾ ಗುಣಗಳ ಒಂದು ಸಂಯೋಗ. ಈ ಗುಣಗಳೆಲ್ಲಾ ಇರುವುದಕ್ಕೆ ಏತಕ್ಕೆ ಒಂದು ಕಾಲ್ಪನಿಕದ್ರವ್ಯವಿರಬೇಕು? ಗುಣಗಳು ಬಹಳ ಬೇಗ ಬದಲಾಯಿಸುವುದರಿಂದ ದ್ರವ್ಯದ ಭಾವನೆ ಬರುವುದು. ಬದಲಾಯಿಸದ ಯಾವುದೊ ಒಂದು ಗುಣ ಅದರಲ್ಲಿರುವುದೆಂದು ಅಲ್ಲ. ಕೆಲವರ ವಾದಸರಣಿ ಎಷ್ಟು ಚಮತ್ಕಾರವಾಗಿದೆ ಎಂಬುದನ್ನು ನೋಡಿ. ಮಾನವನ ಸಾಧಾರಣ ಸ್ವಭಾವಕ್ಕೆ ಇದು ಸುಲಭವಾಗಿ ಹಿಡಿಸುವುದು. ನಿಜವಾಗಿ ಕೋಟಿಗೊಬ್ಬನೂಕೂಡ ದೃಶ್ಯವಲ್ಲದೆ ಬೇರಾವುದನ್ನೂ ಆಲೋಚಿಸುವುದೇ ಇಲ್ಲ. ಜನಸಾಧಾರಣಕ್ಕೆ ಪ್ರಕೃತಿ, ಬದಲಾಯಿಸುತ್ತಿರುವ ಸುತ್ತುತ್ತಿರುವ ಮಿಶ್ರವಾಗುತ್ತಿರುವ ಚಲನೆಯ ಮೊತ್ತದಂತೆ ಕಾಣುವುದು. ಅದರ ಹಿಂದೆ ಇರುವ ಶಾಂತಸಾಗರದ ಅನುಭವ ನಮ್ಮಲ್ಲಿ ಕೆಲವರಿಗೂ ಆಗಿಲ್ಲ. ನಮಗೆ ಅದು ಯಾವಾಗಲೂ ಅಲೆಗಳ ಸ್ತೋಮವೆ. ನಮಗೆ ಪ್ರಪಂಚ ಏಳುಬೀಳುತ್ತಿರುವ ಅಲೆಯ ಸಮ್ಮೋಹದಂತೆ ಕಾಣುವುದು, ಎರಡು ಅಭಿಪ್ರಾಯಗಳಿವೆ: ಒಂದು ಅಭಿಪ್ರಾಯ, ದೇಹ ಮನಸ್ಸಿನ ಹಿಂದೆ ಅವಿಕಾರಿಯಾದ ಅಚಲವಾದ ವಸ್ತುವೊಂದಿದೆ ಎನ್ನುವುದು; ಮತ್ತೊಂದು ಅಭಿಪ್ರಾಯ, ಅವಿಕಾರಿಯಾದುದು ಅಚಲವಾದುದು ಯಾವುದೂ ಇಲ್ಲ ಬದಲಾವಣೆಯಲ್ಲದೆ ಮತ್ತಾವುದೂ ಇಲ್ಲವೆನ್ನುವುದು. ಈ ಭಿನ್ನಾಭಿಪ್ರಾಯಗಳ ಪರಿಹಾರ ಮತ್ತೊಂದು ಭಾವನೆಯಿಂದ ಬರುವುದು. ಅದೆ ಅದ್ವೈತ.

ಬದಲಾಯಿಸದ ಇರುವ ಒಂದು ಹಿನ್ನೆಲೆಯನ್ನು ದ್ವೈತಿಗಳು

ಊಹಿಸುವುದು ಸರಿ, ಅವಿಕಾರಿಯಾಗದೆ ಇರುವುದು ಒಂದು ಇಲ್ಲದೆ ಇದ್ದರೆ ವಿಕಾರವಾಗುತ್ತಿರುವುದನ್ನು ನಾವು ಊಹಿಸಲಾರೆವು ಎನ್ನುವುದು. ಒಂದು ಬದಲಾಯಿಸುವುದನ್ನು ನೋಡಬೇಕಾದರೆ ಅದಕ್ಕಿಂತ ಕಡಿಮೆ ಬದಲಾಯಿಸುವುದರಿಂದ ಮಾತ್ರ ಸಾಧ್ಯ. ಇದಕ್ಕಿಂತ ಕಡಿಮೆ ಬದಲಾಯಿಸುವುದರ ದೃಷ್ಟಿಯಿಂದ ಮೊದಲನೆಯದು ಕೂಡ ಬದಲಾಯಿಸುತ್ತಿರುವುದು ಎಂದು ಹೇಳಬಹುದು. ಹೀಗೆಯೆ ಮುಂದುವರಿದರೆ ಕೊನೆಗೆ ಸ್ವಲ್ಪವೂ ಬದಲಾಯಿಸದೆ ಇರುವುದನ್ನು ನಾವು ಒಪ್ಪಿಕೊಳ್ಳಬೇಕಾಗಬಹುದು. ಈ ಅವಿರ್ಭಾವನೆಯೆಲ್ಲಾ ಹಿಂದೆ ಮೌನವಾಗಿ ನಿಸ್ಪಂದವಾಗಿ ಪರಸ್ಪರ ವಿರೋಧಿಸುವ ಶಕ್ತಿಯೆಲ್ಲ ಸಮುಕಟ್ಟಿನಲ್ಲಿ ಇದ್ದಿರಬೇಕಾಗಿತ್ತು. ಆಗ ಮತ್ತಾವುದೂ ಅದರಮೇಲೆ ತನ್ನ ಪ್ರಭಾವವನ್ನು ಬೀರಿರಲಿಲ್ಲ. ಸಮತ್ವದಲ್ಲಿ ಬದಲಾವಣೆಯಾದರೆ ಮಾತ್ರ ಶಕ್ತಿ ಕ್ರಿಯಾರೂಪತಾಳುವುದು. ಈ ವಿಶ್ವ ತನ್ನ ಹಿಂದಿನ ಸಮತ್ವಸ್ಥಿತಿಗೆ ಹಿಂತಿರುಗುವುದಕ್ಕೆ ಧಾವಿಸುತ್ತಿದೆ. ನಮಗೆ ಯಾವುದಾದರೂ ನಿಶ್ಚಯವಾಗಿ ಗೊತ್ತಿದ್ದರೆ ಅದೇ ಇದು. ದ್ವೈತಿಗಳು ಅವಿಕಾರಿಯಾದುದು ಇದೆ ಎಂದು ಸಾಧಿಸಿದರೆ ಅವರು ಸತ್ಯ. ಆದರೆ ಅದು ದೇಹ ಮನಸ್ಸು ಅಲ್ಲದುದು. ಅದಕ್ಕಿಂತ ಬೇರೆ ಎನ್ನುವ ಅವರ ವಿಭಜನೆ ಮಾತ್ರ ತಪ್ಪು. ವಿಶ್ವವೆಲ್ಲ ಬರೀ ಬದಲಾವಣೆ ಎಂದು ಬೌದ್ಧರು ವಾದಿಸಿದರೆ ಅವರು ನಿಜವಾಗಿ ಸರಿ; ಏಕೆಂದರೆ ನಾನು ಎಲ್ಲಿಯವರೆವಿಗೂ ವಿಶ್ವದಿಂದ ಬೇರೆಯಾಗಿರುವೆನೊ, ನಾನು ಎಲ್ಲಿಯವರೆಗೆ ಹಿಂದೆ ನಿಂತು ನನ್ನಮುಂದಿರುವುದನ್ನು ನೋಡುವೆನೊ, ಎಲ್ಲಿಯವರೆಗೆ ದೃಗ್ ದೃಶ್ಯನೆಂಬ ಎರಡು ಇವೆಯೊ, ಅಲ್ಲಿಯವರೆಗೆ ಪ್ರಪಂಚ ನಿರಂತರ ಬದಲಾಯಿಸುವಂತೆ ತೋರುವುದು. ಆದರೆ ಸತ್ಯವಾಗಿ ಪ್ರಪಂಚದಲ್ಲಿ ವಿಕಾರ ಮತ್ತು ಅವಿಕಾರ ಎರಡೂ ಇದೆ. ಜೀವ ಮನಸ್ಸು ದೇಹ ಎಂಬ ಮೂರು ವಸ್ತುಗಳಿಲ್ಲ. ಈ ಮೂರು ವಸ್ತುಗಳಿಂದ ಆಗಿರುವುದು ನಿಜವಾಗಿ ಒಂದೆ. ದೇಹದಂತೆ ಮನಸ್ಸಿನಂತೆ ದೇಹ ಮತ್ತು ಮನಸ್ಸಿಗೆ ಅತೀತವಾಗಿರುವಂತೆ ಇರುವುದೆಲ್ಲ ಒಂದೇ ವಸ್ತು. ಆದರೆ ಒಂದು ದೃಷ್ಟಿಯಿಂದ ಇದಾವುದೂ ಅಲ್ಲ. ಯಾರು ದೇಹವನ್ನು ನೋಡುವರೊ ಅವರು ಮನಸ್ಸನ್ನು ನೋಡಲಾರರು ; ಯಾರು ಮನಸ್ಸನ್ನು ನೋಡುವರೊ ಅವರು ಜೀವನನ್ನು ನೋಡಲಾರರು. ಯಾರು ಜೀವವನ್ನು ನೋಡುವರೊ ಅವರಿಗೆ ದೇಹ ಮನಸ್ಸು ಮಾಯವಾಗಿದೆ. ಯಾರು ಚಲನೆಯನ್ನು ನೋಡುವರೊ ಅವರು ಅಚಲನವಾದುದನ್ನು ನೋಡಲಾರರು. ಯಾರು ಸಂಪೂರ್ಣ ಅಚ

ಲವಾಗಿರುವುದನ್ನು ನೋಡುವರೊ ಅವರಿಗೆ ಚಲನೆ ಮಾಯವಾಗಿದೆ. ಹಗ್ಗವನ್ನು ಹಾವೆಂದು ಭ್ರಮಿಸುವರು, ಯಾರು ಹಗ್ಗವನ್ನು ಹಾವೆಂದು ಭ್ರಮಿಸುವರೊ ಅವರಿಗೆ ಹಗ್ಗಮಾಯವಾಗಿದೆ. ಭ್ರಾಂತಿಹೋಗಿ ಅವನು ಹಗ್ಗವನ್ನು ನೋಡಿದಾಗ ಹಾವು ಮಾಯವಾಗಿರುವುದು.

ಹಾಗಾದರೆ ವಿಶ್ವವ್ಯಾಪಿಯಾದ ಅಸ್ತಿತ್ವವೊಂದೆ ಇರುವುದು. ಅದೆ ಹಲವದರಂತೆ ತೋರುತ್ತಿದೆ. ಆತ್ಮ ಜೀವ ಅಥವಾ ವಸ್ತುವೊಂದೆ ಪ್ರಪಂಚದಲ್ಲಿರುವುದು. ಅದ್ವೈತಿಗಳು ಇದನ್ನೇ ಬ್ರಹ್ಮ ಎನ್ನುವರು. ಕಾಲ ದೇಶಗಳ ಮೂಲಕ ಅದು ವಿವಿಧವಾಗಿ ಕಾಣುತ್ತಿದೆ. ಸಾಗರದ ಅಲೆಯನ್ನು ನೋಡಿ. ಒಂದು ಅಲೆಯೂ ಸಾಗರದಿಂದ ಬೇರೆಯಲ್ಲ. ಆದರೆ ಯಾವುದು ಅಲೆ ತೋರಿಕೆಗೆ ಬೇರೆ ಎಂದು ಕಾಣುವಂತೆ ಮಾಡುವುದು ? ನಾಮ ರೂಪ. ಅಲೆಯ ರೂಪ ಮತ್ತು ಅದಕ್ಕೆ ಕೊಡುವ ಅಲೆಯ ಹೆಸರು. ಇದೇ ಸಾಗರದಿಂದ ಅದನ್ನು ಬೇರೆ ಮಾಡುವುದು. ನಾಮ ರೂಪಗಳು ಹೋದರೆ ಅದೇ ಸಮುದ್ರವಾಗಿರುವುದು. ಅಲೆಗೂ ಸಮುದ್ರಕ್ಕೂ ಯಾರು ಭಿನ್ನತೆಯನ್ನು ಕಲ್ಪಿಸಬಲ್ಲರು ? ಈ ವಿಶ್ವವೆಲ್ಲ ಅಖಂಡಬ್ರಹ್ಮ. ನಾಮರೂಪು ಈ ವೈವಿಧ್ಯತೆಯನ್ನೆಲ್ಲ ಸೃಷ್ಟಿಸಿದೆ. ಸೂರ್ಯ ಕೋಟ್ಯಂತರ ಹಿಮ ಮಣಿಯ ಮೇಲೆ ಬೆಳಗಿದಾಗ ಪ್ರತಿಯೊಂದರಲ್ಲಿಯೂ ಪೂರ್ಣ ಸೂರ್ಯನ ಪ್ರತಿಬಿಂಬ ಇರುವಂತೆ ಪ್ರಪಂಚದಲ್ಲಿರುವ ಒಂದು ಆತ್ಮ, ಒಂದು ಜೀವ, ಒಂದೇವಸ್ತು ವಿಭಿನ್ನ ನಾಮರೂಪಗಳಲ್ಲಿಯೂ ಪ್ರತಿ ಬಿಂಬಿತವಾಗಿ ಬೇರೆ ಬೇರೆ ಆದಂತೆ ತೋರುವುದು. ಆದರೆ ಸತ್ಯವಾಗಿ ಇರುವುದು ಒಂದೆ. ನಾನು ಇಲ್ಲ, ನೀನು ಇಲ್ಲ. ಎಲ್ಲಾ ಅಖಂಡ ಏಕ. ಇದೆಲ್ಲಾ ನಾನು ಅಥವಾ ನೀನು. ಎರಡು ಎಂಬ ದ್ವೈತಭಾವನೆ ಅಸತ್ಯ. ನಾವು ಸಾಧಾರಣವಾಗಿ ನೋಡುವಂತೆ ಇಡೀ ವಿಶ್ವ ನಮ್ಮ ಭ್ರಾಂತಿಯ ಪರಿಣಾಮ. ವಿವೇಕ ಬಂದಾಗ, ನಿತ್ಯ ಅನಿತ್ಯವಸ್ತು ಎರಡಿಲ್ಲ ಇರುವುದೊಂದೆ ಎಂದು ಅರಿತಾಗ, ನಾನೇ ವಿಶ್ವದಂತೆ ತೋರುವುದು. ಈಗ ಪ್ರತಿಕ್ಷಣವೂ ವಿಕಾರವಾಗುತ್ತಿರುವ ವಿಶ್ವದಂತೆ ತೋರುವವನೂ ನಾನೆ, ನಾನು ಎಲ್ಲಾ ವಿಕಾರ ಗುಣಗಳಿಗೆ ಅತೀತ. ನನ್ನ ಸ್ವಭಾವವೆ ನಿತ್ಯಮುಕ್ತ, ನಿತ್ಯಶುದ್ಧ.

ಆದಕಾರಣ ಒಂದೇ ಆತ್ಮ ಇರುವುದು. ಅದು ನಿತ್ಯ ಶುದ್ಧ, ನಿತ್ಯ ಪೂರ್ಣ, ಅದು ಅವಿಕಾರಿ. ಅದು ಎಂದಿಗೂ ವಿಕಾರವಾಗಿಲ್ಲ. ವಿಶ್ವದಂತೆ ಕಾಣುವ ಹಲವು ಬದಲಾವಣೆಗಳೆಲ್ಲ ಆತ್ಮನಲ್ಲಿರುವ ತೋರಿಕೆ ಮಾತ್ರ.

ಆತ್ಮನ ಮೇಲೆ ನಾಮರೂಪಗಳು ಕನಸನ್ನೆಲ್ಲಾ ಕಲ್ಪಿಸಿವೆ. ಸಮುದ್ರದಿಂದ ಅಲೆ ಬೇರೆಯಾದಂತೆ ಮೂಡುವುದು ಅಲೆ. ಅಲೆ ನಿಂತರೆ ರೂಪು ನಿಲ್ಲುವುದೆ ? ಇಲ್ಲ, ಅದೂ ಮಾಯವಾಗುವುದು. ಅಲೆ ಇರಬೇಕಾದರೆ ಸಮುದ್ರ ಇರಬೇಕು. ಆದರೆ ಸಮುದ್ರ ಇರಬೇಕಾದರೆ ಅಲೆ ಇರಬೇಕಾಗಿಲ್ಲ. ಅಲೆ ಇರುವವರೆಗೆ ರೂಪು ಇರುವುದು. ಅಲೆ ಮಾಯವಾದೊಡನೆ ಅದೂ ಮಾಯವಾಗುವುದು, ನಿಲ್ಲಲಾರದು. ನಾಮ ರೂಪ ಮಾಯೆಯಿಂದ ಬಂದುದು. ಈ ಮಾಯೆಯೆ ವ್ಯಕ್ತಿಗೆ ಕಾರಣ. ಒಂದು ಮತ್ತೊಂದರಿಂದ ಬೇರೆ ಎನ್ನುವ ಭಾವ ಬರುವುದಕ್ಕೆ ಕಾರಣ. ಆದರೂ ಅದು ನಿಜವಲ್ಲ. ಮಾಯೆ ಇದೆ ಎನ್ನಲಾಗುವುದಿಲ್ಲ. ರೂಪು ಇದೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಅದು ಇರಬೇಕಾದರೆ ಮತ್ತೊಂದು ಇರಬೇಕು. ಅದನ್ನು ಇಲ್ಲ ಎಂದು ಹೇಳಲೂ ಆಗುವುದಿಲ್ಲ. ಅದೇ ಈ ವ್ಯತ್ಯಾಸಕ್ಕೆಲ್ಲಾ ಕಾರಣಭೂತವಾಗಿದೆ. ಅದ್ವೈತ ವೇದಾಂತ ರೀತಿ, ಈ ಮಾಯೆ ಅಜ್ಞಾನ ಅಥವಾ ನಾಮ ರೂಪ, ಅಥವಾ ಐರೋಪ್ಯರು ಕರೆಯುವಂತೆ ಕಾಲದೇಶನಿಮಿತ್ತ, ಇವೆಲ್ಲ ಬಂದಿರುವುದು ಒಂದು ಅಖಂಡ ಅಸ್ತಿತ್ವದಿಂದ. ಈ ವೈವಿಧ್ಯ ವಿಶ್ವವನ್ನು ಅದು ನಮಗೆ ತೋರುತ್ತಿದೆ. ವಸ್ತುತಃ ಈ ವಿಶ್ವವೆಲ್ಲ ಒಂದೆ. ಎಲ್ಲಿಯವರೆಗೆ ಎರಡು ಪರಮ ಸತ್ಯಗಳಿವೆ ಎಂದು ಭಾವಿಸುವನೊ ಅದು ತಪ್ಪು. ಒಂದು ಮಾತ್ರ ಇರುವುದು ಎಂದು ತಿಳಿದಾಗ ಸತ್ಯ. ದೇಹ ಮನಸ್ಸು ಮತ್ತು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರತಿದಿನ ಇದು ಉದಾಹರಿತವಾಗುತ್ತಿದೆ. ನೀವು ನಾನು ಸೂರ್ಯ ಚಂದ್ರ ತಾರಾವಳಿ ಒಂದೇ ದ್ರವ್ಯ ಸಮುದ್ರದಲ್ಲಿರುವ ವಿಭಿನ್ನ ಕಣಗಳ ಹೆಸರು. ಈ ಆಕಾರ ಯಾವಾಗಲೂ ಬದಲಾಯಿಸುತ್ತಿದೆ ಎಂಬುದನ್ನು ಇಂದು ತೋರಿರುವರು. ಸೂರ್ಯನಲ್ಲಿ ಕೆಲವು ತಿಂಗಳ ಹಿಂದೆ ಇದ್ದ ಶಕ್ತಿ ಅಂಶ ಈಗ ನನ್ನಲ್ಲಿರಬಹುದು, ನಾಳೆ ಇದು ಮೃಗದಲ್ಲಿರಬಹುದು, ನಾಡಿದ್ದು ಸಸ್ಯದಲ್ಲಿರಬಹುದು. ಇದು ಯಾವಾಗಲೂ ಬಂದು ಹೋಗುತ್ತಿದೆ. ನಾಮರೂಪಗಳಿಂದ ವ್ಯತ್ಯಾಸವಾದ ಅನಂತ ಅಖಂಡ ದ್ರವ್ಯರಾಶಿ ಇದು. ಅಲ್ಲಿ ಒಂದು ಗುರುತು ಸೂರ್ಯ ಮತ್ತೊಂದು ಚಂದ್ರ ಇನ್ನೊಂದು ನಕ್ಷತ್ರ ಮನುಷ್ಯ ಪ್ರಾಣಿ ಸಸ್ಯಗಳಾಗಿವೆ. ಈ ಹೆಸರುಗಳೆಲ್ಲ ಕಾಲ್ಪನಿಕ. ಅವುಗಳಲ್ಲಿ ಸತ್ಯವಿಲ್ಲ. ಏಕೆಂದರೆ ಎಲ್ಲವೂ ನಿರಂತರ ವಿಕಾರವಾಗುತ್ತಿರುವ ದ್ರವ್ಯರಾಶಿ. ಮತ್ತೊಂದು ದೃಷ್ಟಿಯಿಂದ ಈ ವಿಶ್ವವೆ ಭವಸಾಗರವಾಗುವುದು. ಅಲ್ಲಿ ಪ್ರತಿಯೊಂದು ಗುರುತಿಗೂ

ಬೇರೊಂದು ಮನಸ್ಸೆಂಬ ಹೆಸರಿದೆ. ನೀವೊಂದು ಮನಸ್ಸು, ನಾನೊಂದು ಮನಸ್ಸು, ಪ್ರತಿಯೊಬ್ಬರೂ ಒಂದು ಮನಸ್ಸು. ಇದೇ ವಿಶ್ವವನ್ನು ಭ್ರಾಂತಿ ಅಳಿದಾಗ, ಮನಸ್ಸು ಶುದ್ಧವಾದಾಗ, ಜ್ಞಾನದೃಷ್ಟಿಯಿಂದ ನೋಡಿದಾಗ ನಿತ್ಯಶುದ್ಧ, ಅವಿಕಾರಿ, ಅಮೃತ, ಅಖಂಡ ಪರಬ್ರಹ್ಮನಂತೆ ಕಾಣುವುದು.

ದ್ವೈತಿಗಳ ಮೂರು ಬಗೆ ಅಂತಿಮಗತಿ ಏನಾಗುವುದು ? ಮನುಷ್ಯ ಸತ್ತರೆ ಸ್ವರ್ಗ ಅಥವಾ ಇನ್ನು ಯಾವುದಾದರೂ ಲೋಕಕ್ಕೆ ಹೋಗುವನು. ದುಷ್ಟರು ಸತ್ತರೆ ಭೂತಪ್ರೇತಗಳೊ ಮೃಗಗಳೊ ಆಗುವರು ಎಂಬ ಭಾವನೆ ಏನಾಗುವುದು ? ಯಾರೂ ಬರುವುದಿಲ್ಲ ಮತ್ತು ಹೋಗುವುದಿಲ್ಲ ಎನ್ನುವನು ಅದ್ವೈತಿ. ನೀನು ಹೇಗೆ ಬಂದು ಹೋಗುವೆ ? ನೀನು ಅನಂತ. ನೀನು ಹೋಗುವುದಕ್ಕೆ ಸ್ಥಳವೆಲ್ಲಿರುವುದು ? ಒಂದು ಶಾಲೆಯಲ್ಲಿ ಕೆಲವು ಮಕ್ಕಳನ್ನು ಪರೀಕ್ಷಿಸುತ್ತಿದ್ದರು. ಪರೀಕ್ಷಕ ಹಲವು ಕಷ್ಟಕರವಾದ ಪ್ರಶ್ನೆಗಳನ್ನು ಮಕ್ಕಳಿಗೆ ಬುದ್ಧಿಯಿಲ್ಲದೆ ಕೇಳುತ್ತಿದ್ದ. ಆ ಪ್ರಶ್ನೆಗಳಲ್ಲಿ ಇದೊಂದು : "ಭೂಮಿ ಏತಕ್ಕೆ ಬೀಳುವುದಿಲ್ಲ ?" ಗುರುತ್ವಾಕರ್ಷಣ ಅಥವಾ ಮತ್ತಾವುದಾದರೂ ಸೂಕ್ಷ್ಮ ವೈಜ್ಞಾನಿಕ ಸಿದ್ಧಾಂತವನ್ನು ಮಕ್ಕಳ ಬಾಯಿಂದ ಹೇಳಿಸಬೇಕೆಂಬುದು ಇವನ ಮನೋಭಿಷ್ಟವಾಗಿತ್ತು. ಅನೇಕರಿಗೆ ಪ್ರಶ್ನೆಯೇ ಅರ್ಥವಾಗಲಿಲ್ಲ. ಹಲವು ಬಗೆ ತಪ್ಪು ಉತ್ತರವನ್ನು ಕೊಟ್ಟರು. ಅವರಲ್ಲಿ ಒಬ್ಬಳು ಬುದ್ಧಿವಂತ ಸಣ್ಣ ಹುಡುಗಿ ಮತ್ತೊಂದುಪ್ರಶ್ನೆಯಿಂದ ಇದಕ್ಕೆ ಉತ್ತರವಿತ್ತಳು. "ಇದೆಲ್ಲಿ ಬೀಳಬೇಕು ?" ಎಂದು ಕೇಳಿದಳು. ಪರೀಕ್ಷಕನ ಪ್ರಶ್ನೆಯೆ ಅಸಂಬದ್ಧವಾಗಿತ್ತು. ವಿಶ್ವದಲ್ಲಿ ಏರು ಇಳಿತಗಳಿಲ್ಲ. ಇದು ಕೇವಲ ಸಾಂಬಂಧಿಕ ಪದ. ಇದರಂತೆಯೆ ಆತ್ಮನೂ ಕೂಡ. ಆತ್ಮನಿಗೆ ಜನನ ಮರಣ ವೆಂಬುದಕ್ಕೆ ಅರ್ಥವೆ ಇಲ್ಲ. ಹೋಗುವರಾರು ? ಬರುವರಾರು ? ನೀನು ಆಗಲೆ ಎಲ್ಲಿ ಇಲ್ಲ ? ನೀನು ಆಗಲೆ ಇಲ್ಲದೆ ಇರುವ ಸ್ವರ್ಗವೆಲ್ಲಿದೆ? ಸರ್ವವ್ಯಾಪಿ ಮಾನವನ ಆತ್ಮ. ಅದು ಹೋಗುವುದೆಲ್ಲಿಗೆ ? ಅದು ಎಲ್ಲಿಗೆ ಹೋಗಬಾರದು ? ಅದು ಎಲ್ಲಾ ಕಡೆಯಲ್ಲಿಯೂ ಇದೆ. ಮುಕ್ತಾತ್ಮನಿಗೆ ಜನನ ಮರಣ ಸ್ವರ್ಗ ಪಾತಾಳ ಲೋಕಗಳೆಲ್ಲ ಮಾಯವಾಗುವುವು: ಪೂರ್ಣತೆ ಸಮಾಪಿಸಿದವರಿಗೆ ಬ್ರಹ್ಮಲೋಕದ ವರೆಗೆ ದೃಶ್ಯಗಳನ್ನು ತೋರಿ ಮಾಯವಾಗುವುದು. ಅಜ್ಞಾನಿಗಳಿಗೆ ಇದು ಇರುವುದು.

ಇಡೀ ಪ್ರಪಂಚ ಸ್ವರ್ಗಕ್ಕೆ ಹೋಗುವುದು. ಜನನ ಮರಣಗಳಲ್ಲಿ ನಂಬುವುದಿಲ್ಲ. ಇದು ಹೇಗೆ ? ನಾನು ಒಂದು ಪುಸ್ತಕ ಓದು

ತ್ತಿರುವೆನು. ಪುಟವಾದ ಮೇಲೆ ಪುಟವನ್ನು ನಾನು ಪೂರೈಸುತ್ತಿರುವೆನು. ಯಾರು ಬದಲಾಯಿಸುವವರು ? ಬರುವವರಾರು ಹೋಗುವವರಾರು ? ನಾನಲ್ಲ ಪುಸ್ತಕ. ಪ್ರಕೃತಿಯೆಲ್ಲ ಆತ್ಮನೆದುರಿಗೆ ಒಂದು ಪುಸ್ತಕದಂತೆ. ಅಧ್ಯಾಯ ಅಧ್ಯಾಯಗಳನ್ನು ಓದಿ ಪೂರೈಸುತ್ತಿರುವೆವು. ಪದೇ ಪದೇ ಹೊಸ ದೃಶ್ಯ ಪ್ರಾರಂಭಿಸುವುದು. ಅದನ್ನು ಓದಿ ಪೂರೈಸುವೆವು. ಹೊಸ ದೊಂದು ಬರುವುದು. ಆದರೆ ಆತ್ಮ ಮಾತ್ರ ಅನಂತ. ಪ್ರಕೃತಿ ಬದಲಾಯಿಸುತ್ತಿರುವುದು, ಆತ್ಮನಲ್ಲ. ಆತ್ಮ ಎಂದಿಗೂ ವಿಕಾರದಾಗುವು ದಿಲ್ಲ. ಜನನ ಮರಣ ಪ್ರಕೃತಿಯಲ್ಲಿದೆ ನಿನ್ನಲ್ಲಿ ಇಲ್ಲ. ಆದರೂ ಅಜ್ಞರು ಭ್ರಾಂತರಾಗುವರು. ನಾವು ಹೇಗೆ ಭ್ರಾಂತಿಯಿಂದ ಸೂರ್ಯ ಚಲಿಸುತ್ತಿರು ವನು ಭೂಮಿಯಲ್ಲ ಎಂದು ಭಾವಿಸುವೆವೊ ಹಾಗೆಯೆ ನಾವು ಸಾಯುತ್ತಿ ರುವೆವು ಪ್ರಕೃತಿಯಲ್ಲ ಎಂದು ಭಾವಿಸುವೆವು. ಇವೆಲ್ಲ ಭ್ರಾಂತಿ. ನಾವು ಪ್ರಯಾಣಮಾಡುತ್ತಿರುವಾಗ ಸುತ್ತಲೂ ಇರುವ ಹೊಲ ಚಲಿಸುತ್ತಿದೆ, ನಾವಲ್ಲ ಎಂದು ತಿಳಿಯುವಂತೆಯೆ ಜನನ ಮರಣಗಳೂ ಕೂಡ. ಮನು ಷ್ಯರು ಒಂದು ಮಾನಸಿಕ ಸ್ಥಿತಿಯಲ್ಲಿರುವಾಗ ಅವರು ಅಸ್ತಿತ್ವವನ್ನು ಸೂರ್ಯ ಚಂದ್ರ ತಾರೆ ಎಂದು ನೋಡುವರು. ಯಾರು ಅದೇ ಸ್ಥಿತಿಯಲ್ಲಿರುವರೊ ಅವರೆಲ್ಲ ಹಾಗೆಯೆ ನೋಡುವರು. ನನ್ನ ನಿಮ್ಮ ಅಂತರದಲ್ಲಿ ಬೇರೆ ಕ್ಷೇತ್ರದಲ್ಲಿ ಕೋಟ್ಯಂತರ ಜೀವಿಗಳು ಇರಬಹುದು. ನಾವು ಅವರನ್ನು ನೋಡಲಾರೆವು. ಅವರು ನಮ್ಮನ್ನು ನೋಡಲಾರರು. ಯಾರು ನಮ್ಮ ಕ್ಷೇತ್ರದಲ್ಲಿರುವರೊ ಯಾರ ಮನಸ್ಸು ನಮ್ಮ ಸ್ಥಿತಿಯಲ್ಲಿರುವುದೊ ಅಂತಹವ ರನ್ನು ಮಾತ್ರ ನೋಡುವೆವು. ಸಮನಾಗಿ ಶೃತಿಮಾಡಿದ ವಾದ್ಯಗಳು ಏಕ ಕಾಲದಲ್ಲಿ ಸ್ಪಂದಿಸುವುವು. ಮನುಷ್ಯನ ಶೃತಿಯನ್ನು ಬದಲಾಯಿಸಿದರೆ ಅವ ನಿಗಿನ್ನು ಮನುಷ್ಯರೇ ಕಾಣಿಸುವುದಿಲ್ಲ. ಮನುಷ್ಯಪ್ರಪಂಚವೆ ಮಾಯವಾಗು ವುದು. ಅದರ ಬದಲು ಬೇರೊಂದು ಲೋಕ ಬರುವುದು. ದೇವತೆಗಳ ಲೋಕ ಬರುವುದು. ದುಷ್ಟನಿಗೆ ಭೂತಪ್ರೇತಗಳ ಲೋಕ ಗೋಚರವಾಗಬಹುದು. ಆದರೆಇವೆಲ್ಲಾ ಒಂದೇ ವಿಶ್ವದ ವಿಭಿನ್ನ ದೃಶ್ಯಗಳು. ಈ ಮಾನವ ದೃಷ್ಟಿ ಯಿಂದ ಪೃಥ್ವಿ ಸೂರ್ಯ ಚಂದ್ರ ತಾರೆಯಂತೆ ಕಾಣುವುದು. ದುಷ್ಟನ ದೃಷ್ಟಿ ಯಿಂದನೋಡಿದಾಗ ಇದೇ ನರಕದಂತೆ ಕಾಣುವುದು. ಸ್ವರ್ಗವನ್ನು ಅಪೇ ಕ್ಷಿಸುವವರು ಇದೇ ವಿಶ್ವವನ್ನು ಸ್ವರ್ಗದಂತೆ ನೋಡುವರು. ಯಾರು ಎಲ್ಲೊ ಸಿಂಹಾಸನದಮೇಲೆ ಕುಳಿತ ದೇವನ ಹತ್ತಿರಹೋಗಿ ಜೀವಾವಧಿ ಅವನನ್ನು ಹೊಗಳುತ್ತಿರಬೇಕೆಂದು ಬಯಸುವರೊ ಅವರು ಕಾಲವಾದರೆ ತಮ್ಮ ಮನ

ಸ್ಸಿನ ದೃಶ್ಯವನ್ನೇ ಹೊರಗೆ ನೋಡುವರು. ಇಡೀ ವಿಶ್ವ ಹಾರುವ ದೇವ ದೂತರಿಂದ ತುಂಬಿದ ದೇವರು ಸಿಂಹಾಸನದಮೇಲೆ ಕುಳಿತ ಸ್ವರ್ಗದಂತೆ ಬದಲಾಯಿಸುವುದು. ಈ ಸ್ವರ್ಗಗಳೆಲ್ಲ ಮಾನವಕೃತ. ದ್ವೈತಿ ಹೇಳು ವುದು ನಿಜ. ಆದರೆ ಅದೆಲ್ಲಾ ಅವನ ಮನೋಕಲ್ಪನೆ ಎನ್ನುವನು ಅದ್ವೈತಿ. ಹಲವು ಲೋಕಗಳು, ಭೂತಪ್ರೇತಗಳು, ಪುನರ್ಜನ್ಮಾದಿಗ ಳೆಲ್ಲ ಪುರಾಣ. ಇದರಂತೆಯೆ ಮಾನವ ಜೀವನ ಕೂಡ. ಮನುಷ್ಯರು ಯಾವಾಗಲೂ ಮಾಡುವ ತಪ್ಪೆ ಈ ಜೀವನವೆ ಸತ್ಯ ಎಂದು ಭಾವಿಸು ವರು. ಇತರರ ಭಾವನೆಗಳನ್ನು ಕಂತೆಪುರಾಣ ಎಂದರೆ ಅವರಿಗೆ ಅರ್ಥವಾ ಗುವುದು. ಆದರೆ ತಮ್ಮ ಸ್ಥಿತಿಗೂ ಅದೇ ಗತಿ ಎಂಬುದನ್ನು ಅವರೆಂದಿಗೂ ಒಪ್ಪಿಕೊಳ್ಳಲಿಚ್ಛಿಸುವುದಿಲ್ಲ. ಈಗ ನಮಗೆ ಕಾಣುವ ವಿಶ್ವವೆಲ್ಲ ಮಿಥ್ಯೆ. ಇದರಲ್ಲೆಲ್ಲಾ ದೊಡ್ಡ ಅನೃತವೇ ನಾವು ದೇಹ ಎಂಬುದು. ನಾವೆಂದಿಗೂ ದೇಹವಾಗಿರಲಿಲ್ಲ. ದೇಹವಾಗುವುದಿಲ್ಲ. ನಾವು ಮನುಷ್ಯರೆಂಬುದೆ ಎಲ್ಲಕ್ಕಿಂತ ಮಿಗಿಲಾದ ಅನೃತ. ನಾವು ಸೃಷ್ಟಿಯ ದೇವರು. ದೇವರನ್ನು ಪೂಜಿಸುವಾಗ ನಾವು ಯಾವಾಗಲೂ ನಮ್ಮ ಗುಪ್ತ ಆತ್ಮವನ್ನು ಪೂಜಿಸು ತ್ತಿದ್ದೆವು. ನಿಮಗೆ ನೀವು ಹೇಳಿಕೊಳ್ಳುವ ಅತಿ ಹೀನ ಅನೃತವೆ ನೀವು ಹುಟ್ಟುಪಾಪಿ ದುಷ್ಟರು ಎಂದುಕೊಳ್ಳುವುದು. ಇತರರನ್ನು ಪಾಪಿ ಯಂತೆ ಯಾರು ನೋಡುವರೊ ಅವರು ಮಾತ್ರ ಪಾಪಿಗಳು. ಇಲ್ಲಿ ಒಂದು ಮಗು ಇದೆ ಎಂದು ಭಾವಿಸೋಣ. ಚಿನ್ನದ ಗಂಟನ್ನು ಮೇಜಿನಮೇಲೆ ಇಡುವಿರಿ. ಒಬ್ಬ ಕಳ್ಳ ಬಂದು ಇದನ್ನೆಲ್ಲ ಹೊತ್ತುಕೊಂಡು ಹೋಗುವನು. ಮಗುವಿಗೆ ಇದೆಲ್ಲ ಒಂದೆ. ಅದಕ್ಕೆ ಒಳಗೆ ಕಳ್ಳನಿಲ್ಲ. ಅದಕ್ಕೇ ಹೊರಗೂ ಇಲ್ಲ. ಪಾಪಿಗಳಿಗೆ ಕಪಟಿಗಳಿಗೆ ಹೊರಗೆ ಕಾಪಟ್ಯ ವಿದೆ. ಆದರೆ ಸತ್ಪುರುಷರಿಗೆ ಇಲ್ಲ. ದುಷ್ಟರು ಈ ಪ್ರಪಂಚವನ್ನು ನರಕ ದಂತೆ ನೋಡುವರು. ಸದ್ಗುಣಮಿಶ್ರವಾಗಿರುವವರು ಇದನ್ನೆ ಸ್ವರ್ಗದಂತೆ ನೋಡುವರು. ಪುಣ್ಯಾತ್ಮರು ಇದನ್ನು ದೇವರಂತೆಯೆ ಕಾಣುವರು. ಆಗ ಮಾತ್ರ ಭ್ರಾಂತಿ ತೆರೆ ಕಳಚಿಬೀಳುವುದು. ಪರಿಶುದ್ಧನಾದ ಮನು ಷ್ಯನ ದೃಷ್ಟಿಯೆ ಬದಲಾಯಿಸುವುದು: ಕೋಟ್ಯಂತರ ವರುಷಗಳು ಅವ ನನ್ನು ಕಾಡುತ್ತಿರುವ ಸ್ವಪ್ನವೆಲ್ಲ ಮಾಯವಾಗುವುದು. ಯಾರು ತಾನು ಮನುಷ್ಯ ದೇವರು ಭೂತ ಎಂದು ಭಾವಿಸುತ್ತಿದ್ದನೊ, ಯಾರು ತಾನು ಸ್ವರ್ಗ ಮರ್ತ್ಯ ಪಾತಾಳಲೋಕಗಳಲ್ಲಿ ಇದ್ದೆನೆಂದು ಭಾವಿಸುತ್ತಿದ್ದನೊ, ಅವನು ತಾನು ನಿಜವಾದ ಸರ್ವವ್ಯಾಪಿ ಎಂದು ತಿಳಿಯುವನು. ಕಾಲ

ತನ್ನಲ್ಲಿರುವುದು, ತಾನು ಕಾಲದಲ್ಲಿಲ್ಲ. ಸ್ವರ್ಗ ತನ್ನಲ್ಲಿರುವುದು, ತಾನು ಸ್ವರ್ಗದಲ್ಲಿ ಇಲ್ಲ. ಮಾನವ ಹಿಂದಿನಿಂದಲೂ ಪೂಜಿಸಿದ ದೇವತೆಗಳೆಲ್ಲ ತನ್ನಲ್ಲಿರುವರು. ತಾನು ಯಾರಲ್ಲಿಯೂ ಇಲ್ಲ ಎನ್ನುವುದು ಆಗ ಗೊತ್ತಾಗುವುದು. ಮಾನವನು, ದೇವಾಸುರರು ಮನುಷ್ಯ ಸಸ್ಯಗಳು ಪ್ರಾಣಿ ಬೆಟ್ಟ ಕಲ್ಲುಗಳನ್ನೆಲ್ಲಾ ಸೃಷ್ಟಿಸಿದನು. ಮಾನವನ ನೈಜಸ್ವಭಾವ ಅವನಿಗೆ ಅರಿವಾಗುವುದು. ಅದು ಸ್ವರ್ಗಕ್ಕಿಂತ ಮಿಗಿಲು, ನಮ್ಮ ಮರ್ತ್ಯಲೋಕಕ್ಕಿಂತಲೂ ಉತ್ತಮ. ಹೀಗೆ ಮಾತ್ರ ಮಾನವ ನಿರ್ಭಯನಾಗುವನು. ಮುಕ್ತನಾಗುವನು. ಆಗ ಭ್ರಾಂತಿ ಕೊನೆಗಾಣುವುದು, ದುಃಖ ಕೊನೆಗಾಣುವುದು. ಅಂಜಿಕೆಗಳೆಲ್ಲ ಒಂದೇಸಲ ಮಾಯವಾಗುವುದು. ಜನನ ಹೋಗುವುದು, ಅದರೊಂದಿಗೆ ಮರಣವೂ ಹೋಗುವುದು. ಅದರೊಂದಿಗೆ ಯಾತನೆ ಹೋಗುವುದು ಅದರೊಂದಿಗೆ ಸುಖವೂ ಹೋಗುವುದು; ಮರ್ತ್ಯ ಹೋಗುವುದು, ಅದರೊಂದಿಗೆ ಸ್ವರ್ಗವೂ ಹೋಗುವುದು. ದೇಹ ತೊಲಗುವುದು ಅದರೊಂದಿಗೆ ಮನಸ್ಸೂ ತೊಲಗುವುದು. ಆ ಮನುಷ್ಯನಿಗೆ ಇಡೀ ವಿಶ್ವಮಾಯವಾಗುವುದು. ಹುಡುಕುತ್ತಿರುವುದು, ತಾರಾಡುತ್ತಿರುವುದು, ಅವಿರಳವಾಗಿ ಹೋರಾಡುತ್ತಿರುವುದೆಲ್ಲ ಎಂದೆಂದಿಗೂ ನಿಲ್ಲುವುದು. ಪ್ರಾಣ ಮತ್ತು ದ್ರವ್ಯದಂತೆ ಯಾವುದು ವ್ಯಕ್ತವಾಗುತ್ತಿತ್ತೊ, ಯಾವುದು ಪ್ರಕೃತಿಯ ಹೋರಾಟದಂತೆ ಇತ್ತೊ, ಪ್ರಕೃತಿಯಂತೆ ಇತ್ತೊ, ಯಾವುದು ಸ್ವರ್ಗ ಮರ್ತ್ಯ ಪ್ರಾಣಿ ಸಸ್ಯ ಮಾನವ ದೇವತೆಗಳಂತೆ ಇತ್ತೊ, ಅವೆಲ್ಲ ಅನಂತ ಅಖಂಡ ಅವಿಕಾರಿಯಾದ ಅಸ್ತಿತ್ವವಾಗುವುದು. ಜ್ಞಾನಿ ತಾನೆ ಅದು ಎಂಬುದನ್ನು ಅರಿಯುವನು. "ಆಕಾಶದಲ್ಲಿ ಹಲವು ಬಣ್ಣದ ಮುಗಿಲುಗಳು ಬಂದು ಕೆಲವು ಕಾಲವಿದ್ದು ಮಾಯವಾಗುವಂತೆ, ಆತ್ಮನೆದುರಿಗೆ ಸ್ವರ್ಗ ಮರ್ತ್ಯ ದೇವತೆ ಚಂದ್ರ ಸುಖ ದುಃಖಗಳೆಲ್ಲ ಬರುವುವು. ಅನಂತ ನೀಲಿಯಾಕಾಶವನ್ನು ಹಿಂದೆ ಬಿಟ್ಟ ಮುಗಿಲಿನಂತೆ ಎಲ್ಲಾ ಮಾಯವಾಗಿ ಹೋಗುವುದು. ಆಕಾಶ ಬದಲಾಯಿಸುತ್ತದೆ ಎಂಬುದೊಂದು ಭ್ರಾಂತಿ. ನಾವು ಅಶುದ್ಧರು ಮಿತರು ನಾವು ಬೇರೆ ಎಂದು ಭಾವಿಸುವುದು ತಪ್ಪು. ನಿಜವಾದ ಮನುಷ್ಯ ಅಖಂಡ ಅಸ್ತಿತ್ವ.

ಎರಡು ಪ್ರಶ್ನೆಗಳು ಈಗ ಏಳುವುವು. ಮೊದಲನೆಯದೆ "ಇದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವೆ? ಇದೇನೊ ಒಂದು ತತ್ತ್ವವಾಯಿತು, ಸಿದ್ಧಾಂತವಾಯಿತು ಸರಿ. ಆದರೆ ಇದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವೆ?" ಇದು ಸಾಧ್ಯ. ಭ್ರಾಂತಿಯಿಂದ ಎಂದೆಂದಿಗೂ

ಪಾರಾದ ಕೆಲವರು ಈಗಲೂ ಜೀವಿಸುತ್ತಿರುವರು. ಅವರು ಸಾಕ್ಷಾತ್ಕಾರ ಮಾಡಿಕೊಂಡ ತಕ್ಷಣ ಕಾಲವಾಗುವರೆ? ನಾನು ಯೋಚಿಸುವಷ್ಟು ಬೇಗ ಹೋಗುವುದಿಲ್ಲ. ಒಂದು ಕೋಲಿಗೆ ಸಿಕ್ಕಿಸಿದ ಎರಡು ಗಾಲಿಗಳು ಚಲಿಸುತ್ತಿವೆ. ನಾನು ಅದರಲ್ಲಿ ಒಂದು ಚಕ್ರವನ್ನು ಹಿಡಿದು ಕೊಡಲಿಯಿಂದ ಮತ್ತೊಂದು ಚಕ್ರವನ್ನು ಸೇರಿಸಿರುವ ಕೋಲನ್ನು ಕಡಿದರೆ ನಾನು ಹಿಡಿದುಕೊಂಡ ಚಕ್ರ ನಿಲ್ಲುವುದು. ಆದರೆ ಮತ್ತೊಂದು ಚಕ್ರದ ಮೇಲೆ ಅದರ ಹಿಂದಿನ ವೇಗವಿದೆ. ಅದು ಸ್ವಲ್ಪ ದೂರಹೋಗಿ ಅನಂತರ ಬೀಳುವುದು. ನಿತ್ಯ ಶುದ್ಧ ಬುದ್ಧ ಆತ್ಮ ಒಂದು ಚಕ್ರ. ದೇಹ ಮನಸ್ಸು ಎಂಬ ಬಾಹ್ಯ ಭ್ರಾಂತಿ ಮತ್ತೊಂದು ಚಕ್ರ. ಇವೆರಡೂ ಕರ್ಮವೆಂಬ ಕೋಲಿನಿಂದ ಒಟ್ಟಿಗೆ ಸೇರಿವೆ. ಜ್ಞಾನವೆ ಇವೆರಡನ್ನೂ ಛೇದಿಸುವ ಕೊಡಲಿ. ಆತ್ಮವೆಂಬ ಚಕ್ರ ನಿಲ್ಲುವುದು. ನಾನು ಬರುತ್ತಿರುವೆ ಹೋಗುತ್ತಿರುವೆ ಎಂದು ಆಲೋಚಿಸವುದನ್ನು ನಿಲ್ಲಿಸುವುದು. ತಾನು ಪ್ರಕೃತಿ, ಆಸೆ ಆಕಾಂಕ್ಷೆಗಳು ತನಗೆ ಇವೆ ಎಂಬುದನ್ನು ತ್ಯಜಿಸುವುದು. ತಾನು ನಿತ್ಯಪೂರ್ಣ, ಯಾವ ಆಸೆಯೂ ತನ್ನಲ್ಲಿ ಇಲ್ಲವೆಂಬುವನ್ನು ಅದು ತಿಳಿಯುವುದು.

ನಾನು ಒಮ್ಮೆ ಪಶ್ಚಿಮಭರತಖಂಡದ ಸಮುದ್ರತೀರದಲ್ಲಿರುವ ಮರಳುಕಾಡಿನಲ್ಲಿ ಸಂಚರಿಸುತ್ತಿದ್ದೆ. ಹಲವುದಿನ ನಾನು ಮರಳುಗಾಡಿನಲ್ಲಿ ಅಲೆದಾಡುತ್ತಿದ್ದೆ. ಪ್ರತಿದಿನ ಸುಂದರ ಸರೋವರ ಅದರ ಸುತ್ತಲೂ ಮರ ಅದರ ಛಾಯೆ ನೀರಿನಲ್ಲಿ ಪ್ರತಿಬಿಂಬಿತವಾಗಿ ಅಲುಗಾಡುತಿದ್ದುದನ್ನು ನೋಡಿ ಆಶ್ಚರ್ಯವಾಯಿತು. “ಇದೆಷ್ಟು ಸುಂದರವಾಗಿ ಕಾಣುವುದು. ಆದರೂ ಇದನ್ನು ಮರಳುಗಾಡು ಎನ್ನುವರಲ್ಲ!” ಎಂದುಕೊಂಡೆ. ಸುಮಾರು ಒಂದು ತಿಂಗಳು ಈ ವಿಚಿತ್ರ ಸರೋವರ ಗಿಡಮರ ನೋಡುತ್ತಾ ಸಂಚರಿಸುತ್ತಿದ್ದೆ. ಒಂದು ದಿನ ನನಗೆ ಬಾಯಾರಿಕೆ ಆಯಿತು. ಸ್ವಲ್ಪ ನೀರು ಕುಡಿಯಬೇಕು ಎನ್ನಿಸಿತು. ನಾನು ಸ್ಪಷ್ಟವಾದ ಸುಂದರ ಸರೋವರದ ತೀರಕ್ಕೆ ಹೊರಟೆ. ನಾನು ಸಮೀಪಿಸುತ್ತಲೆ ಅದು ಮಾಯವಾಯಿತು. ತಕ್ಷಣ ನನಗೆ “ನಾನು ಇಡೀ ಜೀವನ ಓದಿದ ಮರೀಚಿಕೆ ಇದು” ಎಂದು ಭಾಸವಾಯಿತು. ಇದರೊಡನೆ ನಾನು ಒಂದು ತಿಂಗಳಿಂದ ಈ ಮರೀಚಿಕೆ ನೋಡುತ್ತಿದ್ದೆ, ಆದರೆ ಅದು ನನಗೆ ಗೊತ್ತಾಗಲಿಲ್ಲ ಎಂಬ ಜ್ಞಾನವೂ ಬಂದಿತು. ಮಾರನೆದಿನ ಪುನಃ ನಡೆಯಲುಪಕ್ರಮಿಸಿದೆ. ಪುನಃ ಸರೋವರವಿತ್ತು. ಆದರೆ ಅದರೊಡನೆ ಇದು ಮರೀಚಿಕೆ, ನಿಜವಾದ ಸರೋವರವಲ್ಲ ಎಂಬ ಭಾವನೆಯೂ ಬಂದಿತು. ಇದರಂತೆಯೆ

ವಿಶ್ವಕೂಡ. ನಾವೆಲ್ಲ ಪ್ರಪಂಚವೆಂಬ ಮರೀಚಿಕೆಯಲ್ಲಿ ದಿನದಿನ, ತಿಂಗಳು ತಿಂಗಳು ವರುಷ ವರುಷ ಸಂಚರಿಸುತ್ತಿರುವೆವು. ಆದರೂ ಇದು ಮರೀಚಿಕೆ ಎಂಬ ಅರಿವಿಲ್ಲ. ಒಂದುದಿನ ಅದು ಮಾಯವಾಗುವುದು. ಆದರೆ ಪುನಃ ಅದು ಬರುವುದು. ದೇಹಕ್ಕೆ ಹಿಂದಿನ ಕರ್ಮವಿಶೇಷವಿರುವುದು. ಆದಕಾರಣವೆ ಮರೀಚಿಕೆ ತೋರುವುದು. ನಾವು ಎಲ್ಲಿಯವರೆಗೆ ಕರ್ಮಕ್ಕೆ ಬದ್ಧರೊ ಅಲ್ಲಿಯವರೆಗೆ ಪ್ರಪಂಚವೂ ಬರುವುದು. ಸ್ತ್ರೀ ಪುರುಷ ಪ್ರಾಣಿ ಸಸ್ಯ ನಮ್ಮ ಆಸಕ್ತಿ ಕರ್ತವ್ಯ ಇವೆಲ್ಲ ಪುನಃ ಹಿಂತಿರುಗಿ ಬರುವುವು. ಆದರೆ ಹಿಂದಿನಷ್ಟು ಪ್ರಬಲವಾಗಿ ಬರುವುದಿಲ್ಲ. ಹೊಸಜ್ಞಾನದ ಪ್ರಭಾವ ದಿಂದ ಕರ್ಮವೇಗ ತಗ್ಗುವುದು. ಅದರ ವಿಷ ಹೋಗುವುದು. ಅದು ಬೇರೆ ರೂಪು ತಾಳುವುದು ಅದರೊಂದಿಗೆ ಅದರ ನೈಜಸ್ವಭಾವವಾದ ಜ್ಞಾನ ಬಂದಿದೆ. ಸತ್ಯ ಮಿಥ್ಯೆಗೆ ಇರುವ ವ್ಯತ್ಯಾಸ ಅರಿವಾಗಿದೆ.

ಆಗ ಪ್ರಪಂಚ ಈಗಿರುವಂತೆ ಇರುವುದಿಲ್ಲ. ಆದರೆ ಇಲ್ಲೊಂದು ಅಪಾಯವಿದೆ. ಪ್ರತಿಯೊಂದು ದೇಶದಲ್ಲಿಯೂ ಜನ ಈ ತತ್ತ್ವವನ್ನು ತೆಗೆದುಕೊಂಡು "ನಾನು ಎಲ್ಲಾ ಪಾಪಪುಣ್ಯಗಳಾಚೆ ಇರುವೆ. ನಾನು ಯಾವುದರಿಂದಲೂ ಬದ್ಧನಾಗಿಲ್ಲ. ನನಗೆ ತೋಚಿದುದನ್ನು ನಾನು ಮಾಡ ಬಲ್ಲೆ" ಎನ್ನಬಹುದು. ತತ್ಕಾಲದಲ್ಲಿ ಈ ದೇಶದಲ್ಲಿ ಹಲವು ಮೂರ್ಖರು "ನಾನು ಬದ್ಧನಲ್ಲ, ಸ್ವಯಂ ಭಗವಂತ. ನನಗೆ ತೋಚಿದುದನ್ನು ನಾನು ಮಾಡುತ್ತೇನೆ" ಎನ್ನಬಹುದು. ಆತ್ಮ ದೈಹಿಕ, ನೈತಿಕ ಮತ್ತು ಮಾನಸಿಕ ನಿಯಮಗಳನ್ನು ಮೀರಿರುವುದು ಸತ್ಯವಾದರೂ ಅದನ್ನು ಅಲ್ಲಗಳೆಯುವುದು ಸರಿಯಲ್ಲ. ನಿಯಮದಲ್ಲಿ ಬಂಧನ. ನಿಯಮದಾಚೆ ಸ್ವಾತಂತ್ರ್ಯ. ಆತ್ಮನ ಸ್ವಭಾವವೆ ಸ್ವಾತಂತ್ರ್ಯ; ಸ್ವಾತಂತ್ರ್ಯ ಅದರ ಆಜನ್ಮಸಿದ್ಧವಾದ ಹಕ್ಕು. ಆತ್ಮನ ನಿಜವಾದ ಸ್ವಾತಂತ್ರ್ಯ ದ್ರವ್ಯ ತೆರೆಯಮೂಲಕ ಮನುಷ್ಯನ ತಾತ್ಕಾಲಿಕ ಸ್ವಾತಂತ್ರ್ಯದಂತೆ ತೋರುತ್ತಿದೆ. ಪ್ರತಿಕ್ಷಣ ನಾವು ನೀವು ಸ್ವತಂತ್ರರೆಂದು ನೀವು ಭಾವಿಸುವಿರಿ. ನಾವು ಸ್ವತಂತ್ರರೆಂದು ಭಾವಿಸದೆ ಒಂದು ಕ್ಷಣವಾದರೂ ಬದುಕಲಾರೆವು, ಮಾತನಾಡಲಾರೆವು, ಉಸಿರಾಡಲಾರೆವು. ಆದರೆ ಸ್ವಲ್ಪ ಆಲೋಚಿಸಿದರೆ ನಾವು ಯಂತ್ರದಂತೆ, ಸ್ವತಂತ್ರ ನಮಗೆ ಇಲ್ಲವೆಂದು ಗೊತ್ತಾಗುವುದು. ಹಾಗಾದರೆ ಯಾವುದು ಸತ್ಯ? ಸ್ವಾತಂತ್ರ್ಯವೆಂಬ ಭಾವನೆ ಭ್ರಾಂತಿಯೆ? ಒಂದು ಪಕ್ಷದವರು ಸ್ವಾತಂತ್ರ್ಯ ಭ್ರಾಂತಿ ಎನ್ನುವರು. ಮತ್ತೊಂದು ಪಕ್ಷದವರು ಬಂಧನ ಭ್ರಾಂತಿ ಎನ್ನುವರು. ಇದು ಹೇಗೆ ಸಾಧ್ಯ? ಮನುಷ್ಯ, ನಿಜವಾದ ಮನುಷ್ಯ ನಿತ್ಯಸ್ವತಂತ್ರ.

ಅವನು ಮಾಯಾವರಣದೊಳಗೆ ಬಂದಾಗ, ನಾಮ ರೂಪದ ಬೇಲಿಯೊಳಗೆ ಬಂದಾಗ ಅವನು ಬದ್ಧನಾಗುವನು. ಸ್ವೇಚ್ಛೆ ಎನ್ನುವುದು ಭ್ರಾಂತಿ. ಇಚ್ಛೆ ಎಂದಿಗೂ ಸ್ವತಂತ್ರವಾಗಿರದು. ಇದು ಹೇಗೆ ಸಾಧ್ಯ? ನಿಜವಾದ ಮನುಷ್ಯ ಎಂದು ಬದ್ಧನಾಗುವನೊ ಆಗ ಇಚ್ಛೆ ಬರುವುದು. ಅದಕ್ಕೆ ಮುಂಚೆ ಇಲ್ಲ. ಮನುಷ್ಯನ ಇಚ್ಛೆ ಬದ್ಧ. ಆದರೆ ಇಚ್ಛೆಗೆ ಯಾವುದು ಮೂಲವೊ ಅದು ನಿತ್ಯಸ್ವತಂತ್ರ. ಆದಕಾರಣ ನಾವು ಸ್ವರ್ಗ ಮರ್ತ್ಯ ಲೋಕಗಳಲ್ಲಿ ದೇವ ಮಾನವರಂತೆ ಬಂಧನದಲ್ಲಿ ಇರುವಾಗಲೂ ನಮ್ಮ ಆಜನ್ಮಸಿದ್ಧವಾದ ಸ್ವತಂತ್ರದ ನೆನಪು ಇರುವುದು. ನಾವೆಲ್ಲ ಅರಿತೊ ಅರಿಯದೆಯೊ ಅದರೆಡೆಗೆ ಹೋರಾಡುತ್ತಿರುವೆವು. ಮಾನವ ಮುಕ್ತನಾದ ಮೇಲೆ ಹೇಗೆ ನಿಯಮಗಳಿಗೆ ಅಡಿಯಾಳಾಗುವನು? ಈ ವಿಶ್ವದ ಯಾವ ನಿಯಮವೂ ಅವನನ್ನು ಬಂಧಿಸಲಾರದು. ಏಕೆಂದರೆ ಈ ವಿಶ್ವವೆ ಅವನದು.

ಅವನೇ ಇಡೀ ವಿಶ್ವ. ಅವನೆ ಇಡೀ ವಿಶ್ವವೆನ್ನಿ ಇಲ್ಲವೆ ಅವನಿಗೆ ವಿಶ್ವವೇ ಇಲ್ಲವೆನ್ನಿ. ಆಗ ಲಿಂಗದೇಶಗಳ ಕ್ಷುದ್ರಭಾವನೆ ಅವನಿಗೆ ಹೇಗೆ ಸಾಧ್ಯ ? ನಾನು ಪುರುಷ ಸ್ತ್ರೀ ಬಾಲ ಎಂದು ಆಗ ಹೇಗೆ ಹೇಳ ಬಲ್ಲೆ? ಇವೆಲ್ಲ ಸುಳ್ಳಲ್ಲವೆ? ಇದು ಅನೃತವೆಂದು ಅವನಿಗೆ ಗೊತ್ತು. ಇವು ಮನುಷ್ಯನ ಹಕ್ಕು, ಅವು ಸ್ತ್ರೀಯರ ಹಕ್ಕು, ಎಂದು ಅವನು ಆಗ ಹೇಗೆ ಹೇಳಬಲ್ಲ? ಯಾರಿಗೂ ಹಕ್ಕಿಲ್ಲ, ಯಾರೂ ಬೇರೆ ಇಲ್ಲ. ಪುರುಷನೂ ಇಲ್ಲ ಸ್ತ್ರೀಯೂ ಇಲ್ಲ. ಆತ್ಮ ಲಿಂಗಾತೀತ, ನಿತ್ಯ ಶುದ್ಧ. ನಾನು ಗಂಡಸು ಹೆಂಗಸೆಂದು ಹೇಳುವುದಾಗಲಿ, ನಾನು ಈ ದೇಶ ಅಥವಾ ಆ ದೇಶಕ್ಕೆ ಸೇರಿದವನೆಂದು ಹೇಳುವುದಾಗಲಿ ಎಲ್ಲ ಸುಳ್ಳು. ಪ್ರಪಂಚವೆಲ್ಲ ನನ್ನ ದೇಶ. ಇಡೀ ವಿಶ್ವ ನನ್ನದು. ಅವು ನನ್ನ ದೇಹದಂತೆ ಇವೆ. ಆದರೂ ಪ್ರಪಂಚದಲ್ಲಿ ಈ ಸಿದ್ಧಾಂತಗಳನ್ನು ಸಾರುವರು, ಜೊತೆಗೆ ನಾವು ಯಾವುದನ್ನು ಪಾಪಕರವೆನ್ನುವೆವೊ ಅದನ್ನು ಮಾಡುವವರು ಇರುವುದನ್ನು ನೋಡುವೆವು. ಏತಕ್ಕೆ ಹೀಗೆ ಮಾಡುತ್ತೀರಿ ಎಂದು ಅವರನ್ನು ಕೇಳಿದರೆ, ಅದು ನಮ್ಮ ಭ್ರಾಂತಿ, ಅವರೆಂದಿಗೂ ತಪ್ಪನ್ನು ಮಾಡುವವರಲ್ಲ ಎನ್ನುವರು. ಅವರನ್ನು ಪರೀಕ್ಷಿಸುವುದು ಹೇಗೆ? ಅದು ಇಲ್ಲಿದೆ.

ಪಾಪಪುಣ್ಯಗಳೆರಡೂ ಆತ್ಮನ ತೋರಿಕೆಯ ಆವಿರ್ಭಾವನೆಗಳಾದರೂ ಪಾಪ ಅತಿ ಹೊರಗಿನ ಕವಚ, ಪುಣ್ಯ ಮಾನವನ ನೈಜತೆಗೆ ಸಮೀಪದಲ್ಲಿರುವುದು. ಮನುಷ್ಯ ಪಾಪದಿಂದ ಪಾರಾದ ಹೊರತು ಪುಣ್ಯವನ್ನು ಸೇರಲಾರ. ಅವನು ಪಾಪಪುಣ್ಯಗಳೆರಡರಿಂದಲೂ ಪಾರಾದಲ್ಲದೆ

ಆತ್ಮನನ್ನು ಸೇರಲಾರ. ಯಾರು ಆತ್ಮಸಾಕ್ಷಾತ್ಕಾರವನ್ನು ಪಡೆಯುವರೊ ಅವರಲ್ಲಿ ಯಾವ ಆಸಕ್ತಿ ಇರಬಲ್ಲುದು ? ಸ್ವಲ್ಪ ಕರ್ಮ, ಹಿಂದಿನ ಸಂಸ್ಕಾರದ ಅವಶೇಷ. ಆದರೆ ಅದೆಲ್ಲ ಪುಣ್ಯವಾದುದು. ತನ್ನ ಹೀನಕರ್ಮಗಳನ್ನು ಸಮೆಸಿ, ಹಿಂದಿನ ದೋಷಗಳೆಲ್ಲ ದಗ್ಧವಾದ ಹೊರತು ಯಾರೂ ಸತ್ಯವನ್ನು ಅರಿಯಲಾರರು. ಯಾರು ಆತ್ಮಸಾಕ್ಷಾತ್ಕಾರವನ್ನು ಪಡೆದಿರುವರೊ, ಸತ್ಯವನ್ನು ಮನಗಂಡಿರುವರೊ ಅವರಲ್ಲಿ ಉಳಿದಿರುವುದು ಹಿಂದಿನ ಉತ್ತಮ ಸಂಸ್ಕಾರಗಳ ಅವಶೇಷ. ಅವನು ದೇಹಧಾರಿಯಾಗಿ ಬಿಡುವಿಲ್ಲದೆ ಕೆಲಸಮಾಡಿದರೂ ಅದು ಇತರರ ಹಿತಕ್ಕೆ. ಅವನಿಂದ ಎಲ್ಲರಿಗೂ ಆಶೀರ್ವಾದ ಮಾತ್ರ ದೊರಕುವುದು, ಅವನ ಕರಗಳು ಕೇವಲ ಸತ್ಕಾರ್ಯವನ್ನು ಮಾತ್ರ ಮಾಡುವುದು. ಅವನ ಮನಸ್ಸು ಕೇವಲ ಒಳ್ಳೆಯದನ್ನು ಮಾತ್ರ ಆಲೋಚಿಸುವುದು. ಅವನೆಲ್ಲಿಗೆ ಹೋದರೂ ಅವನಿರವೆ ಮಂಗಳಕಾರಿ, ಅವನೇ ಸಚೇತನ ಕಲ್ಯಾಣಕಾರಿ. ಅಂತಹ ವ್ಯಕ್ತಿಯ ಸಾನ್ನಿಧ್ಯ ಕೂಡ ಅತಿ ಹೀನಮನುಜರನ್ನು ಪುಣ್ಯವಂತರನ್ನಾಗಿ ಮಾರ್ಪಡಿಸುವುದು. ಅವನು ಮಾತನಾಡದೆ ಇದ್ದರೂ ಕೇವಲ ಅವನ ಸಮ್ಮುಖವೇ ಮಾನವ ಕೋಟಿಗೆ ಆಶೀರ್ವಾದಪ್ರಾಯವಾಗಿರುವುದು. ಅವರು ಏನಾದರೂ ಪಾಪ ಮಾಡುವರೆ ? ಕೆಟ್ಟದನ್ನು ಮಾಡುವರೆ ? ಬರೀ ಮಾತಿಗೂ, ಸಾಕ್ಷಾತ್ಕಾರಕ್ಕೂ ಧ್ರುವದಷ್ಟು ಅಂತರವಿದೆ. ಎಂತಹ ಮೂರ್ಖ ಬೇಕಾದರೂ ಮಾತನಾಡಬಹುದು. ಅರಗಿಳಿಗಳೂ ಮಾತನಾಡುತ್ತವೆ. ಮಾತುಬೇರೆ, ಸಾಕ್ಷಾತ್ಕಾರ ಬೇರೆ. ತತ್ತ್ವ ಸಿದ್ಧಾಂತ ವಾದ ಗ್ರಂಥ ಚರ್ಚೆ ಸಂಗಡ ಇವುಗಳೆಲ್ಲ ಅವುಗಳ ದೃಷ್ಟಿಯಿಂದಲೇನೊ ಒಳ್ಳೆಯವೆ. ಆದರೆ ಸಾಕ್ಷಾತ್ಕಾರವಾದಾಗ ಉಳಿದವುಗಳೆಲ್ಲ ಬಿದ್ದುಹೋಗುವುವು. ಉದಾಹರಣೆಗೆ ಭೂಪಟವೇನೊ ಒಳ್ಳೆಯದೆ. ಆದರೆ ನೀವೆ ದೇಶವನ್ನು ಪ್ರತ್ಯಕ್ಷನೋಡಿ ಅನಂತರ ಭೂಪಟವನ್ನು ನೋಡಿದರೆ ಎಷ್ಟು ವ್ಯತ್ಯಾಸವಿರುವುದು ! ಯಾರು ಸತ್ಯಸಾಕ್ಷಾತ್ಕಾರವನ್ನು ಪಡೆದಿರುವರೊ ಅವರಿಗೆ ಅದನ್ನು ತಿಳಿದುಕೊಳ್ಳಲು ತರ್ಕ ಅಥವಾ ಬುದ್ಧಿಯ ಯಾವ ಕಸರತ್ತೂ ಬೇಕಿಲ್ಲ. ಇದು ಅವರ ಜೀವನದ ಜೀವ, ಸ್ಥೂಲವಾಗಿ ಪ್ರತ್ಯಕ್ಷವಾದಂತಿದೆ. ಇದು ವೇದಾಂತಿಗಳು ಹೇಳುವ "ಹಸ್ತಾಮಲಕ" ದಂತಿದೆ. ಯಾರು ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವರೊ ಅವರು ಎದ್ದುನಿಂತು "ಆತ್ಮವಿಲ್ಲಿದೆ" ಎನ್ನುವರು. ನೀವು ವರುಷಗಟ್ಟಲೆ ಅವರೊಂದಿಗೆ ವಾದ ಮಾಡಬಹುದು. ಆದರೆ ಅವರು ನಿಮ್ಮನ್ನು ನೋಡಿ ನಗುವರು. ಇದನ್ನು ಬಾಲಭಾಷೆ

ಯಂತೆ ಪರಿಗಣಿಸುವರು. ಮಗು ಮಾತನ್ನಾಡಿಕೊಳ್ಳಲಿ ಎಂದು ಸುಮ್ಮನೆ ಇರುವರು. ಅವರು ಸತ್ಯವನ್ನರಿತು ಪೂರ್ಣರಾಗುವರು. ನೀವು ಒಂದು ದೇಶವನ್ನು ನೋಡಿರುವಿರಿ ಎಂದು ಭಾವಿಸೋಣ. ಮತ್ತೊಬ್ಬ ಬಂದು ಆ ದೇಶವನ್ನು ನೀವು ನೋಡಿಲ್ಲ ಎಂದು ನಿಮ್ಮ ಹತ್ತಿರ ವಾದಮಾಡುತ್ತ ಹೋಗಬಹುದು. ಆದರೆ ನೀವು ಅವನನ್ನು ನೋಡುವ ಏಕಮಾತ್ರದೃಷ್ಟಿಯೆ ಅವನು ಹುಚ್ಚರ ಆಸ್ಪತ್ರೆಗೆ ಸೇರಲು ಯೋಗ್ಯನೆಂಬುದು. ಆದಕಾರಣವೆ ಸಿದ್ಧ "ತಮ್ಮತಮ್ಮ ಮತವನ್ನು ಕುರಿತು ಜನ ಆಡುವ ಮಾತೆಲ್ಲ ಶುದ್ಧ ಹರಟೆ. ಸಾಕ್ಷಾತ್ಕಾರವೇ ಗುರಿ. ಅದೇ ಧರ್ಮದ ತಿರುಳು" ಎನ್ನುವನು. ಧರ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ನೀವು ಸಿದ್ಧರಾಗಿರುವಿರಾ? ಅದು ನಿಮಗೆ ಬೇಕೆ? ನಿಮಗೆ ಅದು ಬೇಕಾಗಿದ್ದರೆ ಅದು ದೊರಕುವುದು. ಆಗ ನೀವು ನಿಜವಾಗಿಯೂ ಧಾರ್ಮಿಕರಾಗುವಿರಿ. ಸಾಕ್ಷಾತ್ಕಾರ ಪಡೆಯುವವರೆಗೆ ನಿಮಗೂ ನಾಸ್ತಿಕರಿಗೂ ಏನೂ ಭೇದವಿಲ್ಲ. ನಾಸ್ತಿಕ ನಿಷ್ಕಪಟಿ. ಆದರೆ ಯಾರು ತಾವು ಧರ್ಮದಲ್ಲಿ ನಂಬುವೆವು ಎನ್ನುವರೊ ಸಾಕ್ಷಾತ್ಕಾರಕ್ಕೆ ಸ್ವಲ್ಪವೂ ಪ್ರಯತ್ನಪಡುವುದಿಲ್ಲವೊ ಅವರು ಪ್ರಮಾಣಿಕರಲ್ಲ.

ಸಾಕ್ಷಾತ್ಕಾರವಾದಮೇಲೆ ಏನಾಗುವುದೆಂಬುದೆ ನಂತರದ ಪ್ರಶ್ನೆ. ವಿಶ್ವದ ಅಖಂಡ ಅಸ್ತಿತ್ವ ನಮಗೆ ಅರಿವಾಗಿದೆ. ನಾವೆ ಅಖಂಡ ಅನಂತ ಸ್ವರೂಪವಾಗಿರುವೆವು; ಈ ಆತ್ಮವೊಂದೆ ಇರುವುದು, ಅದೇ ಪ್ರಪಂಚದ ವೈವಿಧ್ಯತೆಯಲ್ಲೆಲ್ಲ ಪ್ರಕಾಶಿಸುತ್ತಿರುವುದು ಎಂಬುದು ನಮಗೆ ಅರಿವಾದ ಮೇಲೆ ನಾವೇನು ಆಗುವೆವು.? ಸೋಮಾರಿಗಳಾಗಿ ಒಂದು ಮೂಲೆಯಲ್ಲಿ ಕುಳಿತು ಸಾಯುವೆವೆ? "ಇದರಿಂದ ಪ್ರಪಂಚಕ್ಕೆ ಏನು ಪ್ರಯೋಜನ?" ಅದೇ ಹಳೇಪ್ರಶ್ನೆ! ಮೊದಲನೆಯದಾಗಿ ಇದರಿಂದ ಪ್ರಪಂಚಕ್ಕೆ ಏತಕ್ಕೆ ಒಳ್ಳೆಯದಾಗಬೇಕು? ಅದು ಹಾಗೆ ಪ್ರಪಂಚಕ್ಕೆ ಒಳ್ಳೆಯದಾಗಬೇಕು ಎನ್ನುವುದಕ್ಕೆ ಕಾರಣವಿದೆಯೆ? "ಪ್ರಪಂಚಕ್ಕೆ ಇದರಿಂದ ಏನು ಪ್ರಯೋಜನ?" ಎಂದು ಪ್ರಶ್ನಿಸುವುದಕ್ಕೆ ಇತರರಿಗೆ ಏನು ಅಧಿಕಾರವಿದೆ? ಹೀಗೆಂದರೆ ಅರ್ಥವೇನು? ಮಗುವಿಗೆ ಕಲ್ಲುಸಕ್ಕರೆ ಇಷ್ಟ. ನೀವು ವಿದ್ಯುತ್ ಶಕ್ತಿಯಮೇಲೆ ಕೆಲವು ಪ್ರಯೋಗ ಮಾಡುತ್ತಿರುವಿರಿ ಎಂದು ಭಾವಿಸೋಣ. ಮಗು ಬಂದು "ಇದರಿಂದ ಕಲ್ಲುಸಕ್ಕರೆ ಸಿಗುವುದೆ?" ಎಂದು ಕೇಳುವುದು. "ಇಲ್ಲ" ಎನ್ನುವಿರಿ ನೀವು. ಮಗು "ಹಾಗಾದರೆ ಇದರಿಂದ ಏನು ಪ್ರಯೋಜನ?" ಎನ್ನುವುದು. ಇದರಂತೆಯೆ ಪ್ರಪಂಚದಲ್ಲಿ ಮನುಷ್ಯರು

"ಇದರಿಂದ ಏನು ಪ್ರಯೋಜನ? ಇದರಿಂದ ಹಣ ದೊರಕುವುದೆ?" ಎಂದು ಪ್ರಶ್ನಿಸುವರು. "ಇಲ್ಲ." "ಹಾಗಾದರೆ ಏನು ಪ್ರಯೋಜನ?" ಅವರಿಗೆ ಪ್ರಪಂಚಕ್ಕೆ ಒಳ್ಳೆಯದು ಎಂದರೆ ಅದೆ ಅರ್ಥ.

ಆದರೂ ಆತ್ಮಸಾಕ್ಷಾತ್ಕಾರದಿಂದ ಪ್ರಪಂಚಕ್ಕೇ ಕಲ್ಯಾಣಕಾರಿ. ಇದನ್ನು ಪಡೆದರೆ, ಪ್ರಪಂಚದಲ್ಲಿ ಇರುವುದೊಂದೆ ಎಂದು ಅರಿತರೆ, ತಮ್ಮ ಪ್ರೇಮಚಿಲುಮೆಯೆಲ್ಲ ಬತ್ತಿಹೋಗುವುದು, ತಾವು ಪ್ರೀತಿಸುವುದೆಲ್ಲ ಇಲ್ಲಿ ಮತ್ತು ಮುಂದೆ ಮಂಗಮಾಯವಾಗುವುದು ಎಂದು ಜನ ಅಂಜುವರು. ಯಾರು ತಮ್ಮನ್ನು ಅತ್ಯಂತ ಕಡಿಮೆ ಯೋಚಿಸಿದರೊ ಅಂತಹವರೆ ಪ್ರಪಂಚದಲ್ಲಿ ಪ್ರಚಂಡ ಕರ್ಮಪಟುಗಳೆಂಬುದನ್ನು ಅರಿಯರು. ತಾನು ಯಾವುದನ್ನು ಪ್ರೀತಿಸುತ್ತಾನೆಯೊ ಅದು ಕ್ಷುದ್ರ ಅಲ್ಪ ಮರ್ತ್ಯವಸ್ತುವಲ್ಲ ಎಂದು ಅರಿತಾಗ ಮಾತ್ರ ಅದನ್ನು ಪೂರ್ಣವಾಗಿ ಪ್ರೀತಿಸಬಲ್ಲ. ತಾನು ಪ್ರೀತಿಸುವ ವಸ್ತು ಬೊಗಸೆ ಮಣ್ಣಿನಿಂದಾದುದಲ್ಲ, ಅದು ಸಾಕ್ಷಾತ್ ಭಗವಂತ ಎಂದು ಅರಿತಾಗ ಮಾತ್ರ ಅವನು ನೈಜವಾಗಿ ಪೂರ್ಣವಾಗಿ ಪ್ರೀತಿಸಬಲ್ಲ. ಗಂಡ ಸ್ವಯಂ ಭಗವಂತ ಎಂದು ಹೆಂಡತಿ ಅರಿತಾಗ ಅವಳು ಗಂಡನನ್ನು ಹೆಚ್ಚು ಪ್ರೀತಿಸಬಲ್ಲಳು. ಹೆಂಡತಿ ಸ್ವಯಂ ಭಗವಂತ ಎಂದು ಗಂಡ ಅರಿತಾಗ ಅವನು ಅವಳನ್ನು ಹೆಚ್ಚು ಪ್ರೀತಿಸಬಲ್ಲನು. ವೈರಿಯೂ ದೇವರೆ ಎಂದು ಯಾರು ಅರಿತಿರುವನೊ ಅವನು ತನ್ನ ಪರಮ ಶತ್ರುವನ್ನೂ ಪ್ರೀತಿಸುವನು. ಸಾಧು ದೇವರೆಂದು ಯಾರಿಗೆ ಗೊತ್ತಿದೆಯೊ ಅವನು ಸಾಧುವನ್ನು ಪ್ರೀತಿಸುವನು. ಅವನು ಅಸಾಧುವನ್ನೂ ಪ್ರೀತಿಸುನನು. ಆ ಅಸಾಧುವಿನ ಹಿನ್ನೆಲೆಯೂ ಕೂಡ ಸ್ವಯಂ ಭಗವಂತನೆ ಆಗಿರುವನು. ಯಾರಲ್ಲಿ ತನ್ನ ಕ್ಷುದ್ರ ಅಹಂಕಾರ ಮಾಯವಾಗಿದೆಯೊ ಅಲ್ಲಿ ದೇವರಿರುವನು, ಅವನೆ ಪ್ರಪಂಚ ಚಾಲನ ವ್ಯಕ್ತಿಯಾಗುವನು. ಇಡೀ ಬ್ರಹ್ಮಾಂಡ ಅವನಿಗೆ ಬೇರೆ ರೂಪು ತಾಳುವುದು. ಯಾತನಾಮಯವಾಗಿರುವುದು ದುಃಖಕರವಾಗಿರುವುದೆಲ್ಲ ಮಾಯವಾಗುವುದು. ಹೋರಾಟವೆಲ್ಲ ಕೊನೆಗಾಣುವುದು. ನಾವು ಅನುದಿನ ಒಂದು ತುತ್ತು ಕೂಳಿಗಾಗಿ, ಹೋರಾಡಿ ಕಾದಾಡಿ ಸ್ಪರ್ಧಿಸುವ ಜಗತ್ತು ಲೀಲಾಭೂಮಿಯಾಗುವುದು. ಆಗ ಈ ಪ್ರಪಂಚ ಸುಂದರವಾಗುವುದು! ಅಂತಹ ಮನುಷ್ಯನಿಗೆ ಮಾತ್ರ ಎದ್ದುನಿಂತು, "ಈ ಪ್ರಪಂಚ ಎಷ್ಟು ಚೆನ್ನಾಗಿದೆ" ಎಂದು ಹೇಳಲು ಅಧಿಕಾರವಿದೆ. ಇದೆಲ್ಲ ಮಂಗಳಮಯ ಎಂದು ಹೇಳುವುದಕ್ಕೆ ಅವನಿಗೆ ಮಾತ್ರ

ಅಧಿಕಾರವಿದೆ. ಇಂತಹ ಆತ್ಮಸಾಕ್ಷಾತ್ಕಾರದಿಂದ ಸಿದ್ಧಿಸುವ ಸೌಭಾಗ್ಯವಿದು. ಅನುದಿನ ಪ್ರಪಂಚದಲ್ಲಿ ಆಗುತ್ತಿರುವ ಸ್ಪರ್ಧೆಹೋರಾಟವನ್ನು ತೊರೆದು ಆ ಮಹಾಸತ್ಯದ ಒಂದು ಅಂಶವನ್ನಾದರೂ ಮಾನವಕೋಟಿ ಮನಗಂಡರೆ ಇಡೀ ಪ್ರಪಂಚ ಬೇರೆ ರೂಪು ತಾಳುವುದು. ಜಗಳ ಕದನದ ಬದಲು ಶಾಂತಿ ನೆಲೆಸುವುದು. ಎಲ್ಲರನ್ನೂ ಮೀರಿಸಿ ನಾವು ಹೋಗಬೇಕೆಂದು ಪಡು ತ್ತಿರುವ ಮೃಗೀಯ ಆತುರ ಆಗ ಪ್ರಪಂಚದಿಂದ ಮಾಯವಾಗುವುದು. ಇದರೊಂದಿಗೆ ಎಲ್ಲಾ ಹೋರಾಟ ದ್ವೇಷ ಅಸೂಯೆ ಪಾಪವೆಲ್ಲ ಮಾಯ ವಾಗುವುದು. ಆಗ ದೇವತೆಗಳು ವಾಸಿಸುವರು ಪ್ರಪಂಚದಲ್ಲಿ. ಆಗ ಈ ಮರ್ತ್ಯಲೋಕವೆ ಸ್ವರ್ಗಧಾಮವಾಗುವುದು. ದೇವರು ದೇವರೊಂದಿಗೆ ಆಡುವಾಗ, ದೇವರು ದೇವರೊಂದಿಗೆ ಕೆಲಸಮಾಡುವಾಗ, ದೇವರು ದೇವ ರನ್ನು ಪ್ರೀತಿಸುವಾಗ ಏನು ಪಾಪವಿರಬಲ್ಲುದು? ಆತ್ಮಸಾಕ್ಷಾತ್ಕಾರದ ಪ್ರಯೋಜನವೆ ಇದು. ಈಗ ಸಮಾಜದಲ್ಲಿ ಕಾಣುತ್ತಿರುವುದೆಲ್ಲ ಬೇರೆ ರೂಪು ತಾಳುವುದು ಮಾರ್ಪಡುವುದು. ನೀವು ಮನುಷ್ಯನನ್ನು ಪಾಪಿ ಎಂದು ಇನ್ನುಮೇಲೆ ಆಲೋಚಿಸುವುದಿಲ್ಲ. ಇದೇ ಪ್ರಥಮ ಮಹಾ ಪ್ರಯೋಜನ. ಇನ್ನುಮೇಲೆ ತಪ್ಪುಮಾಡಿದ ಸ್ತ್ರೀಪುರುಷರನ್ನು ನೋಡಿ ಅಣಕಿಸುವುದಿಲ್ಲ. ಪತಿವ್ರತೆಯರೆ! ದೀನ ಜಾರ ಸ್ತ್ರೀಯರನ್ನು ಇನ್ನು ತಿರಸ್ಕಾರಭಾವದಿಂದ ನೋಡಲಾರರಿ! ಏಕೆಂದರೆ ಅಲ್ಲಿಕೂಡ ನೀವು ದೇವ ರನ್ನೇ ನೋಡುವಿರಿ. ಅಸೂಯೆ ಶಿಕ್ಷೆ ಎಂಬ ಆಲೋಚನೆಯನ್ನೇ ಇನ್ನು ಮೇಲೆ ಮಾಡುವುದಿಲ್ಲ. ಇವೆಲ್ಲಾ ಮಾಯವಾಗುವುದು. ಪ್ರೇಮ ಮಹಾಪ್ರೇಮಾದರ್ಶ ಒಂದೇ ಪ್ರಬಲವಾಗುವುದು. ಮಾನವನನ್ನು ದಾರಿಗೆ ತರಲು ಚಾವಟಿ ಸರಪಳಿಗಳು ಇನ್ನುಮೇಲೆ ಬೇಕಾಗುವುದಿಲ್ಲ.

ಈ ಪ್ರಪಂಚದಲ್ಲಿರುವ ಸ್ತ್ರೀಪುರುಷರಲ್ಲಿ ಕೋಟಿಗೆ ಒಬ್ಬರು ಸುಮ್ಮನೆ ಕುಳಿತು ಕೆಲವು ನಿಮಿಷ "ನೀವೆಲ್ಲ ದೇವತೆಗಳು, ಹೇ ಮಾನ ವರೆ, ಪ್ರಾಣಿಗಳೆ, ಪಶುಪಕ್ಷಿಗಳೆ, ನೀವೆಲ್ಲಾ ಒಬ್ಬ ಭಗವಂತನ ಆವಿರ್ಭಾವನೆ" ಎಂದರೆ, ಪೃಥ್ವಿ ಅರ್ಧಗಂಟೆಯಲ್ಲಿ ಬೇರೆ ರೂಪು ತಾಳುವುದು. ಮೂಲೆಮೂಲೆಗೆ ದ್ವೇಷದ ಸಿಡಿಗುಂಡನ್ನು ಎರಚುವ ಬದಲು, ಅಸೂಯಾದಿ ಹೀನಭಾವತರಂಗದಿಂದ ಜಗತ್ತನ್ನು ಕೆರಳಿಸುವ ಬದಲು, ಪ್ರಪಂಚದಲ್ಲೆಲ್ಲ ಜನರು ಎಲ್ಲಾ ಅವನೆ ಆಗಿರುವನು ಎಂದು ಭಾವಿಸುವರು. ನೀವು ನೋಡುವ ಅನುಭವಿಸುವ ವಸ್ತುವೆಲ್ಲ ಅವನೆ. ನಿಮ್ಮಲ್ಲಿ ಪಾಪವಿಲ್ಲದೆ ಇದ್ದರೆ ಅದನ್ನು ಹೊರಗೆ ಎಲ್ಲಿ ನೋಡಬಲ್ಲಿರಿ?

“ಇದರಿಂದ ಏನು ಪ್ರಯೋಜನ? ಇದರಿಂದ ಹಣ ದೊರಕುವುದೆ?” ಎಂದು ಪ್ರಶ್ನಿಸುವರು. “ಇಲ್ಲ.” “ಹಾಗಾದರೆ ಏನು ಪ್ರಯೋಜನ?” ಅವರಿಗೆ ಪ್ರಪಂಚಕ್ಕೆ ಒಳ್ಳೆಯದು ಎಂದರೆ ಅದೆ ಅರ್ಥ.

ಆದರೂ ಆತ್ಮಸಾಕ್ಷಾತ್ಕಾರದಿಂದ ಪ್ರಪಂಚಕ್ಕೇ ಕಲ್ಯಾಣಕಾರಿ. ಇದನ್ನು ಪಡೆದರೆ, ಪ್ರಪಂಚದಲ್ಲಿ ಇರುವುದೊಂದೆ ಎಂದು ಅರಿತರೆ, ತಮ್ಮ ಪ್ರೇಮುಚಿಲುಮೆಯೆಲ್ಲ ಬತ್ತಿಹೋಗುವುದು, ತಾವು ಪ್ರೀತಿಸುವುದೆಲ್ಲ ಇಲ್ಲಿ ಮತ್ತು ಮುಂದೆ ಮಂಗಮಾಯವಾಗುವುದು ಎಂದು ಜನ ಅಂಜುವರು. ಯಾರು ತಮ್ಮನ್ನು ಅತ್ಯಂತ ಕಡಿಮೆ ಯೋಚಿಸಿದರೊ ಅಂತಹವರೆ ಪ್ರಪಂಚದಲ್ಲಿ ಪ್ರಚಂಡ ಕರ್ಮಪಟುಗಳೆಂಬುದನ್ನು ಅರಿಯರು. ತಾನು ಯಾವುದನ್ನು ಪ್ರೀತಿಸುತ್ತಾನೆಯೊ ಅದು ಕ್ಷುದ್ರ ಅಲ್ಪ ಮರ್ತ್ಯವಸ್ತುವಲ್ಲ ಎಂದು ಅರಿತಾಗ ಮಾತ್ರ ಅದನ್ನು ಪೂರ್ಣವಾಗಿ ಪ್ರೀತಿಸಬಲ್ಲ. ತಾನು ಪ್ರೀತಿಸುವ ವಸ್ತು ಬೊಗಸೆ ಮಣ್ಣಿನಿಂದಾದುದಲ್ಲ, ಅದು ಸಾಕ್ಷಾತ್ ಭಗವಂತ ಎಂದು ಅರಿತಾಗ ಮಾತ್ರ ಅವನು ನೈಜವಾಗಿ ಪೂರ್ಣವಾಗಿ ಪ್ರೀತಿಸಬಲ್ಲ. ಗಂಡ ಸ್ವಯಂ ಭಗವಂತ ಎಂದು ಹೆಂಡತಿ ಅರಿತಾಗ ಅವಳು ಗಂಡನನ್ನು ಹೆಚ್ಚು ಪ್ರೀತಿಸಬಲ್ಲಳು. ಹೆಂಡತಿ ಸ್ವಯಂ ಭಗವಂತ ಎಂದು ಗಂಡ ಅರಿತಾಗ ಅವನು ಅವಳನ್ನು ಹೆಚ್ಚು ಪ್ರೀತಿಸಬಲ್ಲನು. ವೈರಿಯೂ ದೇವರೆ ಎಂದು ಯಾರು ಅರಿತಿರುವನೊ ಅವನು ತನ್ನ ಪರಮ ಶತ್ರುವನ್ನೂ ಪ್ರೀತಿಸುವನು. ಸಾಧು ದೇವರೆಂದು ಯಾರಿಗೆ ಗೊತ್ತಿದೆಯೊ ಅವನು ಸಾಧುವನ್ನು ಪ್ರೀತಿಸುವನು. ಅವನು ಅಸಾಧುವನ್ನೂ ಪ್ರೀತಿಸುನನು. ಆ ಅಸಾಧುವಿನ ಹಿನ್ನೆಲಿಯೂ ಕೂಡ ಸ್ವಯಂ ಭಗವಂತನೆ ಆಗಿರುವನು. ಯಾರಲ್ಲಿ ತನ್ನ ಕ್ಷುದ್ರ ಅಹಂಕಾರ ಮಾಯವಾಗಿದೆಯೊ ಅಲ್ಲಿ ದೇವರಿರುವನು, ಅವನೆ ಪ್ರಪಂಚ ಚಾಲನ ವ್ಯಕ್ತಿಯಾಗುವನು. ಇಡೀ ಬ್ರಹ್ಮಾಂಡ ಅವನಿಗೆ ಬೇರೆ ರೂಪು ತಾಳುವುದು. ಯಾತನಾಮಯವಾಗಿರುವುದು ದುಃಖಕರವಾಗಿರುವುದೆಲ್ಲ ಮಾಯವಾಗುವುದು. ಹೋರಾಟವೆಲ್ಲ ಕೊನೆಗಾಣುವುದು. ನಾವು ಅನುದಿನ ಒಂದು ತುತ್ತು ಕೂಳಿಗಾಗಿ, ಹೋರಾಡಿ ಕಾದಾಡಿ ಸ್ಪರ್ಧಿಸುವ ಜಗತ್ತು ಲೀಲಾಭೂಮಿಯಾಗುವುದು. ಆಗ ಈ ಪ್ರಪಂಚ ಸುಂದರವಾಗುವುದು! ಅಂತಹ ಮನುಷ್ಯನಿಗೆ ಮಾತ್ರ ಎದ್ದುನಿಂತು, “ಈ ಪ್ರಪಂಚ ಎಷ್ಟು ಚೆನ್ನಾಗಿದೆ” ಎಂದು ಹೇಳಲು ಅಧಿಕಾರವಿದೆ. ಇದೆಲ್ಲ ಮಂಗಳಮಯ ಎಂದು ಹೇಳುವುದಕ್ಕೆ ಅವನಿಗೆ ಮಾತ್ರ

ಅಧಿಕಾರವಿದೆ. ಇಂತಹ ಆತ್ಮಸಾಕ್ಷಾತ್ಕಾರದಿಂದ ಸಿದ್ಧಿಸುವ ಸೌಭಾಗ್ಯವಿದು. ಅನುದಿನ ಪ್ರಪಂಚದಲ್ಲಿ ಆಗುತ್ತಿರುವ ಸ್ಪರ್ಧೆಹೋರಾಟವನ್ನು ತೊರೆದು ಆ ಮಹಾಸತ್ಯದ ಒಂದು ಅಂಶವನ್ನಾದರೂ ಮಾನವಕೋಟಿ ಮನಗಂಡರೆ ಇಡೀ ಪ್ರಪಂಚ ಬೇರೆ ರೂಪು ತಾಳುವುದು. ಜಗಳ ಕದನದ ಬದಲು ಶಾಂತಿ ನೆಲೆಸುವುದು. ಎಲ್ಲರನ್ನೂ ಮೀರಿಸಿ ನಾವು ಹೋಗಬೇಕೆಂದು ಪಡುತ್ತಿರುವ ಮೃಗೀಯ ಆತುರ ಆಗ ಪ್ರಪಂಚದಿಂದ ಮಾಯವಾಗುವುದು. ಇದರೊಂದಿಗೆ ಎಲ್ಲಾ ಹೋರಾಟ ದ್ವೇಷ ಅಸೂಯೆ ಪಾಪವೆಲ್ಲ ಮಾಯವಾಗುವುದು. ಆಗ ದೇವತೆಗಳು ವಾಸಿಸುವರು ಪ್ರಪಂಚದಲ್ಲಿ. ಆಗ ಈ ಮರ್ತ್ಯಲೋಕವೆ ಸ್ವರ್ಗಧಾಮವಾಗುವುದು. ದೇವರು ದೇವರೊಂದಿಗೆ ಆಡುವಾಗ, ದೇವರು ದೇವರೊಂದಿಗೆ ಕೆಲಸಮಾಡುವಾಗ, ದೇವರು ದೇವರನ್ನು ಪ್ರೀತಿಸುವಾಗ ಏನು ಪಾಪವಿರಬಲ್ಲುದು? ಆತ್ಮಸಾಕ್ಷಾತ್ಕಾರದ ಪ್ರಯೋಜನವೆ ಇದು. ಈಗ ಸಮಾಜದಲ್ಲಿ ಕಾಣುತ್ತಿರುವುದೆಲ್ಲ ಬೇರೆ ರೂಪು ತಾಳುವುದು ಮಾರ್ಪಡುವುದು. ನೀವು ಮನುಷ್ಯನನ್ನು ಪಾಪಿ ಎಂದು ಇನ್ನುಮೇಲೆ ಆಲೋಚಿಸುವುದಿಲ್ಲ. ಇದೇ ಪ್ರಥಮ ಮಹಾ ಪ್ರಯೋಜನ. ಇನ್ನುಮೇಲೆ ತಪ್ಪುಮಾಡಿದ ಸ್ತ್ರೀಪುರುಷರನ್ನು ನೋಡಿ ಅಣಕಿಸುವುದಿಲ್ಲ. ಪತಿವ್ರತೆಯರೆ! ದೀನ ಜಾರ ಸ್ತ್ರೀಯರನ್ನು ಇನ್ನು ತಿರಸ್ಕಾರಭಾವದಿಂದ ನೋಡಲಾರರಿ! ಏಕೆಂದರೆ ಅಲ್ಲಿಕೂಡ ನೀವು ದೇವರನ್ನೇ ನೋಡುವಿರಿ. ಅಸೂಯೆ ಶಿಕ್ಷೆ ಎಂಬ ಆಲೋಚನೆಯನ್ನೇ ಇನ್ನು ಮೇಲೆ ಮಾಡುವುದಿಲ್ಲ. ಇವೆಲ್ಲಾ ಮಾಯವಾಗುವುದು. ಪ್ರೇಮ ಮಹಾಪ್ರೇಮಾದರ್ಶ ಒಂದೇ ಪ್ರಬಲವಾಗುವುದು. ಮಾನವನನ್ನು ದಾರಿಗೆ ತರಲು ಚಾವಟಿ ಸರಪಳಿಗಳು ಇನ್ನುಮೇಲೆ ಬೇಕಾಗುವುದಿಲ್ಲ.

ಈ ಪ್ರಪಂಚದಲ್ಲಿರುವ ಸ್ತ್ರೀಪುರುಷರಲ್ಲಿ ಕೋಟಿಗೆ ಒಬ್ಬರು ಸುಮ್ಮನೆ ಕುಳಿತು ಕೆಲವು ನಿಮಿಷ "ನೀವೆಲ್ಲ ದೇವತೆಗಳು, ಹೇ ಮಾನವರೆ, ಪ್ರಾಣಿಗಳೆ, ಪಶುಪಕ್ಷಿಗಳೆ, ನೀವೆಲ್ಲಾ ಒಬ್ಬ ಭಗವಂತನ ಆವಿರ್ಭಾವನೆ" ಎಂದರೆ, ಪೃಥ್ವಿ ಅರ್ಧಗಂಟೆಯಲ್ಲಿ ಬೇರೆ ರೂಪು ತಾಳುವುದು. ಮೂಲೆಮೂಲೆಗೆ ದ್ವೇಷದ ಸಿಡಿಗುಂಡನ್ನು ಎರಚುವ ಬದಲು, ಅಸೂಯಾದಿ ಹೀನಭಾವತರಂಗದಿಂದ ಜಗತ್ತನ್ನು ಕೆರಳಿಸುವ ಬದಲು, ಪ್ರಪಂಚದಲ್ಲೆಲ್ಲ ಜನರು ಎಲ್ಲಾ ಅವನೆ ಆಗಿರುವನು ಎಂದು ಭಾವಿಸುವರು. ನೀವು ನೋಡುವ ಅನುಭವಿಸುವ ವಸ್ತುವೆಲ್ಲ ಅವನೆ. ನಿಮ್ಮಲ್ಲಿ ಪಾಪವಿಲ್ಲದೆ ಇದ್ದರೆ ಅದನ್ನು ಹೊರಗೆ ಎಲ್ಲಿ ನೋಡಬಲ್ಲಿರಿ?

ಘೋರ ವೈಮನಸ್ಯವನ್ನು ಮತ್ತೊಂದು ಮೀರಿಲ್ಲ. ಮಾನವಸಹೋದರ ಭಾವನೆ ನೆಲಸುವುದಕ್ಕೆ ಧರ್ಮ ಮಾಡಿದಷ್ಟು ಸಹಾಯ ಮತ್ತಾವುದೂ ಮಾಡಿಲ್ಲ. ಧರ್ಮ ಬಿತ್ತಿದಷ್ಟು ಅಸಹನೀಯ ದ್ವೇಷವನ್ನು ಮತ್ತಾವುದೂ ಬಿತ್ತಿಲ್ಲ. ಉಪಕಾರಾರ್ಥ ಸಂಸ್ಥೆಗಳು ಔಷಧಾಲಯಗಳು ಪ್ರಾಣಿ ಗಳಿಗೂ ಕೂಡ ಚಿಕಿತ್ಸಾಲಯಗಳನ್ನು ಧರ್ಮ ಮಾಡಿದಷ್ಟು ಮತ್ತೊಂದು ಮಾಡಿಲ್ಲ. ಧರ್ಮದಷ್ಟು ಪ್ರಪಂಚವನ್ನು ಮತ್ತಾವುದೂ ರಕ್ತದಲ್ಲಿ ತೋಯಿಸಿಲ್ಲ. ವಿಭಿನ್ನ ವೈಮನಸ್ಯದ ಪಂಗಡಗಳಲ್ಲಿ ಸಾಮರಸ್ಯ ಉದಿ ಸುವಂತೆ ಹಲವು ಅಗೋಚರ ಭಾವನಾತರಂಗಗಳಿವೆ. ಪಂಗಡಗಳು ತಾತ್ತ್ವಿಕರು ಧರ್ಮಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡುವ ಹಲವರು ಹಿಂದೆ ಸೌಹಾರ್ದಭಾವನೆ ಉದಿಸಲು ಪ್ರಯತ್ನಿಸಿದ್ದರು, ಈಗಲೂ ಪ್ರಯತ್ನಿಸುತ್ತಿರುವರೆಂದು ಗೊತ್ತಿದೆ. ಕೆಲವು ದೇಶಗಳಲ್ಲಿ ಈ ಪ್ರಯತ್ನ ಶ್ರೇಯಸ್ಕರವಾಗಿದೆ. ಆದರೆ ಒಟ್ಟು ಪ್ರಪಂಚದಲ್ಲಿ ಇದು ಜಯಪ್ರದವಾಗಿಲ್ಲ.

ಅನಾದಿಕಾಲದಿಂದಲೂ ಕೆಲವು ಧರ್ಮಗಳು ಬಂದಿವೆ. ಎಲ್ಲ ಧರ್ಮ ಗಳೂ ಬಾಳಬೇಕೆಂಬ ಭಾವನೆಯಿಂದ ಇವು ಪ್ರೇರೇಪಿತವಾಗಿವೆ. ಪ್ರತಿ ಯೊಂದು ಧರ್ಮದ ಅಂತರಾಳದಲ್ಲಿಯೂ ಒಂದು ಮಹಾಭಾವವಿದೆ, ಉದ್ದೇಶವಿದೆ. ಜನರ ಹಿತದೃಷ್ಟಿಯಿಂದ ಈ ಧರ್ಮಗಳಿಗೆ ಸಹಾಯ ನೀಡುವುದು ಆವಶ್ಯಕವೆಂದು ಅವು ಸಾರಿವೆ. ಆಧುನಿಕ ಕಾಲದಲ್ಲಿ ಇದೇ ಭಾವನೆ ಪ್ರಚಲಿತವಾಗಿವೆ. ಇದನ್ನು ಕಾರ್ಯರೂಪಕ್ಕೆ ತರುವುದಕ್ಕೂ ಹಲವು ವೇಳೆ ಪ್ರಯತ್ನ ನಡೆದಿದೆ. ನಾವು ನಿರೀಕ್ಷಿಸಿದಷ್ಟು ಸಾಮರ್ಥ್ಯ ಹಲವುವೇಳೆ ಈ ಪ್ರಯತ್ನಗಳಲ್ಲಿ ಇಲ್ಲದೆ ಇರಬಹುದು. ಇಲ್ಲಿ ಕೆಲವುವೇಳೆ ಎಂದಿಗಿಂತ ಹೆಚ್ಚಾಗಿ ಧರ್ಮದ ಹೆಸರಿನಲ್ಲಿ ಹೋರಾಡುವುದು ನಿರಾಶಾ ಸೂಚಕವಾಗಿವೆ.

ಮತಭ್ರಾಂತಿಯನ್ನು ಬಿಟ್ಟು ಕೇವಲ ವ್ಯಾವಹಾರಿಕ ದೃಷ್ಟಿಯಿಂದ ನೋಡಿದರೆ, ಪ್ರಪಂಚದ ಎಲ್ಲ ಮುಖ್ಯ ಧರ್ಮಗಳಲ್ಲಿಯೂ ಅದ್ಭುತವಾದ ಸಚೇತನ ಶಕ್ತಿ ನಮಗೆ ಪ್ರಥಮ ಗೋಚರಿಸುವುದು. ಕೆಲವರು ತಮಗೆ ಅದು ಅರಿಯದೆಂದು ಹೇಳುವರು. ಆದರೆ ಅಜ್ಞಾನ ಕ್ಷಮಾರ್ಹವಲ್ಲ. ಒಬ್ಬ, "ಬಾಹ್ಯಜಗತ್ತಿನಲ್ಲಿ ಏನಾಗುತ್ತಿದೆಯೊ ಅದು ನನಗೆ ಗೊತ್ತಿಲ್ಲ. ಆದಕಾರಣ ಬಾಹ್ಯಜಗತ್ತಿನಲ್ಲಿ ಆಗುತ್ತಿರುವುದು ಇಲ್ಲ" ಎಂದು ಹೇಳಲಾರ. ಅವನು ಕ್ಷಮಾಪಣೆಗೆ ಯೋಗ್ಯನಲ್ಲ. ಈ ಪ್ರಪಂಚದಲ್ಲೆಲ್ಲಾ

ಧಾರ್ಮಿಕ ಜಾಗ್ರತಿಯನ್ನು ಪರಿಶೀಲಿಸುವವರು, ಯಾವ ಒಂದು ದೊಡ್ಡ ಧರ್ಮ ಕೂಡ ಪ್ರಪಂಚದಿಂದ ಕಣ್ಮರೆಯಾಗಿಲ್ಲವೆಂಬುದನ್ನು ನೋಡ ಬಹುದು. ಅದು ಮಾತ್ರವಲ್ಲ, ಪ್ರತಿಯೊಂದೂ ಮುಂದುವರಿಯುತ್ತಿವೆ. ಕ್ರೈಸ್ತರು ವೃದ್ಧಿಯಾಗುತ್ತಿರುವರು, ಮಹಮ್ಮದ್ದೀಯರೂ ಹಿಂದೂಗಳೂ ವಿಸ್ತಾರವಾಗುತ್ತಿರುವರು, ಯುಹೂದ್ಯರು ಪ್ರಪಂಚದ ಹಲವು ಭಾಗಗಳಲ್ಲಿ ಬಹಳ ಶೀಘ್ರವಾಗಿ ಹರಡುತ್ತ ದಿನೇದಿನೇ ವೃದ್ಧಿಯಾಗುತ್ತಿರುವರು.

ವಿಶ್ವದ ಧರ್ಮದಲ್ಲಿ ಒಂದು ಮಾತ್ರ ಅತಿ ಪ್ರಾಚೀನ ಪ್ರಖ್ಯಾತ ಧರ್ಮ ಕುಗ್ಗುತ್ತಾ ಹೋಗಿದೆ. ಅದೇ ಜಾರತೂಷ್ಟ್ರ ಧರ್ಮ, ಪುರಾತನ ಪಾರ್ಸಿಯರ ಧರ್ಮ. ಪರ್ಷಿಯಾದೇಶವನ್ನು ಮಹಮ್ಮದೀಯರು ಗೆದ್ದಮೇಲೆ ಒಂದು ಲಕ್ಷ ಪಾರ್ಸಿಜನರು ಭರತಖಂಡದಲ್ಲಿ ಬಂದು ನೆಲೆಸಿದರು. ಉಳಿದ ಕೆಲವರು ಪ್ರಾಚೀನ ಪರ್ಷಿಯಾದೇಶ ದಲ್ಲಿಯೆ ಇದ್ದರು. ಪರ್ಷಿಯಾದಲ್ಲಿ ಅನವರತ ಮಹಮ್ಮದೀಯರ ದಬ್ಬಾಳಿಕೆಗೆ ತುತ್ತಾಗಿ ಅವರ ಜನಸಂಖ್ಯೆ ಕ್ರಮೇಣ ಕಡಿಮೆಯಾಯಿತು. ಈಗ ಅಲ್ಲಿ ಹೆಚ್ಚು ಎಂದರೆ ಹತ್ತುಸಾವಿರ ಮಂದಿ ಇರಬಹುದು. ಭರತ ಖಂಡದಲ್ಲಿ ಸುಮಾರು ಎಂಭತ್ತು ಸಹಸ್ರ ಜನರಿರುವರು. ಆದರೆ ಅವರ ವೃದ್ಧಿಯಾಗುವುದಿಲ್ಲ. ಅವರಲ್ಲಿ ಮೊದಲಲ್ಲೆ ಒಂದು ತೊಂದರೆ ಇದೆ. ಅವರು ಇತರರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುವುದಿಲ್ಲ. ಉಳಿದ ಕೆಲವರು ಭರತಖಂಡದಲ್ಲಿರುವವರು ತಮ್ಮ ರಕ್ತಸಂಬಂಧದಲ್ಲಿಯೆ ಮದುವೆ ಯಾಗುವರು. ಈ ದುರಭ್ಯಾಸವಿರುವುದರಿಂದ ಅವರು ವೃದ್ಧಿಯಾಗುವುದೆ ಇಲ್ಲ. ಈ ಧರ್ಮ ವಿನಃ ಉಳಿದ ದೊಡ್ಡ ಧರ್ಮಗಳೆಲ್ಲ ಬದುಕಿವೆ, ವಿಕಾಸವಾಗು ತ್ತಿವೆ, ಹರಡುತ್ತಿವೆ. ಪ್ರಪಂಚದ ದೊಡ್ಡ ಧರ್ಮಗಳೆಲ್ಲ ಅತಿ ಪ್ರಾಚೀನ ವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅವುಗಳಾವುವೂ ಈಗ ಅದು ದಲ್ಲಿ ಪ್ರತಿಯೊಂದು ಧರ್ಮದ ಮೂಲಸ್ಥಾನವೂ ಗಂಗಾ ಮತ್ತು ಯೂಫ್ರೆಟಿಸ್ ನದಿಗಳ ಮಧ್ಯಭೂಮಿ. ಯಾವ ಒಂದು ಮಹಾಧರ್ಮವೂ ಯೂರೋಪಿನಲ್ಲಿ ಉದಿಸಲಿಲ್ಲ, ಅಮೇರಿಕಾದಲ್ಲಿ ಉದಿಸಲಿಲ್ಲ. ಪ್ರತಿ ಯೊಂದು ಧರ್ಮಕ್ಕೂ ಏಷ್ಯಾ ತವರೂರು. ಪ್ರತಿಯೊಂದು ಧರ್ಮವೂ ಪ್ರಪಂಚದ ಆ ಭಾಗದಿಂದ ಬಂದಿದೆ. 'ಸತ್ತ್ವ ವುಳ್ಳವೇ ಉಳಿಯುವುದು ಕೊನೆಗೆ' ಎಂಬ ಆಧುನಿಕ ವೈಜ್ಞಾನಿಕರ ಅಭಿಪ್ರಾಯ ಸತ್ಯವಾಗಿದ್ದರೆ, ಈ ಧರ್ಮ ಇನ್ನೂ ಉಳಿದಿರು ವುದರಿಂದ ಕೆಲವರಿಗೆ ಇನ್ನೂ ಇವು ಪ್ರಯೋಜನಕಾರಿ ಎಂಬುದನ್ನು

ತೋರಬಲ್ಲುದು. ಮಹಮದೀಯರನ್ನು ನೋಡಿ! ದಕ್ಷಿಣ ಇಂಡಿಯಾ ದಲ್ಲಿ ಹೇಗೆ ಹರಡುತ್ತಿರುವರು. ಕಾಡ್ಗಿಚ್ಚಿನಂತೆ ಆಫ್ರಿಕಾದೇಶದಲ್ಲಿ ಹೇಗೆ ಹರಡುತ್ತಿರುವರು. ಬೌದ್ಧರು ಇಂದಿನವರೆಗೂ ಮಧ್ಯ ಏಷ್ಯಾದಲ್ಲಿ ಹರಡು ತ್ತಿರುವರು. ಹಿಂದೂಗಳು ಯಹೂದ್ಯರಂತೆ ಇತರರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುವುದಿಲ್ಲ. ಆದರೂ ಇತರ ಜನಾಂಗಗಳೂ ಹಿಂದೂಗಳ ಪ್ರಭಾವಕ್ಕೆ ಬರುತ್ತಿರುವರು. ಅವರ ಆಚಾರ ವ್ಯವಹಾರಗಳನ್ನು ಅನುಸರಿಸುತ್ತಾ ಹಿಂದೂಗಳಂತೆ ಆಗುತ್ತಿರುವರು. ನಿಮಗೆಲ್ಲರಿಗೂ ತಿಳಿ ದಿರುವಂತೆ ಕ್ರೈಸ್ತಧರ್ಮ ವೃದ್ಧಿಯಾಗುತ್ತಿದೆ. ಆ ವೃದ್ಧಿ ಅವರು ಪಡುವ ಪ್ರಯತ್ನಕ್ಕೆ ತಕ್ಕಷ್ಟು ಇದೆಯೆ ಎಂಬುದು ಅನುಮಾನಾಸ್ಪದವಾಗಿರುವುದು. ಕ್ರೈಸ್ತರ ಪ್ರಚಾರದಲ್ಲಿ ದೊಡ್ಡದೊಂದು ನ್ಯೂನತೆಯಿದೆ. ಅದೇ ಎಲ್ಲಾ ಪಾಶ್ಚಾತ್ಯ ಸಂಸ್ಥೆಯ ನ್ಯೂನತೆ. ಶಕ್ತಿಯ ತೊಂಬತ್ತು ಪಾಲನ್ನು ಪ್ರಚಾರಣಾ ಯಂತ್ರಸಾಮಗ್ರಿ ಹೀರಿಕೊಳ್ಳುತ್ತದೆ. ವಿಪರೀತ ಅಧಿಕಾರ ಜಾಲ. ಬೋಧನೆ ಯಾವಾಗಲೂ ಏಷ್ಯಾಜನರ ಕರ್ತವ್ಯವಾಗಿತ್ತು. ಪಾಶ್ಚಾತ್ಯರು ಯಾವಾಗಲೂ ಸಂಸ್ಥೆ, ಸಮಾಜ ರಚನೆ, ಸೈನ್ಯ, ಸರ್ಕಾರ ಇವುಗಳಲ್ಲಿ ನಿಪುಣರು. ಆದರೆ ಧಾರ್ಮಿಕ ಪ್ರಚಾರ ಬಂದಾಗ ಅವರು ಏಷ್ಯಾಖಂಡದ ಜನರೆದುರಿಗೆ ನಿಲ್ಲಲಾರರು. ಇದು ಯಾವಾಗಲೂ ಏಷ್ಯಾಖಂಡದ ಜನರ ಕರ್ತವ್ಯವಾಗಿತ್ತು. ಅವರಿಗೆ ಇದರಲ್ಲಿ ಚೆನ್ನಾಗಿ ಪರಿಶ್ರಮವಿದೆ. ಅವರು ಹೆಚ್ಚು ಸಲಕರಣೆಯನ್ನು ಇದಕ್ಕಾಗಿ ಉಪ ಯೋಗಿಸುವುದಿಲ್ಲ.

ಮಹಾಧರ್ಮಗಳೆಲ್ಲ ಇನ್ನೂ ಇವೆ ಮತ್ತು ಅಭಿವೃದ್ಧಿಯಾಗು ತ್ತಿವೆ ಎಂಬುದು ಮಾನವ ಜನಾಂಗದ ಚರಿತ್ರಾಂಶ ವಿಷಯ. ಇದಕ್ಕೆ ನಿಜವಾಗಿಯೂ ಒಂದು ಅರ್ಥವಿದೆ! ಅನಂತದಯಾಸಿಂಧುವಾದ ಸರ್ವಜ್ಞ ನಾದ ಸೃಷ್ಟಿಕರ್ತನ ಒಂದು ಧರ್ಮ ಮಾತ್ರ ನಿಂತು ಉಳಿದವು ನಾಶವಾಗ ಬೇಕೆಂದು ಇಚ್ಛೆಯಾಗಿದ್ದರೆ ಇದು ಎಂದೊ ನಿಜವಾಗುತ್ತಿತ್ತು. ಇವು ಗಳಲ್ಲಿ ಒಂದು ಧರ್ಮ ಮಾತ್ರ ಸತ್ಯವಾಗಿ ಮಿಕ್ಕವುಗಳು ಮಿಥ್ಯವಾಗಿದ್ದರೆ ಆ ಒಂದು ಧರ್ಮ ಪ್ರಪಂಚದಲ್ಲೆಲ್ಲ ಹರಡಬೇಕಾಗಿತ್ತು.

ಆದರೆ ಇದು ಹೀಗಿಲ್ಲ. ಯಾವ ಒಂದು ಧರ್ಮವೂ ವಿಶ್ವವನ್ನೆಲ್ಲಾ ವ್ಯಾಪಿಸಿಲ್ಲ. ಎಲ್ಲ ಧರ್ಮಗಳು ಕೆಲವು ವೇಳೆ ಮುಂದುವರಿಯುವುದು, ಕೆಲವು ವೇಳೆ ಹಿಂದೆ ಬೀಳುವುದು. ಈಗ ಇದನ್ನು ಗಮನಿಸಿ: ನಿಮ್ಮ ದೇಶದಲ್ಲೆ ಆರು ಕೋಟಿಗಿಂತ ಹೆಚ್ಚು ಪ್ರಜೆಗಳಿರುವರು. ಅದರಲಿ

ಕೇವಲ ಎರಡು ಕೋಟಿ ಜನ ಮಾತ್ರ ಯಾವುದಾದರೂ ಧರ್ಮಕ್ಕೆ ಸೇರಿರುವರು. ಆದಕಾರಣ ಇದು ಯಾವಾಗಲೂ ಪ್ರಗತಿ ಅಲ್ಲ. ಪ್ರತಿಯೊಂದು ದೇಶವಲ್ಲಿಯೂ ಸಂಖ್ಯೆಯನ್ನು ಪರಿಶೀಲಿಸಿದರೆ ಧರ್ಮಗಳು ಕೆಲವುವೇಳೆ ಮುಂದುವರಿಯುತ್ತಿರುವುದು, ಕೆಲವುವೇಳೆ ಹಿಂದೆ ಸರಿಯುತ್ತಿರುವುದು ಕಾಣುವುದು. ಪಂಗಡಗಳು ಯಾವಾಗಲೂ ಹೆಚ್ಚುತ್ತಿವೆ. ಒಂದು ಧರ್ಮ, ಸತ್ಯವೆಲ್ಲಾ ತನಗೇ ಮಿಾಸಲು ಅದನ್ನು ದೇವರು ಒಂದು ಪುಸ್ತಕದಲ್ಲಿ ಕೊಟ್ಟಿರುವನು ಎಂಬುದು ಸತ್ಯವಾದರೆ, ಏತಕ್ಕೆ ಇಷ್ಟೊಂದು ಪಂಗಡಗಳಿವೆ? ಐವತ್ತು ವರುಷ ಕಳೆಯುವುದಕ್ಕೆ ಮುಂಚೆ ಆಗಲೆ ಒಂದೇ ಶಾಸ್ತ್ರದ ಆಧಾರದಮೇಲೆ ಇಪ್ಪತ್ತು ಪಂಗಡಗಳು ಹುಟ್ಟುವುವು. ದೇವರು ಸತ್ಯವನ್ನೆಲ್ಲಾ ಒಂದು ಶಾಸ್ತ್ರದಲ್ಲಿ ಅಡಕಮಾಡಿದ್ದರೆ, ಅವನು ನಮಗೆ ಆ ಶಾಸ್ತ್ರವನ್ನು ಕೊಡುತ್ತಿಲ್ಲ. ನಾವು ಗ್ರಂಥದಮೇಲೆ ಹೋರಾಡುವೆವು ಎಂದು ಭಾವಿಸುವೆನು. ಇದೇ ನಿಜವಾಗಿ ಕಾಣುವುದು. ಏತಕ್ಕೆ ? ದೇವರು ಧಾರ್ಮಿಕ ಸತ್ಯ ವಿಷಯಗಳನ್ನೆಲ್ಲ ಒಳಗೊಂಡ ಗ್ರಂಥವನ್ನು ಮನುಷ್ಯನಿಗೆ ಕೊಟ್ಟರೂ ಪ್ರಯೋಜನವಿಲ್ಲ. ಏಕೆಂದರೆ ಅವನು ಅದನ್ನು ಅರ್ಥಮಾಡಿಕೊಳ್ಳಲಾರ. ಉದಾಹರಣೆಗೆ ಬೈಬಲು ಮತ್ತು ಕ್ರೈಸ್ತಧರ್ಮದಲ್ಲಿರುವ ಎಲ್ಲಾ ಪಂಗಡಗಳನ್ನು ತೆಗೆದುಕೊಳ್ಳಿ. ಪ್ರತಿಯೊಬ್ಬರೂ ಧರ್ಮಶಾಸ್ತ್ರಕ್ಕೆ ತಮ್ಮದೆ ಅರ್ಥಕೊಡುವರು, ತಾವೆ ಶಾಸ್ತ್ರವನ್ನು ಪೂರ್ಣ ಅರ್ಥಮಾಡಿಕೊಳ್ಳುವವರು, ಉಳಿದವರಲ್ಲ ಎನ್ನುವರು. ಇದರಂತೆಯೆ ಎಲ್ಲಾ ಧರ್ಮಗಳು. ಮಹಮ್ಮದೀಯರಲ್ಲಿ ಬೌದ್ಧರಲ್ಲಿ ಹಲವು ಪಂಗಡಗಳಿವೆ. ಹಿಂದೂಗಳಲ್ಲಿ ನೂರಾರು ಪಂಗಡಗಳಿವೆ. ಮಾನವರನ್ನೆಲ್ಲ ಧಾರ್ಮಿಕ ವಿಷಯದಲ್ಲಿ ಒಂದೇ ರೀತಿ ಆಲೋಚಿಸುವಂತೆ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಗಿದೆ, ಮುಂದೆ ಹಾಗೆ ವ್ಯರ್ಥವಾಗುವುದು ಸಿದ್ಧ. ಈಗಿನಕಾಲದಲ್ಲಿ ಕೂಡ, ಒಂದು ಸಿದ್ಧಾಂತವನ್ನು ಜಾರಿಗೆ ತರುವವನು ಕೂಡ, ತನ್ನ ಅನುಯಾಯಿಗಳಿಂದ ಇಪ್ಪತ್ತು ಮೈಲಿ ದೂರ ಹೋಗುವುದರೊಳಗಾಗಿ ಅವರು ಆಗಲೇ ಇಪ್ಪತ್ತು ಪಂಗಡವನ್ನು ಮಾಡಿರುವರು. ಇದು ಯಾವಾಗಲೂ ಆಗುತ್ತಿರುವುದನ್ನು ನೀವು ನೋಡುವಿರಿ. ಎಲ್ಲರನ್ನೂ ಒಂದೇ ಎರಕದಲ್ಲಿ ಹಾಕಲು ಆಗುವುದಿಲ್ಲ. ಇದು ನಿಜ. ಹೀಗಿರುವುದರಿಂದ ದೇವರಿಗೆ ಧನ್ಯವಾದ. ನಾನು ಯಾವ ಪಂಗಡಕ್ಕೂ ವಿರೋಧಿಯಲ್ಲ. ಪಂಗಡಗಳಿರುವುದರಿಂದ ನನಗೆ ಸಂತೋಷ. ಅವಿನ್ನೂ ವೃದ್ಧಿಯಾಗಲೆಂಬುದೆ ನನ್ನ ಆಶಯ. ಏತಕ್ಕೆ ? ಅದಕ್ಕೆ ಕಾರಣ ಇಷ್ಟೆ :

ಇಲ್ಲಿರುವವರೆಲ್ಲ ಒಂದೇ ಆಲೋಚನೆ ಮಾಡಬೇಕಾದರೆ ಆಲೋಚಿಸುವುದಕ್ಕೆ ಆಲೋಚನೆಯೆ ಇರುವುದಿಲ್ಲ. ಚಲನೆ ಸಾಧ್ಯವಾಗಬೇಕಾದರೆ ಎರಡು ಮೂರು ಶಕ್ತಿಗಳ ಸಂಘರ್ಷಣೆ ಆಗಬೇಕು. ಭಾವನೆಗಳ ಘರ್ಷಣೆ, ಭಾವನೆಗಳ ವ್ಯತ್ಯಾಸ, ಆಲೋಚನೆಯನ್ನು ನಮ್ಮಲ್ಲಿ ಉದ್ದೀಪನಗೊಳಿಸುವುದು. ನಾವೆಲ್ಲಾ ಒಂದೇ ಸಮನಾಗಿ ಆಲೋಚಿಸಿದರೆ ಒಬ್ಬರು ಇನ್ನೊಬ್ಬರ ಮುಖವನ್ನು ಯಾವ ಅರ್ಥವೂ ಇಲ್ಲದೆ ನೋಡುತ್ತಿರುವ ಈಜಿಪ್ಟಿನ ಮಮ್ಮಿಗಳಾಗುವೆವು, ಅದಕ್ಕಿಂತ ಹೆಚ್ಚೇನೂ ಅಲ್ಲ! ಚಲಿಸುತ್ತಿರುವ ಜೀವ ಪ್ರವಾಹದಲ್ಲಿ ಮಾತ್ರ ಸುಳಿ ತರಂಗಗಳು ಏಳುವುವು. ನಿಂತ, ಚಲಿಸದ ನೀರಿನಲ್ಲಿ ಯಾವ ಸುಳಿಯೂ ಇರುವುದಿಲ್ಲ. ಧರ್ಮ ನಿರ್ಮೂಲವಾದರೆ ಇನ್ನು ಹೆಚ್ಚು ಪಂಗಡಗಳಿರುವುದಿಲ್ಲ. ಅಲ್ಲಿರುವುದು ಸ್ಮಶಾನ ಮೌನ ಸಾಮರಸ್ಯ. ಎಲ್ಲಿಯವರೆಗೆ ಮಾನವ ಆಲೋಚಿಸುವನೊ ಅಲ್ಲಿಯವರೆಗೆ ಪಂಗಡಗಳಿರುತ್ತವೆ. ವ್ಯತ್ಯಾಸವೆ ಜೀವನದ ಚಿಹ್ನೆ. ಅದು ಇದ್ದೇಯಿರಬೇಕು. ಕೊನೆಗೆ ಎಷ್ಟು ಜನರಿರುವರೊ ಅಷ್ಟು ಪಂಗಡಗಳಾಗಲಿ ಎಂದು ಪ್ರಾರ್ಥಿಸುತ್ತೇನೆ. ಆಗ ಧರ್ಮದಲ್ಲಿ ತಮ್ಮದೇ ಮಾರ್ಗ, ತಮ್ಮದೇ ರೀತಿ ದೊರಕುವುದು.

ಆದರೆ ಆಗಲೆ ಇದು ಇದೆ. ಪ್ರತಿಯೊಬ್ಬನೂ ತನ್ನದೆ ರೀತಿಯಲ್ಲಿ ಆಲೋಚಿಸುತ್ತಿರುವನು. ಆದರೆ ಈ ಸ್ವಾಭಾವಿಕ ಮಾರ್ಗಕ್ಕೆ ಯಾವಾಗಲೂ ಅಡಚಣೆ ಇತ್ತು. ಈಗಲೂ ಅದಕ್ಕೆ ಆತಂಕವಿದೆ. ಪ್ರತ್ಯಕ್ಷವಾಗಿ ಖಡ್ಗವನ್ನು ಉಪಯೋಗಿಸದೆ ಇದ್ದರೆ ಬೇರೆ ರೀತಿಯನ್ನು ಅನುಸರಿಸುವರು. ನ್ಯೂಯಾರ್ಕಿನ ಒಬ್ಬ ಶ್ರೇಷ್ಠ ಬೋಧಕನು ಹೇಳುವುದನ್ನು ಕೇಳಿ: "ಫಿಲಿಪಿನೋ ಜನರನ್ನು ಗೆಲ್ಲಬೇಕು, ಕ್ರೈಸ್ತಧರ್ಮವನ್ನು ಬೋಧಿಸುವುದಕ್ಕೆ ಅದೊಂದೇ ಮಾರ್ಗ!" ಅವರಾಗಲೇ ಕ್ಯಾಥೊಲಿಕ್ ಆಗಿರುವರು. ಆದರೆ ಅವರನ್ನು ಪ್ರಾಟೆಸ್ಟೆಂಟ್ ಮಾಡಲಿಚ್ಛಿಸುವನು. ಇದಕ್ಕಾಗಿ ರಕ್ತವನ್ನು ಹರಿಸುವ ಮಹಾಪಾಪದಿಂದ ತನ್ನ ಧರ್ಮವನ್ನು ಕಲುಷಿತಮಾಡುವುದಕ್ಕೂ ಹಿಂಜರಿಯುವುದಿಲ್ಲ. ಎಂತಹ ಕ್ರೌರ್ಯ? ಈತ ಈ ದೇಶದ ಶ್ರೇಷ್ಠ ಬೋಧಕ; ವಿಷಯವನ್ನು ಚೆನ್ನಾಗಿ ತಿಳಿದವನು. ಇಂತಹ ಪ್ರಸಿದ್ಧರು ನಿಂತು ಕೆಲಸಕ್ಕೆ ಬಾರದ ಮಾತನ್ನು ನಾಚಿಕೆಯಿಲ್ಲದೆ ಆಡಿದರೆ ಆ ದೇಶ ಎಂತಹ ಸ್ಥಿತಿಯಲ್ಲಿ ಇದೆ ಎಂಬುದನ್ನು ನೀವೆ ಗಮನಿಸಿ. ಪ್ರೇಕ್ಷಕರು ಇಂತಹವನನ್ನು ಪ್ರೋತ್ಸಾಹಿಸಿದರೆ ಆ ದೇಶದ ಗತಿಯನ್ನು ಏನೆಂದು ಹೇಳೋಣ, ಇದು ನಾಗರಿಕತೆಯೆ? ಇದು ಹಿಂದಿನ ವ್ಯಾಘ್ರದ,

ಮನುಷ್ಯಭಕ್ಷಕರ, ಕಾಡುಜನರ, ರಕ್ತದಾಹ, ಬೇರೊಂದು ಹೆಸರಿನಲ್ಲಿ ಬೇರೊಂದು ಸನ್ನಿವೇಶದಲ್ಲಿ ಬರುತ್ತಿದೆ. ಇದು ಮತ್ತೇನು? ಈಗಲೆ ಪ್ರಪಂಚದ ಸ್ಥಿತಿ ಹೀಗಿದ್ದರೆ, ಹಿಂದೆ ಪ್ರತಿಯೊಂದು ಧರ್ಮವೂ ತನ್ನ ಶಕ್ತಿ ಸಾಮರ್ಥ್ಯವಿದ್ದಷ್ಟು ಅನ್ಯಧರ್ಮವನ್ನು ನಿರ್ಮೂಲಮಾಡಲು ಯತ್ನಿಸುತ್ತಿದ್ದ ಅಮಾನುಷ ಯಾತನೆಯ ಮೂಲಕ ಸಾಗಿಬಂದ ಸ್ಥಿತಿಯನ್ನು ನೀವೆ ಯೋಚಿಸಿ. ಚರಿತ್ರೆ ಇದನ್ನು ತೋರುವುದು. ವ್ಯಾಘ್ರ ನಮ್ಮಲ್ಲಿ ಇನ್ನೂ ನಿದ್ರಿಸುತ್ತಿದೆ ನಾಶವಾಗಿಲ್ಲ. ಅವಕಾಶ ಒದಗಿದರೆ ಪುನಃ ನೆಗೆಯುವುದು, ತನ್ನ ನಖದಂತಗಳನ್ನು ಹಿಂದಿನಂತೆ ಉಪಯೋಗಿಸುವುದು. ಖಡ್ಗಗಳಲ್ಲದೆ, ಶಸ್ತ್ರಾಸ್ತ್ರಗಳಲ್ಲದೆ ಇದಕ್ಕಿಂತ ಘೋರವಾದ ಅಸ್ತ್ರಗಳಿವೆ. ನಮ್ಮಂತೆ ಯಾರು ಆಲೋಚಿಸುವುದಿಲ್ಲವೊ ಅವರಮೇಲೆ ಎಸೆವ ಅಸ್ತ್ರಗಳೆ ತಿರಸ್ಕಾರ, ದ್ವೇಷ, ಸಮಾಜ ಬಹಿಷ್ಕಾರ. ಇದು ಎಲ್ಲಕ್ಕಿಂತ ಘೋರ ಶಿಕ್ಷೆ. ಎಲ್ಲರೂ ನಮ್ಮಂತೆಯೆ ಏತಕ್ಕೆ ಆಲೋಚಿಸಬೇಕು? ನನಗೆ ಇದಕ್ಕೆ ಕಾರಣ ಕಾಣದು. ನಾನು ಆಲೋಚನಾ ಜೀವಿಯಾದರೆ, ಮತ್ತೊಬ್ಬ ನನ್ನಂತೆ ಆಲೋಚಿಸದೆ ಇದ್ದರೆ ಸಂತೋಷಪಡಬೇಕು. ನಾನೊಂದು ಶ್ಮಶಾನದಲ್ಲಿ ಬಾಳಲು ಇಚ್ಛಿಸುವುದಿಲ್ಲ. ನಾನೊಬ್ಬ ಮನುಷ್ಯನಾಗಬೇಕು, ಮಾನವ ಪ್ರಪಂಚದಲ್ಲಿ ಬಾಳಬೇಕು. ಆಲೋಚನಾ ಜೀವಿಗಳಲ್ಲಿ ಭಿನ್ನಮತಗಳಿರಬೇಕು. ಭಿನ್ನತೆಯೆ ಆಲೋಚನೆಯ ಪ್ರಥಮ ಚಿಹ್ನೆ. ನಾನು ಆಲೋಚನಾ ಜೀವಿಯಾದರೆ, ಭಿನ್ನಮತಗಳಿರುವ ಆಲೋಚನಾಪರರೊಂದಿಗೆ ಇರಲು ನಾನು ಆಶಿಸುತ್ತೇನೆ.

ವೈವಿಧ್ಯತೆಗಳೆಲ್ಲ ಹೇಗೆ ಸತ್ಯವೆಂಬ ಪ್ರಶ್ನೆಯೊಂದು ಉದಿಸುವುದು. ಒಂದು ಸತ್ಯವಾದರೆ, ಅದನ್ನು ನಿಷೇಧಿಸುವುದು ಅಸತ್ಯವಾಗಬೇಕು. ಏಕಕಾಲದಲ್ಲಿ ವಿರೋಧ ಅಭಿಪ್ರಾಯಗಳು ಹೇಗೆ ಸತ್ಯವಾಗಬಲ್ಲುವು? ನಾನು ಉತ್ತರ ಹೇಳಬೇಕೆಂದಿರುವ ಪ್ರಶ್ನೆಯೆ ಇದು. ಪ್ರಪಂಚದ ಧರ್ಮಗಳೆಲ್ಲ ವಿರೋಧವಾಗಿದೆಯೆ ಎಂಬುದೆ ನಾನು ನಿಮ್ಮನ್ನು ಮೊದಲು ಕೇಳುವುದು. ಮಹಾಭಾವಗಳನ್ನು ಒಳಗೊಂಡ ಬಾಹ್ಯ ಆಕಾರವನ್ನು ನಾನು ಉದ್ದೇಶಿಸುತ್ತಿಲ್ಲ. ಬೇರೆಬೇರೆ ಧರ್ಮಗಳಲ್ಲಿ ಪ್ರಚಾರದಲ್ಲಿರುವ ಕಟ್ಟಡ, ಭಾಷೆ, ಆಚಾರ–ವ್ಯವಹಾರ, ಶಾಸ್ತ್ರ ಇವುಗಳನ್ನು ಹೇಳುತ್ತಿಲ್ಲ. ಧರ್ಮದ ಅಂತರ್ಗತಭಾವನೆ ನಿಜವಾಗಿ ಬೇರೆಯಾಗಿದೆಯೆ ಎನ್ನುವುದನ್ನು ನಾನು ಕೇಳುವುದು. ಪ್ರತಿಯೊಂದು ಧರ್ಮದ ಹಿಂದೆಯೂ ಒಂದು ಚೈತನ್ಯವಿದೆ. ಅದು ಮತ್ತೊಂದು ಧರ್ಮದಂತೆ ಆತ್ಮದಂತೆ ಇಲ್ಲ. ಆದರೆ

ಅವು ಪರಸ್ಪರ ವಿರೋಧವೆ? ಅವು ಪರಸ್ಪರ ವಿರೋಧವಾಗಿವೆಯೆ ಅಥವಾ ಪೂರಕವಾಗಿವೆಯೆ? ಅದೇ ಪ್ರಶ್ನೆ. ನಾನು ಸಣ್ಣಹುಡುಗನಾಗಿದ್ದಾಗ ಈ ಪ್ರಶ್ನೆಯನ್ನು ತೆಗೆದುಕೊಂಡೆ. ಅಂದಿನಿಂದ ಇಂದಿನವರೆಗೂ ನಾನು ಇದನ್ನು ಪರೀಕ್ಷಿಸುತ್ತಿರುವೆನು. ಅದರಮೇಲೆ ಮಾಡಿದ ನನ್ನ ನಿರ್ಧಾರ ದಿಂದ ನಿಮಗೆ ಸ್ವಲ್ಪ ಸಹಾಯವಾದೀತೆಂದು ಅವನ್ನು ನಿಮಗೆ ಹೇಳುವೆನು. ಈ ಧರ್ಮಗಳು ಪರಸ್ಪರ ವಿರೋಧವಲ್ಲ, ಪೂರಕ ಎಂದು ನಾನು ನಂಬುತ್ತೇನೆ. ಪ್ರತಿಯೊಂದು ಧರ್ಮವೂ ವಿಶ್ವಸತ್ಯದ ಒಂದು ಅಂಶವನ್ನು ತೆಗೆದುಕೊಂಡು ಅದನ್ನು ವಿವರಿಸಿ ಅನುಷ್ಠಾನಕ್ಕೆ ತರಲು ತನ್ನ ಶಕ್ತಿಯನ್ನೆಲ್ಲಾ ವಿನಿಯೋಗಿಸುವುದು. ಆದಕಾರಣ ಇದರಿಂದ ಲಾಭವೆ ಹೊರತು ನಷ್ಟವಲ್ಲ. ಇದೇ ನನ್ನ ಭಾವನೆ. ಸಿದ್ಧಾಂತಗಳಮೇಲೆ ಸಿದ್ಧಾಂತಗಳು ಉದಿಸುವುವು. ಪ್ರತಿಯೊಂದೂ ಒಂದು ಮಹಾಭಾವವನ್ನು ಒಳಗೊಂಡಿದೆ. ಭಾವನೆಗಳಿಗೆ ಭಾವನೆಗಳನ್ನು ಬೆರಸಬೇಕು. ಮಾನವ ಪ್ರಗತಿಮಾರ್ಗವಿದು. ಮನುಷ್ಯ ಅಸತ್ಯದಿಂದ ಸತ್ಯದೆಡೆಗೆ ಹೋಗುತ್ತಿಲ್ಲ. ಸತ್ಯದಿಂದ ಮತ್ತೊಂದು ಸತ್ಯಕ್ಕೆ ಹೋಗುತ್ತಿರುವನು. ಕನಿಷ್ಟ ಸತ್ಯದಿಂದ ಶ್ರೇಷ್ಠ ಸತ್ಯದೆಡೆಗೆ ಹೋಗುತ್ತಿರುವನು. ಆದರೆ ಎಂದಿಗೂ ಅಸತ್ಯದಿಂದ ಸತ್ಯಕ್ಕೆ ಅಲ್ಲ. ಮಗು ತಂದೆಗಿಂತ ಮುಂದೆ ಹೋಗಬಹುದು. ಆದರೆ ತಂದೆ ಬರೀ ದಡ್ಡನಾಗಿದ್ದನೆ? ಮಗು ತಂದೆ ಜೊತೆಗೆ ಮತ್ತೇನೋ ಸೇರಿ ಆಗಿದೆ. ನಿಮ್ಮ ಬಾಲ್ಯಾವಸ್ಥೆಯ ಜ್ಞಾನಕ್ಕಿಂತ ಈಗ ಜ್ಞಾನಭಂಡಾರ ವಿಸ್ತಾರವಾಗಿದ್ದರೆ, ಈಗ ನೀವು ಬಾಲ್ಯಾವಸ್ಥೆಯನ್ನು ನಿಕೃಷ್ಟದೃಷ್ಟಿಯಿಂದ ನೋಡುವಿರಾ? ಈಗಿನ ನಿಮ್ಮ ಸ್ಥಿತಿ ಬಾಲ್ಯಾವಸ್ಥೆಯದರ ಜೊತೆಗೆ ಮತ್ತೇನೊ ಸೇರಿ ಆಗಿದೆ. ಪುನಃ, ಒಂದೇ ವಸ್ತುವಿಗೆ ಎಷ್ಟೋ ಮುಖಗಳಿರಬಹುದು ಎಂಬುದೂ ನಮಗೆ ಗೊತ್ತಿದೆ. ಆದರೆ ಅವೆಲ್ಲಾ ಒಂದೇ ವಸ್ತುವನ್ನು ನಿರ್ದೇಶಿಸುತ್ತವೆ. ಒಬ್ಬ ಸೂರ್ಯನೆಡೆಗೆ ಹೋಗುತ್ತಿರುವನು ಎಂದು ಭಾವಿಸೋಣ. ಅವನು ಮುಂದುವರಿಯುತ್ತಾ ಅನೇಕ ಸ್ಥಳಗಳಿಂದ ಸೂರ್ಯನ ಭಾವಚಿತ್ರಗಳನ್ನು ತೆಗೆದುಕೊಳ್ಳುತ್ತಾನೆ. ಅವನು ಹಿಂತಿರುಗಿದಮೇಲೆ ಸೂರ್ಯನ ಹಲವು ಭಾವಚಿತ್ರಗಳನ್ನು ನಮ್ಮ ಮುಂದಿಡುವನು. ಯಾವ ಎರಡೂ ಹೋಲುವುದಿಲ್ಲ. ಆದರೂ ಬೇರೆಬೇರೆಕಡೆಯಿಂದ ತೆಗೆದ ಚಿತ್ರಗಳೆ ಇವು ಎಂಬುದನ್ನು ಯಾರು ಅಲ್ಲಗಳೆಯಬಲ್ಲರು? ಚರ್ಚಿನ ಫೋಟೋಗಳನ್ನು ನಾಲ್ಕು ದಿಕ್ಕಿನಿಂದಲೂ ತೆಗೆದುಕೊಳ್ಳಿ. ಅವು ಎಷ್ಟು ವ್ಯತ್ಯಾಸವಾಗಿ

ಕಾಣುವುವು. ಆದರೂ ಅವೆಲ್ಲಾ ಈ ಚರ್ಚನ್ನೆ ನಿರ್ದೇಶಿಸುವುವು. ಇದರಂತೆಯೆ ನಾವೆಲ್ಲ ಸತ್ಯವನ್ನು ಬೇರೆಬೇರೆ ದೃಷ್ಟಿಯಿಂದ ನೋಡುತ್ತಿರುವೆವು. ಆ ದೃಷ್ಟಿ ನಮ್ಮ ಜನನ ಸಂಸ್ಕಾರ ವಾತಾವರಣದಮೇಲೆ ನಿಂತಿದೆ. ನಾವು ಸತ್ಯವನ್ನೆ ನೋಡುತ್ತಿರುವೆವು. ಅವಕಾಶವಾದಷ್ಟು ನಾವು ಅದನ್ನು ಗ್ರಹಿಸುತ್ತಿರುವೆವು. ನಮ್ಮ ಭಾವನೆಗಳಿಂದ ಅದನ್ನು ಲೇಪಿಸುತ್ತಿರುವೆವು. ನಮ್ಮ ಬುದ್ಧಿಗೆ ತೋರಿದಂತೆ ಮನಸ್ಸಿಗೆ ಹಿಡಿಯುವಂತೆ ಗ್ರಹಿಸುತ್ತಿರುವೆವು. ನಮಗೆ ಸಂಬಂಧಿಸಿದಷ್ಟು ಮಾತ್ರ, ನಮ್ಮ ಯೋಗ್ಯತೆಗೆ ತಕ್ಕಷ್ಟು ಮಾತ್ರ, ನಾವು ಗ್ರಹಿಸಬಲ್ಲೆವು. ಒಬ್ಬ ಮನುಷ್ಯನಿಗೆ ಮತ್ತೊಬ್ಬನಿಗೆ ಒಂದು ಕಾಲಕ್ಕೆ ಮತ್ತೊಂದು ಕಾಲಕ್ಕೆ ಇರುವ ವ್ಯತ್ಯಾಸಕ್ಕೆ, ಕೆಲವುವೇಳೆ ಪರಸ್ಪರ ವಿರೋಧವಾಗಿರುವುದಕ್ಕೂ ಇದೇ ಕಾರಣ. ಆದರೂ ನಾವೆಲ್ಲ ವಿಶ್ವವ್ಯಾಪಿಯಾದ ಒಂದೆ ಸತ್ಯಕ್ಕೆ ಸೇರಿರುವೆವು.

ನನ್ನ ಭಾವನೆಯೆ, ವಿಭಿನ್ನಧರ್ಮಗಳೆಲ್ಲ ಭಗವಂತನ ಶಕ್ತಿ, ಮಾನವಕಲ್ಯಾಣಕ್ಕಾಗಿ ಕೆಲಸಮಾಡುತ್ತಿವೆ ಎಂಬುದು. ಇದರಲ್ಲಿ ಯಾವುದೊಂದೂ ನಾಶವಾಗಲಾರದು, ನಾಶಮಾಡಲಾರೆವು. ನೀವು ಹೇಗೆ ಯಾವ ಒಂದು ಬಾಹ್ಯಶಕ್ತಿ ತರಂಗವನ್ನೂ ನಾಶಮಾಡಲಾರಿರೊ ಹಾಗೆಯೆ ಯಾವ ಒಂದು ಆಧ್ಯಾತ್ಮಿಕ ತರಂಗವನ್ನೂ ನಾಶಮಾಡಲಾರಿರಿ. ಪ್ರತಿಯೊಂದು ಧರ್ಮವೂ ಬದುಕಿರುವುದನ್ನು ನೀವು ನೋಡುತ್ತಿರುವಿರಿ. ಕಾಲಕಾಲಕ್ಕೆ ಅದು ಉನ್ನತಿ ಅವನತಿಗೆ ಒಳಗಾಗಬಹುದು. ಕೆಲವುವೇಳೆ ಅದರ ಬಹುಪಾಲು ಬಾಹ್ಯಅಲಂಕಾರವೆಲ್ಲ ಮಾಯವಾಗಿರಬಹುದು; ಕೆಲವುವೇಳೆ ಬಗೆಬಗೆಯ ಅಲಂಕಾರಗಳಿಂದ ಕಂಗೊಳಿಸುತ್ತಿರಬಹುದು. ಆದರೆ ಚೇತನ ಯಾವಾಗಲೂ ಹಿಂದೆ ಇರುವುದು. ಅದೆಂದಿಗೂ ಮಾಯವಾಗುವುದಿಲ್ಲ. ಪ್ರತಿಯೊಂದು ಧರ್ಮವೂ ಯಾವ ಭಾವನೆಗೆ ಪ್ರತಿನಿಧಿಯಾಗಿದೆಯೊ ಅದೆಂದಿಗೂ ನಾಶವಾಗುವುದಿಲ್ಲ. ಆದಕಾರಣ ಪ್ರತಿಯೊಂದು ಧರ್ಮವೂ ಬುದ್ಧಿಪೂರ್ವಕ ಮುಂದುವರಿಯುತ್ತಿದೆ.

ಪ್ರತಿಯೊಂದು ದೇಶದಲ್ಲಿ ತಾತ್ತ್ವಿಕರು ಮತ್ತು ಇತರರು ಕಲ್ಪಿಸಿಕೊಂಡ ವಿಶ್ವಧರ್ಮ ಆಗಲೆ ಇದೆ. ಅದು ಇಲ್ಲಿದೆ. ಮಾನವನ ವಿಶ್ವಸಹೋದರ ಭಾವನೆ ಹೇಗೆ ಆಗಲೆ ಇದೆಯೊ ಅದರಂತೆಯೆ ವಿಶ್ವಧರ್ಮವೂ ಇರುವುದು. ಯಾರು ನಿಮಲ್ಲಿ ಹೆಚ್ಚು ದೇಶವನ್ನು ನೋಡಿರುವಿರೊ ಅವರಿಗೆ ಸಹೋದರ ಸಹೋದರಿಯರು ಸಿಕ್ಕದ ದೇಶ ಎಲ್ಲಿದೆ? ಪ್ರಪಂಚದಲ್ಲೆಲ್ಲಾ ಅವರು ನನಗೆ ದೊರೆತಿರುವರು. ಸಹೋದರ ಭಾವನೆ ಆಗಲೆ

ಇದೆ. ಆದರೆ ಅನೇಕರು ಇದನ್ನು ನೋಡಲಾರರು. ಹೊಸ ಸಹೋದರತ್ವಕ್ಕೆ ಕೂಗಾಡಿ ಕೆಡಿಸುವರು ಅಷ್ಟೆ. ವಿಶ್ವಧರ್ಮ ಕೂಡ ಆಗಲೆ ಇದೆ. ಹಲವು ಧರ್ಮಗಳನ್ನು ಪ್ರಚಾರಮಾಡುವುದು ತಮ್ಮ ಕರ್ತವ್ಯವೆಂದು ಭಾವಿಸುವ ಪಾದ್ರಿ ಮುಂತಾದವರು ಕೆಲವು ಕಾಲ ಮೌನವಾಗಿದ್ದರೆ ಆಗ ವಿಶ್ವಧರ್ಮವಿರುವುದು ನಮಗೆ ಗೋಚರವಾಗುವುದು. ಅವರು ಯಾವಾಗಲೂ ಇದನ್ನು ಕೆಡಿಸುತ್ತಿರುವರು. ಏಕೆಂದರೆ ಇದರಿಂದ ಅವರಿಗೇ ಪ್ರಯೋಜನ. ಎಲ್ಲಾ ದೇಶದಲ್ಲಿಯೂ ಪಾದ್ರಿಗಳು ಪೂರ್ವಾಚಾರ ಬದ್ಧರು. ಇದು ಏತಕ್ಕೆ? ಜನರಿಗೆ ಮಾರ್ಗದರ್ಶರಾದ ಪಾದ್ರಿಗಳು ಬಹಳ ಕಡಿಮೆ. ಜನರೇ ಅವರಿಗೆ ಮಾರ್ಗದರ್ಶಕರು. ಅವರು ಹೇಳಿದಂತೆ ಕೇಳುವರು. ಅವರ ಗುಲಾಮರು. ನೀವು ಶುಷ್ಕವೆಂದರೆ ಅವರು ಶುಷ್ಕವೆನ್ನುವರು, ನೀವು ಕಪ್ಪು ಎಂದರೆ ಅವರೂ ಕಪ್ಪು ಎನ್ನುವರು. ಜನ ಮುಂದುವರಿದರೆ ಪಾದ್ರಿಗಳೂ ಮುಂದುವರಿಯಬೇಕು. ಅವರು ಹಿಂದೆ ನಿಲ್ಲಲಾರರು. ಪಾದ್ರಿಗಳನ್ನು ದೂರುವುದಕ್ಕೆ ಮುಂಚೆ (ಅವರನ್ನು ದೂರುವುದೊಂದು ಚಾಳಿಯಾಗಿದೆ) ನಮ್ಮನ್ನು ನಾವು ದೂರಿಕೊಳ್ಳಬೇಕು. ನೀವು ಯಾವುದಕ್ಕೆ ಯೋಗ್ಯರೊ ನಿಮಗೆ ಅದು ದೊರಕುವುದು. ಪುರೋಗಾಮಿಯಾದ ಹೊಸ ಭಾವನೆ ನಿಮಗೆ ಇತ್ತು ನಿಮ್ಮ ಮಾರ್ಗದರ್ಶಿಯಾಗಲಿಚ್ಛಿಸುವ ಪಾದ್ರಿಯ ಗತಿ ಏನಾಗುವುದು? ಅವನ ಮಕ್ಕಳು ಉಪವಾಸದಿಂದ ನರಳಿ ಇವನು ಚಿಂದಿಹೊದೆಯಬೇಕಾಗುವುದು. ನೀವು ಯಾವ ಪ್ರಪಂಚನಿಯಮಗಳಿಗೆ ಬದ್ಧರಾಗಿರುವಿರೊ ಅದರಂತೆಯೆ ಅವನು ಕೂಡ. ನೀವು ಮುಂದೆ ಹೋದರೆ ಆಗಲಿ ನಡೆಯೋಣ ಎನ್ನುವನು. ಬಹಿರಂಗ ಅಭಿಪ್ರಾಯಕ್ಕೆ ಬಾಗದ ಕೆಲವು ಮಹಾವ್ಯಕ್ತಿಗಳು ಇರುವರು. ಅವರು ಸತ್ಯವನ್ನು ನೋಡುವರು. ಅದನ್ನು ಮಾತ್ರ ಅವರು ಪರಿಗಣಿಸುವರು. ಸತ್ಯ ಅವರನ್ನು ಮೆಟ್ಟಿಕೊಂಡಿದೆ, ಅವರನ್ನು ವಶಮಾಡಿಕೊಂಡಂತೆ ಇದೆ. ಅವರು ಮುಂದೆ ಹೋಗದೆ ವಿಧಿ ಇಲ್ಲ. ಅವರೆಂದೂ ಹಿಂದೆ ನೋಡುವುದಿಲ್ಲ, ಅವರ ಪಾಲಿಗೆ ಜನರಿಲ್ಲ, ದೇವರೊಬ್ಬನೆ ಅವರಿಗೆ ಇರುವುದು. ಅವರ ಮುಂದಿರುವ ಬೆಳಕೇ ಅವನು, ಅವರು ಈ ಬೆಳಕನ್ನು ಅನುಸರಿಸುತ್ತಿರುವರು.

ಈ ದೇಶದಲ್ಲಿ ಮಾರಮನ್ ಭದ್ರಮನುಷ್ಯನೊಬ್ಬನನ್ನು ಕಂಡೆ. ಆತ ನನ್ನನ್ನು ತನ್ನ ಧರ್ಮಕ್ಕೆ ಸೇರಿಸಿಕೊಳ್ಳಲು ಯತ್ನಿಸಿದನು. ಅದಕ್ಕೆ ನಾನು, "ನಿನ್ನ ಅಭಿಪ್ರಾಯಗಳಿಗೆ ನನಗೆ ತುಂಬಾ ಗೌರವವಿದೆ. ಆದರೆ

ಕೆಲವು ವಿಷಯಗಳಲ್ಲಿ ನಾನು ಒಪ್ಪಿಕೊಳ್ಳುವುದಿಲ್ಲ. ನಾನು ಸನ್ಯಾಸಿ ಪಂಥಕ್ಕೆ ಸೇರಿದವನು. ನೀನು ಹಲವು ಹೆಂಡಿರನ್ನು ಮದುವೆಮಾಡಿ ಕೊಳ್ಳುವುದರಲ್ಲಿ ನಂಬುವೆ. ನೀನು ಇಂಡಿಯಾದೇಶಕ್ಕೆ ಬೋಧಿಸಲು ಏತಕ್ಕೆ ಹೋಗಬಾರದು ?" ಎಂದೆ. ಅವನಿಗೆ ಆಶ್ಚರ್ಯವಾಗಿ "ನೀವು ಮದುವೆ ಯನ್ನು ಒಪ್ಪಿಕೊಳ್ಳುವುದಿಲ್ಲ, ನಾವು ಹಲವು ಹೆಂಡಿರನ್ನು ಒಪ್ಪಿಕೊಳ್ಳು ವೆವು, ಆದರೂ ನೀವು ನನ್ನನ್ನು ನಿಮ್ಮ ದೇಶಕ್ಕೆ ಹೋಗಿ ಎಂದು ಹೇಳು ತ್ತೀರಲ್ಲ ?" ಎಂದು ಕೇಳಿದ. ಅದಕ್ಕೆ ನಾನು "ಹೌದು ನನ್ನ ದೇಶದವರು ಧರ್ಮದ ಹೆಸರಿನಲ್ಲಿ ಏನುಹೇಳಿದರೂ ಕೇಳುವರು. ನೀನು ಇಂಡಿಯಾದೇಶಕ್ಕೆ ಹೋಗುವುದು ಒಳ್ಳೆಯದೆಂದು ನನಗೆ ತೋರುವುದು. ಮೊದಲನೆ ಕಾರಣ: ನಾವು ಹಲವು ಪಂಗಡಗಳಲ್ಲಿ ನಂಬುವೆವು. ಎರಡನೆಯದಾಗಿ ಭರತಖಂಡ ದಲ್ಲಿ ಕೆಲವು ಜನರಿರುವರು. ಅವರಿಗೆ ಈಗ ಇರುವ ಯಾವ ಪಂಗಡದಿಂದಲೂ ತೃಪ್ತಿದೊರೆತಿಲ್ಲ. ಅದರಿಂದ ಅವರು ಧರ್ಮದ ಹವ್ಯಾಸಕ್ಕೆ ಹೋಗಿಲ್ಲ. ಬಹುಶಃ ಅವರಿಂದ ನಿನ್ನ ಪಂಗಡಕ್ಕೆ ಕೆಲವರು ದೊರಕಬಹುದು" ಎಂದೆ. ಪಂಗಡಗಳು ಹೆಚ್ಚಿದಷ್ಟು ಜನರಿಗೆ ಧರ್ಮ ಸಿಕ್ಕುವ ಸೌಲಭ್ಯ ಹೆಚ್ಚು ವುದು. ಹಲವು ಬಗೆ ಪದಾರ್ಥಗಳಿರುವ ಹೋಟಲಿನಲ್ಲಿ ಎಲ್ಲರ ಆಸೆಯೂ ತೃಪ್ತಿಯಾಗುವ ಸಂಭವವಿದೆ. ಪ್ರತಿ ದೇಶದಲ್ಲಿಯೂ ಪಂಗಡ ವೃದ್ಧಿ ಯಾಗಲೆಂಬುದೇ ನನ್ನ ಹಾರೈಕೆ. ಇದರಿಂದ ಹೆಚ್ಚು ಜನ ಧಾರ್ಮಿಕ ರಾಗಲು ಅವಕಾಶವಾಗುವುದು. ಧರ್ಮ ಜನರಿಗೆ ಇಷ್ಟವಿಲ್ಲವೆಂದು ತಿಳಿಯಬೇಡಿ. ನಾನು ಇದನ್ನು ನಂಬುವುದಿಲ್ಲ. ಅವರಿಗೆ ಬೇಕಾದುದನ್ನು ಬೋಧಕರು ಅವರಿಗೆ ಕೊಡಲಾರರು. ನಾಸ್ತಿಕ ಜಡವಾದಿ ಮುಂತಾದ ಹೆಸರಿನಿಂದ ಕರೆಸಿಕೊಂಡವನೆ ಬೇರೊಬ್ಬನಿಂದ ತನಗೆ ಬೇಕಾದ ಸತ್ಯ ಪಡೆದು ಸಮಾಜದಲ್ಲಿ ಅತಿಶ್ರೇಷ್ಠ ಆಧ್ಯಾತ್ಮಿಕ ಜೀವಿಯಾಗಬಹುದು. ನಾವು ನಮ್ಮ ರೀತಿಯಲ್ಲಿ ಮಾತ್ರ ಭೋಜನಮಾಡಬಲ್ಲೆವು. ನಾವು ಹಿಂದೂಗಳು ಕೈಬೆರಳುಗಳಿಂದ ಊಟಮಾಡುವೆವು. ನಮ್ಮ ಬೆರಳು ನಿಮ್ಮದಕ್ಕಿಂತ ನಾಜೋಕು. ನೀವು ನಮ್ಮಂತೆ ಬೆರಳನ್ನು ಉಪಯೋಗಿಸಲಾರಿರಿ. ಆಹಾರವನ್ನು ಒದಗಿಸುವುದು ಮಾತ್ರವಲ್ಲ, ಅದನ್ನು ನಮ್ಮದೇ ರೀತಿಯಲ್ಲಿ ಸ್ವೀಕರಿಸಬೇಕು. ನಿಮಗೆ ಆಧ್ಯಾತ್ಮಿಕಭಾವಗಳು ಬೇಕಾಗಿರುವುದು ಮಾತ್ರವಲ್ಲ, ಅವು ನಿಮ್ಮ ರೀತಿಯಲ್ಲಿಯೇ ದೊರಕಬೇಕು. ಅವರು ನಿಮ್ಮ ಭಾಷೆ, ನಿಮ್ಮ ಹೃದಯದ ಭಾಷೆಯಲ್ಲಿ ಮಾತನಾಡಬೇಕು. ಆಗ ಮಾತ್ರ ನಿಮಗೆ ತೃಪ್ತಿ. ನನ್ನ ಭಾಷೆಯನ್ನು ಮಾತನಾಡುವವನು ಬಂದರೆ,

ಸತ್ಯವನ್ನು ನನ್ನ ಭಾಷೆಯಲ್ಲಿ ಕೊಟ್ಟರೆ, ಅದನ್ನು ತಕ್ಷಣ ಅರ್ಥಮಾಡಿಕೊಳ್ಳುವೆನು. ಎಂದೆಂದಿಗೂ ಅದನ್ನು ಸ್ವೀಕರಿಸುವೆನು. ಇದೊಂದು ದೊಡ್ಡ ವಿಷಯ.

ಇದರಿಂದ ಮಾನವರಲ್ಲಿ ಹಲವು ವರ್ಗಗಳಿರುವುವು. ಹಲವು ಹಂತಗಳಲ್ಲಿ ಅವರು ಇರುವರು ಎಂದಂತೆ ಆಯಿತು. ಧರ್ಮ ಎಂತಹ ಸಾಹಸ ಕೆಲಸಕ್ಕೆ ಕೈಹಾಕುವುದು! ಒಬ್ಬ ಒಂದೆರಡು ಸಿದ್ಧಾಂತವನ್ನು ತರುವನು. ತನ್ನ ಧರ್ಮ ಇಡೀ ಮಾನವಕೋಟಿಗೇ ತೃಪ್ತಿ ನೀಡಬೇಕೆಂದು ಆಶಿಸುವನು. ಪ್ರಪಂಚಕ್ಕೆ ಇಳಿದುಬಂದ ಒಬ್ಬ ದೇವದೂತನಂತೆ ಕೈಯಲ್ಲಿ ಒಂದು ಪಂಜರ ಹಿಡಿದುಕೊಂಡುಹೋಗುವನು. "ದೇವ ಆನೆ ಮನುಷ್ಯರೆಲ್ಲ ಇದರೊಳಗೆ ಹೋಗಬೇಕು. ಆನೆಯನ್ನು ಚೂರುಮಾಡಿದರೂ ಚಿಂತೆ ಇಲ್ಲ. ಅದು ಒಳಗೆ ಹೋಗಬೇಕು" ಎನ್ನುವನು. ಕೆಲವು ಪಂಗಡದಲ್ಲಿ ಕೆಲವು ಒಳ್ಳೆಯ ಭಾವನೆಗಳಿರಬಹುದು. ಅವರು "ಎಲ್ಲರೂ ಒಳಗೆ ಬರಬೇಕು" ಎನ್ನುವರು. ಆದರೆ ಅವರಿಗೆಲ್ಲ ಸ್ಥಳವಿಲ್ಲ ಎಂದರೆ "ಚಿಂತೆ ಇಲ್ಲ, ಅವರನ್ನು ಚೂರುಮಾಡಿದರೂ ಚಿಂತೆ ಇಲ್ಲ. ಹೇಗೋ ಅವರನ್ನು ಒಳಗೆ ಸೇರಿಸಿ. ಅವರು ಒಳಗೆ ಹೋಗದೆ ಹೋದರೆ ನರಕದ ಪಾಲಾಗುವರು!" ಎನ್ನುವರು. ಯಾವ ಪಂಗಡವಾದರೂ ಆಗಲಿ ಸ್ವಲ್ಪ ಅನುಮಾನಿಸಿ, "ಜನ ನನ್ನನ್ನು ಏತಕ್ಕೆ ಕೇಳುವುದಿಲ್ಲ?" ಎಂದು ಪ್ರಶ್ನಿಸಿ ಹೇಳುವುದಿಲ್ಲ. ಅದರ ಬದಲು ಜನರಿಗೆ ಶಾಪಕೊಟ್ಟು "ಜನ ದುಷ್ಟರು" ಎನ್ನುವರು. "ಜನ ಏತಕ್ಕೆ ತನ್ನ ಮಾತನ್ನು ಕೇಳುವುದಿಲ್ಲ? ಅವರು ಸತ್ಯವನ್ನು ನೋಡುವಂತೆ ಏತಕ್ಕೆ ನಾನು ಮಾಡಲಾರೆ? ಅವರ ಭಾಷೆಯಲ್ಲಿ ಏತಕ್ಕೆ ನನಗೆ ಮಾತನಾಡಲು ಆಗುವುದಿಲ್ಲ? ನಾನೇಕೆ ಅವರಿಗೆ ಜ್ಞಾನ ನೀಡಲಾರೆ?" ಎಂದು ಪ್ರಶ್ನಿಸಿಕೊಳ್ಳುವುದೇ ಇಲ್ಲ. ಅದಕ್ಕೆ ಕಾರಣ ಅವರಿಗೆ ಚೆನ್ನಾಗಿ ಗೊತ್ತಿರಬೇಕು. ಜನ ಅವರ ಮಾತನ್ನು ಕೇಳದೆ ಇದ್ದರೆ, ಇತರರನ್ನು ದೂರಬೇಕಾಗಿ ಬಂದರೆ, ತಮ್ಮನ್ನೇ ದೂರಿಕೊಳ್ಳುವುದು ಉತ್ತಮ. ಆದರೆ ಯಾವಾಗಲೂ ಇದು ಜನರ ತಪ್ಪು! ಎಂದಿಗೂ ಅವರು ಪ್ರತಿಯೊಬ್ಬರನ್ನು ಬಾಚಿ ತಬ್ಬುವಷ್ಟು ತಮ್ಮ ಪಂಗಡವನ್ನು ವಿಶಾಲಮಾಡುವುದಿಲ್ಲ.

ಏತಕ್ಕೆ ಇಷ್ಟು ಧರ್ಮಸಂಕುಚಿತ ಇದೆ ಎಂಬುದಕ್ಕೆ ಕಾರಣ ಈಗ ತಕ್ಷಣ ಗೊತ್ತಾಗುವುದು. ಅಂಶ ತಾನೇ ಪೂರ್ಣ ಎಂದು ಹೇಳಿಕೊಳ್ಳುವುದು, ಕ್ಷುದ್ರವಾದುದು ಅಲ್ಪವಾದುದು ತಾನು ಅನಂತ ಎಂದು ಭಾವಿಸುವುದು. ಕೆಲವು ನೂರು ವರ್ಷಗಳ ಹಿಂದೆ ಕ್ಷುದ್ರಮನುಷ್ಯನ ಮೆದುಳಿನಿಂದ

ಜನಿಸಿದ ಈ ಪಂಗಡಗಳು ಭಗವಂತನ ಅನಂತ ಸತ್ಯ ತಮಗಲ್ಲದೆ ಇತರರಿಗೆ ತಿಳಿಯದು ಎಂಬ ಅವರ ಅಹಂಕಾರದ ಮಾತನ್ನು ಯೋಚಿಸಿ! ಅವರ ಧೂರ್ತತನವನ್ನು ನೋಡಿ. ಇದು ಏನನ್ನಾದರೂ ತೋರಿದರೆ ಅದೇ ಈ ಮಾನವ ಎಂತಹ ನಿರರ್ಥಕ ಜೀವಿ ಎಂಬುದನ್ನು ವ್ಯಕ್ತಗೊಳಿಸುವುದು. ಇಂತಹ ಔದ್ಧತ್ಯತನ ಯಾವಾಗಲೂ ಫಲಕಾರಿಯಾಗಿಲ್ಲ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ದೇವರ ದಯೆಯಿಂದ ಇದು ಯಾವಾಗಲೂ ನಿರರ್ಥಕವಾಗುವುದರಲ್ಲಿ ಸಂದೇಹವಿಲ್ಲ. ಈ ಮಾರ್ಗದಲ್ಲಿ ಮಹಮ್ಮ ದೀಯರು ನಿಷ್ಣಾತರು. ಪ್ರತಿಯೊಂದು ಹೆಜ್ಜೆಯನ್ನು ಕತ್ತಿಯ ಬಲದ ಮೇಲೆ ಇಟ್ಟರು. ಒಂದು ಕೈಯ್ಯಲ್ಲಿ ಖುರಾನ್, ಒಂದು ಕೈಯ್ಯಲ್ಲಿ ಕತ್ತಿ ಹಿಡಿದೇ ನಡೆದರು. "ಖುರಾನನ್ನು ಸ್ವೀಕರಿಸಬೇಕು ಇಲ್ಲವೆ ಮೃತ್ಯುವಶ ರಾಗಬೇಕು. ಬೇರೆ ಮಾರ್ಗವೇ ಇಲ್ಲ!" ಚರಿತ್ರೆಯ ಮೂಲಕ ನಿಮಗೆ ಗೊತ್ತಾಗುವುದು ಎಷ್ಟು ಬೇಗ ಅವರು ವಿಸ್ತಾರವಾದರೆಂಬುದು. ಆರು ನೂರು ವರುಷಗಳವರೆಗೆ ಯಾವುದೂ ಅವರನ್ನು ತಡೆಗಟ್ಟುವಂತೆ ಇರಲಿಲ್ಲ. ಅನಂತರ ತಾವು ನಿಲ್ಲಬೇಕಾದ ಸಮಯ ಬಂದಿತು. ಇತರ ಧರ್ಮಗಳೂ ಕೂಡ ಇದೇ ಮಾರ್ಗವನ್ನು ಅನುಸರಿಸಿದರೆ ಹೀಗೆಯೇ ಆಗಬೇಕು. ನಾವೆಲ್ಲ ಮಕ್ಕಳು! ನಮಗೆ ಮನುಷ್ಯ ಸ್ವಭಾವದ ಅರಿವೇ ಇಲ್ಲ. ನಾವು ಜೀವನ ಪ್ರಾರಂಭಿಸಿದಾಗ ತಮ್ಮ ಭವಿಷ್ಯ ಮಹತ್ತಾದುದು ಎಂದು ಭಾವಿಸು ವೆವು. ಯಾವುದೂ ಅದನ್ನು ಅನುಮಾನಿಸುವಂತೆ ಮಾಡಲಾರದು. ಆದರೆ ನಮಗೆ ವಯಸ್ಸಾದಾಗ ಬೇರೆ ಆಲೋಚಿಸುವೆವು. ಇದರಂತೆಯೆ ಧರ್ಮ ಕೂಡ ಪ್ರಾರಂಭದಲ್ಲಿ ಪಸರಿದಾಗ, ಕೆಲವು ದಿನಗಳಲ್ಲಿ ಇಡೀ ಮಾನವಕೋಟಿಯ ಮನಸ್ಸನ್ನೇ ಬದಲಾಯಿಸಬಲ್ಲೆವು ಎಂದು ಭಾವಿಸು ವುದು. ಬಲಾತ್ಕಾರದಿಂದ ತಮ್ಮ ಜಾತಿಗೆ ಸೇರಿಸಲು ಸೆದೆಬಡಿಯುತ್ತಾ ಹೋಗುವರು. ಕೊನೆಗೆ ನಿರಾಶರಾಗುವರು, ಬೇರೆ ರೀತಿ ಆಲೋಚಿಸುವರು. ಈ ಪಂಗಡಗಳು ತಾವು ಏನನ್ನು ಸಾಧಿಸಬೇಕೆಂದು ಹೊರಟವೊ ಅದು ದೇವರ ದಯೆಯಿಂದ ಸಿದ್ಧಿಸಲಿಲ್ಲ. ಇಂತಹ ಒಂದು ಮತಭ್ರಾಂತ ಪಂಗಡ ಪ್ರಪಂಚದಲ್ಲೆಲ್ಲಾ ಹರಡಿದ್ದರೆ ಪ್ರಪಂಚದ ಗತಿ ಏನಾಗುತ್ತಿತ್ತು ಎಂಬುದನ್ನು ನೀವೇ ಆಲೋಚಿಸಿ ನೋಡಿ. ದೇವರಿಗೆ ಧನ್ಯವಾದ. ಅವರು ಜಯಶಾಲಿಗಳಾಗಲಿಲ್ಲ. ಆದರೆ ಪ್ರತಿಯೊಂದೂ ಮಹಾಸತ್ಯಕ್ಕೆ ಪ್ರತಿನಿಧಿಯಾಗಿದೆ. ಪ್ರತಿಯೊಂದು ಧರ್ಮದಲ್ಲಿಯೂ ಒಂದು ವೈಶಿಷ್ಟ್ಯವಿ ವಿದೆ. ಅದೇ ಅದರ ಜೀವಾಳ. ಹಳೆಯ ಕಥೆಯೊಂದು ನನ್ನ ನೆನಪಿಗೆ

ಬರುವುದು. ಕೆಲವು ರಾಕ್ಷಸರಿದ್ದರು. ಅವರು ಜನರಿಗೆ ಬಹಳ ಹಿಂಸೆ ಕೊಡುತ್ತಿದ್ದರು. ಆದರೆ ಅವರನ್ನು ಯಾರೂ ಕೊಲ್ಲುವುದಕ್ಕೆ ಆಗುತ್ತಿರಲಿಲ್ಲ. ರಾಕ್ಷಸನ ಪ್ರಾಣ ಒಂದು ಪಕ್ಷಿಯಲ್ಲಿತ್ತು. ಎಲ್ಲಿಯವರೆಗೆ ಆ ಹಕ್ಕಿ ಸುರಕ್ಷಿತ ವಾಗಿರುವುದೊ ಅಲ್ಲಿಯವರೆಗೆ ಯಾರೂ ರಾಕ್ಷಸನನ್ನು ಕೊಲ್ಲಲು ಸಾಧ್ಯ ವಿಲ್ಲ ಎಂಬುದನ್ನು ಕೆಲವರು ಕಂಡುಹಿಡಿದರು. ಇದರಂತೆಯೆ ನಮ್ಮಲ್ಲಿ ಪ್ರತಿಯೊಬ್ಬರಿಗೂ ಪ್ರಾಣಪಕ್ಷಿ ಇದೆ. ಅದೇ ಆದರ್ಶ, ನಮ್ಮ ಜೀವನದ ಚರಮ ಉದ್ದೇಶ. ನೀವು ಮತ್ತೇನನ್ನು ಕಳೆದುಕೊಂಡರೂ ಎಲ್ಲಿಯ ವರೆಗೆ ಆದರ್ಶ ಮಾಯವಾಗಿಲ್ಲವೊ ಆ ಉದ್ದೇಶ ಮಾಯವಾಗಿಲ್ಲವೊ ಅಲ್ಲಿ ಯವರೆಗೆ ಯಾವುದೂ ನಿಮ್ಮನ್ನು ನಾಶಮಾಡಲಾರದು. ಐಶ್ವರ್ಯ ಬರ ಬಹುದು ಹೋಗಬಹುದು, ದುರದೃಷ್ಟದ ಪರ್ವತರಾಶಿಯೆ ನಿಮ್ಮನ್ನು ಮುತ್ತಿ ಕೊಳ್ಳಬಹುದು. ಆದರೆ ನಿಮ್ಮ ಆದರ್ಶವನ್ನು ಸರಿಯಾಗಿ ರಕ್ಷಿಸಿಕೊಂಡಿದ್ದರೆ ನಿಮ್ಮನ್ನು ಯಾವುದೂ ನಾಶಮಾಡಲಾರದು. ನೀವು ವೃದ್ಧರಾಗಿರಬಹುದು, ನೂರು ವಯಸ್ಸಾಗಿರಬಹುದು. ಆದರೆ ಜೀವನದ ಉದ್ದೇಶ ನಿರ್ಮಲವಾಗಿ ದೃಢವಾಗಿದ್ದರೆ ನಿಮ್ಮನ್ನು ಯಾವುದು ಕೊಲ್ಲಬಹುದು? ಆದರೆ ಆ ಆದರ್ಶಕ್ಕೆ ಧಕ್ಕೆಬಂದರೆ, ಆ ಉದ್ದೇಶವೇ ಮಾಯವಾದರೆ ಯಾವುದೂ ನಿಮ್ಮನ್ನು ರಕ್ಷಿಸಲಾರದು. ಪ್ರಪಂಚದ ಐಶ್ವರ್ಯ ಅಧಿಕಾರ ಯಾವುದೂ ನಿಮ್ಮನ್ನು ಉದ್ಧಾರಮಾಡುವುದಿಲ್ಲ. ಜನಾಂಗವೆಂದರೇನು? ವ್ಯಕ್ತಿಗಳ ಮೊತ್ತವಷ್ಟೆ. ಪ್ರತಿಯೊಂದು ಜನಾಂಗಕ್ಕೂ ತಾನು ಮಾಡಬೇಕಾದ ಕರ್ತವ್ಯವಿದೆ ಪ್ರಪಂಚದ ಜನಾಂಗದ ಸಾಮರಸ್ಯದಲ್ಲಿ. ಎಲ್ಲಿಯವರೆಗೆ ಆ ಜನಾಂಗ ಆ ಧ್ಯೇಯವನ್ನು ತ್ಯಜಿಸುವುದಿಲ್ಲವೊ ಅಲ್ಲಿಯವರೆಗೆ ಆ ಜನಾಂಗವನ್ನು ಯಾವುದೂ ನಿರ್ಮೂಲಮಾಡಲಾರದು. ಆದರೆ ಆ ಜನಾಂಗ, ಜೀವನದಲ್ಲಿ ತನ್ನ ಉದ್ದೇಶವನ್ನು ತೊರೆದು ಅನ್ಯರನ್ನು ಅನುಸರಿಸಿಕೊಂಡುಹೋದರೆ ಆಯುಸ್ಸು ಕ್ಷೀಣವಾಗಿ ನಿರ್ನಾಮವಾಗುವುದು.

ಇದರಂತೆಯೆ ಧರ್ಮ ಕೂಡ. ಹಳೆಯ ಧರ್ಮಗಳೆಲ್ಲ ಇನ್ನೂ ಬದುಕಿರುವುದನ್ನು ನೋಡಿದರೆ ಅವು ತಮ್ಮ ಆದರ್ಶವನ್ನು ಅಚ್ಚಳಿಯದೆ ಉಳಿಸಿಕೊಂಡು ಬಂದಿವೆ ಎಂದು ಗೊತ್ತಾಗುವುದು. ಅವು ಎಷ್ಟೇ ತಪ್ಪು ಮಾಡಲಿ, ಅವಕ್ಕೆ ಎಷ್ಟೇ ಕಷ್ಟಬರಲಿ, ಎಷ್ಟೇ ಮೂಢನಂಬಿಕೆ ಆಚಾರಗಳು ಅವುಗಳನ್ನು ಮುತ್ತಿರಲಿ, ಎಲ್ಲ ಧರ್ಮದ ಹೃದಯದಲ್ಲಿ ಜೀವ ಮಿಡಿಯು ತ್ತಿದೆ. ಯಾವ ಘನ ಉದ್ದೇಶಕ್ಕಾಗಿ ಅವು ಬಂದವೋ ಅವನ್ನು ಇನ್ನೂ ಯಾವುದೊಂದು ಇವನ್ನು ಕಳೆದುಕೊಂಡಿಲ್ಲ. ಈ ಉದ್ದೇಶವನ್ನು ತಿಳಿದ

ಕೊಳ್ಳುವುದು ಲಾಭಕಾರಿ. ಉದಾಹರಣೆಗೆ: ಮಹಮ್ಮದೀಯರ ಧರ್ಮ ತೆಗೆದುಕೊಳ್ಳಿ. ಕ್ರೈಸ್ತರು ಮಹಮ್ಮದೀಯರನ್ನು ದ್ವೇಷಿಸುವಷ್ಟು ಮತ್ತಾರನ್ನೂ ದ್ವೇಷಿಸುವುದಿಲ್ಲ. ಅವರಷ್ಟು ಹೀನ ಯಾರೂ ಇಲ್ಲವೆಂದು ತಿಳಿಯುವರು. ಒಬ್ಬ ಮಹಮ್ಮದೀಯನಾದ ತಕ್ಷಣ ಇಡೀ ಇಸ್ಲಾಂ ಪ್ರಪಂಚ ಅವನನ್ನು ತಮ್ಮ ಸಹೋದರನಂತೆ ಯಾವ ವ್ಯತ್ಯಾಸವನ್ನೂ ಮಾಡದೆ ಸ್ವೀಕರಿಸುವುದು. ಮತ್ತಾವ ಧರ್ಮವೂ ಹೀಗೆ ಮಾಡಲಾರದು. ಅಮೆರಿಕಾ ಇಂಡಿಯನ್ನನು ಒಬ್ಬ ಮಹಮ್ಮದೀಯನಾದರೆ ತುರ್ಕಿ ಸುಲ್ತಾನ ಅವನೊಂದಿಗೆ ಊಟಮಾಡುವುದಕ್ಕೆ ಯಾವ ಆಕ್ಷೇಪಣೆಯೂ ಇರುವುದಿಲ್ಲ. ಅವನಿಗೆ ಸಾಕಷ್ಟು ಬುದ್ಧಿ ಇದ್ದರೆ ಯಾವ ಅಧಿಕಾರವನ್ನು ಪಡೆಯುವುದಕ್ಕೆ ಆತಂಕವಿಲ್ಲ. ಈ ದೇಶದಲ್ಲಿ ಬಿಳೀ ಮತ್ತು ಕಪ್ಪುಮನುಷ್ಯರಿಬ್ಬರೂ ಪ್ರಾರ್ಥನೆಗೆ ಒಳಗೆ ಬಾಗುವುದನ್ನು ನಾನು ಇನ್ನೂ ಯಾವ ಚರ್ಚಿನಲ್ಲಿಯೂ ನೋಡಿಲ್ಲ. ಇದನ್ನು ಆಲೋಚಿಸಿ ನೋಡಿ. ಇಸ್ಲಾಂ ತನ್ನ ಮತಾನುಯಾಯಿಗಳನ್ನೆಲ್ಲಾ ಸಮದೃಷ್ಟಿಯಿಂದ ನೋಡುವುದು. ಇದೇ ಮಹಮ್ಮದೀಯರ ವಿಶೇಷ ಒಳ್ಳೆಯ ಗುಣ. ಹಲವುಕಡೆ ಖುರಾನಿನಲ್ಲಿ ಕೇವಲ ಇಂದ್ರಿಯ ಸುಖದ ಆದರ್ಶವನ್ನು ನೋಡುವಿರಿ. ಇದನ್ನು ಲೆಕ್ಕಿಸಬೇಕಾಗಿಲ್ಲ. ಮಹಮ್ಮದೀಯ ಧರ್ಮ ಸಾರುವುದಕ್ಕೆ ಬಂದುದು ತಮ್ಮ ಮತಾನುಯಾಯಿಗಳಲ್ಲಿ ಅನುಷ್ಠಾನ ಸಾಧ್ಯವಾದ ಒಂದು ಸಹೋದರ ಭಾವನೆಯನ್ನು. ಇದೇ ಮಹಮ್ಮದೀಯ ಧರ್ಮದ ತಿರುಳು. ಸ್ವರ್ಗ, ಜೀವನ ಇವಕ್ಕೆ ಸಂಬಂಧಿಸಿದ ಭಾಗಗಳಾವುವೂ ಮಹಮ್ಮದೀಯ ಧರ್ಮವಲ್ಲ.

ಹಿಂದೂಗಳಲ್ಲಿ ನೀವು ಜನಾಂಗದ ಒಂದು ಆದರ್ಶವನ್ನು ನೋಡುವಿರಿ; ಅದೇ ಆಧ್ಯಾತ್ಮಿಕತೆ. ಮತ್ತಾವ ಧರ್ಮದಲ್ಲಿಯೂ ಪ್ರಪಂಚದ ಮತ್ತಾವ ಶಾಸ್ತ್ರದಲ್ಲಿಯೂ ಭಗವಂತನನ್ನು ವಿವರಿಸುವುದಕ್ಕೆ ಅಷ್ಟೊಂದು ಶಕ್ತಿ ವ್ಯಯಮಾಡಿಲ್ಲ. ಪ್ರಾಪಂಚಿಕತೆಯ ಸ್ಪರ್ಶದಿಂದ ಮಲಿನವಾಗದಂತೆ ಆತ್ಮವನ್ನು ವಿವರಿಸಲು ಯತ್ನಿಸಿದರು. ಆಧ್ಯಾತ್ಮ ಪವಿತ್ರವಾಗಿರಬೇಕು. ಆಧ್ಯಾತ್ಮವನ್ನು ಆಧ್ಯಾತ್ಮದಂತೆ ತಿಳಿದುಕೊಳ್ಳಬೇಕು. ಅದನ್ನು ದುರ್ಬಲ ಮಾನವನ ಅಧೋಗತಿಗೆ ತರಬಾರದು. ಐಕ್ಯತೆ, ಭಗವತ್ಸಾಕ್ಷಾತ್ಕಾರ, ಅವನ ಸರ್ವವ್ಯಾಪಿತ್ವ ಅದನ್ನೇ ಎಲ್ಲಾ ಕಡೆಯಲ್ಲಿಯೂ ವಿವರಿಸಿರುವರು. ದೇವರು, ಸ್ವರ್ಗ ಮುಂತಾದ ಕಡೆ ಇರುವನು ಎಂದು ಹೇಳುವುದಕ್ಕೆ ಅರ್ಥವಿಲ್ಲ ಎನ್ನುವರು. ಇವೆಲ್ಲ ಕೇವಲ ಮಾನವೀಯ ದೃಷ್ಟಿ. ಪ್ರತಿಯೊಂದರ

ಹಿಂದೆಯೂ ಒಂದೊಂದು ವ್ಯಕ್ತಿ ಇದೆ ಎಂದು ಭಾವಿಸುವುದು. ಹಿಂದೆ ಇದ್ದ ಸ್ವರ್ಗಗಳೆಲ್ಲ ಈಗ, ಇಲ್ಲಿದೆ. ಅನಂತಕಾಲದಲ್ಲಿ ಒಂದುಕ್ಷಣ ಮತ್ತೊಂದು ಕ್ಷಣದಂತೆಯೇ ಇರುವುದು. ನೀವು ದೇವರನ್ನು ನಂಬಿದರೆ ಈಗಲೂ ಅವನನ್ನು ನೋಡಬಹುದು. ನಾವು ಅವನನ್ನಾದರೂ ಸಾಕ್ಷಾತ್ಕಾರ ಮಾಡಿಕೊಂಡಾಗ ಮಾತ್ರ ಧರ್ಮ ಪ್ರಾರಂಭವಾಗುವುದೆಂದು ಭಾವಿಸುತ್ತೇವೆ. ಕೇವಲ ಸಿದ್ಧಾಂತವನ್ನು ನಂಬುವುದಲ್ಲ, ಯುಕ್ತಿಯ ಸಮ್ಮತಿಯನ್ನು ಈಯುವುದಲ್ಲ ಅಥವಾ ಬಹಿರಂಗವಾಗಿ ಸಾರುವುದಲ್ಲ. ದೇವರಿದ್ದರೆ ಅವನನ್ನು ನೀವು ನೋಡಿರುವಿರಾ? ಇಲ್ಲ ಎಂದರೆ ಅವನನ್ನು ನಂಬುವುದಕ್ಕೆ ನಿಮಗೆ ಏನು ಅಧಿಕಾರವಿದೆ? ದೇವರು ಇರುವನೆ ಇಲ್ಲವೆ ಎಂಬ ಸಂಶಯ ನಿಮಗೆ ಇದ್ದರೆ ಅವನನ್ನು ನೋಡಲು ಏತಕ್ಕೆ ಹೋರಾಡಬಾರದು? ತ್ಯಾಗ ಮತ್ತು ಆಧ್ಯಾತ್ಮಿಕತೆ ಎರಡು ಭರತಖಂಡದ ಮಹಾ ಭಾವಗಳು. ಭರತಖಂಡ ಇನ್ನೂ ಈ ಆದರ್ಶಗಳನ್ನು ತ್ಯಜಿಸದೆ ಇರುವುದರಿಂದ ಅದು ಮಾಡಿದ ತಪ್ಪುಗಳು ಅಷ್ಟು ಗಣನೆಗೆ ಬರುವುದಿಲ್ಲ.

ಕ್ರೈಸ್ತರಲ್ಲಿ ಕೂಡ ಅವರು ಸಾರಿದ ಮುಖ್ಯ ಭಾವನೆ "ಜಾಗ್ರತರಾಗಿ ಪ್ರಾರ್ಥಿಸಿ, ಸ್ವರ್ಗ ಸಮೀಪದಲ್ಲೆ ಇರುವುದು" ಎನ್ನುವುದು. ಅಂದರೆ ನಿಮ್ಮ ಮನಸ್ಸನ್ನು ಶುದ್ಧಮಾಡಿ ಸಿದ್ಧರಾಗಿರಿ ಎನ್ನುವರು. ಆತ್ಮ ಎಂದಿಗೂ ನಾಶವಾಗುವುದಿಲ್ಲ. ಕ್ರೈಸ್ತರು ಅಜ್ಞಾನದ ಕಾಲದಲ್ಲಿ ಕೂಡ ಭಗವಂತನ ಬರವನ್ನು ಸ್ವಾಗತಿಸುವುದಕ್ಕಾಗಿ, ಇತರರಿಗೆ ಸಹಾಯಮಾಡುವುದು, ಔಷಧಾಲಯ ಮುಂತಾದುವನ್ನು ಕಟ್ಟುವುದು, ಇದರಲ್ಲಿ ನಿರತರಾಗಿದ್ದುದ್ದನ್ನು ನೋಡಬಹುದು. ಎಲ್ಲಿಯವರೆಗೆ ಕ್ರೈಸ್ತರು ಈ ಆದರ್ಶವನ್ನು ತ್ಯಜಿಸುವುದಿಲ್ಲವೊ ಅಲ್ಲಿಯವರೆಗೆ ಆ ಧರ್ಮ ಉಳಿಯುವುದು.

ಒಂದು ಭಾವನೆ ನನಗೆ ಹೊಳೆಯುವುದು. ಇದು ಕೇವಲ ಒಂದು ಕನಸಾಗಿರಬಹುದು. ಈ ಪ್ರಪಂಚದಲ್ಲಿ ಅದು ಎಂದಾದರೂ ಅನುಷ್ಠಾನ ಸಾಧ್ಯವೆ ಎಂಬುದು ನನಗೆ ಗೊತ್ತಿಲ್ಲ. ಕೆಲವು ವೇಳೆ ನಿರ್ಜೀವ ವಾಸ್ತವಾಂಶಗಳನ್ನೇ ಮೆಲಕುಹಾಕುವುದಕ್ಕಿಂತ ಕನಸುಣಿಯಾಗುವುದು ಮೇಲು. ಕನಸ್ಸಿನಲ್ಲಿ ಆದರೂ ಮಹಾಸತ್ಯಗಳು ಹಿತಕಾರಿ, ದುರ್ವಿಷಯಗಳಿಗಿಂತ ಮೇಲು. ಆದಕಾರಣ ಕನಸ್ಸನ್ನು ಕಲ್ಪಿಸಿಕೊಳ್ಳೋಣ.

ಮನಸ್ಸಿನಲ್ಲಿ ಹಲವು ಸ್ಥಿತಿಗಳಿವೆ ಎಂಬುದು ನಿಮಗೆ ಗೊತ್ತಿದೆ. ನೀವು ವಿಷಯವೆಷ್ಟೊ ಅಷ್ಟರವರಿರಬಹುದು, ವ್ಯಾವಹಾರಿಕ ಬುದ್ಧಿಯುವ

ರಾಗಿರಬಹುದು, ನೀವು ಬಾಹ್ಯ ಆಚಾರ ಮಂತ್ರತಂತ್ರಗಳನ್ನು ಲೆಕ್ಕಿಸದಿರಬಹುದು. ನಿಮಗೆ ಸ್ಥೂಲವಾದ ಸ್ಪಷ್ಟವಾದ ಯುಕ್ತಿಯುಕ್ತವಾದ ವಿಷಯಗಳು ಮಾತ್ರ ಬೇಕಾಗಬಹುದು. ಅನಂತರ ಬಾಹ್ಯಸಾಧನೆಗಳನ್ನೆಲ್ಲಾ ಲೆಕ್ಕಿಸದ ಮಹಮ್ಮದೀಯರಿರುವರು. ಅವರು ಪೂಜೆ ಮಾಡುವ ಸ್ಥಳದಲ್ಲಿ, ಚಿತ್ರವಾಗಲಿ ವಿಗ್ರಹವಾಗಲಿ ಯಾವುದನ್ನೂ ಸೈರಿಸುವುದಿಲ್ಲ. ಒಳ್ಳೆಯದು! ಮತ್ತೊಬ್ಬ ಕಲಾವಿದ ಸ್ವಭಾವದವನಿರುವನು. ಅವನಿಗೆ ಬೇಕಾದಷ್ಟು ಕಲೆ ಬೇಕು. ದೇವರ ದರ್ಶನಕ್ಕೆ ಸುಂದರವಾದ ಆಕಾರ, ಬಣ್ಣ, ಹೂವು, ದೀಪ, ಮಂಗಳಾರತಿ ಮತ್ತು ಬಾಹ್ಯಾಚಾರದ ಸಕಲ ಸಂಪತ್ತೂ ಅವನಿಗೆ ಬೇಕು. ನೀವು ದೇವರನ್ನು ಬುದ್ಧಿಯ ಮೂಲಕ ಕಲ್ಪಿಸಿಕೊಳ್ಳುವಂತೆ ಅವನು ಇಂತಹ ಆಕಾರದ ಮೂಲಕ ದೇವರನ್ನು ಕಲ್ಪಿಸಿಕೊಳ್ಳುವನು. ನಂತರ ಭಕ್ತನಿರುವನು. ಭಗವಂತನಿಗಾಗಿ ಅಂಗಲಾಚಿ ಬೇಡಿಕೊಳ್ಳುತ್ತಿರುವನು. ದೇವರನ್ನು ಪೂಜಿಸುವುದು, ಅವನನ್ನು ಹೊಗಳುವುದಲ್ಲದೆ ಅವನಿಗೆ ಬೇರೆ ಕೆಲಸವೇ ಇಲ್ಲ. ಕೊನೆಗೆ ಇವರಿಂದ ದೂರದಲ್ಲಿ ನಿಂತು ಇವರನ್ನು ಅಣಕಿಸುತ್ತಿರುವ ತಾತ್ತ್ವಿಕನಿರುವನು. "ಎಂತಹ ಕೆಲಸಕ್ಕೆ ಬಾರದ ಜನ! ದೇವರ ವಿಷಯದಲ್ಲಿ ಎಂತಹ ಭಾವನೆ ಇಟ್ಟುಕೊಂಡಿರುವರು" ಎನ್ನುವನು.

ಒಬ್ಬರು ಮತ್ತೊಬ್ಬರನ್ನು ನೋಡಿ ನಗಬಹುದು. ಆದರೆ ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಒಂದು ಸ್ಥಾನವಿದೆ. ಹಲವು ಜನ ಹಲವು ರೀತಿ: ಇದು ಆವಶ್ಯಕ. ಒಂದು ಆದರ್ಶ ಧರ್ಮ ಎಂದಾದರು ಇರುವುದಾದರೆ ಅದು, ಇಂತಹ ವಿಭಿನ್ನ ಭಾವದವರನ್ನೆಲ್ಲಾ ಪೋಷಿಸುವಷ್ಟು ವಿಶಾಲವಾಗಿರಬೇಕು, ಉದಾರವಾಗಿರಬೇಕು. ತಾತ್ತ್ವಿಕನಿಗೆ ತತ್ತ್ವಶಕ್ತಿ ನೀಡಬೇಕು, ಭಕ್ತನಿಗೆ ಭಕ್ತನ ಹೃದಯವನ್ನು ನೀಡಬೇಕು, ಆಚಾರಪರನಿಗೆ ಅದ್ಭುತ ಚಿಹ್ನೆ ಏನೇನನ್ನು ಒದಗಿಸಬಹುದೋ ಅದನ್ನೆಲ್ಲ ನೀಡಬೇಕು, ಕವಿಗೆ ಬೇಕಾದಷ್ಟು ಕಲ್ಪನೆ ಜೊತೆಗೆ ಇನ್ನೂ ಹಲವು ವಸ್ತುಗಳನ್ನು ನೀಡಬೇಕು. ಇಂತಹ ವಿಶಾಲ ಧರ್ಮವನ್ನು ನಿರ್ಮಿಸಬೇಕಾದರೆ ಧರ್ಮಗಳ ಮೂಲಕ್ಕೆ ಹೋಗಿ ಎಲ್ಲರನ್ನೂ ಸ್ವಾಗತಿಸಬೇಕು.

ತಿರಸ್ಕಾರವಲ್ಲ ಸ್ವೀಕಾರ ಎಂಬುದು ನಮ್ಮ ಪಲ್ಲವಿ. ಕೇವಲ ಸಹಿಷ್ಣುತೆ ಮಾತ್ರವಲ್ಲ. ಅನೇಕವೇಳೆ ಸಹಿಷ್ಣುತೆ ಎಂಬುದು ಈಶ್ವರ ನಿಂದೆ. ನಾನು ಅದರಲ್ಲಿ ನಂಬುವುದಿಲ್ಲ. ನಾನು ಸ್ವೀಕಾರದಲ್ಲಿ ನಂಬುವೆನು. ನಾನೇಕೆ ಸಹಿಸಬೇಕು? ಸಹಿಸುವುದು ಎಂದರೆ, ನೀನು ತಪ್ಪು

ಎಂಬುದು ನನಗೆ ಗೊತ್ತು, ಆದರೆ ಬದುಕುವುದಕ್ಕೆ ನಿನಗೆ ಅವಕಾಶಕೊಡುತ್ತಿರುವೆನು ಎಂದು. ನಾನು ಮತ್ತು ನೀವು, ಇತರರು ಜೀವಿಸಲಿ ಎಂದು ಅವಕಾಶ ಕೊಡುವುದು ಈಶ್ವರನಿಂದೆಯಲ್ಲವೆ? ಹಿಂದೆ ಇದ್ದ ಧರ್ಮಗಳನ್ನೆಲ್ಲಾ ನಾನು ಸ್ವೀಕರಿಸುತ್ತೇನೆ. ಅವರೊಂದಿಗೆ ನಾನೂ ಪೂಜಿಸುತ್ತೇನೆ. ಅವರು ಯಾವರೀತಿ ದೇವರನ್ನು ಆರಾಧಿಸಿದರೆ ನಾನೂ ಅದೇರೀತಿಯಲ್ಲಿ ಅವನನ್ನು ಆರಾಧಿಸುತ್ತೇನೆ. ನಾನು ಮಹಮ್ಮದೀಯರ ಮಸೀದಿಗೆ ಹೋಗುತ್ತೇನೆ, ನಾನು ಕ್ರಿಸ್ತರ ಚರ್ಚಿನಲ್ಲಿ ಶಿಲುಬೆ ಎದುರಿಗೆ ಬಾಗುತ್ತೇನೆ, ಬೌದ್ಧರ ವಿಹಾರದಲ್ಲಿ ಬುದ್ಧ ಮತ್ತು ಅವನ ಧರ್ಮದಲ್ಲಿ ಶರಣಾಗತನಾಗುತ್ತೇನೆ, ಹಿಂದೂಗಳೊಂದಿಗೆ ಕಾಡಿಗೆ ಹೋಗಿ ಎಲ್ಲರಲ್ಲೂ ಬೆಳಗುತ್ತಿರುವ ಆ ಪರಂಜ್ಯೋತಿಯ ದರ್ಶನಕ್ಕಾಗಿ ಧ್ಯಾನಮಾಡುವರೊಂದಿಗೆ ನಾನೂ ಧ್ಯಾನಮಗ್ನನಾಗುವೆನು.

ನಾನು ಇವನ್ನೆಲ್ಲಾ ಮಾಡುವುದು ಮಾತ್ರವಲ್ಲ. ಭವಿಷ್ಯದಲ್ಲಿ ಮುಂಬೆ ಏನೇನು ಬರುವುದೋ ಅದನ್ನೆಲ್ಲ ಸ್ವೀಕರಿಸುವುದಕ್ಕೆ ನನ್ನ ಹೃದಯವನ್ನು ತೆರೆದಿರುವೆನು. ಭಗವಂತನ ಗ್ರಂಥ ಅಂತ್ಯವಾಯಿತೇನು? ಅಥವಾ ನಿರಂತರ ದರ್ಶನ ಇನ್ನೂ ಆಗುತ್ತಿದೆಯೊ? ಪ್ರಪಂಚದ ಆಧ್ಯಾತ್ಮಿಕ ದರ್ಶನಗಳು ಒಂದು ಅಮೋಘ ಶಾಸ್ತ್ರ. ಬೈಬಲ್ಲು, ವೇದ, ಖುರಾನ್ ಮತ್ತು ಇತರ ಧರ್ಮಶಾಸ್ತ್ರಗಳೆಲ್ಲ ಕೆಲವು ಪುಟಗಳು ಮಾತ್ರ. ಇನ್ನೂ ವ್ಯಕ್ತವಾಗುವ ಅನಂತ ಪುಟಗಳಿವೆ. ಅವನ್ನೆಲ್ಲ ಸ್ವೀಕರಿಸಲು ನಾನು ಸಿದ್ಧನಾಗಿರುವೆನು. ನಾನು ವರ್ತಮಾನದಲ್ಲಿರುವೆನು. ಅನಂತ ಭವಿಷ್ಯಕ್ಕೆ ಬಾಗಿಲನ್ನು ತೆರೆದಿಡುವೆನು. ಹಿಂದೆ ಆಗಿರುವುದನೆಲ್ಲ ಸ್ವೀಕರಿಸುವೆನು, ಈಗಿರುವುದನ್ನು ಅನುಭವಿಸುವೆನು. ಭವಿಷ್ಯದಲ್ಲಿ ಬರುವುದನೆಲ್ಲಾ ಸ್ವೀಕರಿಸುವುದಕ್ಕೆ ಹೃದಯದ ಪ್ರತಿಯೊಂದು ದ್ವಾರಗಳನ್ನು ತೆರೆದಿಡುವೆನು. ಹಿಂದಿನ ಮಹಾತ್ಮರಿಗೆಲ್ಲಾ ವಂದನೆ, ಈಗಿರುವ ಮಹಾತ್ಮರಿಗೆಲ್ಲಾ ವಂದನೆ, ಮುಂದೆ ಬರಲಿರುವ ಮಹಾತ್ಮರಿಗೆಲ್ಲರಿಗೂ ವಂದನೆ.



# ವಿಶ್ವಧರ್ಮದ ಆದರ್ಶ

ನಮ್ಮ ಇಂದ್ರಿಯಗಳು ಎತ್ತನೋಡಿದರೂ, ಮನಸ್ಸು ಯಾವುದನ್ನು ಕಲ್ಪಿಸಿಕೊಂಡರೂ, ಅಲ್ಲೆಲ್ಲ ಕ್ರಿಯೆ ಪ್ರತಿಕ್ರಿಯೆಯ ಆವಿರ್ಭಾವನೆಯನ್ನು ನೋಡುವೆವು. ನಾವು ನೋಡುವ ಆಲೋಚಿಸುವ ಮಿಶ್ರದೃಶ್ಯವನ್ನು ಸೃಷ್ಟಿಸುತ್ತಿದೆ. ಬಾಹ್ಯಜಗತ್ತಿನಲ್ಲಿ ಇದು ವ್ಯಕ್ತವಾಗುತ್ತಿದೆ. ಅಂತರ್ಯದಲ್ಲೂ ಪ್ರೀತಿ ದ್ವೇಷ ಒಳ್ಳೆಯದ್ದು ಕೆಟ್ಟದ್ದು ಎಂಬ ರೂಪಿನಲ್ಲಿ ಕಾಣುತ್ತಿದೆ. ಕೆಲವನ್ನು ನಾವು ಆಕರ್ಷಿಸುವೆವು, ಕೆಲವನ್ನು ವಿಕರ್ಷಿಸುವೆವು, ಕೆಲವದರಿಂದ ನಾವು ಆಕರ್ಷಿಸುವೆವು, ಮತ್ತೆ ಕೆಲವದರಿಂದ ಪ್ರತಿಕರ್ಷಿಸುವೆವು. ಇದು ಎಲ್ಲರಿಗೂ ವೇದ್ಯವಾಗಿದೆ. ಕ್ರಿಯೆ ಮೇಲಿನ ಮಟ್ಟದಲ್ಲಿ ಇದ್ದಷ್ಟೂ ಈ ವಿರೋಧಶಕ್ತಿಗಳ ಪ್ರಭಾವ ಹೆಚ್ಚು ಪ್ರಬಲವಾಗಿರುವುದು, ಹೆಚ್ಚು ಪರಿಣಾಮಕಾರಿಯಾಗಿರುವುದು. ಮಾನವ ಜೀವನದ ಅವನ ಭಾವನೆಯ ಅತಿಶ್ರೇಷ್ಠ ಕ್ಷೇತ್ರವೇ ಧರ್ಮ. ಇಲ್ಲಿ ಎರಡು ಶಕ್ತಿಗಳ ಕ್ರಿಯೆಯೂ ಹೆಚ್ಚು ಸ್ಪಷ್ಟವಾಗಿ ಕಾಣುವುದು. ಮಾನವನಿಗೆ ವೇದ್ಯವಾದ ಅತ್ಯಾಧಿಕ್ಯ ಪ್ರೇಮ ಧರ್ಮದಿಂದ ಬಂದಿರುವುದು. ಘೋರತಮ ಆಸುರೀ ದ್ವೇಷ ಕೂಡ ಧರ್ಮದಿಂದ ಬಂದಿದೆ. ಪ್ರಪಂಚ ಕೇಳಿದ ಅತಿ ಘೋರ ನಿಂದೆ ಕೂಡ ಧಾರ್ಮಿಕಕ್ಷೇತ್ರದಿಂದ ಬಂದಿದೆ. ಧರ್ಮ ಭವ್ಯವಾದಷ್ಟೂ, ಸಂಸ್ಥಾವ್ಯವಸ್ಥೆ ಸೂಕ್ಷ್ಮವಾದಷ್ಟೂ ಅದರ ಕಾರ್ಯಕಲಾಪಗಳು ಕೂಡ ಸ್ತುತ್ಯಾರ್ಹವಾಗುವುವು. ಮತ್ತಾವ ಮಾನವನ ಉದ್ದೇಶವೂ ಧರ್ಮದಷ್ಟು ರಕ್ತದ ಕೋಡಿಯನ್ನು ಪ್ರಪಂಚದಲ್ಲಿ ಹರಿಸಿಲ್ಲ. ಆದರೆ ಧರ್ಮಪ್ರೇರಣೆಯಿಂದ ಆದಷ್ಟು ಔಷಧಾಲಯದ ಅನಾಥಾಲಯ ಮತ್ತಾವುದರಿಂದಲೂ ಆಗಿಲ್ಲ. ಧರ್ಮ ಮಾನವಕೋಟಿಗೆ ಮಾತ್ರವಲ್ಲ ಇಡೀ ಪ್ರಾಣಿಗಳ ಸಂರಕ್ಷಣೆಗೆ ಹಿತಕಾರಿಯಾಗಿದೆ. ಧರ್ಮದಷ್ಟು ಮತ್ತಾವ ಪ್ರಭಾವವೂ ಫಲಕಾರಿಯಾಗಿಲ್ಲ. ಧರ್ಮಕ್ರೂರಿಗಳನ್ನಾಗಿ ಮಾಡುವಷ್ಟು ಮತ್ತಾವುದೂ ಮಾಡುವುದಿಲ್ಲ. ಧರ್ಮ ಮನುಷ್ಯನ ಹೃದಯವನ್ನು ಮೃದುಮಾಡುವಷ್ಟು ಮತ್ತೊಂದು ಮಾಡಿಲ್ಲ. ಇದು ಹಿಂದೆ ಹೀಗೆ ಇತ್ತು. ಬಹುಶಃ ಭವಿಷ್ಯದಲ್ಲೂ ಹೀಗೆಯೇ ಇರಬಹುದು. ಆದರೂ ಹಲವು ಧರ್ಮಗಳ ಪರಸ್ಪರ ತಿಕ್ಕಾಟದಿಂದ, ಗೊಂದಲದಿಂದ, ದ್ವೇಷಾಸೂಯೆಯಿಂದ, ಕಾಲಕಾಲಕ್ಕೆ ಇತರ ಧ್ವನಿಗಳನ್ನು ಮೆಟ್ಟಿ ನಿಂತು ಇಡೀ ಪ್ರಪಂಚ ತಮ್ಮನ್ನು ಆಲಿಸುವಂತಹ ಶಾಂತಿಸೌಹಾರ್ದವಾಣಿಯನ್ನು ಪ್ರಬಲಯುತವಾಗಿ ಮೊಳಗಿವೆ. ಅಂತಹ ವಾಣಿ ಮತ್ತೊಮ್ಮೆ ಬರುವುದೆ?

ಮಹಾ ಧಾರ್ಮಿಕ ಆಂದೋಳನಾಕ್ಷೇತ್ರದಲ್ಲಿ ಅಖಂಡ ಸೌಹಾರ್ದ ಎಂದಾದರೂ ತಾಂಡವವಾಡುವುದಕ್ಕೆ ಸಾಧ್ಯವೆ? ಈ ಶತಾಬ್ಧಿಯ ಅಂತ್ಯದಲ್ಲಿ ಪ್ರಪಂಚ ಸೌಹಾರ್ದಭಾವನೆಯನ್ನು ಕುರಿತು ಚಿಂತಿಸುತ್ತಿದೆ. ಸಮಾಜದಲ್ಲಿ ಎಷ್ಟೋ ಯೋಜನೆಗಳನ್ನು ಸಲಹೆ ಕೊಡುತ್ತಿರುವರು. ಅದನ್ನು ಅನುಷ್ಠಾನ ರಂಗಕ್ಕೆ ತರಲು ಪ್ರಯತ್ನಗಳೂ ಸಾಗುತ್ತಿವೆ. ಆದರೆ ಇದು ಎಷ್ಟು ಕಷ್ಟವೆಂಬುದು ನಮಗೆ ಗೊತ್ತಿದೆ. ಜೀವನದ ಹೋರಾಟದ ತೀವ್ರತೆಯನ್ನೇ ತಗ್ಗಿಸುವುದಕ್ಕೆ, ಮಾನವನ ಪ್ರಚಂಡ ಉದ್ವೇಗವನ್ನು ತಪ್ಪಿಸುವುದಕ್ಕೆ, ಸಾಧ್ಯವೇ ಇಲ್ಲದಂತೆ ತೋರುವುದು. ಮಾನವನ ಸ್ಥೂಲವಾಗಿರುವ ಬಾಹ್ಯಜಗತ್ತಿನಲ್ಲಿ ಶಾಂತಿ ನೆಲೆಸುವಂತೆ ಮಾಡಲು ಇಷ್ಟು ಕಷ್ಟವಾದರೆ, ಮಾನವನ ಆಂತರಿಕ ಸ್ವಭಾವದಲ್ಲಿ ಶಾಂತಿಯನ್ನು ತರುವುದು ಒಂದು ಸಾವಿರಪಾಲು ಹೆಚ್ಚು ಕಷ್ಟ. ಸಧ್ಯಕ್ಕೆ ಪದಜಾಲದಿಂದ ಹೊರಗೆ ಬನ್ನಿ ಎನ್ನುತ್ತೇನೆ. ನಾವು ಬಾಲ್ಯಾರಭ್ಯ ಪ್ರೀತಿ, ಶಾಂತಿ, ದಯೆ, ಸಮತ್ವ, ವಿಶ್ವಭ್ರಾತೃತ್ವ ಮುಂತಾದುವನ್ನು ಕೇಳುತ್ತಿರುವೆವು. ಆದರೆ ನಮಗೆ ಅವು ಅರ್ಥವಿಲ್ಲದ ಪದಗಳಾಗಿವೆ. ಅರಗಿಳಿಗಳಂತೆ ನಾವು ಅದನ್ನು ಉಚ್ಚರಿಸುವೆವು. ಇದು ನಮ್ಮ ಸ್ವಭಾವವಾಗಿ ಹೋಗಿರುವುದು. ನಮಗೆ ಬೇರೆ ವಿಧಿಯೇ ಇಲ್ಲ. ಮಹಾಪುರುಷರು ಈ ಭಾವನೆಯನ್ನು ಮೊದಲು ಹೃದಯದಲ್ಲಿ ಅನುಭವಿಸಿ ಅನಂತರ ಪದಗಳನ್ನು ಸೃಷ್ಟಿಸಿದರು. ಆಗ ಹಲವರಿಗೆ ಇದರ ಅರ್ಥ ವೇದ್ಯವಾಗುತ್ತಿತ್ತು. ಅನಂತರ ಅಜ್ಞಾನಿಗಳು ಚಲ್ಲಾಟಕ್ಕೆ ಈ ಪದಗಳನ್ನು ಸ್ವೀಕರಿಸಿರುವರು. ಧರ್ಮ ಕೇವಲ ಬಾಯಿಮಾತಾಯಿತು, ಅನುಷ್ಠಾನವಾಗಲಿಲ್ಲ. ಈಗ "ನಮ್ಮ ತಂದೆ ಧರ್ಮ" "ನಮ್ಮ ದೇಶದ ಧರ್ಮ" ಆಗಿದೆ. ಯಾವುದಾದರೊಂದು ಧರ್ಮವನ್ನು ಒಪ್ಪಿಕೊಳ್ಳುವುದು ದೇಶಭಕ್ತಿಯ ಒಂದು ಭಾಗವಾಗಿ ಹೋಗಿದೆ. ದೇಶಭಕ್ತಿ ಯಾವಾಗಲೂ ಪಕ್ಷಪಾತಿ. ಧರ್ಮದಲ್ಲಿ ಸಾಮರಸ್ಯವನ್ನು ತರುವುದು ಯಾವಾಗಲೂ ಕಷ್ಟ. ಆದರೂ ಧರ್ಮದ ಸಾಮರಸ್ಯ ಸಮಸ್ಯೆಯನ್ನು ಚರ್ಚಿಸೋಣ.

ಪ್ರತಿಯೊಂದು ದೊಡ್ಡ ಜನಪರಿಚಿತವಾದ ಧರ್ಮದಲ್ಲಿಯೂ ಮೂರು ಭಾಗಗಳಿವೆ. ಮೊದಲು ತತ್ತ್ವ—ಇದರಲ್ಲಿ ಅದರ ಮೂಲತತ್ತ್ವ ಗುರಿ, ಅದನ್ನು ಸಾಧಿಸುವ ಬಗೆ ವಿವರಿಸುವರು. ಎರಡನೆಯದು ಪುರಾಣ—ಇಲ್ಲಿ ತತ್ತ್ವವನ್ನು ಸ್ಥೂಲಮಾಡಿ ಉದಾಹರಿಸಿರುವರು. ಮಾನವರು ದೇವಮಾನವರಿಗೆ ಸಂಬಂಧಪಟ್ಟ ಕಥೆ ಇತ್ಯಾದಿಗಳಿವೆ. ಕಾಲ್ಪನಿಕ ಮಾನವ

ಮತ್ತು ದೇವರ ಮೂಲಕ ತತ್ತ್ವವನ್ನು ಉದಹರಿಸಿರುವರು. ಮೂರ ನೆಯದು ಮತಾಚಾರ. ಇದು ಮತ್ತೂ ಸ್ಥೂಲವಾಗಿದೆ. ಇದರಲ್ಲಿ ಹಲವು ಕ್ರಿಯೆಗಳು, ಅಂಗನ್ಯಾಸ ಮುದ್ರೆ ಇಂದ್ರಿಯಗಳಿಗೆ ಪ್ರಿಯವಾದ ಹೂವು ಗಂಧ ಮುಂತಾದವು ಇವೆ. ಎಲ್ಲಾ ಪ್ರಖ್ಯಾತ ಧರ್ಮದಲ್ಲಿಯೂ ಇವು ಮೂರೂ ಇವೆ. ಕೆಲವರು ಒಂದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುವರು, ಮತ್ತೆ ಕೆಲವರು ಮತ್ತೊಂದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುವರು. ಮೊದಲು, ಪ್ರಥಮ ಭಾಗವಾದ ತತ್ತ್ವವನ್ನು ತೆಗೆದುಕೊಳ್ಳೋಣ. ಒಂದು ಸರ್ವಸಾಮಾನ್ಯ ತತ್ತ್ವವಿದೆಯೆ? ಇನ್ನೂ ಇಲ್ಲ. ಪ್ರತಿಯೊಂದು ಧರ್ಮವೂ ತಮ್ಮ ಸಿದ್ಧಾಂತವೇ ಸತ್ಯ ಎಂದು ಸಾಧಿಸುವುವು. ಇದು ಮಾತ್ರವಲ್ಲ, ಯಾರು ಇದನ್ನು ನಂಬುವುದಿಲ್ಲವೊ ಅವರು ಘೋರ ನರಕಕ್ಕೆ ಹೋಗ ಬೇಕು. ತಮ್ಮಂತೆ ಇತರರೂ ನಂಬುವಂತೆ ಬಲಾತ್ಕಾರಮಾಡುವುದಕ್ಕೆ ಬಲಪ್ರಯೋಗಕ್ಕೂ ಕೆಲವರು ಹಿಂದೆಗೆಯುವುದಿಲ್ಲ. ಇದು ದುಷ್ಟತನದಿಂದ ಅಲ್ಲ. ಮತಭ್ರಾಂತಿ ಎಂಬ ಮಾನವನ ಮೆದುಳಿನ ಒಂದು ಜಾಡ್ಯ ಪರಿಣಾಮದಿಂದ. ಈ ಮತಭ್ರಾಂತರು ತುಂಬಾ ಪ್ರಮಾಣಿಕರು. ಮನುಷ್ಯರಲ್ಲೆಲ್ಲ ಅತಿ ನಿಷ್ಕಪಟಿಗಳು. ಆದರೆ ಅವರು ಇತರ ಹುಚ್ಚರಂತೆ ಜವಾಬ್ದಾರಿಯಿಲ್ಲದವರು. ಮತಭ್ರಾಂತಿ ಎಂಬುದೊಂದು ಬಹಳ ಅಪಾಯ ಕರವಾದ ರೋಗ. ಮಾನವನ ಹೀನಸ್ವಭಾವವೆಲ್ಲ ಇದರಿಂದ ಜಾಗ್ರತ ವಾಗುವುದು. ಕೋಪಿಷ್ಟರು ಉದ್ವೇಗಪರರಾಗಿ ಮನುಷ್ಯರು ವ್ಯಾಘ್ರ ಗಳಂತೆ ಆಗುವರು.

ಪುರಾಣಗಳಲ್ಲೇನಾದರೂ ಒಂದು ಸಾಮ್ಯವಿದೆಯೆ? ಎಲ್ಲರೂ ಒಪ್ಪುವ ಯಾವುದಾದರೂ ಪುರಾಣವಿದೆಯೆ? ಎಂದಿಗೂ ಇಲ್ಲ. ಪ್ರತಿ ಯೊಂದು ಧರ್ಮಕ್ಕೂ ತಮ್ಮದೇ ಪುರಾಣವಿದೆ. ಪ್ರತಿಯೊಬ್ಬರೂ "ತಮ್ಮ ಪುರಾಣ ಕೇವಲ ಕಥೆಯಲ್ಲ'' ಎನ್ನುವರು. ಇದನ್ನು ಒಂದು ಉದಾಹರಣೆ ಮೂಲಕ ಅರ್ಥಮಾಡಿಕೊಳ್ಳೋಣ. ನಾನು ಇಲ್ಲಿ ಸುಮ್ಮನೆ ಉದಹರಿಸುತ್ತೇನೆ. ಯಾವ ಧರ್ಮವನ್ನೂ ಟೀಕಿಸುತ್ತಿಲ್ಲ. ಕ್ರೈಸ್ತರು ದೇವರು ಪಾರಿವಾಳದ ಹಕ್ಕಿಯಂತೆ ಭೂಲೋಕಕ್ಕೆ ಬಂದನು ಎಂದು ನಂಬುವರು. ಅವರಿಗೆ ಇದು ಶುದ್ಧ ಚರಿತ್ರೆ, ಪುರಾಣವಲ್ಲ. ಹಿಂದೂಗಳು ದೇವರು ಗೋವಿನಾಕಾರದಲ್ಲಿರುವನು ಎಂದು ನಂಬುವರು. ಕ್ರೈಸ್ತರು, ಅದರಲ್ಲಿ ನಂಬುವುದು ಪೌರಾಣಿಕ ಅದು ಚಾರಿತ್ರಿಕವಲ್ಲ, ಅದೆಲ್ಲ ಮೂಢ ನಂಬಿಕೆ ಎನ್ನುವರು. ಒಂದು ಪೆಟ್ಟಿಗೆಯಂತೆ ಮಾಡಿ ಎರಡು ಕಡೆಯೂ

ಒಬ್ಬೊಬ್ಬ ದೇವದೂತರನ್ನು ನಿಲ್ಲಿಸಿದರೆ ಆ ವಿಗ್ರಹವನ್ನು ಎಂತಹ ಪವಿತ್ರ ಸ್ಥಳದಲ್ಲಾದರೂ ಇಡಬಹುದೆಂದು ಯಹೋದ್ಯರು ಭಾವಿಸುವರು. ಇದು ಜಹೋವನಿಗೆ ಪ್ರೀತಿ. ಆದರೆ ವಿಗ್ರಹವನ್ನು ಸುಂದರ ಸ್ತ್ರೀಪುರುಷರಂತೆ ಮಾಡಿದರೆ ಇದೊಂದು ಹೀನವಿಗ್ರಹ. ಇದನ್ನು ಧ್ವಂಸಮಾಡಿ ಎನ್ನುವರು. ನಮ್ಮಲ್ಲಿರುವ ಪೌರಾಣಿಕ ಸಾಮರಸ್ಯ ಇದು ! ಒಬ್ಬ ತಮ್ಮ ಮತಸ್ಥಾಪಕ ಅದ್ಭುತ ಕೆಲಸಗಳನ್ನು ಮಾಡಿದ ಎಂದೂ, ಇದೆಲ್ಲ ಮೂಢ ನಂಬಿಕೆ ಎಂದು ಅದನ್ನೇ ಇತರರು ಹಳಿಯುವರು. ಆದರೆ ಅವರೆ ತಮ್ಮ ಮತ ಸ್ಥಾಪಕ ಅದಕ್ಕಿಂತ ಮೀರಿದ ಮಹಾಕಾರ್ಯವನ್ನು ಸಾಧಿಸಿರುವನು, ಅದೆಲ್ಲ ಸತ್ಯ ಚರಿತ್ರೆ ಎಂದು ಅವರು ನಂಬುವರು. ಈ ಜನರಿಗೆ ಚರಿತ್ರೆ ಮತ್ತು ಪುರಾಣಕ್ಕೆ ಏನು ವ್ಯತ್ಯಾಸವಿದೆ ಎಂಬುದನ್ನು ನನಗೆ ತಿಳಿದಿರುವ ಮಟ್ಟಿಗೆ ಯಾರಿಗೂ ತಿಳಿದುಕೊಳ್ಳಲು ಆಗಲಿಲ್ಲ. ಇಂತಹ ಕಥೆಗಳು ಯಾವ ಧರ್ಮಕ್ಕಾದರೂ ಸೇರಿರಲಿ, ಅವೆಲ್ಲ ನಿಜವಾಗಿ ಪೌರಾಣಿಕ ವಿಷಯ. ಕೆಲವು ವೇಳೆ ಸ್ವಲ್ಪ ಚರಿತ್ರಾಂಶ ಬೆರೆತಿರಬಹುದು.

ನಂತರವೆ ಆಚಾರ ಬರುವುದು. ಒಂದು ಪಂಗಡದವರಿಗೆ ಒಂದು ಬಗೆಯ ಆಚಾರವಿದೆ. ಅದು ಬಹಳ ಪವಿತ್ರವಾದುದು ಎಂದು ಅವರು ಭಾವಿಸುವರು. ಮತ್ತೊಂದು ಪಂಗಡದ ಆಚಾರವನ್ನು ಕೆಲಸಕ್ಕೆ ಬಾರದ ಮೌಢ್ಯವೆನ್ನುವರು. ಒಂದು ಪಂಗಡದವರು ಒಂದು ಬಗೆಯ ಚಿಹ್ನೆಯನ್ನು ಪೂಜಿಸಿದರೆ, ಮತ್ತೊಂದು ಪಂಗಡದವರು "ಓ ಇದು ದುಸ್ಸಹನೀಯ" ಎನ್ನುವರು. ಒಂದು ಸಾಧಾರಣ ಚಿಹ್ನೆಯನ್ನು ತೆಗೆದುಕೊಳ್ಳಿ. ಶಿವಲಿಂಗದ ಚಿಹ್ನೆ ನಿಜವಾಗಿಯೂ ಲೈಂಗಿಕ ಚಿಹ್ನೆ. ಆದರೆ ಕ್ರಮೇಣ ಆ ಭಾವನೆ ಮರೆತು ಹೋಗಿ ಈಗ ಅದು ಸೃಷ್ಟಿಕರ್ತನ ಒಂದು ಚಿಹ್ನೆಯಾಗಿದೆ. ಯಾವ ದೇಶದ ಜನರಿಗೆ ಇದು ಚಿಹ್ನೆಯಾಗಿದೆಯೋ ಅವರು ಇದನ್ನು ಲಿಂಗದಂತೆ ಭಾವಿಸುವುದೇ ಇಲ್ಲ. ಅದು ಶಿವನ ಒಂದು ಚಿಹ್ನೆಮಾತ್ರವಾಗಿದೆ, ಅಷ್ಟೆ. ಬೇರೆ ಧರ್ಮ ಅಥವಾ ಜನಾಂಗಕ್ಕೆ ಸೇರಿದ ಮತ್ತೊಬ್ಬನಿಗೆ ಲಿಂಗವಲ್ಲದೆ ಅಲ್ಲಿ ಮತ್ತೇನೂ ಕಾಣುವುದಿಲ್ಲ. ಅದನ್ನು ದೂರುತ್ತಾನೆ. ಆದರೆ ಅದೇ ಕಾಲದಲ್ಲಿ ಅವನು ಮತ್ತೇನನ್ನೊ ಮಾಡುತ್ತಿರಬಹುದು. ಅದು ಲಿಂಗಾರ್ಚಕರಿಗೆ ಅತಿ ಹೇಯವಾಗಿ ಕಾಣುವುದು. ಉದಾಹರಣೆಗೆ ಎರಡು ವಿಷಯಗಳನ್ನು ತೆಗೆದುಕೊಳ್ಳೋಣ. ಹಿಂದೂಗಳ ಲಿಂಗಾರ್ಚನೆ. ಕ್ರೈಸ್ತರ ಸ್ಯಾಕ್ರಿಮೆಂಟ್. ಕ್ರೈಸ್ತರಿಗೆ ಲಿಂಗ ಅತಿ ಹೇಯವಾದುದು. ಕ್ರೈಸ್ತರ ಸಾಕ್ರಿಮೆಂಟ್‌ನಲ್ಲಿ ಮನುಷ್ಯ

ನನ್ನು ಕೊಂದು ಅವನ ಒಳ್ಳೆ ಗುಣಪಡೆಯಲು ಆ ಹೆಣದ ಮಾಂಸ ತಿಂದು ರಕ್ತ ಕುಡಿಯುವ ನರಮಾಂಸ ಭಕ್ಷಣೆ ಅವಶೇಷ ಎಂದು ಹಿಂದು ಹೇಳುವನು. ಕೆಲವು ಕಾಡುಮನುಷ್ಯರು ಮಾಡುವುದು ಹೀಗೆ. ಒಬ್ಬ ಬಹಳ ಧೈರ್ಯ ಶಾಲಿ ಇರುವನು. ಅವನನ್ನು ಕೊಂದು ಅವನ ಹೃದಯವನ್ನು ತಿನ್ನು ವರು. ಇದರಿಂದ ಆ ಮನುಷ್ಯನ ಧೈರ್ಯಸ್ಥೈರ್ಯಗಳು ತಮಗೆ ಬರುವು ದೆಂದು ಭಾವಿಸುವರು. ಸರ್ ಜಾನ್ ಲುಬಕ್‌ನಂತಹ ಕ್ರೈಸ್ತಭಕ್ತ ಕೂಡ ಇದನ್ನು ಒಪ್ಪಿಕೊಂಡಿರುವನು. ಕ್ರೈಸ್ತರ ಸ್ಯಾಕ್ರಿಮೆಂಟ್‌ಗಳ ಮೂಲ ಅನಾಗರಿಕರ ಭಾವನೆ, ಅದು ನರಮಾಂಸಭಕ್ಷದ ಅವಶೇಷ ಎನ್ನುವನು. ಕ್ರೈಸ್ತರೇನೂ ಈ ಮೂಲವನ್ನು ಒಪ್ಪಿಕೊಳ್ಳುವುದಿಲ್ಲ. ಅವರ ಮನಸ್ಸಿಗೆ ಇದರ ಅರ್ಥ ಹೊಳೆಯುವುದೇ ಇಲ್ಲ. ಅವರ ಪಾಲಿಗೆ ಇದೊಂದು ಪವಿತ್ರ ಚಿಹ್ನೆ. ಅದಷ್ಟೆ ಅವರಿಗೆ ಬೇಕಾಗಿರುವುದು. ಇದರಂತೆಯೆ ಆಚಾರದಲ್ಲಿಯೂ ಎಲ್ಲರೂ ಒಪ್ಪಿಕೊಳ್ಳುವ ಸರ್ವಸಾಮಾನ್ಯ ಆಚಾರವಿಲ್ಲ. ಎಲ್ಲರಿಗೂ ಅನ್ವಯಿಸುವ ಭಾವನೆ ಮತ್ತೆಲ್ಲಿದೆ? ವಿಶ್ವಧರ್ಮವನ್ನು ಪಡೆಯಲು ಹೇಗೆ ಸಾಧ್ಯ? ಅದೇನೊ ಆಗಲೆ ಇದೆ. ಅದೇನು ಎಂಬುದನ್ನು ನೋಡೋಣ.

ವಿಶ್ವಬಾಂಧವ್ಯ ಎಂಬ ಮಾತನ್ನು ನಾವೆಲ್ಲ ಕೇಳಿರುವೆವು. ಇದನ್ನು ಸಾರುವುದಕ್ಕೆ ಸಮಾಜ ಹೇಗೆ ಕಾತರವಾಗಿದೆ ಎಂಬುದು ಕೂಡ ನಮಗೆ ಗೊತ್ತಿದೆ. ಒಂದು ಹಳೆ ಕಥೆ ಜ್ಞಾಪಕಕ್ಕೆ ಒರುವುದು. ಭರತ ಖಂಡ ದಲ್ಲಿ ಮದ್ಯಪಾನ ಅತಿ ಹೇಯವಾದುದೆಂದು ಪರಿಗಣಿಸುವರು. ಇಬ್ಬರು ಸೋದರರು ಒಂದು ರಾತ್ರಿ ರಹಸ್ಯವಾಗಿ ಕುಡಿಯಬೇಕೆಂದು ಇಚ್ಛಿಸಿದರು ಅವರ ಚಿಕ್ಕಪ್ಪ ದೊಡ್ಡ ಆಚಾರವಂತ. ಅವರ ಕೋಣೆ ಪಕ್ಕದಲ್ಲಿಯೆ ಮಲಗಿಕೊಂಡಿದ್ದ. ಕುಡಿಯುವುದಕ್ಕೆ ಮುಂಚೆ ಒಬ್ಬರು ಮತ್ತೊಬ್ಬ ರಿಗೆ, " ನಾವು ನಿಶ್ಯಬ್ಧವಾಗಿರಬೇಕು. ಇಲ್ಲದೆ ಇದ್ದರೆ ಚಿಕ್ಕಪ್ಪ ಏಳು ವನು " ಎಂದು ಹೇಳತೊಡಗಿದರು. ಕುಡಿಯುವಾಗಲೂ ಒಬ್ಬನು ಮತ್ತೊಬ್ಬನಿಗೆ " ಸುಮ್ಮನಿರು. ಚಿಕ್ಕಪ್ಪ ಏಳುತ್ತಾನೆ" ಎಂದು ಒಬ್ಬನಿ ಗಿಂತ ಮತ್ತೊಬ್ಬ ಗಟ್ಟಿಯಾಗಿ ಅರಚಲು ಪ್ರಾರಂಭಿಸಿದನು. ಗದ್ದಲ ಹೆಚ್ಚಾದಾಗ ಚಿಕ್ಕಪ್ಪ ಎದ್ದು ಬಂದು ನೋಡಿದಾಗ ಗುಟ್ಟೆಲ್ಲ ಬಯಲಿಗೆ ಬಂದಿತು. ನಾವೆಲ್ಲ ಆ ಕುಡುಕರಂತೆ ವಿಶ್ವಬಾಂಧವ್ಯ ಎಂದು ಅರಚಿ ಕೊಳ್ಳುತ್ತೇವೆ. ನಾವೆಲ್ಲ ಸಮಾನರು, ಆದಕಾರಣ ಒಂದು ಪಂಗಡ ಮಾಡಿಕೊಳ್ಳೋಣ. ನೀವು ಒಂದು ಪಂಗಡವಾದೊಡನೆಯೆ ಸಮಾ ನತೆಗೆ ವಿರೋಧಿಸುವಿರಿ. ಅಲ್ಲಿನ್ನು ಸಮಾನತೆ ಇರುವುದಿಲ್ಲ. ಮಹಮ್ಮ

ದೀಯರು ವಿಶ್ವಬಾಂಧವ್ಯದ ವಿಚಾರವಾಗಿ ಮಾತನಾಡುವರು. ಆದರೆ ಮಾತಿನಿಂದ ನಿಜವಾಗಿ ಏನೂ ಪ್ರಯೋಜನವಾಗುವುದು? ಯಾರು ಮಹಮ್ಮದೀಯನಲ್ಲವೋ ಅವರನ್ನು ತಮ್ಮ ಸಂಗಡಕ್ಕೆ ಸೇರಿಸಿಕೊಳ್ಳುವುದಿಲ್ಲ. ಅವನ ಪ್ರಾಣಕ್ಕೆ ಬಹುಶಃ ಅಪಾಯವಿರಬಹುದು. ಕ್ರೈಸ್ತರೂ ವಿಶ್ವ ಬಾಂಧವ್ಯವನ್ನು ಮಾತನಾಡುವರು. ಆದರೆ ಯಾರು ಕ್ರೈಸ್ತರಲ್ಲವೊ ಅವರೆಲ್ಲ ನಿತ್ಯಯಾತನೆ ಅನುಭಸುವ ನರಕಕ್ಕೆ ಹೋಗಬೇಕು.

ಸಮಾನತೆ ವಿಶ್ವಬಾಂಧವ್ಯ ಮುಂತಾದುವನ್ನು ಪ್ರಪಂಚದಲ್ಲಿ ಹುಡುಕಾಡುತ್ತಿರುವೆವು. ಇಂತಹ ಮಾತನ್ನು ನೀವು ಕೇಳಿದಾಗ ಸ್ವಲ್ಪ ಜಾಗರೂಕರಾಗಿರಿ ಎನ್ನುತ್ತೇನೆ. ಆ ಮಾತಿನ ಹಿಂದೆ ಅನೇಕ ವೇಳೆ ತೀವ್ರ ಸ್ವಾರ್ಥತೆ ಇದೆ. " ಚಳಿಗಾಲದಲ್ಲಿ ಕೆಲವು ವೇಳೆ ಮೋಡ ಆವರಿಸುವುದು. ಬೇಕಾದಷ್ಟು ಗುಡುಗು ಮಿಂಚಿನ ಆರ್ಭಟವಿದ್ದರೂ ಒಂದು ಹನಿಯೂ ಮಳೆ ಇಲ್ಲ. ಆದರೆ ಮಳೆಗಾಲದಲ್ಲಿ ಮೋಡ ಶಬ್ದವನ್ನೆ ಮಾಡುವುದಿಲ್ಲ. ಆದರೂ ನೀರಿನಿಂದ ಪ್ರಪಂಚವನ್ನೆಲ್ಲ ತೋಯಿಸುವುದು. ಇದರಂತೆಯೆ ಯಾರು ನಿಜವಾಗಿ ಕೆಲಸಮಾಡುತ್ತಿರುವರೊ, ಮಾನವ ವಿಶ್ವಬಾಂಧವ್ಯವನ್ನು ಹೃದಯದಲ್ಲಿ ಅನುಭವಿಸುವರೊ ಅವರು ಹೆಚ್ಚು ಮಾತನಾಡುವುದಿಲ್ಲ. ವಿಶ್ವಬಾಂಧವ್ಯಕ್ಕೆ ಸಣ್ಣ ಸಂಗಡಗಳನ್ನು ಮಾಡುವುದಿಲ್ಲ. ಆದರೆ ಅವರ ಆಚಾರ ವ್ಯವಹಾರ ಇಡೀ ಜೀವನ ಅವರ ಹೃದಯದಲ್ಲಿ ನಿಜವಾಗಿಯೂ ವಿಶ್ವಬಾಂಧವ್ಯವಿದೆ, ಪ್ರೀತಿ ದಯೆ ಇದೆ ಎಂಬುದನ್ನು ವ್ಯಕ್ತಗೊಳಿಸುವುದು. ಅವರು ಮಾತನಾಡುವುದಿಲ್ಲ. ಅದರಂತೆ ಬಾಳುವರು, ಅದರಂತೆ ನಡೆಯುವರು. ಪ್ರಪಂಚದಲ್ಲಿ ಬೇಕಾದಷ್ಟು ಮಾತಿನ ಅಬ್ಬರವಿದೆ. ನಮಗಿಂದು ಶ್ರದ್ಧಾಪೂರ್ವಕ ಕಾರ್ಯ ಹೆಚ್ಚಾಗಬೇಕು, ಮಾತು ಕಡಿಮೆಯಾಗಬೇಕು.

ಧರ್ಮಕ್ಕೆ ಅನ್ವಯಿಸುವ ಒಂದು ಸಾರ್ವಭೌಮಿಕ ವಿಷಯ ಇದುವರೆಗೆ ದೊರಕುವುದು ದುರ್ಲಭವಾಗಿದೆ. ಆದರೂ ಅವು ಇವೆ ಎಂಬುದು ನಮಗೆ ಗೊತ್ತಿದೆ. ನಾವೆಲ್ಲ ಮಾನವರು, ಆದರೆ ಒಂದೇ ಸಮನಾಗಿರುವೆವೆ? ಎಂದಿಗೂ ಇಲ್ಲ. ಬರೀ ಹುಚ್ಚರು ಮಾತ್ರ ಹಾಗೆ ಹೇಳುವರು. ನಾವೆಲ್ಲ, ಬುದ್ಧಿ ಶಕ್ತಿ ದೇಹದಲ್ಲಿ ಒಂದೇಸಮನಾಗಿರುವೆವೆ? ಒಬ್ಬ ಮತ್ತೊಬ್ಬನಿಗಿಂತ ಬಲಶಾಲಿ, ಒಬ್ಬ ಮತ್ತೊಬ್ಬನಿಗಿಂತ ಹೆಚ್ಚು ಬುದ್ಧಿಶಾಲಿ. ನಾವೆಲ್ಲ ಸಮನಾಗಿದ್ದರೆ ಈ ತಾರತಮ್ಯವೇಕೆ? ಯಾರು ಇದನ್ನು ಮಾಡಿದರು? ನಾವೆ. ನಮ್ಮಲ್ಲಿ ಹೆಚ್ಚು

ಕಡಿಮೆ ಶಕ್ತಿ ಇದೆ, ಹೆಚ್ಚುಕಡಿಮೆ ಬುದ್ಧಿ ಆರೋಗ್ಯವಿದೆ. ಇದರಿಂದ ಒಂದು ವ್ಯತ್ಯಾಸ ನಮ್ಮಲ್ಲಿ ಆಗಲೇ ಬೇಕು. ಆದರೂ ಸಮಾನತೆಯ ಸಿದ್ಧಾಂತ ನಮ್ಮೆಲ್ಲರ ಹೃದಯಕ್ಕೂ ಸಮ್ಮತವಾಗುವಂತಹುದು. ನಾವೆಲ್ಲ ಮಾನವರು. ಆದರೆ ಕೆಲವರು ಸ್ತ್ರೀಯರು, ಕೆಲವರು ಪುರುಷರು. ಇಲ್ಲೊಬ್ಬ ಕಪ್ಪುಮನುಷ್ಯ, ಅಲ್ಲೊಬ್ಬ ಬಿಳಿ ಮನುಷ್ಯ. ಆದರೆ ಎಲ್ಲರೂ ಮನುಷ್ಯರು. ಒಂದೇ ಮಾನವ ಕೋಟಿಗೆ ಸೇರಿದವರು. ಒಬ್ಬೊಬ್ಬರ ಮುಖಚರ್ಯೆ ಒಂದೊಂದು ವಿಧ. ಯಾರಿಬ್ಬರೂ ಒಂದೇ ಸಮನಾಗಿಲ್ಲ. ಆದರೆ ನಾವೆಲ್ಲ ಮಾನವರು. ಈ ಒಂದು ಮಾನವ ಕೋಟಿಯೆಲ್ಲಿದೆ? ಒಬ್ಬ ಸ್ತ್ರೀಯೊ ಪುರುಷನೊ ಕಪ್ಪಗೊ ಕೆಂಪಗೊ ಇರುವನು. ಈ ಮುಖಗಳ ಹಿಂದೆಲ್ಲ ಎಲ್ಲ ಮಾನವರಿಗೂ ಸಾಮಾನ್ಯವಾದ ಒಂದು ಸೂಕ್ಷ್ಮ ಮಾನವತೆ ಇದೆ ಎಂಬುದು ನನಗೆ ಗೊತ್ತಿದೆ. ನಾನು ಅದನ್ನು ನೋಡ ಬೇಕು, ಹಿಡಿಯಬೇಕು, ತಿಳಿಯಬೇಕೆಂದು ಯತ್ನಿಸಿದಾಗ ಅದು ಸಿಕ್ಕದೆ ಇರಬಹುದು, ಆದರೂ ಅದು ಅಲ್ಲಿದೆ. ನಾನು ಯಾವುದಾದರೂ ನಿಜವೆಂದು ನಂಬಿದ್ದರೆ ಅದೇ ಎಲ್ಲರಿಗೂ ಸಾಮಾನ್ಯವಾಗಿರುವ ಮಾನವೀಯತೆ. ಈ ಸಾರ್ವತ್ರಿಕದೃಷ್ಟಿಯಿಂದ ನಾನು ನಿಮ್ಮನ್ನು ಸ್ತ್ರೀಪುರುಷರಂತೆ ನೋಡು ವುದು. ಹಲವು ಧರ್ಮಗಳಲ್ಲಿ ದೇವರಂತೆ ಸಂಚರಿಸುವ ವಿಶ್ವಧರ್ಮಭಾವನೆ ಕೂಡ ಇದರಂತೆಯೆ. ಇದು ಎಂದೆಂದಿಗೂ ಇದ್ದೇ ತೀರಬೇಕು. "ಹಲವು ಮಣಿಗಳಲ್ಲಿರುವ ಸೂತ್ರ ನಾನು." ಪ್ರತಿಯೊಂದು ಮಣಿಯೂ ಒಂದು ಧರ್ಮ ಒಂದು ಪಂಗಡ. ಹಲವು ಧರ್ಮಗಳೆಲ್ಲ ಇಂತಹ ಮಣಿ. ಇವುಗಳಲ್ಲೆಲ್ಲ ಸೂತ್ರದಂತೆ ಇರುವವನೆ ದೇವರು. ಬಹು ಪಾಲು ಮಾನವ ರಿಗೆ ಇದು ತಿಳಿಯದು ಅಷ್ಟೆ.

ವೈವಿಧ್ಯತೆಯಲ್ಲಿ ಐಕ್ಯತೆಯೆ ವಿಶ್ವದ ನಿಯಮ. ನಾವೆಲ್ಲ ಮಾನ ವರು, ಆದರೂ ಬೇರೆಬೇರೆ. ಮಾನವ ದೃಷ್ಟಿಯಿಂದ ನೀವು ಪ್ರಾಣಿ ಗಿಂತ ಬೇರೆ. ಆದರೆ ಇಡೀ ಪ್ರಾಣವರ್ಗದ ದೃಷ್ಟಿಯಿಂದ ಸ್ತ್ರೀ, ಪುರುಷ, ಪ್ರಾಣಿ, ಸಸ್ಯ ಎಲ್ಲರೂ ಒಂದೆ. ಅಸ್ತಿತ್ವ ದೃಷ್ಟಿಯಿಂದ ನೀನು ಇಡೀ ಪ್ರಪಂಚದೊಂದಿಗೆ ಒಂದು. ಆ ವಿಶ್ವ ಅಸ್ತಿತ್ವವೇ ದೇವರು. ವಿಶ್ವದ ಚರಮ ಐಕ್ಯವೇ ಅವನು. ಅವನಲ್ಲಿ ನಾವೆಲ್ಲ ಒಂದು. ಆದರೂ ಆವಿ ರ್ಭಾವನೆಯ ದೃಷ್ಟಿಯಿಂದ ಈ ವ್ಯತ್ಯಾಸಗಳು ಯಾವಾಗಲೂ ಇದ್ದೇ ಇರುವುವು. ಹೊರಗೆ ವ್ಯಕ್ತವಾಗುವ ನಮ್ಮ ಶಕ್ತಿಕ್ರಿಯೆಗಳಲ್ಲಿ ಈ ವ್ಯತ್ಯಾಸಗಳು ಇದ್ದೇತೀರಬೇಕು. ವಿಶ್ವಧರ್ಮವೆಂದರೆ ಒಂದು ಬಗೆ

ಸಿದ್ಧಾಂತವನ್ನು ಇಡೀ ಮಾನವ ಕೋಟಿ ನಂಬುವುದು ಎಂದು ಭಾವಿಸಿದರೆ ಇದು ಎಂದಿಗೂ ಸಾಧ್ಯವಿಲ್ಲ. ಎಲ್ಲಾ ಮುಖಗಳೂ ಒಂದೇಸಮನಾಗಿರುವ ಕಾಲಬರುವುದಿಲ್ಲ. ಒಂದು ಸಾರ್ವತ್ರಿಕ ಪುರಾಣವನ್ನು ನಿರೀಕ್ಷಿಸಿದರೂ ಅದು ಅಸಾಧ್ಯ. ಇದರಂತೆಯೆ ಒಂದು ಸಾರ್ವತ್ರಿಕ ಆಚಾರವೂ ಇರಲಾರದು. ಇಂತಹ ಸ್ಥಿತಿ ಎಂದಿಗೂ ಬರುವುದಿಲ್ಲ. ಇದೇನಾದರೂ ಸಾಧ್ಯವಾದರೆ ಪ್ರಪಂಚ ನಾಶವಾಗುವುದು. ಏಕೆಂದರೆ ವೈವಿಧ್ಯತೆಯೆ ಜೀವನದ ಪ್ರಥಮ ನಿಯಮ. ನಮ್ಮನ್ನು ಯಾವುದು ವ್ಯಕ್ತಿಗಳಂತೆ ಮಾಡುವುದು ? ವೈವಿಧ್ಯತೆ. ಪೂರ್ಣಸಮತ್ವ ನಮ್ಮನ್ನು ನಾಶಮಾಡುವುದು. ಉದಾಹರಣೆಗೆ ಈ ಕೋಣೆಯಲ್ಲಿ ಶಾಖವಿದೆ. ಸಮವಾಗಿ ವ್ಯಾಪಿಸುವುದು ಅದರ ಸ್ವಭಾವ. ಇದು ಹಾಗೆ ಪ್ರಸರಿಸಿದರೆ ವ್ಯಾವಹಾರಿಕ ದೃಷ್ಟಿಯಿಂದ ಶಾಖವಿಲ್ಲದಂತೆಯೆ ಆಗುವುದು. ಪ್ರಪಂಚದಲ್ಲಿ ಯಾವುದರಿಂದ ಚಲನೆ ಸಾಧ್ಯ ? ಕಳೆದ ಸಮತ್ವ. ಸಮತ್ವದ ಐಕ್ಯತೆ ವಿಶ್ವಪ್ರಳಯವಾದಾಗ ಮಾತ್ರ ಸಾಧ್ಯ. ಇಲ್ಲದೆ ಇದ್ದರೆ ಇದು ಸಾಧ್ಯವೇ ಇಲ್ಲ. ಸಾಧ್ಯ ಮಾತ್ರವಲ್ಲ, ಇದನ್ನು ಪಡೆಯುವುದು ಕೂಡ ಅಪಾಯಕರವೆ. ನಾವೆಲ್ಲರೂ ಒಂದೇ ಸಮನಾಗಿ ಆಲೋಚಿಸಬೇಕೆಂದು ಆಶಿಸಬಾರದು. ಆಗ ಯೋಚಿಸುವುದಕ್ಕೆ ಆಲೋಚನೆಯೇ ಇರುವುದಿಲ್ಲ. ನಾವೆಲ್ಲ ಆಗ ವಸ್ತುಪ್ರದರ್ಶನ ಶಾಲೆಯಲ್ಲಿರುವ ಈಜಿಪ್ಟಿನ ಮಮ್ಮಿಗಳಂತೆ ಆಗುವೆವು. ಆಲೋಚಿಸುವುದಕ್ಕೆ ಏನೂ ಇಲ್ಲದೆ ಒಂದು ಮತ್ತೊಂದರ ಮುಖ ನೋಡುತ್ತಿರುವೆವು. ಈ ವೈವಿಧ್ಯತೆ, ನಮ್ಮ ಸಮತ್ವ ನಷ್ಟವೇ ನಮ್ಮ ಪ್ರಗತಿಯ ಜೀವಾಳ, ಭಾವನೆಯ ಜೀವಾಳ. ಇದು ಯಾವಾಗಲೂ ಇರಬೇಕು.

ಹಾಗಾದರೆ ನಾನು ಯಾವುದನ್ನು ವಿಶ್ವಧರ್ಮದ ಆದರ್ಶವೆನ್ನುವುದು ? ನಾನು ಒಂದು ಸಾರ್ವತ್ರಿಕ ತತ್ತ್ವವನ್ನಾಗಲೀ, ಪುರಾಣವನ್ನಾಗಲೀ, ಆಚಾರವನ್ನಾಗಲೀ ಹೇಳುವುದಿಲ್ಲ. ಅತಿ ಅದ್ಭುತವಾದ ಅತಿ ನಾಜೋಕಾದ ಚಕ್ರದೊಳಗೆ ಚಕ್ರದಿಂದ ಕೂಡಿರುವ ಈ ಸೃಷ್ಟಿಯಂತ್ರ ಚಲಿಸಬೇಕೆಂಬುದು ನನಗೆ ಗೊತ್ತು. ಹಾಗಾದರೆ ನಾವೇನು ಮಾಡಬೇಕು ? ಅದು ಗದ್ದಲವಿಲ್ಲದೆ ಹೋಗುವಂತೆ ಮಾಡಬಹುದು, ಕುಲುಕಾಟವನ್ನು ತಗ್ಗಿಸಬಹುದು, ಚಕ್ರಗಳಿಗೆ ಎಣ್ಣೆಯನ್ನು ಸವರಿದಂತೆ ಮಾಡಬಹುದು. ಇದು ಹೇಗೆ ? ವೈವಿಧ್ಯತೆ ಸ್ವಾಭಾವಿಕವಾಗಿ ಆವಶ್ಯಕ ಎಂಬುದನ್ನು ಒಪ್ಪಿಕೊಳ್ಳುವುದರಿಂದ ಇದು ಸಾಧ್ಯ. ನಮ್ಮ ಸ್ವರೂಪ

ದಿಂದಲೇ ಐಕ್ಯತೆಯನ್ನು ಹೇಗೆ ಒಪ್ಪಿಕೊಂಡಿರುವೆವೊ ಹಾಗೆಯೆ ವೈವಿಧ್ಯತೆಯನ್ನೂ ಒಪ್ಪಿಕೊಳ್ಳಬೇಕು. ಸತ್ಯವನ್ನು ಸಾವಿರವಿಧದಲ್ಲಿ ಹೇಳಬಹುದೆಂಬುದನ್ನು ನಾವು ಕಲಿತುಕೊಳ್ಳಬೇಕು. ಪ್ರತಿಯೊಂದೂ ತನ್ನ ದೃಷ್ಟಿಯಿಂದ ಸತ್ಯ, ಪ್ರತಿಯೊಂದು ವಸ್ತುವನ್ನೂ ನೂರುಕಡೆಯಿಂದ ನೋಡಬಹುದು. ಆದರೂ ಅದು ಅದೇ ಆಗಿರುವುದೆಂಬುದನ್ನು ನಾವು ಕಲಿತುಕೊಳ್ಳಬೇಕು. ಉದಾಹರಣೆಗೆ ಸೂರ್ಯನನ್ನು ತೆಗೆದುಕೊಳ್ಳಿ. ಭೂಮಿಯ ಮೇಲೆ ನಿಂತಿರುವ ಮನುಷ್ಯ ಸೂರ್ಯೋದಯವನ್ನು ನೋಡುತ್ತಾನೆ ಎಂದು ಭಾವಿಸಿ. ಅದು ಆಗೊಂದು ದೊಡ್ಡ ಚೆಂಡಿನಂತೆ ಇರುವುದು. ಸೂರ್ಯನೆಡೆಗೆ ಅವನು ಪ್ರಯಾಣಮಾಡುವಾಗ ಒಂದು ಕ್ಯಾಮರಾ ತೆಗೆದುಕೊಂಡು ಹೋಗುವನು ಎಂದು ಭಾವಿಸೋಣ. ಅವನು ತನ್ನ ಪ್ರಯಾಣದಲ್ಲಿ ಸೂರ್ಯನನ್ನು ಸೇರುವವರೆಗೆ ಹಲವು ಕಡೆ ಸೂರ್ಯನ ಫೋಟೋಗಳನ್ನು ತೆಗೆದುಕೊಳ್ಳುತ್ತಾನೆ. ಪ್ರತಿಯೊಂದು ಕಡೆಯ ಫೋಟೋಗಳು ಇತರ ಕಡೆಯ ಫೋಟೋಗಳಿಗಿಂತ ಬೇರೆಯಾಗಿರುವುದು. ಅವನು ಹಿಂತಿರುಗಿ ಬರುವಾಗ ಹಲವು ಸೂರ್ಯರ ಬೇರೆಬೇರೆ ಫೋಟೋಗಳನ್ನು ತಂದಂತೆ ಇರುವುದು. ಆದರೆ ಒಂದೇ ಸೂರ್ಯ ಬೇರೆಬೇರೆ ಕಡೆಯಿಂದ ತೆಗೆದ ಫೋಟೋಗಳು ಇವು ಎನ್ನುವುದು ನಮಗೆ ಗೊತ್ತಿದೆ. ಇದರಂತೆಯೆ ದೇವರೂ ಕೂಡ. ಅತ್ಯುತ್ತಮ ತತ್ತ್ವದ ಮೂಲಕವಾಗಲಿ ಅಥವಾ ಅನಾಗರಿಕ ಕಥೆಯ ಮೂಲಕವಾಗಲಿ, ಅತಿ ಸುಸಂಸ್ಕೃತ ಆಚಾರದ ಮೂಲಕವಾಗಲಿ ಅಥವಾ ಅತಿ ಮೂಢಾಚಾರದ ಮೂಲಕವಾಗಲಿ ಪ್ರತಿಯೊಂದು ಪಂಗಡ, ಪ್ರತಿಯೊಂದು ಜೀವ, ಪ್ರತಿಯೊಂದು ದೇಶ, ಪ್ರತಿಯೊಂದು ಧರ್ಮ, ತಿಳಿದೊ ತಿಳಿಯದೆಯೊ ದೇವರೆಡೆಗೆ ಹೋಗಲು ಯತ್ನಿಸುತ್ತಿದೆ. ಮನುಷ್ಯನಿಗೆ ದೊರೆತ ಪ್ರತಿಯೊಂದು ಸತ್ಯ ದರ್ಶನವೂ ದೇವರದೆ ಇತರರದಲ್ಲ. ಸರೋವರದಿಂದ ನೀರನ್ನು ತರಲು ಪ್ರತಿಯೊಬ್ಬರೂ ಒಂದೊಂದು ಪಾತ್ರೆ ತೆಗೆದುಕೊಂಡು ಹೋಗುತ್ತೇವೆ ಎಂದು ಇಟ್ಟುಕೊಳ್ಳೋಣ. ಒಬ್ಬನ ಕೈಯ್ಯಲ್ಲಿ ಒಂದು ಬಟ್ಟಲು ಇದೆ. ಇನ್ನೊಬ್ಬನ ಕೈಯ್ಯಲ್ಲಿ ಒಂದು ಜಾಡಿ ಇದ್ದೆ, ಮತ್ತೊಬ್ಬನ ಕೈಯ್ಯಲ್ಲಿ ಒಂದು ಬಕೆಟ್ಟು ಇತ್ಯಾದಿಗಳಿವೆ. ನಾವೆಲ್ಲ ಪಾತ್ರೆಯಲ್ಲಿ ನೀರನ್ನು ತುಂಬುವೆವು. ಪ್ರತಿಯೊಂದು ಪಾತ್ರೆಯಲ್ಲಿರುವ ನೀರೂ ಸ್ವಾಭಾವಿಕವಾಗಿ ಪಾತ್ರೆಯ ಆಕಾರವನ್ನು ಧರಿಸುವುದು. ಬಟ್ಟಲು ತಂದವನಿಗೆ ನೀರು ಬಟ್ಟಲಿನ ಆಕಾರವಾಗಿದೆ, ಜಾಡಿಯವನಿಗೆ ನೀರು ಜಾಡಿಯ ಆಕಾರ

ದಲ್ಲಿದೆ. ಹೀಗೆಯೆ ಅವರವರ ಪಾತ್ರೆಯ ಆಕಾರವನ್ನು ಧರಿಸುವುದು. ನಮ್ಮ ಮನಸ್ಸು ಈ ಪಾತ್ರೆಯಂತೆ. ಪ್ರತಿಯೊಬ್ಬನೂ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ಯತ್ನಿಸುತ್ತಿರುವನು. ದೇವರು ಬೇರೆ ಬೇರೆ ಪಾತ್ರೆಯಲ್ಲಿರುವ ನೀರಿನಂತೆ. ಪ್ರತಿಯೊಂದು ಪಾತ್ರೆಯಲ್ಲಿಯೂ ದೇವರು ಆ ಪಾತ್ರೆಯ ರೂಪವನ್ನು ಧರಿಸುವನು. ಆದರೂ ಅದರಲ್ಲಿರು ವುದೆಲ್ಲ ಒಬ್ಬನೆ ದೇವರು. ಪ್ರತಿಯೊಂದರಲ್ಲಿಯೂ ದೇವರೆ ಇರುವುದು. ನಮಗೆ ದೊರಕಬಹುದಾದ ವಿಶ್ವಧರ್ಮ ಭಾವನೆ ಇದೊಂದೆ.

ಸಿದ್ಧಾಂತದ ದೃಷ್ಟಿಯಿಂದ ಇದೇನೊ ಸರಿ. ಧರ್ಮಗಳಲ್ಲಿ ಈ ಸೌಹಾರ್ದವನ್ನು ತರಲು ಯಾವುದಾದರೂ ಮಾರ್ಗವಿದೆಯೆ? ಧರ್ಮದ ವಿಭಿನ್ನ ಭಾವನೆಗಳೆಲ್ಲ ಸತ್ಯ ಎಂದು ಒಪ್ಪಿಕೊಂಡ ಭಾವನೆ ಬಹಳ ಪುರಾತನ ವಾದುದು. ಭರತಖಂಡ ಅಲೆಕ್ಸಾಂಡ್ರಿಯ ಯೂರೋಪ್ ಚೈನಾ, ಟಿಬೆಟ್ ಕೊನೆಗೆ ಅಮೆರಿಕಾದೇಶದಲ್ಲಿ ಎಲ್ಲಾ ಕಡೆಯಲ್ಲಿಯೂ ಒಂದು ಪರಸ್ಪರ ಸೌಹಾರ್ದಧರ್ಮವನ್ನು ಜಾರಿಗೆ ತಂದು ಎಲ್ಲಾ ಧರ್ಮಗಳೂ ಪ್ರೀತಿಯಿಂದ ಸಹಕರಿಸಲಿ ಎನ್ನುವುದಕ್ಕೆ ಪ್ರಯತ್ನಗಳಾಗಿವೆ. ಅವುಗಳೆಲ್ಲ ವ್ಯರ್ಥವಾದವು. ಅವು ಯಾವ ಅನುಷ್ಠಾನಿಕ ಮಾರ್ಗವನ್ನೂ ಜಾರಿಗೆ ತರಲಿಲ್ಲ. ಹಲವರು ಎಲ್ಲಾ ಧರ್ಮಗಳೂ ಸತ್ಯ ಎನ್ನುವುದನ್ನು ಒಪ್ಪಿ ಕೊಂಡಿರುವರು. ಆದರೆ ಆ ಧರ್ಮಗಳನ್ನು ಒಟ್ಟಿಗೆ ಸೇರಿಸಿ ಪ್ರತಿಯೊಂದೂ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬರುವುದಕ್ಕೆ ಯಾವ ಮಾರ್ಗ ವನ್ನೂ ತೋರಲಿಲ್ಲ. ಧರ್ಮದಲ್ಲಿ ಯಾವ ವ್ಯಕ್ತಿಯ ವೈಶಿಷ್ಟ್ಯವನ್ನು ನಾಶಮಾಡದೆ, ಇತರರೊಂದಿಗೆ ಒಂದು ಸಾಮರಸ್ಯವನ್ನು ಕಾಣುವಂತೆ ಮಾಡಬಲ್ಲ ಯೋಜನೆಯೆ ಅನುಷ್ಠಾನಯೋಗ್ಯ. ಆದರೆ ಇದುವರೆಗೆ ಪ್ರಯತ್ನಿಸಿದ ಧಾರ್ಮಿಕ ಸೌಹಾರ್ದಭಾವನೆಯ ಯೋಜನೆಗಳೆಲ್ಲ, ಧರ್ಮದ ವಿಭಿನ್ನ ದೃಷ್ಟಿಯನ್ನೆಲ್ಲ ಸ್ವೀಕರಿಸುತ್ತೇವೆ ಎಂದು ಹೇಳಿದರೂ ವ್ಯವಹಾರ ದಲ್ಲಿ ಕೆಲವು ಸಿದ್ಧಾಂತಗಳಿಗೆ ಧರ್ಮಗಳನ್ನೆಲ್ಲಾ ಬಂಧಿಸಲು ಪ್ರಯತ್ನ ಪಟ್ಟಿವೆ. ಇದರಿಂದ ಪರಸ್ಪರ ಕಾದಾಡುವ ಸ್ಪರ್ಧಿಸುವ ಭಿನ್ನಾಭಿಪ್ರಾಯ ಗಳಿಂದ ಕೂಡಿದ ಪಂಗಡಗಳನ್ನು ಹೆಚ್ಚುಮಾಡಿವೆ. ನನ್ನದೂ ಒಂದು ಸಣ್ಣ ಯೋಜನೆಯಿದೆ. ಇದು ಅನುಷ್ಠಾನ ಸಾಧ್ಯವೊ ಇಲ್ಲವೊ ನನಗೆ ಗೊತ್ತಿಲ್ಲ. ನಿಮ್ಮ ಅವಗಾಹನೆಗೆ ಇದನ್ನು ತರುವೆನು. ನನ್ನ ಯೋಜನೆ ಏನು? ಮೊದಲನೆಯದಾಗಿ ನಾನು ಮಾನವನಿಗೆ "ನಾಶಮಾಡಬೇಡಿ" ಎಂಬ ಸೂತ್ರವನ್ನು ಒಪ್ಪಿಕೊಳ್ಳುವಂತೆ ಕೋರುತ್ತೇನೆ. ಧ್ವಂಸಮಾರ್ಗ

ವನ್ನು ಅನುಸರಿಸುವ ಸಮಾಜ ಸುಧಾರಕರಿಂದ ಪ್ರಪಂಚಕ್ಕೆ ಯಾವ ಪ್ರಯೋಜನವೂ ಆಗಲಾರದು. ಧ್ವಂಸಮಾಡಬೇಡಿ, ಯಾವುದನ್ನೂ ಕೆಳಗೆ ಎಳೆಯಬೇಡಿ. ಆದರೆ ನಿರ್ಮಿಸಿ. ಸಾಧ್ಯವಾದರೆ ಸಹಾಯಮಾಡಿ ಇಲ್ಲದಿದ್ದರೆ ಕೈಕಟ್ಟಿ ಸುಮ್ಮನೆ ನಿಂತುಕೊಳ್ಳಿ. ಕೆಲಸ ಸಾಗುತ್ತಿರುವುದನ್ನು ನೋಡಿ. ಉಪಕಾರಮಾಡಲು ಸಾಧ್ಯವಿಲ್ಲದಿದ್ದರೆ ಅಪಕಾರಮಾಡಬೇಡಿ. ಯಾರ ಮನೋನಿಶ್ಚಯವನ್ನೂ ಅವರು ಎಲ್ಲಿಯವರೆಗೆ ಪ್ರಾಮಾಣಿಕ ರಾಗಿರುವರೊ ಅಲ್ಲಿಯವರೆಗೆ ಅವರನ್ನು ದೂರಬೇಡಿ. ಎರಡನೆಯದಾಗಿ ಮನುಷ್ಯ ಎಲ್ಲಿರುವನೊ ಅಲ್ಲಿಂದ ಮುಂದೊಯ್ಯಿರಿ. ಸಾಧ್ಯವಾದರೆ ಅಲ್ಲಿಂದ ಮೇಲಕ್ಕೆ ಎತ್ತಿ. ದೇವರೆ ಎಲ್ಲಾ ಧರ್ಮಗಳ ಕೇಂದ್ರವಾದರೆ, ಪ್ರತಿಯೊಬ್ಬರೂ ಒಂದೊಂದು ವ್ಯಾಸಾರ್ಧರೇಖೆಯಮೂಲಕ ಅವನ ಕಡೆಗೆ ಹೋಗುತ್ತಿದ್ದರೆ, ನಾವುಗಳೆಲ್ಲ ಕೇಂದ್ರಸೇರುವುದರಲ್ಲಿ ಸಂಶಯವಿಲ್ಲ. ವ್ಯಾಸಾರ್ಧರೇಖೆಗಳೆಲ್ಲ ಸಂಧಿಸುವ ಕೇಂದ್ರದಲ್ಲಿ ನಮ್ಮ ಭಿನ್ನಾಭಿಪ್ರಾಯ ಗಳು ಕೊನೆಗೊಳ್ಳುವುದು. ನಾವು ಅಲ್ಲಿಗೆ ಸೇರುವತನಕ ವ್ಯತ್ಯಾಸಗಳು ಇರಲೇಬೇಕಾಗುವುದು. ವ್ಯಾಸಾರ್ಧರೇಖೆಗಳೆಲ್ಲ ಕೇಂದ್ರದಲ್ಲಿ ಸಂಧಿಸು ವುವು. ಒಬ್ಬ ತನ್ನ ಸ್ವಭಾವಕ್ಕೆ ಅನುಗುಣವಾಗಿ ಒಂದು ವ್ಯಾಸಾರ್ಧ ರೇಖೆಯ ಮೂಲಕ ಹೋಗುವನು ; ಮತ್ತೊಬ್ಬ ಮತ್ತೊಂದು ರೇಖೆಯ ಮೂಲಕ ಹೋಗುವನು. ಎಲ್ಲರೂ ತಮ್ಮ ತಮ್ಮ ದಾರಿಯಲ್ಲಿ ಮುಂದು ವರಿದರೆ ನಾವು ನಿಸ್ಸಂಶಯವಾಗಿ ಕೇಂದ್ರಸೇರುವೆವು. ಏಕೆಂದರೆ ಎಲ್ಲಾ ಮಾರ್ಗಗಳು ಅಲ್ಲಿ ಸಂಧಿಸಬೇಕಾಗಿದೆ. ಪ್ರತಿಯೊಬ್ಬನೂ ತನ್ನ ಸ್ವಭಾವಕ್ಕೆ ಅನುಗುಣವಾಗಿ ವಿಕಾಸವಾಗುತ್ತಿರುವನು. ಕೊನೆಗೆ ಪ್ರತಿಯೊಬ್ಬನೂ ಶ್ರೇಷ್ಠಸತ್ಯವನ್ನು ಅರಿತೇ ಅರಿಯುವರು. ಮನುಷ್ಯ ಅಂತೂ ತನಗೆ ತಾನೆ ಕಲಿತುಕೊಳ್ಳಬೇಕಾಗಿದೆ. ನಾನು ನೀವು ಏನು ಮಾಡಬಲ್ಲೆವು ? ಒಂದು ಮಗುವಿಗಾದರೂ ನೀವು ಕಲಿಸುತ್ತೀರಿ ಎಂದು ಭಾವಿಸಿದಿರಾ? ಅದೆಂದಿಗೂ ನಿಮಗೆ ಸಾಧ್ಯವಾಗಲಾರದು. ಮಗು ತನಗೆ ತಾನೆ ಕಲಿತುಕೊಳ್ಳುವುದು. ನಿಮ್ಮ ಕರ್ತವ್ಯ ಅದಕ್ಕೆ ಅವಕಾಶಕಲ್ಪಿಸುವುದು, ಇರುವ ಆತಂಕವನ್ನು ತೆಗೆಯುವುದು ಮಾತ್ರ. ಒಂದು ಸಸಿ ಬೆಳೆಯುವುದು. ನೀವು ಗಿಡವನ್ನು ಬೆಳೆಯುವಂತೆ ಮಾಡುತ್ತೀರ ? ಅದರ ಸುತ್ತಲೂ ಒಂದು ಬೇಲಿ ಕಟ್ಟಿ ದನ ತಿನ್ನದಿರಲಿ ಎಂದು ನೋಡಿಕೊಳ್ಳುವುದನ್ನು ಮಾಡಿದರೆ ನಿಮ್ಮ ಕರ್ತವ್ಯ ಕೊನೆಗಾಣುವುದು. ಗಿಡ ತನ್ನ ನಿಯಮಾನುಸಾರ ಬೆಳೆಯುವುದು. ಯಾರೂ ನಿನಗೆ ಕಲಿಸಲಾರರು. ಯಾರೂ ನಿನ್ನನ್ನು ಆಧ್ಯಾತ್ಮಿಕ ಜೀವಿ

ಯನ್ನಾಗಿ ಮಾಡಲಾರರು. ನೀನೆ ಹಾಗೆ ಆಗಬೇಕಾಗಿದೆ. ನಿಮ್ಮ ಬೆಳವಣಿಗೆ ನಿಮ್ಮಿಂದಲೇ ಆಗಬೇಕಾಗಿದೆ.

ಬಾಹ್ಯಗುರು ಏನು ಮಾಡಬಲ್ಲ? ಆತಂಕವನ್ನು ಸ್ವಲ್ಪ ನಿವಾರಿಸಬಲ್ಲ. ಅಲ್ಲಿ ಅವನ ಕರ್ತವ್ಯ ಕೊನೆಗಾಣುವುದು. ಸಾಧ್ಯವಾದರೆ ಸಹಾಯಮಾಡಿ; ಆದರೆ ಎಂದಿಗೂ ನಾಶಮಾಡಬೇಡಿ. ನೀವು ಜನರನ್ನು ಆಧ್ಯಾತ್ಮಿಕಜೀವಿಗಳನ್ನಾಗಿ ಮಾಡುತ್ತೀರಿ ಎಂಬ ಭಾವನೆಯನ್ನು ತ್ಯಜಿಸಿ. ಇದು ಅಸಾಧ್ಯ. ನಿಮ್ಮ ಆತ್ಮ ವಿನಃ ಬೇರೊಬ್ಬ ಗುರು ನಿಮಗಿಲ್ಲ. ಇದನ್ನು ಒಪ್ಪಿಕೊಳ್ಳಿ. ಇದರ ಪರಿಣಾಮ ಏನಾಗುವುದು ? ಸಮಾಜದಲ್ಲಿ ಹಲವು ಪ್ರಕೃತಿಯವರನ್ನು ನೋಡುವೆವು. ಸಹಸ್ರಾರು ಸ್ವಭಾವದವರಿರುವರು, ಭಿನ್ನಪ್ರಕೃತಿಯರಿರುವರು. ಅವರನ್ನೆಲ್ಲ ವರ್ಗೀಕರಿಸುವುದಕ್ಕೆ ಅಸಾಧ್ಯ. ಆದರೆ ನಮ್ಮ ವ್ಯವಹಾರದೃಷ್ಟಿಯಿಂದ ಅವರನ್ನು ನಾಲ್ಕು ವರ್ಗಗಳಾಗಿ ವಿಭಾಗಿಸಬಹುದು. ಮೊದಲು ಚಟುವಟಿಕೆಯ ಸ್ವಭಾವದ ಕರ್ಮಿ ಇರುವನು. ಅವನು ಕೆಲಸಮಾಡಬೇಕೆಂದು ಇಚ್ಛಿಸುವನು. ಕೆಲಸಮಾಡುವುದಕ್ಕೆ ಬೇಕಾದಷ್ಟು ಮಾನಸಿಕ ಶಾರೀರಕ ಶಕ್ತಿಗಳಿವೆ. ಕರ್ಮ ಮಾಡುವುದೆ ಅವನ ಗುರಿ. ಔಷಧಾಲಯ ಕಟ್ಟಿಸಬೇಕು, ಪರೋಪಕಾರ ಮಾಡಬೇಕು, ದಾರಿಮಾಡಿಸಬೇಕು, ಯೋಜನೆ ತಯಾರಿಸುವುದು, ಅದನ್ನು ಕಾರ್ಯರೂಪಕ್ಕೆ ತರುವುದು ಇದರಲ್ಲಿ ನಿರತನಾಗಿರುವನು. ಭಾವ ಜೀವಿ ಇರುವನು; ಅವನು ಭವ್ಯವಾದುದನ್ನು ಸುಂದರವಾದುದನ್ನು ಮಿತಿಮೀರಿ ಪ್ರೀತಿಸುವನು. ಸುಂದರವಾಗಿರುವುದನ್ನು ಕುರಿತು ಆಲೋಚಿಸಲು ಅವನಿಗೆ ಆಸೆ; ಪ್ರಕೃತಿಯ ರಮ್ಯ ಮನೋಹರ ದೃಶ್ಯಗಳನ್ನು ನೋಡಿ ಆನಂದಿಸುವ ಆಸೆ. ಪ್ರಕೃತಿಯಮೇಲೆ ಪರಮಾಸಕ್ತಿ. ಪ್ರೇಮೇಶ್ವರನಾದ ದೇವರನ್ನು ಪ್ರೀತಿಸುವನು. ಹೃತ್ಪೂರ್ವಕ ಎಲ್ಲಾ ಕಾಲದ ಮಹಾಪುರುಷರನ್ನು ದೇವದೂತರನ್ನು ಅವತಾರಗಳನ್ನು ಪ್ರೀತಿಸುವನು. ಯುಕ್ತಿ, ಕ್ರಿಸ್ತ ಅಥವಾ ಬುದ್ಧನಿದ್ದ ಎಂದು ತೋರುವುದೆ ಇಲ್ಲವೆ ಎನ್ನುವುದನ್ನು ಅವನು ಲೆಕ್ಕಿಸುವುದೇ ಇಲ್ಲ. ಖಚಿತವಾಗಿ ಯಾವ ದಿನ ಗುಡ್ಡದಮೇಲೆ ಉಪನ್ಯಾಸವನ್ನು ಕ್ರಿಸ್ತ ಮಾಡಿದ ಎಂಬುದನ್ನು ಅವನು ಗಣನೆಗೇ ತರುವುದಿಲ್ಲ. ಸರಿಯಾಗಿ ಯಾವ ಕಾಲದಲ್ಲಿ ಶ್ರೀಕೃಷ್ಣ ಹುಟ್ಟಿದ ಎಂದು ತಿಳಿಯಲೂ ಅವನಿಗೆ ಆಸಕ್ತಿ ಇಲ್ಲ. ಅವನಿಗೆ ಬೇಕಾಗಿರುವುದು ವ್ಯಕ್ತಿ, ಪ್ರೀತಿಸಲು ಯೋಗ್ಯವಾದ ಆಕಾರ, ಅವನ ಆದರ್ಶ ಇದು. ಭಾವಜೀವಿಯಾದ ಭಕ್ತನ ಸ್ವಭಾವ ಇದು. ಅನಂತರ ಯೋಗಿ ಇರುವನು.

ಅವನು ತನ್ನ ಮನಸ್ಸನ್ನೇ ವಿಭಜನೆ ಮಾಡಿ ಮನಸ್ಸು ಹೇಗೆ ಕೆಲಸ ಮಾಡುತ್ತಿದೆ ಎಂಬುದನ್ನು ತಿಳಿಯಲು ಇಚ್ಛಿಸುವನು. ಯಾವಯಾವ ಶಕ್ತಿಗಳು ಅಂತರಾಳದಲ್ಲಿ ಕೆಲಸ ಮಾಡುತ್ತಿವೆ, ಅವನ್ನು ಹೇಗೆ ತಿಳಿದು ಕೊಳ್ಳುವುದು, ಸ್ವಾಧೀನಕ್ಕೆ ತರುವುದು, ಅದರಿಂದ ಹೇಗೆ ಉಪಯೋಗ ವನ್ನು ಪಡೆಯುವುದು ಇದನ್ನೆಲ್ಲ ತಿಳಿಯಲು ಆಶಿಸುವನು. ಇದು ಯೋಗಿಯ ಮನಸ್ಸು. ಅನಂತರ ತತ್ತ್ವಜ್ಞಾನಿ ಇರುವನು; ಪ್ರತಿ ಯೊಂದನ್ನೂ ವಿಮರ್ಶಿಸಲಿಚ್ಛಿಸುವನು. ಎಲ್ಲ ತತ್ತ್ವಾತೀತವಾದುದನ್ನು ಯುಕ್ತಿಯ ಮೂಲಕ ತಿಳಿಯಲಿಚ್ಛಿಸುವನು.

ಒಂದು ಧರ್ಮ ಮಾನವಕೋಟಿಯ ಬಹುಪಾಲು ಜನರನ್ನು ತೃಪ್ತಿ ಪಡಿಸಬೇಕಾದರೆ, ಇಂತಹ ವಿಭಿನ್ನ ಪ್ರಕೃತಿಯವರಿಗೆಲ್ಲ ಸಹಾಯಕವಾಗಿರ ಬೇಕು. ಇದು ಎಲ್ಲಿ ಸಾಧ್ಯವಿಲ್ಲವೊ ಅಲ್ಲಿ ಇರುವ ಧರ್ಮ ಸಂಕುಚಿತ ವಾಗುವುದು. ಪ್ರೀತಿ ಭಕ್ತಿಯನ್ನು ಬೋಧಿಸುವ ಒಂದು ಪಂಗಡಕ್ಕೆ ಹೋದಿರಿ ಎಂದು ಭಾವಿಸೋಣ. ಅವರು ಹಾಡುವರು, ಅಳುವರು, ಭಕ್ತಿಯನ್ನು ಬೋಧಿಸುವರು. ಆದರೆ ನೀವು, "ಸ್ನೇಹಿತನೆ, ಅದೇನೊ ಸರಿ, ನನಗೆ ಇದಕ್ಕಿಂತ ಸ್ವಲ್ಪ ಶಕ್ತಿವರ್ಧಕವಾಗಿರುವುದು ಬೇಕು; ನನಗೆ ಸ್ವಲ್ಪ ತತ್ತ್ವ ಬೇಕು, ಯುಕ್ತಿ ಬೇಕು, ನಾನು ಪ್ರತಿಯೊಂದನ್ನೂ ಕ್ರಮ ವಾಗಿ ವಿಚಾರಸರಣಿಯ ಮೂಲಕ ತಿಳಿಯಲಿಚ್ಛಿಸುವೆ" ಎಂದರೆ, "ತೊಲಗು" ಎನ್ನುವರು ಅವರು. ತೊಲಗಿ ಆಚೆ ಎಂದು ಹೇಳುವುದು ಮಾತ್ರವಲ್ಲ, ಸಾಧ್ಯವಾದರೆ ನಿಮ್ಮನ್ನು ಪರಲೋಕಕ್ಕೆ ಕಳುಹಿಸಲೂ ಸಿದ್ಧ ರಾಗಿರುವರು. ಇದರ ಪರಿಣಾಮವಾಗಿ ಏನಾಗುವುದೆಂದರೆ ಆ ಪಂಗಡ ಕೇವಲ ಭಾವಜೀವಿಗಳಿಗೆ ಮಾತ್ರ ಸಹಾಯಮಾಡಬಲ್ಲುದು, ಇತರರಿಗೆ ಸಹಾಯ ಮಾಡದಿರುವುದು ಮಾತ್ರವಲ್ಲ, ಅವರನ್ನು ನಾಶಮಾಡಲು ಹವಣಿ ಸುವರು. ಇದರಲ್ಲೆಲ್ಲ ಬಹಳ ನೀಚವಾದುದ್ದೆ, ಇತರರಿಗೆ ಸಹಾಯ ಮಾಡದಿರುವುದು ಮಾತ್ರವಲ್ಲ, ಅದರ ಪ್ರಾಮಾಣಿಕತೆಯಲ್ಲಿಯೂ ನಂಬು ವುದಿಲ್ಲ. ಅನಂತರ ವೇದಾಂತಿಗಳಿರುವರು. ಭರತಖಂಡದ ಮತ್ತು ಪೌರಾತ್ಯ ಧರ್ಮದ ವಿಷಯ ಕುರಿತು ಮಾತನಾಡುವರು. ದೊಡ್ಡದೊಡ್ಡ ಐವತ್ತು ಮಾತ್ರೆಗಳುಳ್ಳ ಮಾನಸಿಕ ಶಾಸ್ತ್ರದ ಪದಗಳನ್ನು ಉಪಯೋಗಿಸುವರು. ನನ್ನಂತಹ ಒಬ್ಬ ಸಾಧಾರಣ ಮನುಷ್ಯ ಅವರ ಹತ್ತಿರ ಹೋಗಿ "ಆಧ್ಯಾತ್ಮಿಕ ಪ್ರವೃತ್ತಿಯವರಾಗಲು ನನಗೆ ಏನನ್ನಾದರೂ ಹೇಳುತ್ತೀರಾ?" ಎಂದು ಪ್ರಶ್ನೆಮಾಡಿದರೆ ಅವರು ಮೊದಲುಮಾಡುವುದೆ ನಿಮ್ಮನ್ನು ನೋಡಿ ನಗು

ವುದು. "ಓ, ಬುದ್ಧಿಯಲ್ಲಿ ನೀನು ನಮಗಿಂತ ಬಹಳ ಕೀಳು ತತ್ತ್ವವನ್ನು ಹೇಗೆ ತಿಳಿಯಬಲ್ಲೆ ?" ಎನ್ನುವರು. ಇವರೇ ಮೇಧಾವಿ, ಉಚ್ಚವರ್ಗದ ತಾತ್ತ್ವಿಕರು. ಬಂದ ದಾರಿಯಲ್ಲಿ ಹಿಂತಿರುಗಿ ಹೋಗು ವುದಕ್ಕೆ ಹೇಳುವರು. ಅನಂತರ ಯೋಗಿಗಳ ಪಂಗಡದವರು ಇರುವರು. ಹಲವು ಲೋಕ, ಮನಸ್ಸಿನ ಹಲವು ಸ್ಥಿತಿ, ಮನೋಶಕ್ತಿ ಯಾವುಯಾವು ದನ್ನು ಸಾಧಿಸಬಲ್ಲುದು ಎಂಬುದನ್ನು ಕುರಿತು ಮಾತನಾಡುತ್ತಿರುವರು. ನೀವು ಸಾಧಾರಣ ಮನುಷ್ಯರಾಗಿದ್ದು ಅವರನ್ನು "ನಾನು ಏನಾದರೂ ಒಳ್ಳೆಯದನ್ನು ಮಾಡುವುದಕ್ಕೆ ಸಾಧ್ಯವಿದ್ದರೆ ಹೇಳಿ, ನಾನು ಹೆಚ್ಚು ಕಲ್ಪನಾಜೀವಿಯಲ್ಲ, ನನಗೆ ಯೋಗ್ಯವಾದುದನ್ನು ಕೊಡಬಲ್ಲಿರಾ" ಎಂದು ಕೇಳಿದರೆ ಅವರು ನಗುವರು. "ಕೇಳಿ ಆ ಮೂರ್ಖನ ಮಾತನ್ನು, ಅವನಿಗೆ ಏನೂ ಗೊತ್ತಿಲ್ಲ, ಅವನ ಬಾಳು ವ್ಯರ್ಥ" ಎನ್ನುವರು. ಇದು ಪ್ರಪಂಚದಲ್ಲೆಲ್ಲ ನಡೆಯುತ್ತಿದೆ. ಈ ವಿಭಿನ್ನ ಪಂಥವನ್ನು ಸಾಧಿಸುವ ತೀವ್ರಗಾಮಿಗಳನ್ನೆಲ್ಲ ಒಂದು ಕೋಣೆಯಲ್ಲಿ ಸೇರಿಸಿ ಅವರ ಸುಂದರವಾದ ಅಣಕಿಸುವ ನಗೆಯ ಭಾವಚಿತ್ರವನ್ನು ತೆಗೆಯ ಬೇಕೆಂದಿರುವೆನು!

ಇದೇ ಧಾರ್ಮಿಕ ಸ್ಥಿತಿ. ಎಲ್ಲರ ಸ್ವೀಕಾರಕ್ಕೂ ಯೋಗ್ಯವಾಗಿರು ವಂತಹ ಧರ್ಮವನ್ನು ನಾನು ಪ್ರಚಾರಮಾಡಬೇಕೆಂದಿರುವೆನು. ಅದು ತಾತ್ತ್ವಿಕವಾಗಿರಬೇಕು, ಭಕ್ತಿಯುಕ್ತವಾಗಿರಬೇಕು, ಯೋಗಸಹಿತವಾ ಗಿರಬೇಕು, ಕ್ರಿಯೋತ್ತೇಜನಕಾರಿಯಾಗಿರಬೇಕು. ಕಾಲೇಜಿನ ಅಧ್ಯಾ ಪಕರು, ವೈಜ್ಞಾನಿಕರು, ಭೌತಶಾಸ್ತ್ರಜ್ಞರು ಬಂದರೆ ಅವರು ಯುಕ್ತಿಯನ್ನು ಆಶಿಸುವರು. ಬೇಕಾದಷ್ಟು ಯುಕ್ತಿಯನ್ನು ಅವರು ಪಡೆಯಲಿ. ಒಂದು ಸ್ಥಳ ದಾಚೆ ಯುಕ್ತಿಯಿಂದ ಪಾರಾದಲ್ಲದೆ ಮುಂದುವರಿಯಲು ಸಾಧ್ಯವಿಲ್ಲವೆಂದು ಅವರಿಗೆ ಗೊತ್ತಾಗುವುದು. ಅವರು "ದೇವರು ಮೋಕ್ಷ ಎಂಬ ಭಾವನೆ ಗಳೆಲ್ಲ ಮೂಢನಂಬಿಕೆ ಇವನ್ನೆಲ್ಲ ತ್ಯಜಿಸಿ" ಎನ್ನುವರು. ನಾನು "ಅಯ್ಯಾ, ತಾತ್ತ್ವಿಕ, ನಿನ್ನ ದೇಹವೆ ದೊಡ್ಡ ಮೂಢನಂಬಿಕೆ ಅದನ್ನು ತ್ಯಜಿಸು. ಊಟಕ್ಕೆ ಮನೆಗೂ ಹೋಗಬೇಡ, ಪಾಠಕ್ಕೆ ಕಾಲೇಜಿಗೂ ಹೋಗಬೇಡ, ಅದನ್ನು ತ್ಯಜಿಸಲು ಸಾಧ್ಯವಿಲ್ಲದಿದ್ದರೆ ಸೋತೆನೆಂದು ತೆಪ್ಪಗೆ ಕುಳಿತುಕೊ" ಎನ್ನುವೆನು. ಈ ಪ್ರಪಂಚ ಒಂದು, ಇಲ್ಲೆಲ್ಲ ಒಂದೇ ಅಸ್ತಿತ್ವವಿದೆ ಎಂದು ತತ್ತ್ವ ಸಾರುವುದು. ಧರ್ಮ ಅದನ್ನು ಹೇಗೆ ಅನು ಷ್ಠಾನಕ್ಕೆ ತರಬೇಕೆಂಬುದನ್ನು ತೋರಬಹುದು. ಇದರಂತೆಯೇ ಯೋಗಿ

ಬಂದರೆ ಅವನನ್ನು ಸ್ವಾಗತಿಸಿ, ಅವನಿಗೆ ಮನೋವಿಭಜನೆಯ ಶಾಸ್ತ್ರವನ್ನು ಬೋಧಿಸಿ ಅದನ್ನು ಅನುಷ್ಠಾನದಲ್ಲಿ ಪ್ರದರ್ಶಿಸಬೇಕು. ಭಾವಜೀವಿಗಳು ಬಂದರೆ ನಾವೂ ಅವರೊಡನೆ ಕುಳಿತು, ದೇವರ ಹೆಸರಿನಲ್ಲಿ ನಗಬೇಕು, ಅಳಬೇಕು, ಪ್ರೇಮಾಮೃತವನ್ನು ಹೀರಿ ಉನ್ಮತ್ತರಾಗಬೇಕು. ಒಬ್ಬ ಕರ್ಮಪಟು ಬಂದರೆ ನಮ್ಮ ಶಕ್ತಿಮೀರಿ ಅವನೊಂದಿಗೆ ಕರ್ಮಮಾಡಲು ಸಿದ್ಧರಾಗಿರಬೇಕು. ಇವುಗಳ ಸಮ್ಮಿಶ್ರಣವೆ ವಿಶ್ವಧರ್ಮಕ್ಕೆ ಅತಿ ಸಮೀಪ ದಲ್ಲಿರುವ ಆದರ್ಶ. ದೇವರ ದಯೆಯಿಂದ ಎಲ್ಲರಲ್ಲಿಯೂ ಜ್ಞಾನ, ಯೋಗ, ಭಕ್ತಿ, ಕರ್ಮಗಳು ಸಮವಾಗಿ ಹೊಂದಿಕೊಂಡಿದ್ದರೆ! ಇದೇ ಆದರ್ಶ; ನನ್ನ ದೃಷ್ಟಿಯಲ್ಲಿ ಪರಿಪೂರ್ಣ ವ್ಯಕ್ತಿಯೊಬ್ಬನ ಆದರ್ಶ. ಯಾರಲ್ಲಿ ಕೇವಲ ಒಂದು ಎರಡು ಇಂತಹ ಗುಣಗಳಿರುವುವೊ ಅವರನ್ನು ಅಪೂರ್ಣರು ಎನ್ನುತ್ತೇನೆ. ಈ ಪ್ರಪಂಚದಲ್ಲಿ ಇಂತಹ ಏಕಪಕ್ಷದವರೇ ಹೆಚ್ಚು. ಅವರಿಗೆ ತಮ್ಮ ಮಾರ್ಗದ ಪರಿಚಯ ಒಂದೇ ಇರುವುದು. ಉಳಿ ದವೆಲ್ಲ ಅವರಿಗೆ ಅಪಾಯಕರ, ಅಸಹ್ಯಕರ. ಈ ನಾಲ್ಕು ಪಥಗಳಲ್ಲಿಯೂ ಸಮನಾಗಿ ಹೊಂದಿಕೊಂಡಿರುವುದೆ ನನ್ನ ಧರ್ಮದ ಆದರ್ಶ. ಇದು ನಮಗೆ ಭರತಖಂಡದಲ್ಲಿ ರೂಢಿಯಲ್ಲಿರುವ ಯೋಗ ಅಥವಾ ಒಂದುಗೂಡಿಸುವುದ ರಿಂದ ಸಿದ್ಧಿಸುವುದು. ಕರ್ಮಯೋಗಿಗೆ ಇದು ವ್ಯಷ್ಟಿ ಸಮಷ್ಟಿಯ ಸಂಗಮ, ಯೋಗಿಗೆ ಇದು ತನ್ನ ಕೆಳಗಿರುವ ಮನಸ್ಸು ಪರಮಾತ್ಮನಲ್ಲಿ ಐಕ್ಯವಾಗುವುದು. ಭಕ್ತನಿಗೆ ಇದು ಭಗವಂತ ಮತ್ತು ಭಕ್ತನ ಐಕ್ಯತೆ, ಜ್ಞಾನಿಗೆ ವಿಶ್ವವೆಲ್ಲದರ ಐಕ್ಯತೆ ಸಿದ್ಧಿಸುವುದು. ಯೋಗ ಎಂದರೆ ಇದೇ ಅರ್ಥ. ಇದು ಸಂಸ್ಕೃತಪದ. ಸಂಸ್ಕೃತದಲ್ಲಿ ನಾಲ್ಕು ಯೋಗಗಳಿಗೂ ಬೇರೆಬೇರೆ ಹೆಸರುಗಳಿವೆ. ಇಂತಹ ಐಕ್ಯತೆಯನ್ನು ಭಕ್ತಿ ಮೂಲಕ ಬಯಸುವವನು ಭಕ್ತಿಯೋಗಿ, ಯೋಗದ ಮೂಲಕ ಬಯಸುವವನು ರಾಜ ಯೋಗಿ, ಜ್ಞಾನದ ಮೂಲಕ ಬಯಸುವವನು ಜ್ಞಾನಯೋಗಿ, ಕರ್ಮದ ಮೂಲಕ ಬಯಸುವವನು ಕರ್ಮಯೋಗಿ. ಯೋಗ ಎಂಬ ಪದದಲ್ಲಿ ಇವುಗಳೆಲ್ಲ ಹುದುಗಿವೆ.

ಮೊದಲು ರಾಜಯೋಗವನ್ನು ತೆಗೆದುಕೊಳ್ಳೋಣ. ಮನೋ ನಿಗ್ರಹ ಅಥವಾ ರಾಜಯೋಗ ಎಂದರೇನು? ಈ ದೇಶದಲ್ಲಿ ಯೋಗ ಎಂಬ ಪದಕ್ಕೆ ಕೆಲಸಕ್ಕೆ ಬಾರದ ಅರ್ಥಗಳ ಸಂಬಂಧವೆಲ್ಲ ಇದೆ. ಇದಕ್ಕೂ ಯೋಗಕ್ಕೂ ಯಾವ ಸಂಬಂಧವೂ ಇಲ್ಲವೆಂದು ನಾನು ಪ್ರಾರಂಭಿಸಬೇಕಾ ಗಿದೆ. ಇವುಗಳಲ್ಲಿ ಯಾವ ಯೋಗವೂ ಯುಕ್ತಿಯನ್ನು ಆಚೆಗೆಸೆಯಿರಿ

ಎನ್ನುವುದಿಲ್ಲ. ಮೋಸಹೋಗಿ ಅಥವಾ ಪಾದ್ರಿಗಳಿಗೆ ನಿಮ್ಮ ವಿಚಾರ ಜವಾಬ್ದಾರಿಯನ್ನೆಲ್ಲ ಕೊಟ್ಟುಬಿಡಿ ಎನ್ನುವುದಿಲ್ಲ. ಯಾರೋ ಒಬ್ಬ ಅತಿ ಮಾನುಷ ವ್ಯಕ್ತಿಯನ್ನು ಒಪ್ಪಿಕೊಳ್ಳಬೇಕೆಂದು ಇದು ಹೇಳುವುದಿಲ್ಲ. ಯಾರೂ ಯುಕ್ತಿಯನ್ನು ತ್ಯಜಿಸಬೇಡಿ, ಅದನ್ನು ಭದ್ರವಾಗಿ ಹಿಡಿದುಕೊಂಡಿರಿ ಎನ್ನುವುದು. ಪ್ರತಿಯೊಬ್ಬರಲ್ಲಿಯೂ ಜ್ಞಾನಾರ್ಜನೆಗೆ ಮೂರು ಸಾಧನೆಗಳಿರುವುದು ನಮಗೆ ಕಾಣುವುದು. ಮೊದಲನೆಯದು ಹುಟ್ಟುಗುಣ (Instinct). ಪ್ರಾಣಿಗಳಲ್ಲಿ ಇದು ಹೆಚ್ಚು ಅಭಿವೃದ್ಧಿಯಾಗಿದೆ. ಇದೇ ಜ್ಞಾನದ ಅತಿ ಕೀಳು ಕರಣ. ಎರಡನೆಯ ಕರಣ ಯಾವುದು ? ಯುಕ್ತಿ. ಮನುಷ್ಯನಲ್ಲಿ ಇದು ತನ್ನ ಪರಾಕಾಷ್ಠತೆ ಮುಟ್ಟದೆ, ಮೊದಲನೆಯದಾದ ಹುಟ್ಟುಗುಣ ಸಾಕಾಗುವುದಿಲ್ಲ. ಪ್ರಾಣಿಗಳಿಗೆ ಕಾರ್ಯಕ್ಷೇತ್ರ ಅತಿಕಿರಿದು. ಆ ಅಲ್ಪಕ್ಷೇತ್ರದಲ್ಲಿ ಅದು ಕೆಲಸಮಾಡುವುದು. ಮನುಷ್ಯನನ್ನು ತೆಗೆದುಕೊಂಡರೆ ಅದು ಯುಕ್ತಿಯಾಗಿ ಪರಿಣಾಮವಾಗಿರುವುದು. ಕಾರ್ಯವಲಯ ಇಲ್ಲಿ ವಿಸ್ತಾರವಾಗಿದೆ. ಆದರೂ ಯುಕ್ತಿ ಕೂಡ ಸಾಲದು. ಯುಕ್ತಿ ಸ್ವಲ್ಪದೂರ ಮುಂದೆ ಹೋಗಿ ಅಲ್ಲಿ ನಿಲ್ಲುವುದು. ಅದು ಇನ್ನು ಮುಂದಕ್ಕೆ ಹೋಗಲಾರದು. ಇನ್ನೂ ಅದನ್ನು ಮುಂದುವರಿಸಿದರೆ ಅದು ಭ್ರಾಂತಿಯಲ್ಲಿ ಪರ್ಯವಸಾನವಾಗುವುದು. ಯುಕ್ತಿ ಅಯುಕ್ತವಾಗುವುದು. ತರ್ಕ ವೃತ್ತದಲ್ಲಿ ಕೊನೆಗಾಣುವುದು. ಉದಾಹರಣೆಗೆ ನಮ್ಮ ಗ್ರಹಣಕ್ಕೆ ಮೂಲವಾದ ದ್ರವ್ಯ ಮತ್ತು ಶಕ್ತಿಯನ್ನು ತೆಗೆದುಕೊಳ್ಳಿ. ದ್ರವ್ಯವೆಂದರೇನು ? ಯಾವುದು ಶಕ್ತಿಯ ಪ್ರಭಾವಕ್ಕೆ ಒಳಗಾಗುವುದೊ ಅದು. ಶಕ್ತಿ ಎಂದರೇನು ? ದ್ರವ್ಯದಮೇಲೆ ಪರಿಣಾಮಕಾರಿಯಾದುದು. ಈ ಜಟಿಲತೆಯನ್ನು ನೋಡಿ. ನ್ಯಾಯದಲ್ಲಿ ಇದನ್ನು ಅನ್ಯೋನ್ಯ ಆಶ್ರಯ ಎನ್ನುತ್ತಾರೆ. ಯುಕ್ತಿಯ ಮುಂದೆ ದೊಡ್ಡದೊಂದು ಆತಂಕವಿದೆ. ಇದನ್ನು ಯುಕ್ತಿ ಮೀರಿಹೋಗಲಾರದು. ಆದರೂ ಯಾವಾಗಲೂ ಅನಂತದೆಡೆಗೆ ಧಾವಿಸುವುದಕ್ಕೆ ಯುಕ್ತಿ ಕಾತರವಾಗಿರುವುದು. ನಮ್ಮ ಇಂದ್ರಿಯಗಳು ಅನುಭವಿಸುವ, ಮನಸ್ಸು ಆಲೋಚಿಸುವ ಪ್ರಪಂಚ, ಅನಂತದ ಒಂದು ಅಂಶ. ಇದು ಮಾತ್ರ ನಮ್ಮ ಅರಿವಿಗೆ ನಿಲುಕಿದೆ. ನಮ್ಮ ಪ್ರಜ್ಞೆಯ ಬಲೆಗೆ ನಿಲುಕಿದ ಈ ಸಣ್ಣ ಬಲೆಯಲ್ಲಿ ಮಾತ್ರ ನಮ್ಮ ಯುಕ್ತಿ ಕೆಲಸಮಾಡುವುದು. ಇದನ್ನು ಮೀರಿ ಹೋಗಲಾರದು. ನಮ್ಮನ್ನು ಇದರಾಚೆ ಒಯ್ಯಬೇಕಾದರೆ ಮತ್ತೊಂದು ಸಾಧನವಿರಬೇಕು. ಅದೇ ಸ್ಫೂರ್ತಿ (Intution). ಹುಟ್ಟುಗುಣ, ಯುಕ್ತಿ

ಮತ್ತು ಸ್ಫೂರ್ತಿ. ಈ ಮೂರೂ ಜ್ಞಾನ ಸಾಧನಗಳು. ಹುಟ್ಟುಗುಣ ಪ್ರಾಣಿಗಳಿಗೆ ಸೇರಿದ್ದು, ಯುಕ್ತಿ ಮನುಷ್ಯನಿಗೆ ಸೇರಿದ್ದು. ಸ್ಫೂರ್ತಿ ದೇವಮಾನವರಿಗೆ ಸೇರಿದ್ದು. ಎಲ್ಲಾ ಮಾನವ ಜೀವಿಗಳಲ್ಲಿಯೂ ಈ ಮೂರು ಯಂತ್ರಗಳೂ ಸ್ವಲ್ಪ ಹೆಚ್ಚು ಕಡಿಮೆ ಪ್ರಬುದ್ಧವಾಗಿರುವುದನ್ನು ನೋಡುತ್ತೇವೆ. ಈ ಮಾನಸಿಕ ಕರಣಗಳು ವಿಕಾಸವಾಗಬೇಕಾದರೆ ಆಗಲೆ ಅವುಗಳ ಬೀಜ ಅಲ್ಲಿರಬೇಕು. ನಾವು ಇದನ್ನು ಕೂಡ ಗಮನ ದಲ್ಲಿಡಬೇಕು, ಒಂದು ಮತ್ತೊಂದರ ಪೂರ್ತಿಕೆ, ಅಭಿವೃದ್ಧಿ, ಒಂದು ಮತ್ತೊಂದನ್ನು ವಿರೋಧಿಸುವುದಿಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ಯುಕ್ತಿ ಸ್ಫೂರ್ತಿಯಾಗುವುದು. ಆದಕಾರಣವೆ ಸ್ಫೂರ್ತಿ ಯುಕ್ತಿಯನ್ನು ವಿರೋಧಿಸುವುದಿಲ್ಲ, ಪೂರ್ಣಗೊಳಿಸುವುದು. ಯುಕ್ತಿಗೆ ಯಾವುದು ನಿಲುಕುವುದಿಲ್ಲವೊ ಅದು ಸ್ಫೂರ್ತಿಯಿಂದ ಬೆಳಕಿಗೆ ಬರುವುದು, ಅದು ಯುಕ್ತಿಯನ್ನು ವಿರೋಧಿಸುವುದಿಲ್ಲ. ವೃದ್ಧ ಮಗುವನ್ನು ವಿರೋಧಿಸು ವುದಿಲ್ಲ. ಅದರ ಪೂರ್ತಿಕೆ ಇವನು. ಆದಕಾರಣವೇ ಕೆಳಗಿನ ಕರಣವೇ ಮೇಲಿನ ಕರಣವೆಂದು ತಪ್ಪುತಿಳಿದುಕೊಳ್ಳುವುದೆ ಇರುವ ದೊಡ್ಡ ಅಪಾಯ ಎಂಬುದನ್ನು ನೀವು ಯಾವಾಗಲೂ ನೆನಪಿನಲ್ಲಿಟ್ಟರಬೇಕು. ಅನೇಕರು ಹುಟ್ಟುಗುಣವನ್ನು ಸ್ಫೂರ್ತಿ ಎನ್ನುವರು. ಅನಂತರ ಭವಿಷ್ಯ ಹೇಳು ವುದಕ್ಕೆ ತಮಗೆ ಅಧಿಕಾರವಿದೆ ಎಂದು ವಂಚಿಸುವರು. ಮೂರ್ಖ ಅಥವಾ ಮರುಳ ತನ್ನ ಮನಸ್ಸಿನಲ್ಲಾಗುತ್ತಿರುವ ಆಂದೋಳನವನ್ನು ಸ್ಫೂರ್ತಿ ಎಂದು ಭಾವಿಸುವನು. ಜನ ತನ್ನನ್ನು ಅನುಸರಿಸಬೇಕು ಎನ್ನುವನು. ಪ್ರಪಂಚದಲ್ಲಿ ಬೋಧಿಸಿದ ಅತಿಪರಸ್ಪರ ವಿರೋಧಭಾವಗಳನ್ನೊಳಗೊಂಡ ಅಯುಕ್ತವಿಷಯಗಳು ಬುದ್ಧಿಕೆಟ್ಟವರು ಸ್ಫೂರ್ತಿ ಹೆಸರಿನಲ್ಲಿ ಆಡಿದ ಹುಟ್ಟುಗುಣದ ಅಸಂಭವ ಪ್ರಲಾಪ.

ನಿಜವಾದ ಬೋಧನೆಯ ಪ್ರಥಮ ಲಕ್ಷಣವೆ, ಅದು ಯುಕ್ತಿಯನ್ನು ವಿರೋಧಿಸಕೂಡದು. ಎಲ್ಲಾ ಯೋಗಗಳ ತಳಹದಿಯೆ ಇದು ಎಂಬುದನ್ನು ನೀವು ನೋಡುವಿರಿ. ರಾಜಯೋಗದಲ್ಲಿ ಮಾನಸಿಕ ವಿಭಜನೆಯ ಮೂಲಕ ಐಕ್ಯತೆಗೆ ಸೇರುವೆವು. ಇದು ದೊಡ್ಡ ವಿಷಯ. ಈಗ ನಾನು ನಿಮಗೆ ಈ ಯೋಗದ ಕೇಂದ್ರಭಾವನೆಯನ್ನು ಮಾತ್ರ ತೋರಬಲ್ಲೆ. ಜ್ಞಾನಾರ್ಜ ನೆಗೆ ನಮಗೆ ಒಂದೇ ಮಾರ್ಗವಿರುವುದು. ಅತಿಕೀಳು ಮನುಷ್ಯನಿಂದ ಮಹೋತ್ತಮ ಯೋಗಿಯವರೆಗೆ ಎಲ್ಲರೂ ಒಂದೆ ಮಾರ್ಗವನ್ನು ಅನುಸರಿಸ ಬೇಕಾಗಿದೆ. ಅದನ್ನೇ ಏಕಾಗ್ರತೆ ಎನ್ನುವುದು. ಪ್ರಯೋಗಶಾಲೆಯಲ್ಲಿ

ಕೆಲಸಮಾಡುವ ವಿಜ್ಞಾನಿ ತನ್ನ ಮನಸ್ಸನ್ನೆಲ್ಲ ಕೇಂದ್ರೀಗೊಳಿಸಿ ದ್ರವ್ಯಗಳ ಮೇಲೆ ಬೀರುವನು. ದ್ರವ್ಯಗಳು ತಮ್ಮ ರಹಸ್ಯವನ್ನು ಹೊರಗೆಡುವುವು. ಅವನ ಜ್ಞಾನ ಬರುವುದು ಹೀಗೆ. ಖಗೋಳಶಾಸ್ತ್ರಜ್ಞ ಕೂಡ ತನ್ನ ಮನಸ್ಸನ್ನು ಕೇಂದ್ರೀಗೊಳಿಸಿ ವಸ್ತುಗಳಮೇಲೆ ಟೆಲಿಸ್ಕೋಪಿನಮೂಲಕ ಬೀರುವನು. ತಾರೆ ನೀಹಾರಿಕೆಗಳು ಮುಂದೆ ಬಂದು ತಮ್ಮ ರಹಸ್ಯವನ್ನು ಅವನಿಗೆ ನೀಡುವುವು. ಇದರಂತೆಯೇ ಪ್ರತಿಯೊಬ್ಬರೂ ಕೂಡ. ಕುರ್ಚಿಯ ಮೇಲೆ ಕುಳಿತ ಪ್ರಾಧ್ಯಾಪಕ, ಪುಸ್ತಕದೊಡನೆ ಕುಳಿತ ವಿದ್ಯಾರ್ಥಿ ಮತ್ತು ಜ್ಞಾನಾರ್ಜನೆಗೆ ಹವಣಿಸುತ್ತಿರುವ ಪ್ರತಿಯೊಬ್ಬರೂ ಕೂಡ ಹಾಗೆಯೆ. ನೀವು ನನ್ನನ್ನು ಕೇಳುತ್ತಿರುವಿರಿ. ನನ್ನ ಮಾತಿನಲ್ಲಿ ನಿಮಗೆ ಉತ್ಸಾಹ ವಿದ್ದರೆ ನಿಮ್ಮ ಮನಸ್ಸು ಅದರಮೇಲೆ ಏಕಾಗ್ರವಾಗುವುದು. ಆಗ ಗಡಿಯಾರ ಗಂಟೆ ಹೊಡೆದರೆ ನಿಮ್ಮ ಮನಸ್ಸು ನಾವು ಹೇಳುವುದರಮೇಲೆ ಏಕಾಗ್ರವಾಗಿರುವುದರಿಂದ ಶಬ್ದ ಕೇಳುವುದಿಲ್ಲ. ನೀವು ಮನಸ್ಸನ್ನು ಎಷ್ಟು ಏಕಾಗ್ರಮಾಡಿದರೆ ಅಷ್ಟು ಹೆಚ್ಚು ನೀವು ವಿಷಯವನ್ನು ತೆಗೆದು ಕೊಳ್ಳುವಿರಿ. ನನ್ನ ಪ್ರೀತಿ ಶಕ್ತಿಗಳನ್ನು ಎಷ್ಟು ಏಕಾಗ್ರಮಾಡಿದರೆ ಅಷ್ಟು ಹೆಚ್ಚು ನೀವು ವಿಷಯವನ್ನು ತೆಗೆದುಕೊಳ್ಳುವಿರಿ. ನನ್ನ ಪ್ರೀತಿ ಶಕ್ತಿಗಳನ್ನು ಎಷ್ಟು ಏಕಾಗ್ರಗೊಳಿಸಿದರೆ ಅಷ್ಟು ಚೆನ್ನಾಗಿ ನಿಮಗೆ ನಾನು ಹೇಳಬಲ್ಲೆ. ಹೆಚ್ಚು ಏಕಾಗ್ರತೆ ಇದ್ದಷ್ಟು ಹೆಚ್ಚು ಜ್ಞಾನಾರ್ಜನೆಯಾಗು ವುದು. ಇದೊಂದೇ ಜ್ಞಾನಾರ್ಜನೆಗೆ ಇರುವ ಏಕಮಾತ್ರ ಮಾರ್ಗ. ಬೂಟ್ಸಿಗೆ ಬಣ್ಣ ಹಾಕುವ ಅತಿ ಹೀನಮನುಜ ಕೂಡ ಹೆಚ್ಚು ಏಕಾಗ್ರತೆ ಉಪಯೋಗಿಸಿದರೆ ಅಷ್ಟು ಚೆನ್ನಾಗಿ ಬೂಟ್ಸನ್ನು ತಿಕ್ಕಬಲ್ಲ, ಅಡಿಗೆ ಮಾಡುವವನು ಹೆಚ್ಚು ಏಕಾಗ್ರತೆ ಇದ್ದಷ್ಟೂ ಅಷ್ಟು ಚೆನ್ನಾಗಿ ಅಡಿಗೆ ಮಾಡಬಲ್ಲ. ದ್ರವ್ಯಾರ್ಜನೆಯಾಗಲಿ, ದೇವರ ಪೂಜೆಯಾಗಲಿ ಅಥವಾ ಮತ್ತಾವ ಕೆಲಸವಾದರೂ ಆಗಲಿ ಹೆಚ್ಚು ಏಕಾಗ್ರತೆ ಇದ್ದಷ್ಟೂ ಚೆನ್ನಾಗಿ ಅದನ್ನು ಮಾಡಬಹುದು. ಈ ಕರೆಯೊಂದೆ, ಈ ಶಬ್ದ ಒಂದೆ ಪ್ರಕೃತಿ ದ್ವಾರಗಳನ್ನು ತೆರೆದು ಜ್ಞಾನ ಕಿರಣವನ್ನು ನೀಡುವುದು. ಏಕಾಗ್ರತೆ ಯೊಂದೆ ಜ್ಞಾನಭಂಡಾರಕ್ಕೆ ಇರುವ ಏಕಮಾತ್ರ ಬೀಗದಕೈ. ರಾಜಯೋಗ ಇದನ್ನು ಮಾತ್ರ ವಿಶದವಾಗಿ ವಿವರಿಸುವುದು. ನಮ್ಮ ಈಗಿನ ದೇಹದ ಸ್ಥಿತಿಯಲ್ಲಿ ನಾವೆಷ್ಟೋ ಚಂಚಲರಾಗಿರುವೆವು. ಮನಸ್ಸು ನೂರಾರು ವಿಷಯಗಳಮೇಲೆ ತನ್ನ ಶಕ್ತಿಯನ್ನು ವ್ರಯಮಾಡುತ್ತಿದೆ. ನಾನು ಮನಸ್ಸನ್ನು ಶಾಂತಗೊಳಿಸಿ ಯಾವದಾದರೊಂದು ವಸ್ತುವಿನಮೇಲೆ

ಏಕಾಗ್ರಮಾಡಬೇಕೆಂದು ಬಯಸಿದರೆ ಸಾವಿರಾರು ಕೆಲಸಕ್ಕೆ ಬಾರದ ಆಲೋಚನೆಗಳು ಧಾಳಿ ಇಡುವುವು. ಅದನ್ನು ಹೇಗೆ ನಿಗ್ರಹಿಸುವುದು, ಮನಸ್ಸನ್ನು ಹೇಗೆ ಸ್ವಾಧೀನಕ್ಕೆ ತರುವುದು, ಎಂಬುದೇ ರಾಜಯೋಗದ ಮುಖ್ಯ ವಿಷಯ.

ಈಗ ಕರ್ಮದಮೂಲಕ ದೇವರನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಕರ್ಮಯೋಗವನ್ನು ತೆಗೆದುಕೊಳ್ಳಿ. ಸಮಾಜದಲ್ಲಿ ಏನಾದರೂ ಕೆಲಸ ಮಾಡುವುದಕ್ಕಾಗಿಯೆ ಕೆಲವರು ಹುಟ್ಟಿರುವಂತೆ ತೋರುವುದು. ಕೇವಲ ಭಾವನಾ ಜಗತ್ತಿನಲ್ಲಿ ಅವರ ಮನಸ್ಸು ಏಕಾಗ್ರವಾಗುವುದಿಲ್ಲ. ಕಣ್ಣೆದುರಿಗೆ ಕಾಣುವ ಸ್ಥೂಲವಾದ ಕಾರ್ಯದಲ್ಲಿ ಮಾತ್ರ ಅವರಿಗೆ ಉತ್ಸಾಹ. ಇಂತಹ ಜೀವನಕ್ಕೂ ಒಂದು ಶಾಸ್ತ್ರವಿರಬೇಕು. ಪ್ರತಿಯೊಬ್ಬರೂ ಯಾವುದಾದರೊಂದು ಕೆಲಸದಲ್ಲಿ ನಿರತರಾಗಿರುವರು. ಆದರೆ ಬಹುಪಾಲು ಜನ ಮನಸ್ಸಿನ ಎಷ್ಟೋ ಪಾಲು ಶಕ್ತಿಯನ್ನು ಪೋಲುಮಾಡುವರು. ನಮಗೆ ಕರ್ಮ ರಹಸ್ಯ ಗೊತ್ತಿಲ್ಲ. ಕರ್ಮಯೋಗ ನಮಗೆ ಈ ರಹಸ್ಯವನ್ನು ಬೋಧಿಸುವುದು. ಎಲ್ಲಿ ಹೇಗೆ ಕೆಲಸ ಮಾಡಬೇಕು, ನಾವು ಮಾಡಬೇಕಾದ ಕೆಲಸದಲ್ಲಿ ನಮ್ಮ ಶಕ್ತಿಯ ಬಹುಪಾಲನ್ನು ಪ್ರಯೋಜನಕಾರಿಯಾಗಿ ಹೇಗೆ ಉಪಯೋಗಿಸಬೇಕು ಎಂಬುದನ್ನು ತಿಳಿಸುವುದು. ಆದರೆ ಈ ರಹಸ್ಯದೊಡನೆ ಕರ್ಮಕ್ಕೆ ವಿರೋಧವಾಗಿರುವ, ಕರ್ಮ ನಮಗೆ ಯಾತನೆಯನ್ನುಂಟುಮಾಡುವುದು ಎಂಬ ಆಕ್ಷೇಪಣೆಯನ್ನು ಗಮನಿಸೋಣ. ಆಸಕ್ತಿಯಿಂದ ದುಃಖ ಯಾತನೆಯೆಲ್ಲ ಬರುವುದು. ನನಗೆ ಕರ್ಮ ಮಾಡಲು ಆಸೆ, ಒಬ್ಬನಿಗೆ ಒಳ್ಳೆಯದನ್ನುಮಾಡಲು ಆಸೆ. ನನ್ನಿಂದ ಉಪಕಾರ ಪಡೆದ ಬಹುಪಾಲುಜನ ನನಗೆ ಕೃತಘ್ನರಾಗಿ ನನಗೆ ವಿರೋಧವಾಗಿ ಹೋಗುವರು. ಇದರಿಂದ ದುಃಖವೇ ನನಗೆ ಪ್ರತಿಫಲ. ಇಂತಹವು ಕೆಲಸಮಾಡುವ ಉತ್ಸಾಹವನ್ನು ಕುಗ್ಗಿಸುವುದು. ದುಃಖ ಯಾತನೆಯ ಅಂಜಿಕೆ ಪ್ರಪಂಚದಲ್ಲಿ ಎಷ್ಟೋ ಒಳ್ಳೆಯಕೆಲಸ ಮತ್ತು ಮನುಷ್ಯನ ಶಕ್ತಿಯನ್ನು ಹಾಳುಮಾಡುವುದು. ಕರ್ಮಕ್ಕಾಗಿ ಹೇಗೆ ಕರ್ಮಮಾಡುವುದು, ಯಾರಿಗೆ ಎತಕ್ಕೆ ಸಹಾಯ ಮಾಡಿದೆವು ಎಂಬುದನ್ನು ಗಮನಿಸದೆ ಅನಾಸಕ್ತರಾಗಿರುವುದು ಹೇಗೆ ಎಂಬುದನ್ನು ಇದು ಬೋಧಿಸುವುದು. ಕರ್ಮಯೋಗಿ ಕೆಲಸಮಾಡುವನು, ಏಕೆಂದರೆ ಇದು ಅವನ ಸ್ವಭಾವ. ಹಾಗೆ ಕೆಲಸಮಾಡುವುದರಿಂದ ತನಗ ಒಳ್ಳೆಯದಾಗುವುದೆಂದು ಭಾವಿಸುವನು. ಇದರಾಚೆ ಅವನು ಏನನ್ನೂ ನಿರೀಕ್ಷಿಸುವುದಿಲ್ಲ. ಪ್ರಪಂಚದಲ್ಲಿ ಅವನ

ಸ್ಥಿತಿ ಕೊಡುವವನದು. ಅವನು ಏನನ್ನೂ ಸ್ವೀಕರಿಸಲು ಆಶಿಸುವುದಿಲ್ಲ. ತಾನು ಕೊಡುತ್ತಿರುವೆ, ಪ್ರತಿಯಾಗಿ ಏನನ್ನೂ ಸ್ವೀಕರಿಸುತ್ತಿಲ್ಲ ಎಂಬುದು ಅವನಿಗೆ ಗೊತ್ತಿದೆ. ಇದರಿಂದ ಅವನು ದುಃಖದಿಂದ ಪಾರಾಗುವನು. ದುಃಖ ಎಲ್ಲಿ ಪ್ರಾಪ್ತವಾದರೂ ಅದು ಆಸಕ್ತಿಯ ಪರಿಣಾಮ.

ಭಾವಜೀವಿಗೆ ಪ್ರೀತಿಸುವವನಿಗೆ ಭಕ್ತಿಯೋಗವಿದೆ. ಅವನಿಗೆ ದೇವರನ್ನು ಪ್ರೀತಿಸಲು ಆಸೆ. ಬಾಹ್ಯ ತಂತ್ರ ಮಂತ್ರ ಹೂವು ಗಂಧ ಸುಂದರವಾದ ಕಟ್ಟಡ, ವಿಗ್ರಹ ಇವುಗಳನ್ನೆಲ್ಲ ಅವನು ಆಶ್ರಯಿಸಿ ಅವನ್ನು ಉಪಯೋಗಿಸುವನು. ಇವೆಲ್ಲ ತಪ್ಪು ಎಂದು ಭಾವಿಸುವಿರೇನು ? ಒಂದು ವಿಷಯವನ್ನು ನಾನು ನಿಮಗೆ ಹೇಳಬೇಕಾಗಿದೆ. ಅದರಲ್ಲಿಯೂ ಈ ದೇಶದಲ್ಲಿರುವವರು ಇದನ್ನು ಚೆನ್ನಾಗಿ ನೆನಪಿನಲ್ಲಿಡಬೇಕು. ಪ್ರಪಂಚದ ಶ್ರೇಷ್ಠ ಆಧ್ಯಾತ್ಮಿಕ ವೀರರೆಲ್ಲಾ ಬೇಕಾದಷ್ಟು ಪುರಾಣ ಮತ್ತು ಆಚಾರ ಗಳುಳ್ಳ ಧರ್ಮದಲ್ಲಿ ಜನ್ಮವೆತ್ತಿದರು. ದೇವರನ್ನು ಯಾವ ಆಕಾರ ಅಥವಾ ಆಚಾರವಿಲ್ಲದೆ ಆರಾಧಿಸಲು ಯತ್ನಿಸಿದ ಪಂಗಡಗಳೆಲ್ಲ ಧರ್ಮದಲ್ಲಿರುವ ಅತಿ ಭವ್ಯವಾದ ಸುಂದರವಾದ ವಿಷಯಗಳನ್ನೆಲ್ಲ ನಿರ್ದಯವಾಗಿ ನಾಶ ಮಾಡಿವೆ. ಅಂತಹವರ ಧರ್ಮ ಹೆಚ್ಚು ಎಂದರೆ ಶುಷ್ಕ ಮತಭ್ರಾಂತಿ. ಪ್ರಪಂಚದ ಇತಿಹಾಸ ಇದನ್ನು ಉದಹರಿಸುತ್ತದೆ. ಆದಕಾರಣ ಆಚಾರ ಪುರಾಣಗಳನ್ನು ಎಂದಿಗೂ ಅಲ್ಲಗಳೆಯಬೇಡಿ. ಜನ ಬೇಕಾದರೆ ಅದನ್ನು ಇಟ್ಟುಕೊಂಡಿರಲಿ. "ಮೂರ್ಖರು ಅವರು, ಬೇಕಾದರೆ ಇಟ್ಟು ಕೊಂಡಿರಲಿ" ಎಂಬ ತಾತ್ಸಾರ ನಗೆಯಿಂದ ಇದನ್ನು ಅಲ್ಲಗಳೆಯಬೇಡಿ. ಹಾಗಲ್ಲ, ನಾನು ಪ್ರಪಂಚದಲ್ಲಿ ನೋಡಿದ ಶ್ರೇಷ್ಠತಮ ವ್ಯಕ್ತಿಗಳು, ಅತಿ ಶ್ರೇಷ್ಠ ಆಧ್ಯಾತ್ಮಿಕ ವೀರರು ಈ ಆಚಾರದ ಶಿಸ್ತಿನ ಮೂಲಕ ಬಂದಿರುವರು. ನಾನು ಅವರ ಪದತಳದಲ್ಲಿ ಕುಳಿತುಕೊಳ್ಳಲೂ ಯೋಗ್ಯನಲ್ಲ. ಅಂತಹವನು ಅವರನ್ನು ಟೀಕಿಸುವುದೆ? ಈ ಭಾವನೆ ಹೇಗೆ ಅವರ ಮನಸ್ಸಿನ ಮೇಲೆ ಪರಿಣಾಮ ಉಂಟುಮಾಡುವುದು, ಅದರಲ್ಲಿ ಯಾವುದನ್ನು ಸ್ವೀಕರಿಸು ವುದು, ಯಾವುದನ್ನು ತಿರಸ್ಕರಿಸುವುದು ಎಂದು ನನಗೆ ಹೇಗೆ ಗೊತ್ತಾಗ ಬೇಕು ? ಸಕಾರಣವಿಲ್ಲದೆ ಪ್ರಪಂಚದಲ್ಲಿ ಎಲ್ಲವನ್ನು ಟೀಕಿಸಲು ಹವಣಿಸು ವೆವು. ಜನ ಎಷ್ಟು ಬೇಕಾದರೂ ಪುರಾಣವನ್ನು ಇಟ್ಟುಕೊಂಡಿರಲಿ, ಅದ ರೊಂದಿಗೆ ಸುಂದರವಾದ ಮೂರ್ತಿಯನ್ನು ಇಟ್ಟುಕೊಂಡಿರಲಿ. ಭಾವಜೀವಿ ಗಳು ಸತ್ಯದ ಸೂಕ್ಷ್ಮ ವಿವರಣೆ ಲೆಕ್ಕಿಸುವುದಿಲ್ಲವೆಂಬುದನ್ನು ನೀವು ಯಾವಾ ಗಲೂ ನೆನಪಿನಲ್ಲಿಡಬೇಕು. ದೇವರು ಅವರ ಕಣ್ಣಿಗೆ ಕಾಣಿಸುವನು, ಅದೊಂದೆ

ಸತ್ಯ, ಅವರು ಅವನನ್ನು ನೋಡುವರು, ಅವನ ಮಾತನ್ನು ಕೇಳುವರು, ಅವನನ್ನು ಪ್ರೀತಿಸುವರು. ಅವರು ಅವರ ದೇವರನ್ನು ಇಟ್ಟುಕೊಂಡಿರಲಿ. ನಿಮ್ಮ ವಿಚಾರಪರ, ಸುಂದರ ವಿಗ್ರಹವನ್ನು ನೋಡಿದಾಗ ಅದು ಯಾವ ವಸ್ತುವಿನಿಂದ ಆಗಿದೆ ಎಂದು ಪರೀಕ್ಷಿಸುವುದಕ್ಕೆ ಅದನ್ನು ಒಡೆದ ಮೂರ್ಖನಂತೆ ತೋರುವನು ಭಕ್ತರಿಗೆ. ಯಾವ ಪ್ರತಿಫಲಾಪೇಕ್ಷೆ ಇಲ್ಲದೆ ಹೇಗೆ ದೇವರನ್ನು ಪ್ರೀತಿಸಬೇಕೆಂಬುದನ್ನು ಭಕ್ತಿಯೋಗ ಬೋಧಿಸುವುದು. ಶ್ರೇಯಸ್ಸಿಗಾಗಿ ದೇವರು ಮತ್ತು ಒಳ್ಳೆಯದನ್ನು ಪ್ರೀತಿಸುವರು. ಸ್ವರ್ಗ ಮಕ್ಕಳು ಐಶ್ವರ್ಯ ಮುಂತಾದುವನ್ನು ಪಡೆಯುವುದಕ್ಕಾಗಿ ಅಲ್ಲ. ಪ್ರೀತಿಯೆ ಪರಮಫಲ. ದೇವರು ಪ್ರೇಮಸ್ವರೂಪ ಎಂದು ಭಕ್ತಿ ಬೋಧಿಸುವುದು. ದೇವರನ್ನು ಸೃಷ್ಟಿಕರ್ತ, ಸರ್ವವ್ಯಾಪಿ, ಸರ್ವಜ್ಞ, ಸರ್ವೇಶ್ವರ, ನಮ್ಮ ತಂದೆ, ನಮ್ಮ ತಾಯಿ ಎಂದು ಯಾವರೀತಿಯಲ್ಲಿ ಬೇಕಾದರೂ ನೋಡಿ ಪೊಗಳಿ ಎನ್ನುವುದು. ಅವನನ್ನು ವಿವರಿಸುವ ಶ್ರೇಷ್ಠಪದ ಪುಂಜವೇ, ಮಾನವ ಭಗವಂತನವಿಷಯವನ್ನು ಕಲ್ಪಿಸಿಕೊಳ್ಳಬಹುದಾದ ಶ್ರೇಷ್ಠಭಾವನೆಯೆ "ದೇವರು ಪ್ರೇಮಸ್ವರೂಪ" ಎಂಬುದು. ಎಲ್ಲಿ ಪ್ರೇಮವಿದ್ದರೂ ಅವನೆ. "ಎಲ್ಲಿಯಾದರೂ ಎಂತಹ ಪ್ರೀತಿಯಾದರೂ ಇದ್ದರೆ ಅಲ್ಲಿ ಭಗವಂತನಿರುವನು." ಪತಿ ಎಲ್ಲಿ ಸತಿಯನ್ನು ಚುಂಬಿಸುವನೊ ಅವನು ಆ ಚುಂಬನದಲ್ಲಿರುವನು. ಎಲ್ಲಿ ತಾಯಿ ಮಗುವನ್ನು ಚುಂಬಿಸುವಳೊ ಅವನು ಆ ಚುಂಬನದಲ್ಲಿರುವನು. ಎಲ್ಲಿ ಸ್ನೇಹಿತರು ಸಂಧಿಸುವರೊ ಅಲ್ಲಿ ದೇವರು ಪ್ರೇಮೇಶ್ವರನಂತೆ ಇರುವನು. ಒಬ್ಬ ಮಹಾಪುರುಷ ಪ್ರೀತಿಸಿ ಪ್ರಪಂಚಕ್ಕೆ ಸಹಾಯಮಾಡಲೆತ್ನಿಸಿದಾಗ ಅಲ್ಲಿ ದೇವರು ತನ್ನಲ್ಲಿರುವ ಮಾನವಪ್ರೇಮವನ್ನು ಉದಾರವಾಗಿ ಆ ಮಹಾಪುರುಷನಿಗೆ ಕರುಣಿಸುತ್ತಿರುವನು. ಎಲ್ಲಿ ಹೃದಯವಿಕಾಸವಾಗುವುದೊ ಅಲ್ಲೆಲ್ಲ ಅವನಿರುವನು. ಇದನ್ನೇ ಭಕ್ತಿಯೋಗ ಬೋಧಿಸುವುದು.

ನಾವು ಕೊನೆಗೆ ಜ್ಞಾನಯೋಗಿಗೆ ಬರುತ್ತೇವೆ. ಅವನು ವಿಚಾರಪರ ತತ್ತ್ವಜ್ಞ. ಅವನು ತೋರಿಕೆಯ ಜಗತ್ತನ್ನು ಮೀರಿ ಹೋಗಲೆತ್ನಿಸುವನು. ಪ್ರಪಂಚದ ಅಲ್ಪವಸ್ತುಗಳಿಂದ ಅವನಿಗೆ ತೃಪ್ತಿ ಇಲ್ಲ. ತಿನ್ನುವುದು ಕುಡಿಯುವುದು ಮುಂತಾದ ನಿತ್ಯ ದೈನಂದಿನ ಕರ್ಮಗಳನ್ನು ಮೀರಿ ಹೋಗಲಿಚ್ಛಿಸುವನು. ಸಹಸ್ರಾರು ಗ್ರಂಥಗಳ ಬೋಧನೆಯಿಂದಲೂ ಅವನಿಗೆ ತೃಪ್ತಿ ಇಲ್ಲ. ವಿಜ್ಞಾನವಾವುದೂ ಅವನಿಗೆ ತೃಪ್ತಿಯನ್ನು ತಾರದು. ಹೆಚ್ಚು ಎಂದರೆ ಈ ಕ್ಷುದ್ರಜಗತ್ತನ್ನು ಅವನಮುಂದೆ ತರುವುದು ಅಷ್ಟೆ.

ಮತ್ತಾವುದು ಅವನಿಗೆ ತೃಪ್ತಿಯನ್ನು ನೀಡುವುದು? ಸೃಷ್ಟಿವ್ಯೂಹವು ಅವನಿಗೆ ತೃಪ್ತಿತಾರದು. ಇವೆಲ್ಲ ಅಸ್ತಿತ್ವಸಾಗರದ ಒಂದು ಬಿಂದುಮಾತ್ರ. ಅವನಾತ್ಮ ಇದನ್ನೆಲ್ಲ ಮೀರಿ ಸತ್ಯ ಹೇಗಿದೆ ಹಾಗೆ ತಿಳಿದುಕೊಳ್ಳಲು ಬಯಸುವುದು, ಅದರ ಮೂಲವನ್ನು ಕಂಡುಹಿಡಿಯಲು, ಅದನ್ನು ಸಾಕ್ಷಾತ್ಕಾರ ಮಾಡಿಕೊಂಡು ಅದರಲ್ಲಿ ಒಂದಾಗಿ ವಿಶ್ವಾತ್ಮನಲ್ಲಿ ಐಕ್ಯವಾಗಲು ಯತ್ನಿಸುವುದು. ಇವನೇ ಜ್ಞಾನಿ. ದೇವರನ್ನು, ತಂದೆ ತಾಯಿ ಸೃಷ್ಟಿಕರ್ತೃ, ಅದರ ಸಂರಕ್ಷಕ, ಅದರ ಮಾರ್ಗದರ್ಶಕ ಎನ್ನುವುದು ಪೂರ್ಣವಾಗಿ ಅವನನ್ನು ವಿವರಿಸುವುದಿಲ್ಲ. ಅವನಿಗೆ ದೇವರು ತನ್ನ ಜೀವದ ಜೀವ, ಆತ್ಮದಆತ್ಮ, ತನ್ನ ಆತ್ಮವೇ ದೇವರಾಗಿರುವುದು. ದೇವರಲ್ಲದ ಅನ್ಯವಸ್ತುವೇ ಇಲ್ಲ. ಜ್ಞಾನಾಘಾತಕ್ಕೆ ಅವನ ಮರ್ತ್ಯಭಾಗವೆಲ್ಲ ಜರ್ಝರಿತವಾಗಿ ಉದುರಿಹೋಗುವುದು. ಕೊನೆಗೆ ನಿಜವಾಗಿ ಏನು ಉಳಿವುದೊ ಅದೇ ದೇವರು.

ಒಂದೇ ಮರದಮೇಲೆ ಎರಡು ಹಕ್ಕಿಗಳಿವೆ. ಒಂದು ರೆಂಭೆಯ ಮೇಲಿದೆ. ಮತ್ತೊಂದು ಕೆಳಗಿನರಂಬೆಯಲ್ಲಿದೆ. ಮೇಲಿರು ಹಕ್ಕಿ ಶಾಂತವಾಗಿ ಗಂಭೀರವಾಗಿ ತನ್ನ ಮಹಿಮೆಯಲ್ಲಿ ತಾನು ಪ್ರತಿಷ್ಠಿತವಾಗಿರುವುದು. ಕೆಳಗಿನ ರೆಂಬೆಯಮೇಲೆ ಇರುವ ಹಕ್ಕಿ ಸಿಹಿ ಕಹಿ ಹಣ್ಣನ್ನು ತಿನ್ನುತ್ತ ರೆಂಭೆಯಿಂದ ರೆಂಭೆಗೆ ನೆಗೆಯುತ್ತ ಒಂದುವೇಳೆ ದುಃಖವಾಗಿ ಒಂದುವೇಳೆ ಸುಖವಾಗಿರುವುದು. ಕೆಲವು ಕಾಲದಮೇಲೆ ಕೆಳಗಿರುವ ಹಕ್ಕಿ ತುಂಬ ಕಹಿ ಹಣ್ಣನ್ನು ತಿನ್ನುವುದು. ತುಂಬ ಜಿಗುಪ್ಸೆಯಿಂದ ತಲೆಯೆತ್ತಿ ಮೇಲಿರುವ ಹಕ್ಕಿಯನ್ನು ನೋಡುವುದು. ಹೊಂಗರಿಗಳ ಅದ್ಭುತವಾದ ಹಕ್ಕಿ ಅದು. ಅದು ಕಹಿ ಸಿಹಿ ಯಾವ ಹಣ್ಣನ್ನೂ ತಿನ್ನುವುದಿಲ್ಲ. ಸುಖಿಯಾಗಿಯೂ ಇಲ್ಲ ದುಃಖಿಯಾಗಿಯೂ ಇಲ್ಲ. ಶಾಂತವಾಗಿ ತನ್ನಾತ್ಮನಲ್ಲಿ ತಾನು ಪ್ರತಿಷ್ಠಿತವಾಗಿರುವುದು. ಅದು ತನ್ನಾತ್ಮವಲ್ಲದೆ ಮತ್ತಾವುದನ್ನೂ ನೋಡುವುದಿಲ್ಲ. ಕೆಳಗಿರುವ ಹಕ್ಕಿ ಇಂತಹ ಸ್ಥಿತಿಗೆ ಆಶಿಸುವುದು. ಆದರೆ ಬೇಗ ಮರೆಯುವುದು. ಪುನಃ ಹಣ್ಣನ್ನು ತಿನ್ನಲು ಪ್ರಾರಂಭಿಸುವುದು. ಕೆಲವುಕಾಲದಮೇಲೆ ಮತ್ತೊಂದು ಅತಿ ಕಹಿ ಹಣ್ಣನ್ನು ತಿನ್ನುವುದು. ಆಗ ತುಂಬಾ ದುಃಖಿಯಾಗಿ ಮೇಲೆ ನೋಡಿ ಎರಡನೆ ಹಕ್ಕಿಯನ್ನು ಸಮೀಪಿಸಬೇಕೆಂದು ಯತ್ನಿಸುವುದು. ಕೆಲವು ಕಾಲದಮೇಲೆ ಪುನಃ ಮರೆಯುವುದು. ಪುನಃ ಮೇಲೆ ನೋಡುವುದು. ಹೀಗೆ ಪುನಃ ಪುನಃ ಹೋಗುತ್ತಿರುವುದು. ಕೊನೆಗೆ ಆತ್ಮಾನಂದದಲ್ಲಿ ತಲ್ಲೀನವಾದ ಹಕ್ಕಿಯ

ಅತಿ ಸಮೀಪಕ್ಕೆ ಹೋಗುವುದು. ಆ ಹಕ್ಕಿ ಕಾಂತಿ ತನ್ನಮೇಲೆ ಬೀಳು ವುದನ್ನು ನೋಡುವುದು. ಅದರಿಂದ ಆಗುವ ಬದಲಾವಣೆ ಗೋಚರವಾಗು ವುದು. ತನ್ನ ಇರವನ್ನೇ ಮರೆಯುವುದು. ಇನ್ನೂ ಹತ್ತಿರ ಹೋಗುವುದು. ಆಗ ತನ್ನ ಸುತ್ತಲಿರುವುದೆಲ್ಲ ಮಾಯವಾಗುವುದು. ಕೊನೆಗೆ ಈ ಅದ್ಭುತ ಬದಲಾವಣೆ ಅರ್ಥವಾಗುವುದು. ಕೆಳಗಿರುವ ಹಕ್ಕಿ ಕೇವಲ ಒಂದು ಛಾಯೆ, ಮೇಲಿನ ಹಕ್ಕಿಯ ಪ್ರತಿಬಿಂಬ. ಇದುವರೆವಿಗೂ ತಾನೆ ನಿಜವಾಗಿ ಮೇಲಿದ್ದ ಹಕ್ಕಿಯಾಗಿದ್ದೆ ಎಂದು ತಿಳಿಯುವುದು. ಕೆಳಗಿರುವ ಹಕ್ಕಿ ಸಿಹಿ ಕಹಿ ಹಣ್ಣನ್ನು ತಿನ್ನುವುದು, ಸುಖ ದುಃಖ ಒಂದಾದಮೇಲೊಂದು ಪಡು ವುದು, ಎಲ್ಲಾ ಬರೀ ಭ್ರಾಂತಿ, ಕನಸು. ಯಾವಾಗಲೂ ನಿಜವಾದ ಹಕ್ಕಿ ಶಾಂತವಾಗಿ ಮೌನವಾಗಿ ಗಂಭೀರವಾಗಿ ಮಹಿಮಾಪೂರ್ಣವಾಗಿ, ದುಃಖ ಶೋಕಾತೀತವಾಗಿ ಮೇಲಿತ್ತು. ಮೇಲಿನ ಹಕ್ಕಿಯೇ ದೇವರು, ವಿಶ್ವೇಶ್ವರ. ಕೆಳಗಿನ ಹಕ್ಕಿಯೆ ಜೀವಾತ್ಮ. ಪ್ರಪಂಚದ ಸಿಹಿ ಕಹಿ ಹಣ್ಣನ್ನು ತಿನ್ನು ತ್ತಿರುವುದು. ಯಾವಾಗಲಾದರೊಮ್ಮೆ ದೊಡ್ಡದೊಂದು ಆಘಾತ ಜೀವಿಗೆ ಬೀಳುವುದು. ಕೆಲವುಕಾಲ ತಿನ್ನುವುದನ್ನು ಬಿಟ್ಟು ಅರಿಯದ ದೇವರ ಸಮೀಪಕ್ಕೆ ಹೋಗುವನು. ಜ್ಞಾನಜ್ಯೋತಿ ಅಲ್ಲಿಂದ ಬರುವುದು. ಈ ಸೃಷ್ಟಿ ಒಂದು ಭ್ರಾಂತಿಕನಸೆಂದು ಭಾವಿಸುವನು. ಆದರೆ ಪುನಃ ಇಂದ್ರಿಯಗಳು ಅವನನ್ನು ಕೆಳಗೆ ಸೆಳೆಯುವುವು. ಹಿಂದಿನಂತೆ ಪ್ರಪಂಚದ ಸಿಹಿ ಕಹಿ ಹಣ್ಣನ್ನು ತಿನ್ನಲುಪಕ್ರಮಿಸುವನು. ಪುನಃ ದೊಡ್ಡದೊಂದು ಪೆಟ್ಟು ಬೀಳುವುದು. ಅವನ ಹೃದಯ ಜ್ಞಾನಜ್ಯೋತಿಗಾಗಿ ಪುನಃ ತವಕಿಸುವುದು. ಹೀಗೆ ಕ್ರಮೇಣ ಅವನು ದೇವರನ್ನು ಸಮೀಪಿ ಸುವನು. ಅವನು ಹತ್ತಿರ ಹತ್ತಿರ ಸಮೀಪಿಸಿದಂತೆ ಅವನ ಹಳೆಯ ಜೀವನ ಮಾಯವಾದಂತೆ ಭಾಸವಾಗುವುದು. ಅವನು ಬಹಳ ಸಮೀಪಕ್ಕೆ ಬಂದಮೇಲೆ ತಾನು ದೇವರಲ್ಲದೆ ಬೇರೆ ಅಲ್ಲ ಎನ್ನುವುದು ಗೊತ್ತಾಗುವುದು. ಅವನು, "ಯಾರನ್ನು ನಾನು ವಿಶ್ವಚೇತನ, ಕಣ ಸೂರ್ಯ ಚಂದ್ರರಲ್ಲಿರುವನು ಎಂದು ಹೇಳಿದ್ದೆನೊ, ಅವನೇ ನಮ್ಮ ಜೀವನಾಧಾರ. ನಮ್ಮ ಆತ್ಮದ ಆತ್ಮ. ಇಲ್ಲ ನೀನೆ ಅವನು" ಎನ್ನುವನು. ಜ್ಞಾನಯೋಗ ಬೋಧಿ ಸುವುದು ಇದನ್ನು. ಮನುಷ್ಯ ಸ್ವಭಾವತಃ ಪವಿತ್ರ ಎಂದು ಇದು ಸಾರು ವುದು. ಇದು ವ್ಯಕ್ತಿಯ ನಿಜವಾದ ಐಕ್ಯತೆಯನ್ನು ತೋರುವುದು. ನಮ್ಮಲ್ಲಿ ಪ್ರತಿಯೊಬ್ಬರೂ ವಿಶ್ವದಲ್ಲಿ ಆವಿರ್ಭೂತರಾದ ದೇವರು. ನಮ್ಮ ಕಾಲ ಕೆಳಗೆ ಹರಿದಾಡುವ ಕ್ಷುದ್ರತಮ ಕೀಟದಿಂದ ಹಿಡಿದು ನಾವು ಗೌರವಾ

ಶ್ವರ್ಯಗಳಿಂದ ನೋಡುವ ಪೂಜ್ಯತಮ ವ್ಯಕ್ತಿಯವರೆಗೆ ಎಲ್ಲರೂ ಒಂದೇ ಭಗವಂತನ ಆವಿರ್ಭಾವನೆಗಳು.

ಕೊನೆಯದಾಗಿ ಈ ಯೋಗಗಳನ್ನೆಲ್ಲ ನಾವು ಅನುಷ್ಠಾನಕ್ಕೆ ತರಬೇಕಾದುದು ಅತಿ ಮುಖ್ಯ. ಕೇವಲ ಇವುಗಳ ಸಿದ್ಧಾಂತದಿಂದ ಪ್ರಯೋಜನವಿಲ್ಲ. ಮೊದಲು ನಾವು ಅವುಗಳನ್ನು ಕೇಳಬೇಕು, ಅನಂತರ ಮನನ ಮಾಡಬೇಕು. ನಾವು ಅದನ್ನು ಪರ್ಯಾಲೋಚಿಸಬೇಕು, ಚೆನ್ನಾಗಿ ಗ್ರಹಿಸಬೇಕು, ಅವುಗಳ ಮೇಲೆ ಧ್ಯಾನಮಾಡಬೇಕು. ಅವು ನಮ್ಮ ಬಾಳ ಉಸಿರಾಗುವಂತೆ ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಧರ್ಮ ನಂತರ ಕೇವಲ ಭಾವನೆ ಅಥವಾ ಸಿದ್ಧಾಂತದ ಹೊರೆಯಾಗಿ ಉಳಿಯುವುದಿಲ್ಲ, ಕೇವಲ ಯುಕ್ತಿಸಮ್ಮತವಾಗಿಯೂ ಇರುವುದಿಲ್ಲ. ಇದು ನಮ್ಮ ಬಾಳನ್ನು ಪ್ರವೇಶಿಸುವುದು. ಕೇವಲ ಯುಕ್ತಿಯ ಒಪ್ಪಿಗೆಯ ಆಧಾರದಮೇಲೆ ಇಂದು ಹಲವು ಕೆಲಸಕ್ಕೆ ಬಾರದ ವಿಷಯಗಳನ್ನು ಒಪ್ಪಿಕೊಳ್ಳಬಹುದು. ನಾಳೆ ಸಂಪೂರ್ಣವಾಗಿ ಇವುಗಳನ್ನೆಲ್ಲ ಬದಲಾಯಿಸಬಹುದು. ಆದರೆ ನಿಜವಾದ ಧರ್ಮ ಎಂದಿಗೂ ಬದಲಾಯಿಸುವುದಿಲ್ಲ. ಧರ್ಮವೆಂದರೆ ಸಾಕ್ಷಾತ್ಕಾರ, ಅದು ಮಾತಲ್ಲ ನಂಬಿಕೆಯಲ್ಲ ಸಿದ್ಧಾಂತವಲ್ಲ. ಅವು ಎಷ್ಟೇ ಸುಂದರವಾಗಿ ಬೇಕಾದರೂ ಇರಬಹುದು. ಧರ್ಮದಂತೆ ಇರುವುದು, ಅದರಂತೆ ಆಗುವುದು, ಮಾತ್ರ ಧರ್ಮ; ಕೇವಲ ಶ್ರವಣವಲ್ಲ, ಸಮ್ಮತವಲ್ಲ. ಇಡೀ ಜೀವ ತಾನು ಯಾವುದನ್ನು ನಂಬುವುದೊ ಅದರಂತೆ ಪರಿವರ್ತನವಾಗುವುದು.

## ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು, ಮೈಸೂರು.

| | | | |
|---|---|---|---|
| ಕೊಲಂಬೊ ಇಂದ ಆಲ್ಮೋರಕೆ | ೫ | ೦ | ೦ |
| ಸಂವಾದ ತರಂಗಿಣಿ | ೫ | ೦ | ೦ |
| ಶ್ರೀ ರಾಮಕೃಷ್ಣ ಉಪದೇಶಾಮೃತ | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪತ್ರಮಾಲೆ | ೩ | ೦ | ೦ |
| ಜ್ಞಾನಯೋಗ | ೩ | ೦ | ೦ |
| ರಾಜಯೋಗ | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | ೨ | ೮ | ೦ |
| ಗೀತಾ ಪತ್ರಗಳು | ೨ | ೮ | ೦ |
| ಶ್ರೀ ಶಾರದಾದೇವಿ | ೨ | ೦ | ೦ |
| ಪರಮಾರ್ಥ ಪ್ರಸಂಗ | ೨ | ೦ | ೦ |
| ಕರ್ಮಯೋಗ | ೧ | ೮ | ೦ |
| ಬ್ರಹ್ಮಾನಂದ ವಚನ ಸುಧೆ | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | ೧ | ೪ | ೦ |
| ಪರಿವ್ರಾಜಕ | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | ೧ | ೪ | ೦ |
| ಭಕ್ತಿಯೋಗ | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) | ೧ | ೦ | ೦ |
| ಶ್ರೀ ಗುರುದೇವರ ವಚನ | ೧ | ೦ | ೦ |
| ಧನ್ಯತೆಗೆ ದಾರಿ | ೧ | ೦ | ೦ |
| ಅಮರನಾಥ ಯಾತ್ರೆ | ೧ | ೦ | ೦ |
| ಅನುಷ್ಠಾನ ವೇದಾಂತ | ೧ | ೦ | ೦ |
| ಶ್ರೀ ರಾಮಕೃಷ್ಣ | ೦ | ೧೨ | ೦ |
| ವಿದ್ಯಾಭ್ಯಾಸ | ೦ | ೧೦ | ೦ |

| | | | |
|---|---|---|---|
| ಹಿಂದೂ ಧರ್ಮಸಾರ .. .. .. .. | ೦ | ೧೦ | ೦ |
| ವರ್ತಮಾನ ಭಾರತ .. .. .. .. | ೦ | ೧೦ | ೦ |
| ವಿವೇಕವಾಣಿ .. .. .. .. | ೦ | ೧೦ | ೦ |
| ವೇದಾಂತ .. .. .. | ೦ | ೧೦ | ೦ |
| ನನ್ನ ಗುರುದೇವ .. .. .. .. | ೦ | ೮ | ೦ |
| ಭಕ್ತಿಮಾರ್ಗ .. .. .. .. | ೦ | ೮ | ೦ |
| ಚಿಕಾಗೋ ಉಪನ್ಯಾಸ .. .. .. | ೦ | ೬ | ೦ |
| ಆರತಿ .. .. .. .. | ೦ | ೬ | ೦ |
| ಮುಮುಕ್ಷು ಲಕ್ಷಣ .. .. .. .. | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ .. .. .. | ೦ | ೪ | ೦ |
| ಈಶ್ವರಾನುರಾಗ .. .. .. .. | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ .. .. .. | ೦ | ೪ | ೦ |
| ಭಾರತ ಮಹಿಳೆ .. .. .. .. | ೦ | ೪ | ೦ |
| ಕರ್ಮ ರಹಸ್ಯ .. .. .. .. | ೦ | ೪ | ೦ |
| ಸಾಧನ .. .. .. .. .. | ೦ | ೪ | ೦ |
| ದೇವದೂತ ಕ್ರಿಸ್ತ .. .. .. .. | ೦ | ೪ | ೦ |
| ಪವಹಾರಿಬಾಬ .. .. .. .. | ೦ | ೪ | ೦ |
| ದಿವ್ಯವಾಣಿ .. .. .. | ೧ | ೦ | ೦ |
| ನಾಗಮಹಾಶಯ .. .. .. | ೦ | ೧೩ | ೦ |
| ಶ್ರೀರಾಮಕೃಷ್ಣಲೀಲಾಪ್ರಸಂಗ .. .. .. | ೧ | ೮ | ೦ |
| Drig Drishya Viveka .. .. | 2 | 0 | 0 |
| Mandukya Upanishad with Gaudapada Karika & Shankara's commentary | 8 | 0 | 0 |

ಜ್ಞಾನಯೋಗ ಶುಷ್ಕವಲ್ಲ, ನೀರಸವಲ್ಲ. ಅಮೃತದ ಬುಗ್ಗೆಯೇ ಪ್ರತಿಯೊಂದು ಉಪನ್ಯಾಸದಲ್ಲಿಯೂ ಹೊರಹೊಮ್ಮುತ್ತಿದೆ. ಜೀವ ಹಕ್ಕಿ ಕಾರ್ಯಕಾರಣ ಕಾಲದೇಶ ಪಂಜರದಲ್ಲಿ ಸಿಕ್ಕಿ, ಸಿಹಿ ಕಹಿ ಹಣ್ಣನ್ನು ತಿಂದು ನಕ್ಕು ನೆಗೆದು ಅತ್ತು ಕುಗ್ಗಿ ಹೋಗುವುದನ್ನು ಕಲಾಪೂರ್ಣ ಭಾಷೆಯಲ್ಲಿ ಸ್ವಾಮಿ ವಿವೇಕಾನಂದರು ವಿವರಿಸುವರು. ಈ ಜೀವನದಲ್ಲಿ ನಮ್ಮ ಪಾಲಿಗೆ ದೊರಕುವ ಅನಿತ್ಯವಾದ ಸ್ವಲ್ಪ ಸುಖದುಃಖ ಲಾಭನಷ್ಟಗಳ ಅಲ್ಪ ಪ್ರಪಂಚದಿಂದ ಭೂಮಾನಂದದೆಡೆಗೆ ನಮ್ಮನ್ನು ಒಯ್ಯುವ ದೇವದೂತರಂತಿದೆ ಸ್ವಾಮಿ ವಿವೇಕಾನಂದರ ವಾಣಿ ಜ್ಞಾನಯೋಗದಲ್ಲಿ.

# ಮಾಯೆ ಮತ್ತು ಮುಕ್ತಿ

ದಿವ್ಯಪ್ರಭೆಯ ಮೇಘಮಾಲೆಯಂತೆ ನಾವು ಬರುತ್ತೇವೆ ಎನ್ನುವನು ಕವಿ. ನಾವೆಲ್ಲ ದಿವ್ಯಪ್ರಭೆಯ ಮುಗಿಲಿನಂತೆ ಬರುವುದಿಲ್ಲ. ನಮ್ಮಲ್ಲಿ ಕೆಲವರು ಕಾರ್ಮೋಗೆಯಂತೆ ಬರುವರು. ಇದರಲ್ಲಿ ಸಂದೇಹವೇ ಇಲ್ಲ. ಪ್ರತಿಯೊಬ್ಬರೂ ರಣರಂಗದಲ್ಲಿ ಹೋರಾಡುವುದಕ್ಕೆ ಬರುವಂತೆ ಬರುವರು. ಅಳುತ್ತಾ ಒಂದು ಮಾರ್ಗಕ್ಕಾಗಿ ಹೋರಾಡಲು ಸಾಧ್ಯವಾದಷ್ಟು ಪ್ರಯತ್ನಿಸುವೆವು. ಅನಂತಭವಸಾಗರದಲ್ಲಿ ನಮಗೊಂದು ದಾರಿಗಾಗಿ ಯತ್ನಿಸುವೆವು. ಮುಂದೆ ಮುಂದೆ ಹೋಗುವೆವು. ನಮ್ಮ ಹಿಂದೆ ಅನಂತಕಾಲವಿದೆ, ನಮ್ಮ ಮುಂದೆ ಅನಂತ ಅಸೀಮ ದೇಶವಿದೆ. ಮೃತ್ಯು ಬರುವವರೆಗೆ ಹೀಗೆ ಸಾಗುತ್ತಿರುವೆವು. ನಮ್ಮನ್ನು ಕಾರ್ಯಕ್ಷೇತ್ರದಿಂದ ಸೋತೆವೊ ಗೆದ್ದೆವೊ ಯಾವುದೂ ಗೊತ್ತಿಲ್ಲ, ಅಂತೂ ಒಯ್ಯುವುದು, ಇದೇ ಮಾಯೆ.

ಬಾಲ್ಯದಲ್ಲಿ ಭರವಸೆ ಬಲವಾಗಿರುವುದು. ಕಣ್ತೆರೆಯುವ ಮಗುವಿಗೆ ಪ್ರಪಂಚವೆಲ್ಲ ಒಂದು ಸ್ವರ್ಣ ಸ್ವಪ್ನ. ತನ್ನ ಇಚ್ಛೆಯನ್ನು ಮೀರುವುದಾವುದೂ ಇಲ್ಲ ಎಂದು ಭಾವಿಸುವುದು. ಅವನು ಮುಂದುವರಿದಂತೆ ಹೆಜ್ಜೆ ಹೆಜ್ಜೆಗೆ ಅವನ ಭವಿಷ್ಯದೇಳಿಗೆಗೆ ಆತಂಕವಾಗಿ ಅಭೇದ್ಯಕೋಟೆಯಂತೆ ಪ್ರಕೃತಿ ನಿಲ್ಲುವುದು. ಅದನ್ನು ಭೇದಿಸುವುದಕ್ಕೆ ಪದೇಪದೇ ಅದರ ಮೇಲೆ ಬೀಳಬಹುದು. ಅವನು ಮುಂದೆ ಸರಿದಂತೆ ಆದರ್ಶವೂ ಮೃತ್ಯು ಸಮೀಪಿಸುವ ಪರಿಯಂತರ ಮುಂದೆ ಮುಂದೆ ಸರಿಯುವುದು: ಬಹುಶಃ ಮೃತ್ಯುವಿನಲ್ಲಿ ಬಿಡುಗಡೆ ಇರಬಹುದೇನೊ! ಇದೇ ಮಾಯೆ.

(ಜ್ಞಾನಯೋಗದಿಂದ)